

ಶ್ರೀಕನಕದಾಸವಿರಚಿತ

# ಹರಿಭಕ್ತಿಸಾರ

(ಮೂಲ, ಅನುವಾದ, ವಿವರಣೆ, ಪ್ರಸ್ತಾವನೆ, ಪರಿಶಿಷ್ಟ ಮೊದಲಾದವುಗಳ ಸಮೇತ)

ಸಂಕಲನ, ಸಂಪಾದನೆ :

ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯ



ಪ್ರಕಾಶನ :

ಐತರೇಯ ಪ್ರಕಾಶನ ವ್ಯಾಸನಕೆರೆ

ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನದ ಪ್ರಕಾಶನ ವಿಭಾಗ

'ಪಾಜಕ', ೮೯/೨೪, ೩ನೇ ಮುಖ್ಯರಸ್ತೆ, ಮೌಂಟ್‌ಜಾಯ್ ಎಕ್ಸ್‌ಟೆನ್ಷನ್,

ಹನುಮಂತನಗರ, ಬೆಂಗಳೂರು - ೫೬೦ ೦೧೯.

**Haribhaktisāra** : Compiled by Vidyāvācaspati, Darśanaratnam, Pravacanācārya, Sacchāstravicakṣaṇaratnam, Śāstrapravacanakesari, Madhvamatavardhana, Vidvaccūḍāmaṇi, Vedavidyāvicakṣaṇa, Paṇḍitaratnam, Vidyāvāridhi, Sacchāstrapravacanapravīṇa, Gītāratnākara, Tattvavācaspati, Jnānaratnākara (and Recipient of **Karnataka State Sanskrit Award-1999 & Karnataka Rajyotsava Award-2002, Śrī Vidyāmānya Mahāpraśasti** of Śrī Pejavar Math, Udupi and **Rashtrapati Award - 2005) Dr.Vyasanakere Prabhanjanacharya**, M.A., Ph.D., D.Litt., F.I.B.R., F.U.W.A., Principal (Rtd.), Govt. First Grade College, K.R.Puram, Bangalore and Published by **Aitareya Prakāśana Vyasanakere**, Publication - wing of **Śrī VyāsaMadhva Samśodhana Pratiṣṭhāna(R)**, No.89/24, 'Pājaka', Third Cross, Mount Joy Extension, Hanumanthanagar, Bangalore - 560019. Pages: lxiv + 368 = 432

Phone : (080) 26611011 ; 26602802.

HARIBHAKTISARA

ISBN NO. 978-93-81826-73-7

Internet : www.vyasamadhwa.org

E-mail : info@vyasamadhwa.org



First Edition : 2017

Price : Rs.220/-

Typeset by :
**Śrī Vyāsa Madhva Samśodhana Pratiṣṭhāna(Regd),**

Printed at :
**Vāgartha,** N.R. Colony, Bangalore, Ph: 22427677

# ವಿಷಯಾನುಕ್ರಮಣಿಕೆ

*****

# ಮುನ್ನುಡಿ

ಹರಿದಾಸಸಾಹಿತ್ಯ ಕನ್ನಡ ಭಾಷೆಯನ್ನು ಶ್ರೀಮಂತಗೊಳಿಸಿದ ಅಪೂರ್ವ ಸಾಹಿತ್ಯ. ಕನ್ನಡ ಭಾಷೆಯ ಗೇಯತೆ, ಪ್ರಾಸಾದಿಕತೆಗಳಿಗೆ ಕನ್ನಡಿ ಹಿಡಿದ ಹಿರಿಮೆ ಇದರದು. ಇಂತಹ ಸಾಹಿತ್ಯವನ್ನು ಶ್ರೀಮಂತಗೊಳಿಸುವಲ್ಲಿ ದಾಖಲಾಗಿರುವ ಪ್ರಧಾನ ಹೆಸರುಗಳಲ್ಲಿ ಶ್ರೀಕನಕದಾಸರದು ಒಂದು. ದಾಸರಾಗಿ, ಕವಿಗಳಾಗಿ, ಅನುಭಾವಿಗಳಾಗಿ ಶ್ರೀಕನಕದಾಸರು ನಾಡು-ನುಡಿಗಳಿಗೆ ಸಲ್ಲಿಸಿರುವ ಸೇವೆ ಅಗಾಧವಾದುದು, ಅಪೂರ್ವವಾದುದು. ಪ್ರಸ್ತುತ ಕೃತಿ ಶ್ರೀಹರಿಭಕ್ತಿಸಾರ ಅವರ ರಚನೆ; ಈ ಹಿನ್ನೆಲೆ, ಜೀವನ, ಸಾಧನೆ ಮೊದಲಾದವುಗಳ ವಿವರವನ್ನು ಸಾಧಾರವಾಗಿ ಅರಿತುಕೊಳ್ಳುವುದು ಮನಸ್ಸಿಗೆ ತೃಪ್ತಿಯನ್ನು, ಬಾಳಿಗೆ ಬೆಳಕನ್ನು ನೀಡುವುದು.

## ಹರಿದಾಸಸಾಹಿತ್ಯ

ದಾಸಸಾಹಿತ್ಯವು ವಿಶ್ವಸಾಹಿತ್ಯ ಕಂಡ ವಿನೂತನಬಗೆಯ ಸಾಹಿತ್ಯ. ಸಾಹಿತ್ಯದ ಶೈಲಿಯಲ್ಲಿ ಸಂಗೀತಮಾಧ್ಯಮದ ಮೂಲಕ ತತ್ತ್ವಪ್ರಸಾರಕ್ಕೆ ತೊಡಗಿದ್ದು ಇದರ ವೈಶಿಷ್ಟ್ಯ. ಸಂಗೀತದಿಂದಾಗಿ ಕರ್ಣರಮಣೀಯವಾಗಿ, ಸಾಹಿತ್ಯದಿಂದಾಗಿ ಹೃದಯಸ್ಪರ್ಶಿಯಾಗಿ ತತ್ತ್ವಶ್ರೀಮಂತಿಕೆಯಿಂದಾಗಿ ಬುದ್ಧಿವಿಕಾಸಕ್ಕೆ ಕಾರಣವಾಗುವ ಅಪೂರ್ವತೆ ಇದರದು. ಅಧ್ಯಾತ್ಮವು ಜೀವನದ ಉಸಿರು ಎಂಬ ತಾತ್ತ್ವಿಕಮಹತ್ತ್ವವನ್ನು ಪಾಮರ ಜನರಿಗೂ ತಿಳಿಸಿಕೊಟ್ಟಿದ್ದು ಇದರ ಸಾಧನೆ. ಜಗತ್ತಿನೊಂದಿಗೆ ಜಗನ್ನಾಥನ ಚಿಂತನೆಯೂ ಜೀವನದ ಅತ್ಯಂತಪ್ರಮುಖ ಅಂಗ ಎಂಬ ಶಾಸ್ತ್ರಚಿಂತನೆಯನ್ನು ಬಗೆಬಗೆಯ ದೃಷ್ಟಾಂತಗಳಿಂದ ಮನಸ್ಸಿಗೆ ಮುಟ್ಟಿಸುವ ಇದರ ಪರಿ ಅದ್ಭುತವಾದುದು. ಲೌಕಿಕ- ಸೆಳೆತದಿಂದ ದೈವವಿಮುಖರಾಗಿದ್ದ ಜನಗಳನ್ನು ದೈವಸುಮುಖರಾಗಿಯೂ, ದೈವಭಕ್ತಿಯ ಗುಂಗಿನಲ್ಲಿ ಸಮಾಜವಿಮುಖರಾಗಿದ್ದ ಪಂಡಿತರನ್ನು ಸಮಾಜಸುಮುಖರನ್ನಾಗಿಯೂ ಮಾಡಿದ್ದು ಇದರ ಸಾಧನೆ. ಜನಸಾಮಾನ್ಯರನ್ನು ಜನಾರ್ದನನತ್ತ ಸೆಳೆಯುತ್ತಲೇ ಇದು ಜನಾರ್ದನನ ಭಕ್ತರನ್ನು ಜನತೆಯತ್ತ ಮುಖಮಾಡಿಸಿ, ಅಲ್ಲಿಯೂ ಜನಾರ್ದನನನ್ನು ಕಾಣುವ ಶಿಕ್ಷಣವನ್ನು ಪ್ರಸಾರ ಮಾಡಿದ್ದು ಇದರ ಹಿರಿಮೆ. ಸಂಗೀತದಿಂದಾಗಿ ಪಾಮರರನ್ನೂ ಸೆಳೆಯುವ ಇದು, ವಿಚಾರಪ್ರೌಢಿಮೆಯಿಂದಾಗಿ ಪಂಡಿತರಿಗೂ ಆಪ್ಯಾಯಮಾನ. ಅಧ್ಯಾತ್ಮವು ಮೂಲತಃ ಸಮಾಜಮುಖಿ ಎಂಬ ಗೀತೆಯ ಸಂದೇಶವನ್ನು ಮನವರಿಕೆ ಮಾಡಿಕೊಡುವಲ್ಲಿ ಇದರ ಸಾಧನೆ ಅಪೂರ್ವವಾದುದು. ಸಮಾಜದ ಎಲ್ಲ ವರ್ಗದ ಜನಕ್ಕೂ ಭಗವಂತನ ಮನೆಯ ಬಾಗಿಲು ತೆರೆದಿದೆ ಎಂಬ ಆಧ್ಯಾತ್ಮಿಕರಹಸ್ಯವನ್ನು ಮುಟ್ಟಿಸುವಲ್ಲಿ ಇದು ಸಾಧಿಸಿದ ಯಶಸ್ಸು ಅನನ್ಯವಾದುದು. ಮಧ್ವಸಿದ್ಧಾಂತದ ಮಟ್ಟಿಗಂತೂ ಇದು ಅದರ ಕನ್ನಡದ ಆವಿಷ್ಕರಣವೇ ಆಗಿದೆ. ಸಂಗೀತಕ್ಕೆ ಆಧ್ಯಾತ್ಮಿಕ ಸೊಗಡನ್ನು ತಂದುಕೊಟ್ಟಂತೆ

ಕನ್ನಡಭಾಷೆಗೆ ಪ್ರಾಸಾದಿಕತೆಯನ್ನು ಮೂಡಿಸಿ, ಭಕ್ತಿಯ ಹೊಳೆ ನಿತ್ಯಜೀವನದಲ್ಲಿ ಹರಿಯುವಂತೆ ಮಾಡಿದ್ದು ಇದರ ಹಿರಿಮೆ. ನಿಜ ಅರ್ಥದಲ್ಲಿ ದಾಸಸಾಹಿತ್ಯವು ಸರ್ವಮೂಲಗಳ ಗ್ರಂಥಗಳ ಕನ್ನಡಭಾಷೆಯ ಟಿಪ್ಪಣಿಸಾಹಿತ್ಯವಾಗಿದೆ.

ಜಗತ್ತಿನಲ್ಲಿ ಅದರಲ್ಲೂ ನಮ್ಮ ಭಾರತಭೂಮಿಯಲ್ಲಿ ರೂಪುಗೊಂಡ ಭಕ್ತಿಪಂಥಗಳು ಅನೇಕ. ಅವುಗಳಲ್ಲಿ ಹೆಚ್ಚಿನವುಗಳಿಗೆ ಸೈದ್ಧಾಂತಿಕ ನೆಲೆಗಟ್ಟು ಕಂಡುಬರುವುದಿಲ್ಲ. ತಮ್ಮ ಭಾವುಕತೆಯನ್ನಷ್ಟೇ ಆಧರಿಸಿ ಅದರಿಂದ ರೂಪುಗೊಂಡ ಭಾವನಾತ್ಮಕ ರಚನೆಗಳನ್ನೇ ಅವರ ಕೆಲವು ಅನುಯಾಯಿಗಳು ಸಿದ್ಧಾಂತವೆಂಬಂತೆ ಅನುಸರಿಸಿದರು. ಕೆಲವು ಭಕ್ತಿಪಂಥಗಳು ಶ್ರೀರಾಮ, ಶ್ರೀಕೃಷ್ಣ ಮೊದಲಾದ ಮಹಾವಿಷ್ಣುವಿನ ರೂಪವನ್ನು ಆರಾಧಿಸುವ ವೈಷ್ಣವಪಂಥಗಳಾದರೆ ಮತ್ತೆ ಕೆಲವು ಶೈವ ಮೊದಲಾದ ಪಂಥಗಳನ್ನು ಅನುಸರಿಸಿದವು. ಅವುಗಳಲ್ಲೂ ಹೆಚ್ಚಿನವು ಮೂಲಗ್ರಂಥಗಳನ್ನು ಅವಲಂಬಿಸದೇ ಅವುಗಳ ಬಗೆಗಿನ ತಮ್ಮ ಕಲ್ಪನೆಗಳನ್ನೇ ದರ್ಶನವೆಂಬಂತೆ ನಿರೂಪಿಸಿದವು. ಆದರೆ ಕರ್ನಾಟಕದ ಹರಿದಾಸ ಸಾಹಿತ್ಯವು ಮಧ್ವಸಿದ್ಧಾಂತದ ಕನ್ನಡ ಅವತರಣಿಕೆಯಂತೆ ರೂಪುಗೊಂಡ ದಾರ್ಶನಿಕ ಸಾಹಿತ್ಯವಾಗಿದೆ.

ವಚನಸಾಹಿತ್ಯವನ್ನು ಒಳಗೊಂಡಂತೆ ಶೈವ ಮೊದಲಾದ ಇತರ ಸಕಲ ಭಕ್ತಿಪಂಥಗಳು ಆ ಆ ಪಂಥದ ದೇವತೆಗಳ ಹೊರತು ಇತರ ದೇವತೆಗಳ ಬಗ್ಗೆ ಅವರ ಮಾಹಾತ್ಮ್ಯವನ್ನು ಸಾರುವಂತಹ ಕೃತಿಗಳನ್ನು ನೀಡಿಲ್ಲ. ವಿಷ್ಣು ಪಾರಮ್ಯವನ್ನಷ್ಟೇ ಸಾರುವ ಆಳ್ವಾರುಗಳ ಪ್ರಬಂಧಕೃತಿಗಳು ಸಹ ಇದಕ್ಕೆ ಹೊರತಾಗಿಲ್ಲ. ಆದರೆ ಹರಿದಾಸಸಾಹಿತ್ಯ ಈ ದೃಷ್ಟಿಯಿಂದ ಅತ್ಯಂತ ವಿಭಿನ್ನವೆನ್ನಿಸುವುದು. ಮಹಾವಿಷ್ಣುವಿನ ಪಾರಮ್ಯವನ್ನೇ ಪ್ರಧಾನವಾಗಿ ಸಾರುವ ಇದು ಶಿವ, ದುರ್ಗೆ, ಗಣೇಶ ಮೊದಲಾದ ಇತರ ಸಕಲ ದೇವತೆಗಳ ಪುರಾಣೋಕ್ತವಾದ ಮಹಿಮೆಯನ್ನು ಸಾದರಪಡಿಸುವ ವಿಶಾಲದೃಷ್ಟಿಯನ್ನು ಹೊಂದಿದೆ. ಇದರಿಂದಾಗಿ ಇತರದೇವತೆಗಳ ಆರಾಧಕರಿಗೂ ಸಹ ಹರಿದಾಸಸಾಹಿತ್ಯ ಪ್ರಿಯವೆನ್ನಿಸುವಂಥಾಯಿತು. ಸಮಾಜದ ಎಲ್ಲ ವರ್ಗಗಳಿಗೂ ತಲುಪುವಂತಾಯಿತು.

ಹರಿದಾಸರ ಸಂಚಾರವ್ಯಾಪ್ತಿಯೂ ಸಹ ಅಗಾಧವಾದುದು. ವಚನಕಾರರ ವ್ಯಾಪ್ತಿ ಶೈವಕೇಂದ್ರಗಳಿಗೆ ಸೀಮಿತಗೊಂಡರೆ ಆಳ್ವಾರುಗಳ ವ್ಯಾಪ್ತಿ ವೈಷ್ಣವಕೇಂದ್ರಗಳಿಗೆ ಸೀಮಿತವಾಯಿತು. ಆದರೆ ಹರಿದಾಸರು ಸಮಗ್ರ ಭಾರತವನ್ನು ಸಂಚರಿಸಿದರು. ವೈಷ್ಣವಕ್ಷೇತ್ರಗಳಂತೆ ಶೈವ ಮೊದಲಾದ ಇತರದೇವತಾಕ್ಷತ್ರಗಳನ್ನೂ ಸಂದರ್ಶಿಸಿದರು. ಅಲ್ಲಿನ ದೇವತೆಗಳನ್ನು ಕುರಿತು ಸೈದ್ಧಾಂತಿಕ ನೆಲೆಗಟ್ಟಿನಲ್ಲಿಯೇ ಅಸಂಖ್ಯಸ್ತೋತ್ರಗಳನ್ನು ರಚಿಸಿದರು. ಇದರಿಂದಾಗಿ ಆಯಾ ಕ್ಷೇತ್ರಗಳಲ್ಲಿನ ದೇವತೆಗಳ ಮಾಹಾತ್ಮ್ಯವು ಜನರಿಗೆ ತಿಳಿಯುವಂತಾಯಿತು. ಆಯಾ ಕ್ಷೇತ್ರಗಳ ಮಾಹಾತ್ಮ್ಯವೂ ಸಹ ಅನಾವರಣಗೊಳ್ಳು-ವಂತಾಯಿತು. ಹರಿದಾಸಸಾಹಿತ್ಯವು ಈ ನೆಲೆಯಲ್ಲಿಯೂ ಇತರ ಸಕಲ ಭಕ್ತಿಸಾಹಿತ್ಯ-

ಗಳಿಗಿಂತ ವಿಭಿನ್ನವೆನ್ನಿಸಿದೆ. ಈ ದೃಷ್ಟಿಯಲ್ಲಿ ಸ್ಥಳಪುರಾಣಗಳ ಮಹತ್ತ್ವವನ್ನು ದಾಖಲಿಸುವ ಸ್ಕಂದ ಮೊದಲಾದ ಪುರಾಣಗಳ ವೈಶಿಷ್ಟ್ಯವನ್ನು ಹರಿದಾಸಸಾಹಿತ್ಯ ಅನುಕರಿಸಿದೆ ಎಂಬುದು ಗಮನಾರ್ಹವಾದ ಸಂಗತಿ.

ಕ್ಷೇತ್ರಗಳಂತೆ ನದಿಯೇ ಮೊದಲಾದ ಪುಣ್ಯತೀರ್ಥಗಳ ವರ್ಣನೆ ಇತರ ಭಕ್ತಿಪಂಥಗಳಲ್ಲಿ ಕಂಡುಬರುವುದು ತುಂಬಾ ಅಪರೂಪ. ಆದರೆ ಗಂಗೆ, ಯಮುನೆ ಮೊದಲಾದ ನದಿಗಳನ್ನೊಳಗೊಂಡಂತೆ, ಭರತಖಂಡದ ಮಹಿಮೆಯನ್ನು ಪ್ರಾಮಾಣಿಕವಾಗಿ ದಾಖಲಿಸುವ ಕಾರ್ಯವು ಹರಿದಾಸಸಾಹಿತ್ಯದಿಂದ ನಡೆದಿದೆ. ಇದೂ ಸಹ ಹರಿದಾಸಸಾಹಿತ್ಯವನ್ನು ಇತರ ಭಕ್ತಿಸಾಹಿತ್ಯಗಳಿಗಿಂತ ವಿಭಿನ್ನ ಎಂದು ಪರಿಗಣಿಸಲು ಕಾರಣವಾಗಿದೆ.

ಶ್ರೀಹರಿಯ ಶ್ರೀಕೃಷ್ಣ ಶ್ರೀರಾಮ ಮೊದಲಾದ ಕೆಲವು ರೂಪಗಳನ್ನು ವಿಶೇಷವಾಗಿ ಆರಾಧಿಸುವ ಕೆಲವು ಭಕ್ತಿಪಂಥಗಳು ಮತ್ಸ್ಯ ಕೂರ್ಮ ನರಸಿಂಹ ಮೊದಲಾದ ಇತರ ಭಗವದವತಾರಗಳನ್ನು ಕುರಿತ ರಚನೆಗಳನ್ನು ಹೊಂದಿಲ್ಲ. ಹರಿದಾಸಸಾಹಿತ್ಯ ಹಾಗಲ್ಲ. ಶ್ರೀಹರಿಯ ಸಕಲ ರೂಪಗಳನ್ನು ಸಮಾನವಾಗಿ ಸ್ತುತಿಸುತ್ತಾ ಅವುಗಳ ಏಕತೆಯನ್ನು ಸಾರುವುದು. ಕೃಷ್ಣ ಹಯವದನ, ಕೇಶವ ಮೊದಲಾದ ರೂಪಗಳ ಆರಾಧಕರಾದ ಶ್ರೀವ್ಯಾಸರಾಜರು, ಶ್ರೀವಾದಿರಾಜರು, ಶ್ರೀಕನಕದಾಸರು ಶ್ರೀಹರಿಯ ಸಕಲರೂಪಗಳನ್ನು ಒಂದೇ ತೆರನಾಗಿ ಬಣ್ಣಿಸಿರುವುದು ಇದಕ್ಕೆ ನಿದರ್ಶನ.

ಶ್ರೀಹರಿಯಂತೆ ಅವನ ಭಕ್ತರಾದ ಧ್ರುವ ಪ್ರಹ್ಲಾದ ಮೊದಲಾದವರನ್ನು ಹಾಡಿ ಹೊಗಳಿರುವುದು ಹರಿದಾಸಸಾಹಿತ್ಯದ ಮತ್ತೊಂದು ಹಿರಿಮೆ. ಇದರಲ್ಲೂ ಸಹ ಇತರ ಭಕ್ತಿ ಸಾಹಿತ್ಯದ ಕೊಡುಗೆ ಗಣನೆಗೆ ಬರುವಂತಹುದೇನಲ್ಲ.

ಜಗತ್ತಿನ ಸೃಷ್ಟಿ ಮೊದಲಾದವುಗಳ ಬಗ್ಗೆ ವಿಶೇಷವೆನ್ನಿಸುವ ಚಿಂತನೆ ಇತರ ಭಕ್ತಿಸಾಹಿತ್ಯದಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ. ಹರಿದಾಸಸಾಹಿತ್ಯದಲ್ಲಿ ಆ ಬಗ್ಗೆ ಅನೇಕ ಸಂಪುಟಗಳಿಗಾಗುವಷ್ಟು ಮಾಹಿತಿ ಲಭ್ಯವಿದೆಯೆಂಬುದು ಗಮನಿಸಲೇಬೇಕಾದ ಸಂಗತಿ.

ವ್ರತ, ಉಪವಾಸಗಳನ್ನು ಕುರಿತ ಮಾಹಿತಿಯ ಬಗ್ಗೆಯೂ ಇತರ ಭಕ್ತಿಸಾಹಿತ್ಯಗಳ ಕೊಡುಗೆ ನಗಣ್ಯವೆನ್ನಿಸುವಂತಹುದು. ಆದರೆ, ಹರಿದಾಸಸಾಹಿತ್ಯವು ಬಗೆಬಗೆಯ ಬಗ್ಗೆ ಅದರಲ್ಲೂ ಏಕಾದಶಿಯಂತ ಮಹಾವ್ರತದ ಬಗ್ಗೆ ನೀಡಿರುವ ಮಾಹಿತಿ ಅಪೂರ್ವವೆನ್ನಿಸುವಂಥಹುದು.

ಹೀಗೆ ಹಲವಾರು ಕಾರಣಗಳಿಂದ ಹರಿದಾಸಸಾಹಿತ್ಯ ಇತರ ಸಕಲ ಭಕ್ತಿಪಂಥದ ಸಾಹಿತ್ಯಗಳಿಗಿಂತ ವಿಶಿಷ್ಟವೆನ್ನಿಸುವ ಸ್ಥಾನ ಪಡೆದುಕೊಂಡಿದೆ.

## ದಾಸಸಾಹಿತ್ಯದ ಹಿನ್ನೆಲೆ

ಶ್ರೀಮಧ್ವಾಚಾರ್ಯರು(ಕ್ರಿ.ಶ.೧೨೦೦-೧೨೮೦) ವೇದಗಳು, ಉಪನಿಷತ್ತುಗಳು, ಭಗವದ್ಗೀತೆ, ಇತಿಹಾಸ ಪುರಾಣಗಳು ಮತ್ತು ಬ್ರಹ್ಮಸೂತ್ರಗಳು ಮೊದಲಾಗಿ ಸಕಲಮೂಲ- ಗ್ರಂಥಗಳ ಭಾವವನ್ನು ಮೂಲತಃ ಭಗವತ್ಪರ ಎಂಬುದಾಗಿ ತೋರಿದ ಮಹನೀಯರು. ಮೂಲಗ್ರಂಥಗಳ ಭಾವವನ್ನು ಹಾಗೆ ಪ್ರತಿಪಾದಿಸಿದ ಅವರ ಗ್ರಂಥರಾಶಿ ಸರ್ವಮೂಲ ಎಂಬುದಾಗಿ ಮಾನ್ಯವಾಗಿದೆ. ಅದರ ಭಾವವನ್ನು ಶ್ರೀಪದ್ಮನಾಭತೀರ್ಥರು, ಶ್ರೀನರಹರಿತೀರ್ಥರು ಮತ್ತು ಶ್ರೀತ್ರಿವಿಕ್ರಮ-ಪಂಡಿತಾಚಾರ್ಯರು ಮೊದಲಾದ ಅವರ ಸಾಕ್ಷಾಚ್ಛಿಷ್ಯರು ಮತ್ತು ಅನಂತರ ಶ್ರೀಜಯತೀರ್ಥರು ತಮ್ಮ ಟೀಕಾಗ್ರಂಥಗಳಲ್ಲಿ ವಿವರಿಸಿದರು. ಶ್ರೀಜಯತೀರ್ಥರಂತೂ ತಮ್ಮ ಅನುಪಮಟೀಕಾಗ್ರಂಥಗಳಿಗಾಗಿ ಶ್ರೀಟೀಕಾಕೃತ್ಪಾದರೆಂದೇ ಪ್ರಸಿದ್ಧರಾಗಿರುವರು. ಅವರ ನ್ಯಾಯಸುಧೆ ಶ್ರೀಮದಾಚಾರ್ಯರ ಅನಂತರ ಇಡೀ ಪರಂಪರೆ ಕಂಡ ಮೇರುಕೃತಿ. ಅವರ ಟೀಕಾಗ್ರಂಥಗಳಿಗೆ ಟಿಪ್ಪಣಿ ರಚಿಸಿದ ಶ್ರೀಶ್ರೀಪಾದರಾಜರು, ಶ್ರೀವ್ಯಾಸರಾಯರು, ಶ್ರೀರಘೂತ್ತಮರು, ಶ್ರೀರಾಘವೇಂದ್ರರು ಮೊದಲಾದ ವಿದ್ವದ್ವಿಭೂತಿಗಳಿಂದ, ವ್ಯಾಸಸಾಹಿತ್ಯ ಅಪಾರವಾಗಿ ಬೆಳೆಯಿತು. ಸ್ವಮತಸ್ಥಾಪನೆ ಮತ್ತು ಪರಮತವಿಮರ್ಶೆಗಳ ಸಮಗ್ರತೆಯಿಂದಾಗಿ ಸಮಗ್ರ ಸಿದ್ಧಾಂತದ ಪರಿಜ್ಞಾನಕ್ಕೆ ಈ ವ್ಯಾಸಸಾಹಿತ್ಯದ ಅಧ್ಯಯನ ಅನಿವಾರ್ಯ.

ಆದರೆ ಭಾಷೆ ಹಾಗೂ ಮತಿಗಳ ಇತಿಮಿತಿಯಿಂದಾಗಿ ಎಲ್ಲರಿಗೂ ವ್ಯಾಸಸಾಹಿತ್ಯ ಸುಲಭವಾಗಿ ಎಟಕುವಂತಹುದಲ್ಲ. ಶ್ರೀಮಂತರಂತೆ ಶ್ರೀಸಾಮಾನ್ಯನು ಹೇಗೋ ಹಾಗೆಯೇ ಪಂಡಿತರಂತೆ ಪಾಮರರೂ ಸಮಾಜದ ಘಟಕ; ಪುರುಷರಂತೆ ಸ್ತ್ರೀಯರೂ ಸಹ; ಹಾಗೆಯೇ ಪಾಮರರ ಸಂಖ್ಯೆಯೇ ಯಾವ ಕಾಲಕ್ಕೂ ಹೆಚ್ಚಿನದು. ಅವರಲ್ಲೂ ಜಿಜ್ಞಾಸುಗಳಿರುತ್ತಾರೆ. ಅವರೂ ಶಾಸ್ತ್ರತತ್ತ್ವಗಳನ್ನು ಅರಿಯುವಂತಾಗಬೇಕು. ನಿತ್ಯಜೀವನದಲ್ಲಿ ಅವುಗಳನ್ನು ಅಳವಡಿಸಿಕೊಂಡು ನೆಮ್ಮದಿ ಪಡೆಯುವಂತಾಗಬೇಕು. ತಮ್ಮ ಯೋಗ್ಯತೆಗೆ ತಕ್ಕಂತೆ ವ್ಯಾಸಸಾಹಿತ್ಯದ ಶ್ರವಣಮನನಗಳಿಗೆ ತಮ್ಮನ್ನು ತೆರೆದುಕೊಳ್ಳುವಂತಾಗಬೇಕು. ಹಾಗೆ ತಿಳಿದದ್ದನ್ನು ಅಡಕವಾಗಿ ಮನನ ಮಾಡಲೂ ಸಾಧ್ಯವಾಗಬೇಕು; ತಮ್ಮ ಇತಿಮಿತಿಗಳಲ್ಲಿ ಅದರ ಪ್ರಸಾರಕಾರ್ಯದಲ್ಲೂ ತೊಡಗಿಸಿಕೊಳ್ಳುವಂತಾಗಬೇಕು. ಇದರಲ್ಲಿ ಭಾಷೆ ಮತ್ತು ಬುದ್ಧಿಮತ್ತೆಗಳು ಎಂದೂ ಅಡ್ಡಿಯಾಗಕೂಡದು. ಅದಕ್ಕೆಂದು ಪ್ರಾದೇಶಿಕಭಾಷೆಗಳಲ್ಲೂ ಸಿದ್ಧಾಂತದ ಪ್ರತಿಪಾದನೆ-ಯಾಗಬೇಕು. ಸರಕಾರ ಸಮಾಜದ ಯಾವ ಘಟಕವನ್ನೂ ಅಲಕ್ಷಿಸುವಂತಿಲ್ಲ; ಅದರಂತೆಯೇ ಗುರುಪೀಠಗಳೂ ಸಹ. ಇಂತಹ ಪ್ರಾಮಾಣಿಕ ಕಾಳಜಿ ಇಲ್ಲದ ಯಾವ ಆಚಾರ್ಯನೂ ವಿಶ್ವಗುರುವಾಗಲಾರ.

ಶ್ರೀಮಧ್ವಾಚಾರ್ಯರು ನಿಜವಾದ ಅರ್ಥದಲ್ಲಿ ವಿಶ್ವಗುರುಗಳು. ಪಂಡಿತರಿಗೆ ತಲುಪುವ ಭಾಷ್ಯ, ಅನುವ್ಯಾಖ್ಯಾನಾದಿಗಳಂತಹ ಗ್ರಂಥಗಳನ್ನಲ್ಲದೆ ದ್ವಾದಶಸ್ತೋತ್ರ, ನಖಸ್ತುತಿ, ಕಂದುಕಸ್ತುತಿ, ಕೃಷ್ಣಾಮೃತಮಹಾರ್ಣವ, ಜಯಂತೀನಿರ್ಣಯ ಮೊದಲಾದ ಸ್ತೋತ್ರ ಉಪದೇಶರೂಪ ಕೃತಿಗಳನ್ನೂ ಮಹಾಭಾರತತಾತ್ಪರ್ಯನಿರ್ಣಯ, ಭಾಗವತತಾತ್ಪರ್ಯ ಮೊದಲಾದ ಇತಿಹಾಸ ಪುರಾಣಗಳ ಭಾಷ್ಯಗಳನ್ನೂ ನೀಡಿ ಈ ಕೊರತೆಯನ್ನು ನೀಗಿಸಿದರು. ಅವರ ದ್ವಾದಶಸ್ತೋತ್ರವಂತೂ ಸಿದ್ಧಾಂತದ ಪ್ರಸಾರದ ಎಲ್ಲ ಸಾಧ್ಯತೆಗಳನ್ನು ತೆರೆದಿಟ್ಟ ಮಹತ್ತ್ವಪೂರ್ಣ ಕೃತಿ. ಸಂಗೀತ, ಸಾಹಿತ್ಯ, ಸಿದ್ಧಾಂತ, ಉಪದೇಶ, ಸ್ತೋತ್ರ ಮೊದಲಾಗಿ ಬಹುಮುಖದ ವೈವಿಧ್ಯ ಅದರದು. ಸ್ತೋತ್ರರೂಪದ ಇಂತಹ ಸೈದ್ಧಾಂತಿಕ ಕೃತಿ ಜಗತ್ತಿನ ಬೇರಾವ ದರ್ಶನಕ್ಕೂ ಇಲ್ಲ. ಪುರಾಣಕಾಲದಲ್ಲಿ ಬಳಕೆಯಲ್ಲಿದ್ದ ಭಗವಂತನನ್ನು ಸ್ತುತಿಸುವ ಕಾರ್ಯದಲ್ಲಿ ಪ್ರಾಕೃತಸಾಹಿತ್ಯಕ್ಕೆ ಅನಂತರ ದಿನಗಳಲ್ಲಿ ಈ ಕೃತಿಯ ಮೂಲಕ ಮರಳಿ ಚೈತನ್ಯ ನೀಡಿದ ಹಿರಿಮೆ ಆಚಾರ್ಯ ಶ್ರೀಮಧ್ವರದು.

ಇದರ ಮಹತ್ತ್ವವನ್ನು ಗುರುತಿಸಿ ಕನ್ನಡ ಭಾಷೆಯಲ್ಲಿ ಮಧ್ವಸಿದ್ಧಾಂತಪ್ರಸಾರಕ್ಕೆ ಚಾಲನೆ ಇತ್ತವರು ಅವರ ಸಾಕ್ಷಾತ್ ಶಿಷ್ಯರಾದ ಶ್ರೀನರಹರಿತೀರ್ಥರು. ಆವರು ಹಾಗೆ ಪ್ರಾರಂಭಿಸಿದ ಪರಂಪರೆಗೆ ಶ್ರೀಜಯತೀರ್ಥ(೧೩೬೭-೧೩೮೮)ರ ಕೊಡುಗೆಯೂ ಸೇರಿ ಅದು ಮತ್ತಷ್ಟು ದೃಢವಾಯಿತು. ಶ್ರೀಪಾದರಾಜ(೧೪೦೬-೧೫೦೪)ರ ಕಾಲದಲ್ಲಿ ಅದು ಇನ್ನಷ್ಟು ವ್ಯಾಪಕವಾಗಿ ಬೆಳೆಯಿತು. ಅವರ ಶಿಷ್ಯರಾದ ಶ್ರೀವ್ಯಾಸರಾಯ(೧೪೬೦-೧೫೩೯)ರಂತೂ ಕನ್ನಡ ಕೃತಿಗಳ ಜೊತೆಗೆ ಹರಿದಾಸ ಪಂಥವನ್ನೇ ನಿರ್ಮಿಸಿ ಶ್ರೀಪುರಂದರದಾಸ (೧೪೮೪-೧೫೬೪)ರನ್ನು ಅದರ ಅಧ್ಯಕ್ಷ-ರನ್ನಾಗಿಸಿದರು. ಶ್ರೀವಾದಿರಾಜ(೧೪೮೦-೧೬೦೦)ರ, ಶ್ರೀಕನಕದಾಸ (೧೫೦೯-೧೬೦೭)ರ ರಚನೆಗಳೂ ಸೇರಿ ಅದರ ವ್ಯಾಪ್ತಿ ಹೆಚ್ಚಿತು. ಶ್ರೀಪುರಂದರದಾಸರ ಮಕ್ಕಳ ಮೂಲಕ ಮುಂದುವರೆದ ಅದು ಮತ್ತೊಮ್ಮೆ ಬೆಳಗಿದ್ದು ಶ್ರೀರಾಘವೇಂದ್ರತೀರ್ಥರ ನೇತೃತ್ವದಲ್ಲಿ. ಅವರ ಒಂದೆರಡು ಕೃತಿಗಳ ಸ್ಫೂರ್ತಿಯಲ್ಲೇ ಶ್ರೀವಿಜಯದಾಸರು (೧೬೮೨-೧೭೫೫), ಶ್ರೀಪ್ರಸನ್ನವೇಂಕಟದಾಸರು (೧೬೮೦-೧೭೫೨) ಅದರ ಧುರೀಣರೆನ್ನಿಸಿದರು. ಶ್ರೀಗೋಪಾಲದಾಸರು (೧೭೨೧-೧೭೬೨), ಶ್ರೀವಿಜಯ-ದಾಸರ ಶಿಷ್ಯವರ್ಗದಲ್ಲಿ ಪ್ರಧಾನರೆನ್ನಿಸಿದರೆ, ಅವರಿಬ್ಬರ ಕರುಣೆಯ ಕೂಸೇ ಶ್ರೀಜಗನ್ನಾಥದಾಸರು. ಶ್ರೀವಿಜಯದಾಸರ ಮತ್ತೊಬ್ಬ ಶಿಷ್ಯರಾದ ಮೋಹನದಾಸರ ಶಿಷ್ಯಪರಂಪರೆಯೂ ವ್ಯಾಪಕವಾಗಿ ಬೆಳೆಯಿತು. ಇದು ಸಂಕ್ಷಿಪ್ತವಾಗಿ ಸಾಹಿತ್ಯ, ಸಂಗೀತ ಮತ್ತು ಅಧ್ಯಾತ್ಮಗಳ ತ್ರಿವೇಣಿಸಂಗಮವಾದ ಹರಿದಾಸಸಾಹಿತ್ಯದ ಸ್ಥೂಲ ಇತಿಹಾಸ. ಕೇವಲ ಪಂಡಿತರ ಸ್ವತ್ತು ಎನ್ನಬಹುದಾಗಿದ್ದ ತತ್ತ್ವಜ್ಞಾನ ಜನಸಾಮಾನ್ಯರಿಗೂ ಎಟಕುವಂತಾಗುವಲ್ಲಿ ದಾಸಸಾಹಿತ್ಯದ ಪಾತ್ರ ಅತ್ಯಂತ ಗಣನೀಯವಾದುದು. ತಾತ್ತ್ವಿಕ

ಪರಿಜ್ಞಾನದೊಂದಿಗೆ ಸದಾಚಾರ ಹಾಗೂ ಸತ್ಯಧರ್ಮಗಳ ಮಹತ್ತ್ವದ ಬಗ್ಗೆಯೂ ಸಹ ಹರಿದಾಸಸಾಹಿತ್ಯದಿಂದಾದ ಕ್ರಾಂತಿ ಸಾಮಾನ್ಯವಾದುದೇನಲ್ಲ. ಅದರಿಂದಾಗಿ ಜನಸಾಮಾನ್ಯರಿಗೂ ಅದು ತಲುಪಿತು.

ಹರಿದಾಸಸಾಹಿತ್ಯ ಕೀರ್ತನೆ, ಸುಳಾದಿ, ಉಗಾಭೋಗ, ಮೊದಲಾದ ಅನೇಕ ಪ್ರಾಕಾರಗಳನ್ನು ಹೊಂದಿರುವಂತೆ ವಿವಿಧಬಗೆಯ ಹರಿದಾಸರನ್ನು ಹೊಂದಿದೆ. ಶ್ರೀನರಹರಿತೀರ್ಥರು ಯತಿಗಳು ಪೀಠಾಧೀಶರೂ ಸ್ವತಃ ರಾಜ್ಯಪಾಲಿಸಿದ ವಿಶಿಷ್ಟ ಬಗೆಯ ಹರಿದಾಸರು. ಶ್ರೀಶ್ರೀಪಾದರಾಜರು, ಶ್ರೀವ್ಯಾಸರಾಜರು, ಶ್ರೀವಾದಿರಾಜರು ಹರಿದಾಸಸಾಹಿತ್ಯ ಕಂಡ ರಾಜತ್ರಯರು. ಯತಿಗಳೂ ಪೀಠಾಧೀಶರೂ ಸಂಸ್ಕೃತ ಗ್ರಂಥಕಾರರೂ ಆದ ಮೊದಲಾದ ಬಹುಬಗೆಯ ಹಿರಿಮೆ ಇವರದು. ಶ್ರೀಪುರಂದರ-ದಾಸರು ನವಕೋಟಿ ನಾರಾಯಣ ಖ್ಯಾತಿಯ ಅತ್ಯಂತ ಶ್ರೀಮಂತ ವರ್ಗದ ಪೂರ್ವ-ಜೀವನದ ಹರಿದಾಸರು. ಗೃಹಸ್ಥಶೇಖರರು. ಶ್ರೀ ವಿಜಯದಾಸರು ಪೂರ್ವಜೀವನದಲ್ಲಿ ಧನ ಹಾಗೂ ಜ್ಞಾನ ಎರಡರಿಂದಲೂ ವಂಚಿತರಾಗಿದ್ದವರು. ಶ್ರೀ ಗೋಪಾಲದಾಸರು ಕೋಟಿ ಗಾಯತ್ರೀಮಂತ್ರದ ಜಪದಿಂದಾಗಿ ದಾಖಲೆಯೆನ್ನಿಸುವ ಸಿದ್ಧಿ ಪಡೆದವರು. ಶ್ರೀಜಗನ್ನಾಥದಾಸರು ಅಪ್ರತಿಮವ್ಯಾಸಸಾಹಿತ್ಯದ ಧುರೀಣರಾಗಿದ್ದು ಹರಿಕಥಾ-ಮೃತಸಾರದಂತಹ ಕೃತಿರತ್ನವನ್ನು ನೀಡಿದಂತಹ ಮಹನೀಯರು.

## ಶ್ರೀಕನಕದಾಸರು[೧]

ಬಹುಮುಖ ಪ್ರತಿಭೆ ಹಾಗೂ ಸಾಧನೆಯ ಹಿರಿಯ ವ್ಯಕ್ತಿತ್ವ ಶ್ರೀಕನಕದಾಸರದು. ಬ್ರಾಹ್ಮಣರಲ್ಲದ ಇವರು ಮಾಧ್ವಬ್ರಾಹ್ಮಣ ವರ್ಗಕ್ಕೆ ಅತ್ಯಂತ ಸಂಪ್ರತಿಪನ್ನ ಜ್ಞಾನಿವರೇಣ್ಯರೆನಿಸಿದ್ದು ಮೊದಲ ದಾಖಲೆ. ಕುರುಬರಾಗಿ ಜನಿಸಿದ ಇವರು ಮುಂದೆ ಅರಸನಾಗುವ ಭಾಗ್ಯವನ್ನೂ ಕಂಡರು. ತಾರುಣ್ಯದಲ್ಲೇ ಒಮ್ಮೆ ಸ್ವಪ್ನ ಸೂಚನೆಯಂತೆ ಅಪಾರ ನಿಧಿ ಲಭಿಸಿ ತಿಮ್ಮಪ್ಪ ಎಂಬ ಹೆಸರಿನ ಇವರು ಕನಕಪ್ಪ ಎನಿಸಿದರು. ತಿರುಪತಿಯ ತಿಮ್ಮಪ್ಪನ ದಯೆಯಿಂದ ತಿಮ್ಮಪ್ಪ ಎನಿಸಿದ್ದರೆ ಕನಕ ಪ್ರಾಪ್ತಿಯ ಕಾರಣದಿಂದಾಗಿ ಕನಕಪ್ಪರಾದರು. ತಿಮ್ಮಪ್ಪ ಶ್ರೀಹರಿಯಾದರೆ ಕನಕದ ಅಭಿಮಾನಿ ದೇವತೆ ಮಹಾಲಕ್ಷ್ಮಿ. ಎಂದರೆ ಶ್ರೀಲಕ್ಷ್ಮೀನಾರಾಯಣರಿಬ್ಬರ ಅನುಗ್ರಹವೂ ಇವರಿಗೆ ಲಭಿಸಿತು. ಅರಸನಾದಾಗ ಉತ್ತಮ ಆಳ್ವಿಕೆಗಾಗಿ ಜನಮನ್ನಣೆಯೂ ಲಭಿಸಿತು. ಆಗ ಒಮ್ಮೆ ಶತ್ರುಗಳೊಂದಿಗೆ ನಡೆದ ಕದನದಲ್ಲಿ ದೇಹಕ್ಕೆ ಬಿದ್ದ ಪೆಟ್ಟು ಚಿಂತನೆಯ ಕ್ರಮವನ್ನೇ ಬದಲಿಸಿತು. ದಾಸನಾಗು ಎಂದು ಶ್ರೀಹರಿಯೇ ಆದೇಶಿಸಿದಂತಾಯಿತು. ಮುಂದೆ ನಡೆದದ್ದು ಇತಿಹಾಸ.

---

೧. ಶ್ರೀಕನಕದಾಸರ ಜೀವನ, ಕಾಲ, ಜಾತಿ, ಮತ ಹಾಗೂ ಕೃತಿ ಮೊದಲಾದವುಗಳ ವಿವರಗಳನ್ನು ನಮ್ಮ ಪ್ರಕಾಶನದ 'ಸಂತ-ಕವಿ-ಭಕ್ತ ಕನಕದಾಸರು' ಎಂಬ ಕೃತಿಯಲ್ಲಿ ಕೊಡಲಾಗಿದೆ.

ಅರಸನಾಗಿ, ಕವಿಯಾಗಿ, ಸಂತನಾಗಿ, ಹರಿದಾಸನಾಗಿ ಶ್ರೀಕನಕದಾಸರು ಅಪೂರ್ವ ವ್ಯಕ್ತಿತ್ವದ ಮಹನೀಯರೆನ್ನಿಸಿದ್ದಾರೆ. ಕನಕದ ದಾಸರಾಗಿ ಜಗತ್ತಿನ ಬಹುಜನ ಇರುವುದು ರಹಸ್ಯವೇನಲ್ಲ. ಆದರೆ ಕನಕದ ದಾಸ್ಯವನ್ನು ತೊರೆದು ಹರಿದಾಸರಾದ ಹಿರಿಮೆ ಈ ಶ್ರೀಕನಕದಾಸರದ್ದು. ಶ್ರೀ ಪುರಂದರದಾಸರು ನವಕೋಟಿಯನ್ನು ತೊರೆದು ನಾರಾಯಣನನ್ನು ಹಿಡಿದರೆ ಶ್ರೀಕನಕದಾಸರು ಕನಕವನ್ನು ತೊರೆದು ಅದರ ಅಧಿಪತಿಯಾದ ಶ್ರೀಹರಿಯ ದಾಸರಾದರು. ಶ್ರೀಕನಕದಾಸರ ಕೃತಿಗಳಲ್ಲಿ ಹೆಚ್ಚಿನವು ಮಾಧ್ವರ ನಿತ್ಯಪಠ್ಯದ ಭಜನೆಯ ಕೃತಿಗಳಾಗಿವೆ. ಅವರು ರಚಿಸಿದ ಕೇಶವನಾಮವಂತೂ ಮಾಧ್ವ ಮಹಿಳೆಯರ ಮಂತ್ರವೇ ಆಗಿದೆ. ಹರಿದಾಸ ಸಾಹಿತ್ಯದಲ್ಲಿ ಹತ್ತಾರು ಕೇಶವನಾಮಗಳಿದ್ದರೂ ಶ್ರೀಕನಕದಾಸರ ಈ ಕೇಶವನಾಮಕ್ಕೇ ಅಗ್ರಸ್ಥಾನ. ಶೈಲಿ, ತತ್ತ್ವ, ಭಕ್ತಿ ಮೊದಲಾದ ಒಂದೊಂದು ಕಾರಣಕ್ಕೂ ಅಮೋಘವೆನ್ನಿಸುವ ಸಿದ್ಧಿಯ ಕೃತಿ ಈ ಕೇಶವನಾಮ. ಇದರ ಪಠನೆಯಿಂದ ಅಪಾರಸಿದ್ಧಿಯನ್ನು ಗಳಿಸಿದ ಅನೇಕ ಜನರನ್ನು ಇಂದೂ ಕಾಣಬಹುದು.

*****

ಶ್ರೀಕನಕದಾಸರು ದಾಸರಲ್ಲಿ ಕವಿಗಳು; ಕವಿಗಳಲ್ಲಿ ದಾಸರು. ಪಂಪ ಮೊದಲಾದವರು ಮಹಾಕವಿ ಎನ್ನಿಸಿದರೂ, ದಾಸರೆಂಬ ಖ್ಯಾತಿ ಪಡೆದಿಲ್ಲ. ಹರಿದಾಸರು ಸಂತರೆಂದು ಮಾನ್ಯರಾಗಿದ್ದರೂ ಕವಿಗಳ ಸಾಲಿನಲ್ಲಿ ಗುರುತಿಸಲ್ಪಟ್ಟಿಲ್ಲ. ಶ್ರೀಕನಕದಾಸರು ಎರಡೂ ಆಗಿದ್ದರು ಎಂಬುದು ವಿಶೇಷ. ಪೂರ್ವ ಜೀವನದಲ್ಲಿ ಸಮರದಲ್ಲಿ ಕಾದಬಲ್ಲ ಕಲಿಯಾಗಿದ್ದ ಅವರು, ಮುಂದೆ ಮೋಹನತರಂಗಿಣಿಯಂತಹ ಕೃತಿಗಳನ್ನು ಬರೆಯಬಲ್ಲ ಕವಿಗಳಾದರು. ಮುಂಚೆ ಶಸ್ತ್ರ ಹಿಡಿದು ಕಾದಬಲ್ಲವರಾಗಿದ್ದ ಅವರು ಆ ಬಳಿಕ ಶಾಸ್ತ್ರತತ್ತ್ವಗಳನ್ನು ಹಾಡಬಲ್ಲ ಜ್ಞಾನಿಗಳೂ ಆದರು. ಪಂಪ ಮೊದಲಾದವರು ಎಂತಹ ಮಹಾಕವಿಗಳೇ ಆದರೂ, ನಿತ್ಯ ಜನಸಾಮಾನ್ಯರು ಹಾಡಬಲ್ಲಂತಹ ಕೃತಿಗಳನ್ನು ಕೊಟ್ಟವರ ಸಾಲಿಗೆ ಸೇರಿಲ್ಲ. ಲಕ್ಷ್ಮೀಶ ಮೊದಲಾದವರು ಕೀರ್ತನೆಗಳನ್ನು ಬರೆದಿದ್ದರೂ, ಅವರ ಕೃತಿಗಳು ದಾಸರ ಭಜನೆಗಳಲ್ಲಿ ಸೇರಿಕೊಂಡಿಲ್ಲ, ಸಂಗೀತಗಾರರಿಂದ ಹಾಡಲ್ಪಡುವುದೂ ಇಲ್ಲ. ಆದರೆ, ಶ್ರೀಕನಕದಾಸರು ಹಾಗಲ್ಲ. ಅವರು ಬರೆದ ಕೃತಿಗಳು ಭಜನೆಯಲ್ಲೂ ಸೇರಿವೆ, ಸಾಹಿತ್ಯದಲ್ಲೂ ಮೊಳಗಿವೆ; ಸಂಗೀತದಿಂದಲೂ ಬೆಳಗಿವೆ. ಮುಂಚೆ ಶಸ್ತ್ರಪಾಣಿಯಾಗಿದ್ದು ಆ ಬಳಿಕ ಶಾಸ್ತ್ರಕ್ಕೆ ಶರಣಾದ ಅವರ ರೀತಿಯು ಮಧ್ವಸಿದ್ಧಾಂತದ ಅಪ್ರತಿಮ ಟೀಕಾಕೃತ್ಪಾದರೆನ್ನಿಸಿದ ಶ್ರೀಜಯತೀರ್ಥರ ರೀತಿಯನ್ನು ಹೋಲುತ್ತದೆ. ಮುಂಚೆ ಅಪಾರ ಶ್ರೀಮಂತಿಕೆಯನ್ನು ಹೊಂದಿ, ಆ ಬಳಿಕ ಹರಿದಾಸರಾದವರಲ್ಲಿ ಅವರು ಮುಂಚೆ ನವಕೋಟಿ ನಾರಾಯಣನೆನ್ನಿಸಿ ಆ ಬಳಿಕ ದಾಸರೆಂದರೇ ಅವರೇ ಎನ್ನಿಸಿದ ಶ್ರೀಪುರಂದರ-ದಾಸರನ್ನು ಹೋಲುವುದು. ಶ್ರೀಪುರಂದರಾಸರಂತೆ ಶ್ರೀಕನಕದಾಸರು ಸಹ ಲೌಕಿಕದಿಂದ ಅಲೌಕಿಕದ ಕಡೆಗೆ ಪೂರ್ಣವಾಗಿ ಹೊರಳಿದ ಸಂತರು ಎಂಬುದು ಸಹ ಗಮನಿಸಬೇಕಾದ

ಸಂಗತಿ. ಪಂಪ, ಕುಮಾರವ್ಯಾಸ, ಕುಮಾರವಾಲ್ಮೀಕಿ, ಲಕ್ಷ್ಮೀಶ ಮೊದಲಾದ ಬೇರಾವ ಮಹಾಕವಿಗಳಿಗೂ ದೊರೆಯದ ಜನಪ್ರಿಯತೆ ಶ್ರೀಕನಕದಾಸರಿಗೆ ಲಭಿಸಿರುವುದು ಅವರ ಅಪಾರ ಸಾಧನೆಗೆ ಸಂಕೇತ; ಅದಕ್ಕೆ ಅವರೆಲ್ಲರಲ್ಲಿ ಕಾಣದಾಗಿದ್ದ ಅಪಾರ ಭಗವದ್ಭಕ್ತಿ ಮುಖ್ಯ ಕಾರಣ ಎನ್ನಬಹುದು. ಪಂಪ ಮೊದಲಾದವರು ಸಾಹಿತ್ಯ ಪ್ರಪಂಚದಲ್ಲಿ ಮಾನ್ಯರೆನ್ನಿಸಿದರೂ, ಸಮಾಜಸುಧಾರಣೆಯನ್ನು ತಮ್ಮ ಕೃತಿಗಳಿಂದ ಮಾಡಿದ ಶ್ರೀಕನಕದಾಸರಂತೆ ಸ್ಮರಣೀಯರಾಗಿಲ್ಲ. ಶ್ರೀಕನಕದಾಸರ ಕೃತಿಗಳು ಸಾಹಿತ್ಯ, ಸಂಗೀತ, ಶಾಸ್ತ್ರ ಮೊದಲಾದವುಗಳನ್ನು ಒಳಗೊಂಡಿದ್ದಂತೆ ಅಪಾರವಾದ ಸಾಮಾಜಿಕ ಕಳಕಳಿಯನ್ನು ಹೊಂದಿದ್ದುದು ಇದಕ್ಕೆ ಕಾರಣ ಎಂದು ತಿಳಿಯಬಹುದು.

ದಾಸರಲ್ಲೂ ಕೀರ್ತನೆಗಳಿಗೆ ಶ್ರೀಪುರಂದರದಾಸರು ಪ್ರಸಿದ್ಧರಾದರೆ, ಶ್ರೀವಿಜಯ-ದಾಸರು ಸುಳಾದಿದಾಸರೆಂದೇ ಪ್ರಸಿದ್ಧ. ಮುಂಡಿಗೆ ದಾಸರೆಂಬ ವಿಶಿಷ್ಟವಾದ ಹಿರಿಮೆ ಶ್ರೀಕನಕದಾಸರದು. ಶ್ರೀವ್ಯಾಸರಾಜರು, ಶ್ರೀಪುರಂದರದಾಸರ ಕೃತಿಗಳನ್ನು ಪುರಂದರೋಪನಿಷತ್ ಎಂದು ಆದರಿಸಿದ ವಿಷಯ ಸುಪ್ರಸಿದ್ಧ. ಇದು ಶ್ರೀಪುರಂದರದಾಸರ ಸಹವರ್ತಿಗಳು, ಶ್ರೀವ್ಯಾಸರಾಜರ ಶಿಷ್ಯರೂ ಆದ ಸಂತ ಶ್ರೀಕನಕದಾಸರ ಕೃತಿಗಳಿಗೂ ಸಹ ಅನ್ವಯಿಸಿ ಅವರ ಕೃತಿಗಳು ಕನಕೋಪನಿಷತ್ ಎಂದು ಮಾನ್ಯವಾಗುವವು. ಒಂದು ದೃಷ್ಟಿಯಲ್ಲಿ ಹರಿದಾಸಸಾಹಿತ್ಯ ಕನ್ನಡದ ಉಪನಿಷತ್ಸಾಹಿತ್ಯವೇ ಆಗಿದೆ ಎನ್ನಬಹುದು.

ಶ್ರೀಕನಕದಾಸರು ಕರ್ನಾಟಕದ ಪ್ರಮುಖ ಹರಿದಾಸರಲ್ಲಿ ಒಬ್ಬರು. ಜ್ಞಾನ ಯೋಗಿಗಳಲ್ಲಿ ಸನಕಮುನಿಯಂತೆ, ಕರ್ಮಯೋಗಿಗಳಲ್ಲಿ ಜನಕರಾಜನಂತೆ ಹರಿ-ದಾಸರಲ್ಲಿ ಶ್ರೀಕನಕದಾಸರು ಅನೇಕ ಕಾರಣಗಳಿಂದ ಗಮನಾರ್ಹರೆನ್ನಿಸಿಕೊಂಡಿದ್ದಾರೆ.

ಚಾತುರ್ವರ್ಣ್ಯಪದ್ಧತಿಯ ಚೌಕಟ್ಟಿನಲ್ಲಿ ಶೂದ್ರವರ್ಗದ ಒಂದು ಒಳಪಂಗಡಕ್ಕೆ ಸೇರಿದವರಾದ ಇವರ ಸಾಧನೆ ವೈದಿಕಪ್ರಪಂಚದಲ್ಲಿ ಮಾನ್ಯತೆ ಗಳಿಸಿದ್ದು ಇತಿಹಾಸ. ಕಾಗಿನೆಲೆ, ಬಾಡ, ವಿಜಯನಗರ, ತಿರುಪತಿ ಮತ್ತು ಉಡುಪಿ ಇವರ ಪ್ರಮುಖ ಕಾರ್ಯಕ್ಷೇತ್ರಗಳು.

ಶ್ರೀಕನಕದಾಸರ ಪೂರ್ವಜೀವನ ಪ್ರಚಲಿತ ಕಥೆಯಂತೆ ಒಂದು ಕಾಲದಲ್ಲಿ ಧನ ಕನಕಾದಿಗಳಿಂದ ತುಂಬಿತ್ತು. ಒಂದರ್ಥದಲ್ಲಿ ಅವುಗಳಿಗೆ ದಾಸರೇ ಆಗಿಬಿಟ್ಟಿದ್ದ ಅವರು ಸ್ವತಃ ಭಗವಂತನೇ ತನ್ನ ದಾಸನಾಗಲು ಕರೆಯಿತ್ತಾಗಲೂ ಮೊದಲು ಅಷ್ಟಾಗಿ ಗಮನಿಸಲಿಲ್ಲವಂತೆ. ಕೊನೆಗೂ ಒಂದು ಹಂತದಲ್ಲಿ ಭಗವಂತನ ಕರೆ ಅವರ ಹೃದಯವನ್ನು ಮುಟ್ಟಿತು. ಕನಕನಾಯಕರೆನಿಸಿದ್ದ ತಿಮ್ಮಪ್ಪನಾಯಕ ಧನ-ಕನಕಗಳನ್ನೆಲ್ಲಾ ತೊರೆದು ಶ್ರೀಕನಕದಾಸರಾದರು. ಮೊದಲು ಕನಕಕ್ಕೆ ದಾಸರಾಗಿದ್ದ ಅವರು ಅನಂತರ

ಕನಕನನ್ನೇ ದಾಸನನ್ನಾಗಿ ಮಾಡಿಕೊಂಡರು. ತಮ್ಮ ಜೀವನದಲ್ಲಿ ಮತ್ತೆಂದೂ ಅದಕ್ಕೆ ವಶವಾಗದಂತೆ ಬದುಕಿದರು. ಭಗವಂತನನ್ನು ''ಈಶ'' ಎಂದು ತಿಳಿದ ಅವರಿಗೆ ಬಂದ ಧನ್ಯತೆ ಕನಕನಾಯಕರಾಗಿದ್ದಾಗ ಎಂದೂ ಬಂದಿರಲಿಲ್ಲ: 'ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು । ಪದುಮನಾಭನ ಪಾದದೊಲುಮೆ ಎನಗಾಯಿತು'. ಒಂದರ್ಥದಲ್ಲಿ ಅವರು ಮೊದಲೂ ಕನಕದಾಸರು. ಅನಂತರವೂ ಕನಕದಾಸರು. ಮೊದಲ ಅರ್ಥದಲ್ಲಿ ಕನಕದಾಸರಾಗುವ ಜನ ಲೋಕದಲ್ಲಿ ಬಹಳವಾಗಿ ಸಿಕ್ಕುತ್ತಾರೆ, ಎರಡನೆಯ ಅರ್ಥದಲ್ಲಿ ಕನಕದಾಸರಾಗುವುದು ಮಾತ್ರ ಶ್ರೀಕನಕದಾಸರಂಥವರಿಗೇ ಸಾಧ್ಯ.

ಹೀಗೆ ಕನಕದ ದಾಸ್ಯವನ್ನು ತೊರೆದು ಭಗವಂತನ ದಾಸ್ಯದತ್ತ ಧಾವಿಸಿದ್ದೇ ಶ್ರೀಕನಕದಾಸರ ಪ್ರಮುಖ ಜೀವನಾದರ್ಶ. ''ಕನಕದಾಸರು ಮೂಲತಃ ನಿರಕ್ಷರ ಕುಕ್ಷಿಗಳು. ಹರಿದಾಸರಾಗುತ್ತಲೇ ಕವಿಗಳಾಗಿ ಬದಲಾಗಿ ಬಿಟ್ಟರು'' ಎಂಬ ಭಾವನೆ ಜನಗಳಲ್ಲಿ ಪ್ರಚಾರದಲ್ಲಿದೆ. ಆದರೆ ಶ್ರೀಕನಕದಾಸರ ಪ್ರಮುಖ ಕೃತಿಗಳಲ್ಲಿ ಒಂದಾದ ಮೋಹನತರಂಗಿಣಿಯಿಂದ ವ್ಯಕ್ತವಾಗುವಂತೆ ಅವರು ಹರಿದಾಸರಾಗುವ ಮುನ್ನವೇ ಮಹಾಕವಿಗಳಾಗಿದ್ದರು. ಉದ್ದಾಮಪಂಡಿತರಾಗಿದ್ದರು, ಅವರ ಮೋಹನತರಂಗಿಣಿ ಒಂದು ಉತ್ತಮ ಶ್ರೇಣಿಯ ಮಹಾಕಾವ್ಯ. ಅದು ಅವರು ಹರಿದಾಸ ದೀಕ್ಷೆ ಸ್ವೀಕರಿಸುವ ಮುನ್ನ ಬರೆದ ಕೃತಿ ಎನ್ನಲು ಅದರಲ್ಲಿ ಕಂಡುಬರುವ ರಾಮಾನುಜಾಚಾರ್ಯರ ಉಲ್ಲೇಖ ಸಾಕ್ಷಿಯಾಗಿದೆ. ಹರಿದಾಸರ ಪರಮತತ್ವಗಳಲ್ಲಿ ಹರಿಸರ್ವೋತ್ತಮತ್ವದಂತೆ ವಾಯು ಜೀವೋತ್ತಮತ್ವವೂ ಸೇರಿದೆ. ಆದರಂತೆ ಅವರಿಗೆ ಶ್ರೀಮಧ್ವಾಚಾರ್ಯರೇ ಮುಖ್ಯಗುರುಗಳು. ಶ್ರೀಮಧ್ವರ ಹೆಸರೇ ಎತ್ತದ ಮೋಹನತರಂಗಿಣಿ ಅವರ ಪೂರ್ವಜೀವನದ ರಚನೆ ಎನ್ನುವುದು ಸ್ಪಷ್ಟ ಅವರು ಹರಿದಾಸರಾದ ನಂತರ ಶ್ರೀಮಧ್ವರ ಪರಮಗುರುತ್ವವನ್ನು ಒಪ್ಪಿಕೊಂಡಿದ್ದಕ್ಕೆ ''ಪರಮಪದವೀವ ಗುರು ಮುಖ್ಯಪ್ರಾಣ'', ''ಅಂಧಂತಮಸ್ಸು ಮತ್ತಿನ್ಯಾರಿಗೆ'' ಮೊದಲಾದ ಕೃತಿಗಳು ಸಾಕ್ಷಿಯಾಗಿವೆ. ಭಗವದ್ಭಕ್ತಿ, ವಿಷಯವಿರಕ್ತಿಗಳು ಹರಿದಾಸಸಾಹಿತ್ಯದ ಮತ್ತೊಂದು ಅಸಾಧಾರಣಲಕ್ಷಣ. ಆದರೆ ಮೋಹನ-ತರಂಗಿಣಿಯಲ್ಲಿ ಭಕ್ತಿರಸಕ್ಕಿಂತ ಶೃಂಗಾರರಸಕ್ಕೇ ಹೆಚ್ಚಿನ ಪ್ರಾಧಾನ್ಯ. ಈ ಕಾರಣದಿಂದಲೂ ಅದು ಅವರ ಪೂರ್ವಜೀವನದ ರಚನೆ ಎಂದು ಸ್ಥಿರಪಡುತ್ತದೆ.

ಮೋಹನತರಂಗಿಣಿಯಂತಹ ಉತ್ತಮ ಮಹಾಕಾವ್ಯವೊಂದನ್ನು ರಚಿಸಿದ ಪ್ರೌಢ-ಚೇತನ ಹರಿದಾಸದೀಕ್ಷೆಗೆ ಶರಣಾದದ್ದು ಅವರ ಶೃಂಗಾರ ಪ್ರಧಾನವಾದ ದೃಷ್ಟಿ ಭಕ್ತಿ-ಮಯವಾಗಿ ಪರಿವರ್ತನವಾಗಿದ್ದಕ್ಕೆ ದ್ಯೋತಕ. ಒಂದು ಕ್ಷೇತ್ರದಲ್ಲಿ ಅಸಾಮಾನ್ಯಸಿದ್ಧಿಯನ್ನು ಕಂಡ ಚೇತನಕ್ಕೆ ಮತ್ತೊಂದು ಆದರ್ಶ ಒಪ್ಪಿಗೆಯಾಗುವುದು ಅಷ್ಟಾಗಿ ಕಂಡು ಬರದ

ಒಂದು ವಿಶಿಷ್ಟ ಮನೋಧರ್ಮ. ಅನೇಕ ಸಮಕಾಲೀನ ಕವಿಗಳು ಕಾವ್ಯ ಬರೆಯುವುದಕ್ಕಿಂತ ತಾವು ಹಿಡಿದ ಪಂಥವನ್ನೇ ಸರಿ ಎಂದು ಸಾಧಿಸುವುದರಲ್ಲೇ ಉಳಿದ ಆಯುಷ್ಯ ಕಳೆಯುವ ಕೆಲವು ನಿದರ್ಶನಗಳು ಇದಕ್ಕೆ ಪುಷ್ಟಿಯೀಯುತ್ತವೆ. ಆದರೆ ಸಾಧಿಸಿದ್ದಕ್ಕಿಂತ ಉತ್ತಮಗುರಿ ಗೋಚರಿಸಿದಾಗ ಒಂದು ಪರಿಪಕ್ವಚೇತನ ಮೊದಲ ದೃಷ್ಟಿಯನ್ನು ಬದಲಿಸಿಕೊಳ್ಳುವುದು ಹೇಗೆ ಆರೋಗ್ಯಕರ ಎನ್ನಲು ಇದು ಸಾಕ್ಷಿ. ಶೃಂಗಾರದಲ್ಲಿ ಸಾರ್ಥಕ್ಯ ಕಾಣುವ ದೃಷ್ಟಿ ಭಗವಂತನ ಸರ್ವೋತ್ತಮತ್ವದಲ್ಲಿ ಆನಂದ ಕಾಣುವ ಹಂತ ತಲುಪಿದ್ದು ಅವರು ಹಿಡಿದ ಪ್ರಗತಿಪಥಕ್ಕೆ ಸೂಚಿ.

ಇದು ಒಂದರ್ಥದಲ್ಲಿ ಹರಿದಾಸದೀಕ್ಷೆ ತಂದುಕೊಡುವ ಅನನ್ಯಸಾಧಾರಣ ಸಿದ್ಧಿಯೂ ಆಗಿದೆ.

ಹರಿದಾಸಸಾಹಿತ್ಯದ ಭೀಷ್ಮರೆನಿಸಿದ ಶ್ರೀಪುರಂದರದಾಸರೂ ಸಹಾ ಹೀಗೆಯೆ ನವಕೋಟಿ ಸಂಪತ್ತನ್ನು ತೊರೆದು ನಾರಾಯಣನತ್ತ ಧಾವಿಸಿದ ಹಿರಿಯಚೇತನ ಎಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಶೃಂಗಾರ ಭೋಗಕ್ಕೆ ಸೀಮಿತವಾದರೆ, ವೈರಾಗ್ಯ – ಭಕ್ತಿಭಾವಗಳು ತ್ಯಾಗದತ್ತ ಸೆಳೆಯುತ್ತವೆ. ಭೋಗದ ಆನಂದ ಕ್ಷಣಿಕವಾದರೆ, ತ್ಯಾಗದ ಆನಂದ ಶಾಶ್ವತವಾದುದು. ಶೃಂಗಾರಕ್ಕೆ ಉದ್ವೇಗದ ಅಪಾಯವಿದ್ದರೆ, ತ್ಯಾಗಕ್ಕೆ ಉಲ್ಲಾಸದ ಹಿರಿಮೆ ಇದೆ. ಇದರ ಹಿನ್ನಲೆಯಲ್ಲಿ ಶ್ರೀಕನಕದಾಸರ ಬದಲಾದ ಜೀವನ ಮೌಲ್ಯದ ಮಹತ್ವ ಅರಿವಾಗುತ್ತದೆ.

ಸೋಸಲೆಯ ಶ್ರೀವ್ಯಾಸರಾಜರು ಮತ್ತು ಸೋದೆಯ ಶ್ರೀವಾದಿರಾಜರು ಬಾಡದ ಶ್ರೀಕನಕದಾಸರ ಜೀವನವನ್ನು ರೂಪಿಸುವಲ್ಲಿ ಪ್ರಧಾನ ಪಾತ್ರ ವಹಿಸಿದ ಇಬ್ಬರು ಮಹನೀಯರು. ಇದರಲ್ಲಿ ಶ್ರೀವಾದಿರಾಜರು ಶ್ರೀವ್ಯಾಸರಾಜರ ಶಿಷ್ಯರು ಸಹ ಆಗಿದ್ದರು ಎಂಬುದು ವಿಶೇಷ. ಶ್ರೀವ್ಯಾಸರಾಜರು ತಮ್ಮ ಪ್ರತಿಭೆ ಪಾಂಡಿತ್ಯಗಳಿಂದ ದ್ವೈತವೇದಾಂತದ ಇತಿಹಾಸದಲ್ಲಿ ಮುನಿತ್ರಯರಲ್ಲೊಬ್ಬರೆಂದು ಪರಿಗಣಿತರಾಗಿರುವ ಮಹನೀಯರು. ತಮ್ಮ ವೈದುಷ್ಯದಿಂದ ಪರವಾದಿಗಳಿಗೆ ಸಿಂಹಸ್ವಪ್ನವಾಗಿ, ಜ್ಞಾನ-ಪಿಪಾಸುಗಳ ಪಾಲಿಗೆ ಕಾಮಧೇನುಸದೃಶರಾಗಿ ಬಾಳಿದವರು. ವಿಜಯೀಂದ್ರ-ತೀರ್ಥರಂತಹ ವ್ಯಾಸಸಾಹಿತ್ಯದ ಧುರೀಣರನ್ನೂ ಪುರಂದರದಾಸರಂತಹ ದಾಸ-ವರೇಣ್ಯರನ್ನೂ ರೂಪಿಸಿದ ಇವರ ಗರಡಿಯಿಂದ ಹೊರಬಂದವರು ಶ್ರೀಕನಕದಾಸರು ಎಂಬಲ್ಲಿ ಅವರ ಹಿರಿಮೆಯ ಮತ್ತೊಂದು ಮುಖ ಅಡಗಿದೆ. ಶೂದ್ರನೊಬ್ಬ ಹರಿದಾಸನಾಗುವಲ್ಲಿ ಅವರು ವಹಿಸಿದ ದೀಕ್ಷೆ ಅಸಾಧಾರಣವಾದುದು. ಶ್ರೀಕನಕ-ದಾಸರಿಗೆ ದಾಸದೀಕ್ಷೆಯಿತ್ತ ಗುರುಗಳಾಗಿ ಮಾತ್ರವಲ್ಲದೇ ಅವರ ಹಿರಿಮೆಯನ್ನು ಸಮಾಜಕ್ಕೆ ತಿಳಿಸಿಕೊಡುವಲ್ಲಿಯೂ ಶ್ರೀವ್ಯಾಸರಾಜರು ವಹಿಸಿದ ಶಾಸ್ತ್ರೀಯ ರೀತಿ ಆದರ್ಶಪ್ರಾಯವಾದುದು.

ಸೋದೆಯ ಶ್ರೀವಾದಿರಾಜರು ಶ್ರೀಕನಕದಾಸರ ಮೇಲೆ ಪ್ರಭಾವ ಬೀರಿದ ಮತ್ತೊಬ್ಬ ಮಹನೀಯರು. ಬ್ರಾಹ್ಮಣೇತರನೊಬ್ಬನನ್ನು ಉಡುಪಿಗೆ ಆಹ್ವಾನಿಸಿ ಶ್ರೀಕೃಷ್ಣನ ಸೇವೆಗೆ ಅವಕಾಶ ಮಾಡಿಕೊಟ್ಟಿದ್ದರಲ್ಲಿ ಅವರು ವಹಿಸಿದ ಪಾತ್ರ ತುಂಬಾ ಹಿರಿದು. ಉಡುಪಿಗೆ ಬಂದು ಹೋಗುವ ಜನಕ್ಕೆ ಲೆಕ್ಕವಿಲ್ಲ, ಆದರೆ ಶ್ರೀಕನಕದಾಸರಂತೆ ಉಡುಪಿಯಲ್ಲಿ ಇತಿಹಾಸ ಮಾಡಿದ ವ್ಯಕ್ತಿಗಳು ಮಾತ್ರ ಬಹಳ ವಿರಳ. ಉಡುಪಿ ಎಂದರೆ ''ಕನಕನ ಕಿಂಡಿ'' ಎಂಬುದು ಸಾಮಾನ್ಯ ಯಾತ್ರಿಕನಿಗೂ ತಿಳಿದಿರುವ ಮಾತು ಎಂದರೆ ಶ್ರೀಕನಕದಾಸರ ಉಡುಪಿಯ ಸಂಬಂಧ ಮನವರಿಕೆಯಾದೀತು. ಉಡುಪಿಯಲ್ಲಿ ಶ್ರೀಕನಕದಾಸರ ಸ್ಮಾರಕವಾಗಿ ಕನಕನ ಕಿಂಡಿ ಮಾತ್ರವಲ್ಲದೆ ಅಂಬಲಿಯ ನೈವೇದ್ಯ ಮೊದಲಾದವುಗಳು ಉಳಿದುಕೊಂಡಿವೆ. ಅನೇಕ ತಾಡವಾಲೆಗಳಲ್ಲಿ ಅವರ ಉಡುಪಿಯ ವಾಸ ದಾಖಲಾಗಿದೆ. ಯುಕ್ತಿಮಲ್ಲಿಕೆಯಂತಹ ಗ್ರಂಥರತ್ನವನ್ನು ರಚಿಸಿದ ಬುದ್ಧಿಗೆ ಅಬ್ರಾಹ್ಮಣನ ಭಗವದ್ಭಕ್ತಿಯನ್ನು ಗುರುತಿಸುವ ಹೃದಯವಂತಿಕೆ ಇದ್ದದರಲ್ಲಿ ಆಶ್ಚರ್ಯವೇನಿಲ್ಲ.

ಹೀಗೆ ಇಬ್ಬರು ರಾಜರ ನಡುವೆ ತಮ್ಮ ಜೀವನ ರೂಪಿಸಿಕೊಂಡ ಕನಕದಾಸರು ನಮ್ಮೆಲ್ಲರ ವಿಷಯದಾಸ್ಯವನ್ನು ಬಿಡಿಸಬಲ್ಲಂತಹ ಆದರ್ಶ ಬಾಳನ್ನು ಬಾಳಿದರು. ಈ ಇಬ್ಬರೂ ಮೂಲತಃ ಕನ್ನಡದಲ್ಲಿ ಕ್ರಮವಾಗಿ ವಿಟ್ಠಲಪದವಿರದ 'ಸಿರಿಕೃಷ್ಣ' 'ಹಯವದನ' ಎಂಬ ಅಂಕಿತಗಳಿಂದ ನೂರಾರು ಕೃತಿಗಳನ್ನು ರಚಿಸಿದ ಶ್ರೇಷ್ಠಹರಿದಾಸರಾಗಿ ಸಹ ಮಾನ್ಯವಾಗಿದ್ದಾರೆ. ಈ ಇಬ್ಬರ ಬಗ್ಗೆಯೂ ಶ್ರೀಕನಕದಾಸರು ರಚಿಸಿರುವ ಒಂದು ಕೃತಿಯೂ ಉಪಲಬ್ಧವಿಲ್ಲೆಂಬುದು ಸೋಜಿಗ. ಆದರೆ ಶ್ರೀವ್ಯಾಸರಾಯರು ಗುರುಗಳು ಎನ್ನಲು, ಶ್ರೀವಾದಿರಾಜರು ಇವರ ಮೇಲೆ ಪ್ರಭಾವ ಬೀರಿದ್ದರು ಎನ್ನಲು ಇತಿಹಾಸವೂ, ಹರಿದಾಸಸಾಹಿತ್ಯಪರಂಪರೆಯೂ ಪ್ರಬಲ ಆಧಾರವಾಗಿವೆ ('ತ್ರಿವಿಕ್ರಮದಾಸಸ್ಯ ದಾಸ' - ಮೋಹನತರಂಗಿಣಿ).

ಈ ಇಬ್ಬರೂ ರಾಜರು - ಆದರೆ ಶ್ರೀಕನಕದಾಸರು ದಾಸರು. ಆದರೆ ಈ ಮೂವರೂ ಹರಿದಾಸರು ಹೌದು; ಇನ್ನೊಂದರ್ಥದಲ್ಲಿ ಈ ಮೂವರು ವಿಷಯಗಳ ಮೇಲೆ ವಿಜಯ ಸಾಧಿಸಿದ ರಾಜರೂ ಹೌದು. ಇಂತಹ ವೈಶಿಷ್ಟ್ಯವನ್ನು ಭಗವಂತನನ್ನು ನಂಬಿ ಬಾಳು ಸಾಗಿಸಬಲ್ಲ ಹಿರಿಯ ಚೇತನಗಳಷ್ಟೇ ಸಾಧಿಸಬಹುದು. ಹಾಗಲ್ಲದವರು ಜೀವನಪೂರ್ತಿ ಉಳಿಯುವುದು ವಿಷಯಗಳ ದಾಸರಾಗಿ ಮಾತ್ರ.

ಉಡುಪಿಯ ಶ್ರೀಕೃಷ್ಣ ಶ್ರೀಕನಕದಾಸರಿಗೆ ಒಲಿದು ಅಸಾಮಾನ್ಯ ರೀತಿಯಲ್ಲಿ ದರ್ಶನ-ವಿತ್ತ ಎಂಬುದು ಇತಿಹಾಸ. ಶ್ರೀಕೃಷ್ಣನನ್ನು ತಾವು ಇದ್ದಲ್ಲಿಂದಲೇ ಕಂಡದ್ದು ಕನಕದಾಸರ ಆದರ್ಶ. ಇದು ಒಂದರ್ಥದಲ್ಲಿ ಭಗವದ್ಗೀತೆ ಉಪದೇಶಿಸಿದ ನಿಷ್ಕಾಮಕರ್ಮದ ಪ್ರತೀಕವೇ ಆಗಿದೆ: ''ಸ್ವೇ ಸ್ವೇ ಕರ್ಮಣ್ಯಭಿರತಃ ಸಿದ್ಧಿಂ ವಿಂದತಿ ಮಾನವಃ''.

ಒಳಗೆ ವಿಷಯಾಕಾಂಕ್ಷೆ ತುಂಬಿಕೊಂಡವರು ಎಲ್ಲಿಗೆ ಹೋದರೂ ಭಗವಂತ ಕಾಣಲಾರ. ಮನಸ್ಸಿನಲ್ಲಿ ಭಗವಂತನ ಚಿಂತನೆ ಇದ್ದರೆ ಇದ್ದಲ್ಲೇ ಅವನ ದರ್ಶನ ಸಾಧ್ಯ ಎಂಬ ಇಲ್ಲಿಯ ತತ್ತ್ವ "ಸಂಗ್ರಹವೇದಾಂತ"ವೇ ಆಗಿದೆ.

ಎದುರೇ ನಿಂತು ಸಹ, ಕೃಷ್ಣನನ್ನು ಕಾಣದೇ ಅವನಿಗೆ ತೊಡಿಸಿದ ಕನಕಮಯ ಆಭರಣಗಳನ್ನು ಮಾತ್ರವೇ ಕಂಡು ಬರುವ ಜನ ಇದನ್ನು ಅರಿತಾಗಲೇ ಜೀವನ ಹೊನ್ನಾದೀತು.

ಅವರಿಗೆ ಕಲ್ಲಿನ ಗೋಡೆ ಅಡ್ಡವಾಗಿತ್ತು. ಆದರೆ ಅವರ ಮನಸ್ಸಿಗೆ ಕಾಮ ಕ್ರೋಧಗಳ ತೆರೆ ಇರಲಿಲ್ಲ . ಅದಕ್ಕೇ ಅವರಿಗೆ ಕೃಷ್ಣ ಕಾಣಿಸಿದ. ನಮಗೆ ಕಲ್ಲಿನ ಗೋಡೆಯು ಅಡ್ಡ ಇಲ್ಲದೇ ಹೋದರೂ ಮನಸ್ಸಿಗೆ ಕಾಮಾದಿಗಳ ತೆರೆ ಮುಸುಕಿಯೇ ಇರುತ್ತದೆ. ಅದಕ್ಕೇ ಭಗವಂತ ನಮಗೆ ಕಾಣದೇ ಹೋಗುತ್ತಾನೆ. ನಮ್ಮ ಕಣ್ಣೆದುರು ಕೃಷ್ಣ ಇದ್ದರೂ ಮನಸ್ಸಿನ ಎದುರು ವಿಷಯಗಳು ತುಂಬಿರುತ್ತವೆ. ಅವರಿಗೆ ಎದುರು ಗೋಡೆಯಾದರೂ ಒಳಗೆ ಭಗವಂತನದೇ ಚಿಂತೆ. ಆದ್ದರಿಂದ ನಾವು ದೇವರನ್ನು ಕಾಣದಿದ್ದಲ್ಲಿ ಆಶ್ಚರ್ಯವಿಲ್ಲ; ಅವರು ದೇವರನ್ನು ಕಂಡಿದ್ದರಲ್ಲೂ ಆಶ್ಚರ್ಯವಿಲ್ಲ.

ಶ್ರೀಕನಕದಾಸರು ಕನ್ನಡ ಸಾಹಿತ್ಯದ ದೊಡ್ಡ ಹೆಸರುಗಳಲ್ಲೊಂದು. ಹರಿದಾಸ-ಸಾಹಿತ್ಯದಲ್ಲಂತೂ ಅವರದು ಶ್ರೀಪುರಂದರದಾಸರದು ಹೇಗೋ ಹಾಗೆ.

ಹರಿದಾಸಸಾಹಿತ್ಯದಲ್ಲೂ ಸಾಮಾಜಿಕ ಜಾಗೃತಿಗೆ ಕಾರಣವಾಗುವ ನೀತಿಬೋಧಕ ಕೃತಿಗಳನ್ನು ರಚಿಸಿರುವವರಲ್ಲಿ ಶ್ರೀಪುರಂದರದಾಸರಷ್ಟೇ ಪ್ರಭಾವಿ ಎನ್ನಿಸಿರುವವರು ಶ್ರೀಕನಕದಾಸರು. ದಂಡಕ ಪ್ರಾಕಾರವನ್ನೂ ಸಹ ಶ್ರೀಪಾದರಾಜರ ಅನಂತರ ಅಳವಡಿಸಿಕೊಂಡವರು ಶ್ರೀಕನಕದಾಸರೊಬ್ಬರೆ ಎನ್ನಬಹುದು.

ಮೋಹನತರಂಗಿಣಿಯಲ್ಲಿ ಸುಜ್ಞಾನವಧೂಟಿಯು ಕವಿಯನ್ನು ಕುರಿತು 'ವಿಷ್ಣು-ಭಕ್ತಿನಂದನಕಲಕಂಠ'[೧] (೨/೨) ಎಂಬುದಾಗಿ ಮಾಡಿರುವ ಸಂಬೋಧನೆ ಶ್ರೀಕನಕದಾಸರ ಹಿರಿಮೆಯನ್ನು ವಿಶಿಷ್ಟರೀತಿಯಲ್ಲಿ ಸಾರುವುದು. ಇದು ಶ್ರೀಕನಕದಾಸರು ಶ್ರೇಷ್ಠ ಕವಿ ಮಾತ್ರವಲ್ಲದೇ ಉತ್ತಮ ಗಾಯಕರೂ ಆಗಿದ್ದರು ಎಂಬ ವಿಶೇಷಾಂಶವನ್ನು ಸೂಚಿಸುವುದು.

---

೧. 'ವಿಷ್ಣುಭಕ್ತಿನಂದನಕಲಕಂಠ' ಎಂದರೆ, ವಿಷ್ಣುಭಕ್ತಿ ಎಂಬ ನಂದನವನದ ಕೋಗಿಲೆ ಎಂದರ್ಥ; ಇದಕ್ಕೆ ವಿಷ್ಣುಭಕ್ತಿಯ ಪ್ರಸಾರದ ಮೂಲಕ ಆನಂದವನ್ನು ನೀಡುವ ಕೋಗಿಲೆಯ ಕಂಠದವರು ಎಂಬ ಅರ್ಥವನ್ನೂ ಮಾಡಬಹುದು. ಇದು ಲಕ್ಷ್ಮೀಶ ಕವಿಯ 'ಕರ್ನಾಟಕವಿಚೂತವನಚೈತ್ರ' ಎಂಬ ಬಿರುದನ್ನು ಹೋಲುವಂತಿದೆ. ಲಕ್ಷ್ಮೀಶನ ಪ್ರಸಿದ್ಧಿ ಕಾವ್ಯಪ್ರಪಂಚದಲ್ಲಾದರೆ, ಕನಕದಾಸರ ಪ್ರಸಿದ್ಧಿ ವಿಷ್ಣುಭಕ್ತಿಯ ಪ್ರಸಾರದಲ್ಲಾಯಿತು ಎಂಬುದು ವಿಶೇಷ.

ಹರಿದಾಸರಲ್ಲಿ ಶ್ರೀಕನಕದಾಸರು ತುಂಬಾ ಪ್ರತ್ಯೇಕವಾಗಿ ಕಾಣುವರು. ನರಹರಿತೀರ್ಥರನ್ನೊಳಗೊಂಡಂತೆ ಇತ್ತೀಚಿನ ದಾಸರವರೆಗಿನ ಸಕಲ ಹರಿದಾಸರು ಸಹ ಕವಿಗಳಾಗಿ ಗುರುತಿಸಿಕೊಂಡವರಲ್ಲ. ಅವರ ಕೃತಿಗಳಲ್ಲಿ ಕಾವ್ಯಾಂಶವಿರುವುದು ನಿಜವಾದರೂ ಸಹ ಮೂಲತಃ ಕಾವ್ಯರಚನೆ ಅವರ ಉದ್ದೇಶವಾಗಿರಲಿಲ್ಲ. ದಾಸಸಾಹಿತ್ಯದ ಬೃಹತ್ಕೃತಿ ಎನ್ನಿಸಿದ ಹರಿಕಥಾಮೃತಸಾರವು ಸಹ ಭಕ್ತಿಪ್ರತಿಪಾದಕ ಶಾಸ್ತ್ರಕೃತಿಯೇ ಹೊರತು ಕಾವ್ಯಪ್ರಾಕಾರಕ್ಕೆ ಸೇರುವಂತಹುದಲ್ಲ. ಆದರೆ, ಶ್ರೀಕನಕದಾಸರು ಮೊದಲಿಗೆ ಶ್ರೇಷ್ಠ ಕವಿಗಳೇ ಆಗಿದ್ದವರು. ಅವರ ಮೋಹನತರಂಗಿಣಿ ಅವರ ಕಾವ್ಯಪ್ರತಿಭೆಗೆ ಹಿಡಿದ ಕನ್ನಡಿ. ಅಂತಹ ಕೇವಲ ಕಾವ್ಯಕೃತಿ ಹರಿದಾಸಸಾಹಿತ್ಯದಲ್ಲಿ ಮತ್ತೊಂದು ಕಾಣುವುದಿಲ್ಲ.

ಶ್ರೀವಾದಿರಾಜರ ಸ್ವಪ್ನಪದ, ಗುಂಡಕ್ರಿಯೆ, ವೈಕುಂಠವರ್ಣನೆ, ಲಕ್ಷ್ಮೀಶೋಭಾನೆ ಮೊದಲಾದವುಗಳಲ್ಲಿ ಕಾವ್ಯಾಂಶ ಕಂಡುಬಂದರೂ ಮೂಲತಃ ಅವು ಶಾಸ್ತ್ರಕೃತಿಗಳೇ ಹೊರತು ಕಾವ್ಯಕೃತಿಗಳಲ್ಲ.

ಶ್ರೀಕನಕದಾಸರು ಶ್ರೀಪುರಂದರದಾಸರಂತೆ ವಾಗ್ಗೇಯಕಾರರೆಂದು ಹೆಸರಾದವರಲ್ಲ. ಅವರ ಕೃತಿಗಳನ್ನು ಶ್ರೇಷ್ಠ ಸಂಗೀತಗಾರರು ರಾಗತಾಳಗಳಿಗನುಗುಣವಾಗಿ ಹಾಡಲು ಸಾಧ್ಯವಿದೆಯಾದರೂ ಶ್ರೀಕನಕದಾಸರವು ಮೂಲತಃ ಸಂಗೀತಕ್ಕಾಗಿ ರಚಿತವಾದ ಕೃತಿಗಳಾಗಿರಲಿಲ್ಲ. ಶ್ರೀಪುರಂದರದಾಸರಂತೆ ಮಾಯಾಮಾಳವಗೌಡ ಮೊದಲಾದ ರಾಗಗಳ ಆವಿಷ್ಕಾರ ಶ್ರೀಕನಕದಾಸರಿಂದ ನಡೆದಿಲ್ಲ. ಇತರ ದಾಸರ ಕೃತಿಗಳು ನೇರ ಕಾವ್ಯ ಹೇಗಲ್ಲವೋ ಹಾಗೆ ಶ್ರೀಕನಕದಾಸರ ಕೃತಿಗಳು ನೇರ ಸಂಗೀತ ಕೃತಿಗಳಲ್ಲ. ಆದರೆ, ಹರಿದಾಸಸಾಹಿತ್ಯಕ್ಕೆ ಸಂದ ಕೊಡುಗೆಗಳಾಗಿ ರಚಿತವಾದ ಶ್ರೀಕನಕದಾಸರ ಕೃತಿಗಳು ಗುಣಮಟ್ಟದಲ್ಲಿ ಶ್ರೀಪುರಂದರದಾಸರ ಕೃತಿಗಳಿಗೆ ಸರಿಸಾಟಿಯಾಗಿವೆ. ಶ್ರೀಪುರಂದರದಾಸರಷ್ಟು ಅಪಾರಸಂಖ್ಯೆಯ ಕೃತಿರಚನೆ ಅವರದಾಗಿರಲಿಲ್ಲ. ಅವುಗಳ ವಿಷಯವ್ಯಾಪ್ತಿಯೂ ಅವಕ್ಕಿಲ್ಲ. ಆದರೆ, ರಚಿತವಾದ ಸಕಲ ಕೃತಿಗಳೂ ಸಹ ಯೋಗ್ಯತೆಯಲ್ಲಿ ಉನ್ನತಮಟ್ಟದವಾಗಿದ್ದು ಭಾಷೆ, ಭಾವ ಹಾಗೂ ತತ್ತ್ವ - ಮೂರರ ತ್ರಿವೇಣಿಸಂಗಮವಾಗಿದ್ದು ದಾಸಸಾಹಿತ್ಯಕ್ಕೆ ಅಮರವೆನ್ನಿಸುವಂತಹ ಅಪೂರ್ವ ಕೊಡುಗೆಗಳಾಗಿ ಸಂದಿವೆ.

## ಶ್ರೀಕನಕದಾಸರ ಮುಖ್ಯ ಕಾರ್ಯಕ್ಷೇತ್ರಗಳು ಹಾಗೂ ಸಂಚಾರ

ಬಂಕಾಪುರದ ಬಳಿಯ ಬಾಡ ಶ್ರೀಕನಕದಾಸರ ಮೂಲಸ್ಥಳ. ಅವರ ತಂದೆ-ತಾಯಿಗಳಾದ ಬೀರಪ್ಪ-ಬಚ್ಚಮ್ಮನವರು ಬಹುಕಾಲ ನೆಲೆಸಿದ್ದ ಸ್ಥಳ. ಅಲ್ಲಿಯ ಶ್ರೀಕೇಶವ ಹಾಗೂ ರಂಗನಾಥ ಶ್ರೀಕನಕದಾಸರ ಆರಾಧ್ಯ ದೇವತೆಗಳು. ಮುಂದೆ ಹಾವೇರಿ

ಬಳಿಯ ಕಾಗಿನೆಲೆಗೆ ಅವರ ಕಾರ್ಯಕ್ಷೇತ್ರ ಬದಲಾಯಿತು. ಬಾಡದ ಆದಿಕೇಶವನನ್ನು ಸಹ ಅವರು ಸ್ವಪ್ನದಲ್ಲಿ ಲಭಿಸಿದ ದೇವರ ಪ್ರೇರಣೆಯಿಂದ ಕಾಗಿನೆಲೆಯಲ್ಲಿ ಪ್ರತಿಷ್ಠಾಪಿಸಿದರು. ಕಾಗಿನೆಲೆಯಲ್ಲಿ ಆ ಮುನ್ನ ಇದ್ದದ್ದು ಪ್ರಧಾನವಾಗಿ ಶ್ರೀಲಕ್ಷ್ಮೀನರಸಿಂಹ ದೇವಸ್ಥಾನ. ಆದಿಕೇಶವನ ಆಗಮನದಿಂದಾಗಿ ನರಸಿಂಹಾದಿಕೇಶವಕ್ಷೇತ್ರ ಎಂದು ಆ ಬಳಿಕ ಪ್ರಸಿದ್ಧವಾಯಿತು. ಅದರ ಸುತ್ತಲಿನ ಕುಮ್ಮೂರು, ಇಂಗಳಗುಂದಿ ಶ್ರೀಕನಕದಾಸರಿಗೆ ಅತ್ಯಂತ ಪ್ರಿಯವಾದ ಸ್ಥಳಗಳು. ಕಾಗಿನೆಲೆಯಂತೂ ಅವರ ತುಂಬಾ ಮುಖ್ಯವಾದ ಕಾರ್ಯಕ್ಷೇತ್ರವೇ ಆಯಿತು. ಪ್ರಧಾನವಾಗಿ ಕಾಗಿನೆಲೆಯಾದಿಕೇಶವ ಅಂಕಿತವಾಗಿಯೇ ಅವರ ಬಹುಪಾಲು ಕೃತಿಗಳು ರಚಿತವಾಗಿವೆ. ಕೊನೆಗೆ ಅವರು ನಿರ್ಯಾಣ ಹೊಂದಿದ್ದು ಸಹ ಕಾಗಿನೆಲೆಯಲ್ಲಿಯೇ ಎಂದು ಪ್ರಸಿದ್ಧಿ. ಇಂದಿಗೂ ಸಹ ಶ್ರೀಕನಕದಾಸರ ಸಮಾಧಿ ಎಂಬುದಾಗಿ ಅಲ್ಲಿಯೇ ತೋರಿಸುವರು. ಕನಕದಾಸರಿಗಿಂತ ಮುಂಚಿತವಾಗಿ ಒಂದು ರಾಜಕೀಯ ಕ್ಷೇತ್ರವೆಂಬುದಾಗಿ ಶಾಸನಗಳಲ್ಲಿ ವರ್ಣಿತವಾದ ಕಾಗಿನೆಲೆ ಶ್ರೀಕನಕದಾಸರ ಆರಾಧ್ಯದೇವತೆಯಾದ ಶ್ರೀಕೇಶವನಿಂದಾಗಿ ಒಂದು ಪುಣ್ಯಕ್ಷೇತ್ರವಾಗಿ ಪ್ರಸಿದ್ಧಿ ಪಡೆಯಿತು.

ಬಂಕಾಪುರ ಶ್ರೀಕನಕದಾಸರ ಅನೇಕ ಕೃತಿಗಳಲ್ಲಿ ಪ್ರಸ್ತಾಪಿತವಾಗಿರುವ ಸ್ಥಳ. ಅದರಲ್ಲಿ ಅವರು ಅಂಕಿತವಾಗಿ ಹಾಡಿರುವ ಬಂಕಾಪುರದ ಕೇಶವನ ವಿಗ್ರಹವನ್ನು ಇಂದೂ ಕಾಣಬಹುದು; ಅವರು ಸ್ತುತಿಸಿರುವ ನರಸಿಂಹದೇವರ ದೇವಸ್ಥಾನವು ಬಂಕಾಪುರದಲ್ಲಿದೆ.

ಕದರಮಂಡಲಗಿ ಶ್ರೀಕನಕದಾಸರಿಗೆ ಪ್ರಿಯವಾದ ಮುಖ್ಯಕ್ಷೇತ್ರಗಳಲ್ಲಿ ಮತ್ತೊಂದು. ಅಲ್ಲಿಯ ಕಾಂತೇಶ ಎಂಬ ಹೆಸರಿನ ಆಂಜನೇಯನನ್ನು ಅವರು ಬಹಳವಾಗಿ ಕೊಂಡಾಡಿರುವರು. ಬಹುಕಾಲ ಅವರು ಅಲ್ಲಿ ನೆಲೆಸಿದ್ದರು ಎಂದು ಸಹ ಹೇಳುವುದುಂಟು. ಅವರ ಮೋಹನತರಂಗಿಣಿ ಕೃತಿಯ ರಚನೆ ಆದದ್ದು ಈ ಕದರಮಂಡಲಗಿ ಕ್ಷೇತ್ರದಲ್ಲಿಯೇ ಎಂದು ಪ್ರತೀತಿ. ಇಂದಿಗೂ ಆ ಕ್ಷೇತ್ರದಲ್ಲಿ ಶ್ರೀಕನದಾಸರ ಪ್ರಸಿದ್ಧಿ ಬಹಳವಾಗಿಯೇ ಇದೆ.

ಶ್ರೀಕನಕದಾಸರ ಅನಂತರದ ಮುಖ್ಯ ಕಾರ್ಯಕ್ಷೇತ್ರ ಹಂಪಿ. ವಿಜಯನಗರ ಸಾಮ್ರಾಜ್ಯದ ಕೇಂದ್ರಸ್ಥಾನವಾಗಿ ಹಂಪಿ ಲೋಕವಿಖ್ಯಾತವಾದ ಕ್ಷೇತ್ರ. ಶ್ರೀಕನಕದಾಸರು ತಮ್ಮ ಡಣಾಯಕಪದವಿಯಲ್ಲಿದ್ದಾಗ ಅನೇಕ ಬಾರಿ ಅದನ್ನು ಸಂದರ್ಶಿಸಿದ್ದರು. ಅವರ ದಾಸದೀಕ್ಷೆಯ ಕೇಂದ್ರವು ಸಹ ಹಂಪಿಯೇ ಆಯಿತು. ಅಲ್ಲಿಯ ಶ್ರೀವ್ಯಾಸರಾಜರು ಅವರ ದೀಕ್ಷಾ ಗುರುಗಳು. ಶ್ರೀವ್ಯಾಸರಾಜರ ಪರಮಪ್ರಿಯ ಶಿಷ್ಯರಲ್ಲೊಬ್ಬರಾಗಿ ಶ್ರೀಕನಕದಾಸರು ಅನೇಕ ವರ್ಷಗಳ ಕಾಲ ಅಲ್ಲಿಯೇ ನೆಲೆಸಿದ್ದರು. ಶ್ರೀವ್ಯಾಸರಾಜರೊಂದಿಗೆ ನಿಕಟ ಸಂಪರ್ಕಕ್ಕೆ ಕಾರಣವಾದ ವ್ಯಾಸಸಮುದ್ರ, ಅಲ್ಲಿಯ

ಕೋಣನತೂಬಿನಿಂದಾಗಿ ತುಂಬಾ ಪ್ರಸಿದ್ಧವಾಗಿದೆ. ಶ್ರೀವ್ಯಾಸರಾಜರ ಕ್ಷೇತ್ರಗಳೆನ್ನಿಸಿದ ಬನ್ನೂರು, ಸೋಸಲೆ, ಟಿ. ನರಸೀಪುರ ಮೊದಲಾದವುಗಳಲ್ಲೂ ಶ್ರೀಕನಕದಾಸರ ಸಂಚಾರ ನಡೆದಿತ್ತು. ಶ್ರೀರಂಗಪಟ್ಟಣ, ನಂಜನಗೂಡು ಮೊದಲಾದವುಗಳನ್ನು ಅವರು ಅನೇಕ ಬಾರಿ ಸಂದರ್ಶಿಸಿದ್ದರು. ಲೋಕವಿಖ್ಯಾತವಾದ ತಿರುಪತಿ ಅವರ ಮತ್ತೊಂದು ಪ್ರಧಾನ ಕಾರ್ಯಕ್ಷೇತ್ರ. ಆ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಶ್ರೀಕನಕದಾಸರ ಅನೇಕ ಮಹಿಮೆಗಳು ಪ್ರಸಿದ್ಧಿಯಲ್ಲಿವೆ. ಪಂಢರಪುರ, ಜೈಪುರ, ಮಧುರೆ, ಗಯಾ, ಪ್ರಯಾಗ, ಕಾಶಿ ಮೊದಲಾದ ಸ್ಥಳಗಳನ್ನೂ ಅವರು ಸಂದರ್ಶಿಸಿದ್ದರು. ಅವರ ಮೋಹನತರಂಗಿಣಿ ಕೃತಿಯಲ್ಲಿ ಕಾಶಿವಿಶ್ವನಾಥನ ಉಲ್ಲೇಖವಿದೆ. ಅವರು ಜೈಪುರವನ್ನು ಸಂದರ್ಶಿಸಿದ್ದಕ್ಕೆ ದಾಖಲೆಯಾಗಿ ಕನಕ ವೃಂದಾವನ ಎಂಬ ಸ್ಥಳ ಅಲ್ಲಿದೆ. ಬೇಲೂರು ಶ್ರೀಕನಕದಾಸರ ಮತ್ತೊಂದು ಪ್ರಿಯವಾದ ಪುಣ್ಯಕ್ಷೇತ್ರ. ಕೇಶವನಾಮ, ಹರಿಭಕ್ತಿಸಾರ ಮೊದಲಾದ ಅನೇಕ ಕೃತಿಗಳು ಅವರು ಆ ಕ್ಷೇತ್ರದಲ್ಲಿ ನೆಲೆಸಿದ್ದಾಗ ರಚಿತವಾದ ಕೃತಿಗಳು. ಅಲ್ಲಿಯ ಚನ್ನಕೇಶವ ಅವರ ಕಾಗಿನೆಲೆಯಾದಿಕೇಶವನಂತೆ ಅವರಿಗೆ ಅತ್ಯಂತ ಪ್ರಿಯ ದೈವ.

ಶ್ರೀಕನಕದಾಸರ ಜೀವನದಲ್ಲಿ ದೈವಸಾಕ್ಷಾತ್ಕಾರಕ್ಕೆ ಅವಕಾಶ ನೀಡಿದ ಶ್ರೇಷ್ಠ ಪುಣ್ಯಕ್ಷೇತ್ರ ಉಡುಪಿ[೧]. ಶ್ರೀಮನ್ಮಧ್ವಾಚಾರ್ಯರಿಂದ ಪ್ರತಿಷ್ಠಿತವಾದ ಶ್ರೀಕೃಷ್ಣನಿಂದಾಗಿ ಉಡುಪಿಯ ಪ್ರಸಿದ್ಧಿ ಅಪಾರವಾದುದು. ಅಲ್ಲಿಯ ಅನಂತಾಸನ, ಚಂದ್ರಮೌಳೀಶ್ವರ

---

೧. ಉಡುಪಿಕ್ಷೇತ್ರವನ್ನು ಶ್ರೀಕನದಾಸರು ಸಂದರ್ಶಿಸಿದರೆನ್ನಲು ಅನೇಕ ಪುರಾವೆಗಳಿವೆ. ಬಹಳ ಮುಖ್ಯವಾಗಿ ಲೋಕಪ್ರಸಿದ್ಧವಾದ ಕನಕನಕಿಂಡಿ ಅತಿ ಮುಖ್ಯವಾದಂತಹ ಪುರಾವೆ. ಕನಕನಕಿಂಡಿಯ ಬಳಿ ಇರುವ ಕನಕ ಕುಟೀರ ಎಂಬ ಸ್ಥಳ ಅವರು ಅನೇಕ ದಿವಸಗಳ ಕಾಲ ನೆಲೆಸಿದ್ದ ಸ್ಥಳ ಎಂದು ಪ್ರತೀತಿ. ಉಡುಪಿಯ ಶ್ರೀಕೃಷ್ಣನಿಗೆ ಪ್ರತಿನಿತ್ಯ ಸಲ್ಲುತ್ತಿರುವ ಅಂಬಲಿ ಹಾಗೂ ರೊಟ್ಟಿಗಳ ನೈವೇದ್ಯ ಕನಕದಾಸರ ಅಲ್ಲಿಯ ವಾಸಕ್ಕೆ ಸಂಕೇತ ಎನ್ನುವಂತಿದೆ. ಕನಕಗೋಪುರ, ಕನಕಮಂಟಪ ಮೊದಲಾದ ಇನ್ನೂ ಕೆಲವು ಸ್ಥಳಗಳು ಅವರ ಸ್ಮಾರಕವಾಗಿ ಉಡುಪಿಯಲ್ಲಿ ಕಂಡುಬರುವವು. ಶ್ರೀಕನಕದಾಸರ ಉಡುಪಿಯ ವಾಸಕ್ಕೆ ದಾಖಲೆಯಾಗಿ ಜನಪದ ಹಾಡುಗಳೂ ದೊರೆಯುವವು:

ಉಡುಪಿಯ ಹರಿಗೆ ತಾ ಮಿಗಿಲಾದ
ಕೀರುತಿ ತುಂಬ್ಯಾನ ಕೀರುತಿ ಬರದಾನ ॥ – ಜನಪದ ತ್ರಿಪದಿ (ಪರಿಶಿಷ್ಟ-೧, ಪು.೩೩೯

ಹರಿಗೆ ಹರಿಯ ತಿಳಿದವನೋ
ಉಡುಪಿಯ ಹರಿಯ ಗೆದ್ದವನೋ ।
ತಿರುಪತಿ ತಿಮ್ಮಪ್ಪನ ಮಾತಾಡಿಸಿದನೋ
ಉಡುಪಿಯ ಕೃಷ್ಣನ ದರ್ಶನ ಪಡೆದವನೋ ॥ – ಏಕತಾರಿ ಹಾಡು (ಪರಿಶಿಷ್ಟ-೧, ಪು.೩೪೧)

ಉಡುಪಿಯ ಹರಿಯ ತಿರುಗಿಸ್ಯಾನೋ ಹಿಂದಕ
ತಿರುಪತಿ ತಿಮ್ಮಪ್ಪ ಮಾತಾಡ್ಯಾನೋ ಮುಂದಕ ॥ – ಗೀಗೀಪದಗಳು (ಪರಿಶಿಷ್ಟ-೧, ಪು.೩೪೨)

ಕನಕದಾಸ ಚರಿತ್ರೆ ಎಂಬ ೧೯೧೩ರಲ್ಲಿ ಪ್ರಕಟವಾದ ಕೃತಿಯಲ್ಲೂ ಶ್ರೀಕನಕದಾಸರ ಉಡುಪಿಯ ಸಂದರ್ಶನದ ವಿವರಗಳು ದಾಖಲಾಗಿವೆ (ಪು. ೫೮-೬೬).

ಮೊದಲಾದ ತೀರ್ಥದೇವತೆಗಳೊಂದಿಗೆ ಸುತ್ತಮುತ್ತಲಿನ ಅನೇಕ ಕ್ಷೇತ್ರಗಳನ್ನು ಶ್ರೀಕನದಾಸರು ಸಂದರ್ಶಿಸಿದ್ದರು.

ಕನಕಗಿರಿ, ಮೇಲುಕೋಟೆ, ಚನ್ನಪಟ್ಟಣದ ಬಳಿಯ ಮಳೂರು ಮೊದಲಾದವುಗಳನ್ನು ಸಹ ಅವರು ಸಂದರ್ಶಿಸಿದ್ದರು. ಕಂಕನವಾಡಿ, ಕಂಕನಾಡಿ, ಕನಕಪುರ, ಕನಕನೂರು, ಕನಕನಮರಡಿ ಮೊದಲಾದ ಅನೇಕ ಕ್ಷೇತ್ರಗಳು ಅವರ ಹೆಸರಿನಿಂದಲೇ ಪ್ರಸಿದ್ಧವಾಗಿರುವುದು ಗಮನಾರ್ಹವಾದ ಸಂಗತಿ.

ಮಾದೇವಪುರದ ಬಳಿಯ ಕಾವೇರಿ ನದಿಯನ್ನು ಅವರು ಬಾಳೆಎಲೆಯೊಂದರ ಮೇಲೆ ಕುಳಿತು ದಾಟಿದ್ದರು ಎಂದು ಪ್ರತೀತಿ ಉಂಟು. ಹಿರೇಕೆರೂರು ತಾಲ್ಲೂಕಿನ ತುಂಗಭದ್ರಾ ತೀರದ ಹಳ್ಳೂರು ಇವರಿಂದ ಸಂದರ್ಶಿತವಾದ ಮತ್ತೊಂದು ಕ್ಷೇತ್ರ. ಅಲ್ಲಿ ಇವರು ವಿಶ್ರಾಂತಿ ಪಡೆಯುತ್ತಿದ್ದ ಸ್ಥಳ ಕನಕರಾಯನ ಕಟ್ಟೆ ಎಂದು ಪ್ರಸಿದ್ಧವಾಗಿದೆ. ಬಿಳಿಗಿರಿ ರಂಗನಬೆಟ್ಟದ ಬಳಿಯಲ್ಲಿ ಶ್ರೀಕನಕದಾಸರ ಗುಹೆ ಎಂಬ ಸ್ಥಳವೊಂದಿದ್ದು ಶ್ರೀಕನಕದಾಸರು ಆ ಸ್ಥಳದಲ್ಲಿ ಧ್ಯಾನಸ್ಥರಾಗಿ ಕುಳಿತುಕೊಳ್ಳುತ್ತಿದ್ದರು ಎನ್ನುವುದುಂಟು. ಶ್ರೀರಂಗಪಟ್ಟಣದ ಬಳಿಯ ಮಹದೇವಪುರದಲ್ಲಿ ಶ್ರೀಲಕ್ಷ್ಮೀನರಸಿಂಹದೇವರ ಉದ್ಭವ ವಿಗ್ರಹವೊಂದಿದ್ದು, ಅಲ್ಲಿ ನದಿಯ ಬಳಿ ಇರುವ ಶ್ರೀ ಕನಕದಾಸರ ಬಂಡೆ ಅವರ ಧ್ಯಾನಸ್ಥಳ ಎಂದು ಪ್ರಸಿದ್ಧವಾಗಿದೆ. ಅಲ್ಲಿ ಈಗಲೂ ವರ್ಷಕ್ಕೊಮ್ಮೆ 'ಶ್ರೀಕನದಾಸರ ಹಬ್ಬ' ಎಂಬುದಾಗಿ ಉತ್ಸವವನ್ನು ಪ್ರತಿವರ್ಷ ಆಚರಿಸುವರು

## ಶ್ರೀಕನಕದಾಸರ ಸಾಮಾಜಿಕ ಕಳಕಳಿ

ಶ್ರೀಕನಕದಾಸರ ಅಪೂರ್ವ ಜೀವನದಲ್ಲಿ ಅವರು ಡಣಾಯಕ ಪದವಿಯಲ್ಲಿದ್ದಾಗಲೇ ಅವರ ಜನಪರ ಕಳಕಳಿ ಪ್ರಕಟಗೊಂಡಿದೆ. ಆ ಮುನ್ನವೇ ಒಮ್ಮೆ ತಮಗೆ ದೊರೆತ ಅಪಾರ ಕನಕರಾಶಿಯನ್ನು ಜನಹಿತಕಾರ್ಯಗಳಿಗೆ ಉಪಯೋಗಿಸುವ ಮೂಲಕ ತಮ್ಮ ಸಾಮಾಜಿಕ ಕಳಕಳಿಯನ್ನು ಮರೆದಿದ್ದರು. ಆ ಬಳಿಕವೂ ದೇವಸ್ಥಾನ ನಿರ್ಮಾಣ, ಕೆರೆ-ಕುಂಟೆಗಳ ನಿರ್ಮಾಣದ ಮೂಲಕ ಲೋಕಹಿತ ದೃಷ್ಟಿಯನ್ನು ಮೆರೆದರು. ಅವರಿಗೆ ಸಹಜವಾಗಿಯೇ ಬಂದಿದ್ದ ಆ ಗುಣ ಸಂಪತ್ತು ಅಧಿಕಾರಗಳ ಮೂಲಕ ಮತ್ತಷ್ಟು ವಿಶಾಲವಾಗಿ ಪಸರಿಸಿತು. ಅಂತಹ ಕಾಳಜಿಯನ್ನು ಅವರ ಕೃತಿಗಳಲ್ಲೂ ಸಹ ವಿಶೇಷವಾಗಿ ಕಾಣಬಹುದು.

ಶ್ರೀಕನಕದಾಸರು ಮೂಲತಃ ಭಕ್ತಕವಿ, ಸಂತಕವಿ. ಭಗವಂತನನ್ನು ಚಿಂತಿಸುವುದರಲ್ಲಿಯೇ ಭಕ್ತರ ಜೀವನದ ಬಹುಪಾಲು ಕಳೆಯುವುದು ಸಹಜ. ಭಕ್ತಿಯ ಪರಿಪಾಕ ಪಡೆದ ಹಿರಿಯ ಅನುಭಾವಿಗಳಂತೂ ಭಗವಂತನೇ ಪ್ರಪಂಚ. ಆದರೆ, ಹರಿದಾಸರು ಉನ್ನತ ಸ್ತರದ ಅನುಭಾವಿಗಳಾದರೂ, ಸಮಾಜದ ಬಗ್ಗೆ ಅಪಾರ

ಕಳಕಳಿಯನ್ನು ಹೊಂದಿದ್ದ ಉದಾರಿಗಳು. ಭಗವದ್ಭಕ್ತಿ ಮೊದಲಾದವುಗಳ ಬಗ್ಗೆ ಸಮಾಜವನ್ನು ಎಚ್ಚರಿಸುತ್ತಲೆ ದೇವರ ಹೆಸರಿನಲ್ಲಿ, ಧರ್ಮದ ಹೆಸರಿನಲ್ಲಿ ಸಮಾಜದಲ್ಲಿ ಮನೆಮಾಡಿರುವ ಭ್ರಷ್ಟಾಚಾರ, ಅಸೂಯೆ, ದ್ವೇಷ ಮೊದಲಾದವುಗಳನ್ನು ಉಗ್ರವಾಗಿ ಟೀಕಿಸುತ್ತಲೆ ಅವರನ್ನು ಸನ್ಮಾರ್ಗದಲ್ಲಿ ತರಲು ಪ್ರಯತ್ನಿಸಿದರು. ವಿಶೇಷವಾಗಿ ಅಧಿಕಾರಿವರ್ಗವನ್ನು, ಎಂದರೆ, ಆಳುವ ವರ್ಗವನ್ನು ಅದರಂತೆ, ಪಂಡಿತವರ್ಗವನ್ನು ಅವರು ಭ್ರಷ್ಟಾಚಾರದ ಕಾರಣದಿಂದ ನಿರ್ದಾಕ್ಷಿಣ್ಯವಾಗಿ, ನಿಷ್ಠುರವಾಗಿ ಟೀಕಿಸಲು ಹಿಂಜರಿಯಲಿಲ್ಲ. ಆ ಸಮಯದ ಸಂಸ್ಕೃತ ಸಾಹಿತ್ಯದಲ್ಲಿ ಈ ಬಗೆಯ ವಿಮರ್ಶೆ ಅಷ್ಟಾಗಿ ನಡೆದಂತೆ ಕಾಣುವುದಿಲ್ಲ. ಜನಸಾಮಾನ್ಯರಿಗೆ ನಿಲುಕದ ಭಾಷೆಯಾದ ಸಂಸ್ಕೃತ ಸಹಜವಾಗಿಯೇ ಸಾಮಾಜಿಕ ಎಚ್ಚರವನ್ನು ಸಮಾಜದಲ್ಲಿ ಉಂಟುಮಾಡಲು ಅಷ್ಟಾಗಿ ಪ್ರಯತ್ನಿಸಲಿಲ್ಲ. ಇತ್ತೀಚಿನ ದಿನಗಳಲ್ಲಂತೂ ಇದು ಹೆಚ್ಚು ಸತ್ಯ. ಕಾಳಿದಾಸಾದಿ ಕವಿಗಳ ಹೆಸರಾಂತ ಕೃತಿಗಳು ಸಹ ಕಾವ್ಯಪ್ರೇಮಿಗಳ ಹೊರತು ಸಾಮಾಜಿಕವಾದ ಸಮರ್ಥ ಪ್ರಭಾವವನ್ನು ಉಂಟುಮಾಡುವಲ್ಲಿ ಸ್ಥಾನ ಗಳಿಸಿಲ್ಲ. ಹಾಗೆ ನೋಡಿದರೆ ಮಹಾಭಾರತ, ರಾಮಾಯಣಗಳಂತಹ ಮೂಲಕೃತಿಗಳನ್ನು ಹೊರತುಪಡಿಸಿ ಅನಂತರ ಕಾಲದ ಸಂಸ್ಕೃತ ಸಾಹಿತ್ಯದ ಬಹುಭಾಗ ಸಮಾಜಸುಧಾರಣೆಯತ್ತ ಅಷ್ಟಾಗಿ ಗಮನ ಹರಿಸಿಲ್ಲ ಎಂದೇ ಹೇಳಬಹುದು. ಪ್ರಾದೇಶಿಕ ಭಾಷೆಯಲ್ಲಿ ರಚಿತವಾದ ಸಾಹಿತ್ಯದಲ್ಲೂ ಸಂತ ಸಾಹಿತ್ಯವಷ್ಟೆ ಈ ಬಗ್ಗೆ ಗಮನಹರಿಸಿತ್ತು. ಕೇವಲ ಸಾಮಾಜಿಕ ದೃಷ್ಟಿಯಿಂದ ಸುಧಾರಣೆಯ ಬಗ್ಗೆ ಜಾಗ್ರತಿ ಉಂಟುಮಾಡಿದ ಸರ್ವಜ್ಞನ ವಚನ, ಸೋಮೇಶ್ವರ ಶತಕ ಮೊದಲಾದ ಕೃತಿಗಳು ಸಹ ನಿತ್ಯ ಬಳಕೆಯ ಕೃತಿಗಳಾಗಿ ಜನಮಾನಸವನ್ನು ಮುಟ್ಟಲಿಲ್ಲ. ಆ ಬಗ್ಗೆ ಯಶಸ್ಸನ್ನು ಗಳಿಸಿದ್ದು ವಚನ ಸಾಹಿತ್ಯ ಹಾಗೂ ದಾಸಸಾಹಿತ್ಯ ಈ ಎರಡು ಮಾತ್ರ. ವಚನ ಸಾಹಿತ್ಯ ವ್ಯವಸ್ಥೆಯ ವಿರುದ್ಧವೇ ಸಮರ ಸಾರಿದ ಕಾರ್ಯವನ್ನು ಮಾಡಿದರೆ, ವ್ಯವಸ್ಥೆಯೊಳಗಿದ್ದುಕೊಂಡೇ ಅದನ್ನು ಸರಿಪಡಿಸುವ ಕಾರ್ಯದಲ್ಲಿ ತೊಡಗಿದ್ದು ದಾಸಸಾಹಿತ್ಯ. ಇಂದಿಗೂ ಸಹ ಭಗವದ್ಭಕ್ತಿಯ ಬಗ್ಗೆ ಸಮಾಜದಲ್ಲಿ ಎಚ್ಚರ ನೀಡಿದ ಸಾಹಿತ್ಯ ಎಂಬಷ್ಟೇ ಪ್ರಧಾನವಾಗಿ ಜನಮಾನಸದಲ್ಲಿ ಸತ್ಯಧರ್ಮಗಳ ಮಹತ್ವವನ್ನು ತಿಳಿಸುತ್ತಾ ಮಾನವೀಯ ಮೌಲ್ಯಗಳನ್ನು ಸಾರಿದ ಮೌಲಿಕ ಸಾಹಿತ್ಯ ಎಂಬ ಹಿರಿಮೆಯನ್ನು ದಾಸಸಾಹಿತ್ಯ ಉಳಿಸಿಕೊಂಡಿದೆ. ತೀರಾ ಕೆಳಹಂತದ ಪಾಮರವರ್ಗದಲ್ಲೂ ಸಹ ದಾಸಸಾಹಿತ್ಯ ಜನರಪಾಲಿಗೆ ಅಪೂರ್ವ ಮಾರ್ಗದರ್ಶಿಕೆಯಾಗಿ ಇಂದಿಗೂ ಮನ್ನಣೆಗೆ ಪಾತ್ರವಾಗಿದೆ.

ಶ್ರೀಕನಕದಾಸರು, ಶ್ರೀಪುಂದರದಾಸರು ಮೊದಲಾದವರಂತೆ ಸಾಮಾಜಿಕ ನೀತಿಯ ಅನೇಕ ಕೃತಿಗಳನ್ನು ರಚಿಸಿದ ಹಿರಿಮೆಯನ್ನು ಹೊಂದಿರುವವರು. ಅವರ ಕೃತಿಗಳಲ್ಲಿ ಶೇಕಡಾ ೩೦ರಷ್ಟು ಸಂಖ್ಯೆಯ ಕೃತಿಗಳು ಸಾಮಾಜಿಕ ಕಳಕಳಿಯನ್ನೇ ನೇರವಾಗಿ ಉದ್ದೇಶಿಸಿವೆ ಎಂಬುದು ಇದನ್ನು ಸ್ಪಷ್ಟಪಡಿಸುವುದು. ಸೂಕ್ತಿಸ್ವರೂಪದ ಅನೇಕ

ಕೃತಿಗಳು ಅವರ ರಚನೆಗಳಾಗಿದ್ದರೆ, ಅವರ ಇತರ ಅನೇಕ ಕೃತಿಗಳಲ್ಲೂ ಸೂಕ್ತಿ ರೂಪದ ವಚನಗಳು ಹೇರಳವಾಗಿ ದೊರೆಯುವವು[೧]. ಇದರಿಂದಾಗಿ ಇಂತಹವರು ಕೇವಲ ಯಶಸ್ವಿ ಜೀವನವನ್ನು ಬಾಳಿದವರು ಮಾತ್ರವಾಗಿಯಲ್ಲದೆ, ಯಶಸ್ವೀಜೀವನದ ಮಾರ್ಗದರ್ಶಕರಾಗಿಯು ಸಹ ಇತಿಹಾಸದ ಪುಟಗಳಲ್ಲಿ ದಾಖಲಾಗಿರುವರು. ಅವರ 'ಎಲ್ಲಿಂದ ಬಂದೆ ಮುಂದೆತ್ತ ಪಯಣ ಇಲ್ಲಿ ನಿನಗೆಷ್ಟು ದಿನವಾಲಸ್ಯ ಮರುಳೆ' ಎಂಬ ಕೃತಿ ಆತ್ಮವಿಮರ್ಶೆಗೆ ನೀಡುವ ಎಚ್ಚರ ಅದ್ಭುತಾದದ್ದು. ಅದರಂತೆ 'ತಲ್ಲಣಿಸದಿರು ಕಂಡ್ಯ ತಾಳು ಮನವೆ' ಎಂಬ ಕೃತಿ ಎಂತಹ ಹತಾಶ ಜೀವನಕ್ಕೂ ಸಹ ಬದುಕಿನ ಬಗ್ಗೆ ಭರವಸೆಯನ್ನು ಹುಟ್ಟಿಸುವ ಅಪೂರ್ವ ಕೃತಿ. 'ತೊರೆದು ಜೀವಿಸಬಹುದೆ ಹರಿನಿನ್ನ ಚರಣಗಳ' ಎಂಬ ಜನಮಾಸದಲ್ಲಿ ಭಗವತ್ಪಜ್ಞೆಯನ್ನು ಜಾಗೃತಗೊಳಿಸುವ ಕೃತಿ ಅನನ್ಯವೆನ್ನಿಸುವುದು. 'ಈಶ ನಿನ್ನ ಚರಣ ಭಜನೆ' ಎಂಬ ಅವರ ಕೇಶವನಾಮದ ಕೃತಿ ಭಗವಂತನ ಸ್ತೋತ್ರಕ್ಕೆ ಮಹಾದ್ವಾರದಂತಿದೆ. ಒಟ್ಟಾಗಿ ಅವರ ಹೆಸರಿನಲ್ಲಿ ಪ್ರಖ್ಯಾತವಾಗಿರುವ ಕನಕನಕಿಂಡಿ ಶ್ರೀಕೃಷ್ಣನ ದರ್ಶನಕ್ಕೆ ಸಾಧನವೆನ್ನಿಸಿರುವಂತೆ, ಅವರ ಕೃತಿಗಳೆಲ್ಲ ಜೀವನ ದರ್ಶನಕ್ಕೆ ಅವಶ್ಯವೆನ್ನಿಸಿರುವ ಕನಕ ತೋರಿದ ಕಿಂಡಿಗಳೇ ಆಗಿವೆ ಎನ್ನಬಹುದು[೨].

## ಶ್ರೀಕನಕದಾಸರ ಪವಾಡಗಳು

ಅನೇಕ ಸಂತರ ಬಗ್ಗೆ ದೊರೆಯುವಂತೆ ಶ್ರೀಕನಕದಾಸರ ಬಗ್ಗೆಯೂ ಸಹ ಅನೇಕ ಪವಾಡಗಳು ಕೇಳಿಬರುವುದುಂಟು. ಕವಿಗಳು ಮೊದಲಾದವರ ಬಗ್ಗೆ ಇಂತಹ ಪವಾಡಗಳು ಕೇಳಿಬರುವುದು ತುಂಬಾ ಕಡಿಮೆ. ಕೆಲವರ ಬಗ್ಗೆಯಂತೂ ಇಲ್ಲವೇ ಇಲ್ಲ ಎನ್ನಬಹುದು. ಸಂತರ ಬಗ್ಗೆ, ಮಠಾಧೀಶರ ಬಗ್ಗೆ ಸಾಮಾನ್ಯವೆನ್ನುವಷ್ಟು ಅಪಾರ ಸಂಖ್ಯೆಯಲ್ಲಿ ಕೇಳಿಬರುತ್ತಿರುತ್ತವೆ. ಅನೇಕ ಸಲ ಒಂದೇ ತೆರನಾದ ಪವಾಡಗಳು ಭಿನ್ನ-ಭಿನ್ನ ಪಂಗಡದ ಭಿನ್ನ-ಭಿನ್ನಕಾಲದ ಸಂತರ ಬಗ್ಗೆಯೂ ಕೇಳಿಬರುವುದು ಸಹ ಸಾಮಾನ್ಯವೇ ಆಗಿದೆ. ಕೇಳಿಬರುವ ಇಂತಹ ಪವಾಡಗಳನ್ನೆಲ್ಲ ನಿಜವೆಂದು

---

೧. ಅವುಗಳಲ್ಲಿ ಕೆಲವನ್ನು ಶ್ರೀಕನಕದಾಸರ ಸೂಕ್ತಿಗಳು ಎಂಬ ಶೀರ್ಷಿಕೆಯಲ್ಲಿ ಪರಿಶಿಷ್ಟ-೧ರಲ್ಲಿ ಕೊಡಲಾಗಿದೆ.

೨. ಶ್ರೀಕನಕದಾಸರ ಈ ಕೆಳಗಿನ ಮಾತು ಆಳುವ ಜನರೇ ಭ್ರಷ್ಟಾಚಾರಕ್ಕೆ ತೊಡಗಿದಾಗ ಉಂಟಾಗುವ ಸಾಮಾಜಿಕ ಅನರ್ಥಕ್ಕೆ ಕನ್ನಡಿ ಹಿಡಿಯುವಂತಿದೆ:

ಕಳುವಿನ ಒಡವೆಯ ಒಡೆಯಗೆ ಪಾಲೀವ
ಕಳು ಭಂಟ ಕನ್ನವ ಕೊರೆಯುತ್ತಿರೆ
ಕಳವು ಮಾಡಿದನೆಂದ ಹಿಡಿದೆಳೆತಂದರೆ
ತಳವಾರನೇನು ಮಾಡುವನೋ ಕೇಳಲೋ ಹರಿ ॥

ತಿಳಿಯಬೇಕಿಲ್ಲ. ಅದರಂತೆ ಅಂತಹ ಎಲ್ಲ ಪವಾಡಗಳನ್ನು ಸಹ ಸುಳ್ಳು ಎಂದು ಸಹ ತಿಳಿಯಬೇಕಿಲ್ಲ. ನಿಖರವಾದ ದಾಖಲೆಗಳು ಲಭಿಸಿದಾಗ ಅಂತಹ ಪವಾಡಗಳನ್ನು ಸಲ್ಲದ ಕಾರಣವನ್ನು ಮುಂದಿಟ್ಟು ಸುಳ್ಳು ಎಂದು ಹೇಳುವುದು ಸಹ ವಿಮರ್ಶೆ ಎನ್ನಿಸಲಾರದು.

ಕೇವಲ ಪವಾಡಗಳಿಂದಲೇ ವ್ಯಕ್ತಿಯ ಹಿರಿಮೆಯನ್ನು ಅಳೆಯುವುದು ಶಾಸ್ತ್ರೀಯ ಪದ್ಧತಿ ಅಲ್ಲ ಎಂದು ಬ್ರಹ್ಮಸೂತ್ರಗಳು ಸಾರಿವೆ. ವ್ಯಕ್ತಿ ಅಥವಾ ಮತದ ಹಿರಿಮೆಗೆ ಕೇವಲ ಪವಾಡಗಳು ಎಂದೂ ಸಹ ಮಾನದಂಡವಾಗಕೂಡದು ಎಂಬುದೇ ಶಾಸ್ತ್ರಗಳ ಸಂದೇಶ. ಲೋಕ ಹಿತದಲ್ಲಿ ಪರ್ಯವಸಾನವಾಗದ ಯಾವುದೇ ಪವಾಡವನ್ನು ಸಹ ನಿಜವಾದ ಸಾಧನೆಯೆಂದು ಕರೆಯಲಾಗದು. ಜನತೆಯ ಬದುಕಿಗೆ ಅಗತ್ಯವಾದ ಅನ್ನ ನೀರು, ಆರೋಗ್ಯ ಹಾಗೂ ಜ್ಞಾನ ಇವುಗಳ ಪ್ರಾಪ್ತಿಗೆ ನೆರವು ನೀಡುವಲ್ಲಿ ಉಪಯುಕ್ತವೆನ್ನಿಸುವ ಸಾಧನೆಯೇ ನಿಜವಾದ ಪವಾಡ. ಎಂದರೆ, ಮಳೆ, ಬೆಳೆಗಳ ಮೂಲಕ ಜನರಿಗೆ ಹಿತವನ್ನುಂಟುಮಾಡುವುದು. ರೋಗ-ರುಜಿನಗಳನ್ನು ಪರಿಹರಿಸುವುದು, ಅಜ್ಞಾನ-ಮೂಢನಂಬಿಕೆಗಳನ್ನು ತೊರೆಯುವಂತೆ ಮಾಡುವುದು ನಿಜವಾದ ಪವಾಡ ಎನ್ನಬೇಕು. ಇಂದಿಗೂ ಶ್ರೀರಾಘವೇಂದ್ರಸ್ವಾಮಿಗಳಂತಹವರು ಮಾಡುತ್ತಿರುವ ಪವಾಡಗಳು ಹೆಚ್ಚಾಗಿ ಜನರಿಗೆ ಹಿತವಾಗುವ ಇಂತಹ ಕಾರ್ಯಗಳ ಮೂಲಕ ಜೀವನದಲ್ಲಿ ಭರವಸೆಯನ್ನುಂಟುಮಾಡುವಂತಿರುವವು ಎಂಬುದು ಗಮನಿಸಬೇಕಾದ ಸಂಗತಿ. ಪುರಾಣಗಳಲ್ಲಿ ದಾಖಲಾಗಿರುವ ಭಗವಂತನ ಮಹಿಮೆಗಳು ಶಿಷ್ಟರ ರಕ್ಷಣೆ ಹಾಗೂ ದುಷ್ಟರ ಶಿಕ್ಷಣೆಗೆ ಮೀಸಲಾದವು. ಅದೇ ತೆರನಾಗಿ ಇದ್ದಲ್ಲಿ ಮಾತ್ರ ಭಕ್ತರ ಪವಾಡಗಳಿಗೂ ಸಹ ಅರ್ಥ ಬರಲು ಸಾಧ್ಯ. ವೈಜ್ಞಾನಿಕ ಸಾಧನೆ ಸಾಮಾನ್ಯರಿಗೆ ಪವಾಡವೆನ್ನಿಸಿದರೆ, ತತ್ತ್ವಜ್ಞಾನಿಯ ಸಾಧನೆ ವಿಜ್ಞಾನಕ್ಕೂ ಪವಾಡವೆನ್ನಿಸಬಹುದು. ವಿಜ್ಞಾನದ ಹಿಂದೆ ವ್ಯವಸ್ಥಿತವಾದ ಪ್ರಯೋಗಸಿದ್ಧವಾದ ತತ್ತ್ವ ಇರುವಂತೆ ತತ್ತ್ವಜ್ಞಾನದ ಹಿಂದೆ ಶಾಸ್ತ್ರಸಿದ್ಧವಾದ ಹಿನ್ನೆಲೆ ಇದ್ದೇ ಇರುತ್ತದೆ. ಯೋಗಿಗಳ ಬಗ್ಗೆ ಕೇಳಿಬರುವ ಅಣಿಮಾದಿ ಅಷ್ಟಸಿದ್ಧಿಗಳು ಇದಕ್ಕೆ ನಿದರ್ಶನ. ಏನೇ ಆದರೂ, ನಿಜವಾದ ಪವಾಡವನ್ನು ನಿರ್ಧರಿಸಿ ಹೇಳುವುದು ಅಷ್ಟು ಸುಲಭವಾದ ವಿಚಾರವೇನಲ್ಲ. ಕೇವಲ ಪವಾಡಗಳಿಂದ ಒಬ್ಬ ವ್ಯಕ್ತಿಯ ಯೋಗ್ಯತೆಯನ್ನು ನಿರ್ಣಯಿಸುವುದು ಸಾಧು ಎನ್ನಿಸದು. ಅವರ ಹಿರಿಮೆ ಇತರ ಮೂಲಗಳಿಂದ ಸಿದ್ಧವಾದಾಗ ಇಂತಹ ಪವಾಡಗಳು ಅವಕ್ಕೆ ಹೆಚ್ಚಿನ ಮೆರುಗನ್ನು ನೀಡಬಹುದು ಮಾತ್ರ.

ಶ್ರೀಕನಕದಾಸರ ಬಗ್ಗೆ ಇರುವ ಪವಾಡಗಳಲ್ಲಿ ಕೆಲವಾದರು ಸಹ ರೋಚಕ ಹಾಗೂ ನಂಬಲರ್ಹ ಎಂಬುದು ಮಾತ್ರ ಗಮನಿಸಬೇಕಾದ ಸಂಗತಿ. ಅವುಗಳು ಇಂದ್ರಜಾಲ, ಮಹೇಂದ್ರಜಾಲಗಳಂತೆ ಕೇವಲ ರೋಚಕತೆಯನ್ನು ಮಾತ್ರ ಹೊಂದಿರದೆ ಜೀವನಕ್ಕೆ

ದೆಳಕನ್ನು ಚೆಲ್ಲುವ ತಾತ್ತ್ವಿಕ ಹಿನ್ನೆಲೆಯನ್ನು ಹೊಂದಿರುವುದು ಗಮನಾರ್ಹ. ಅವರ ಮುಂಡಿಗೆಗಳ ಚಮತ್ಕಾರದಂತೆ ಅವರ ಪವಾಡಗಳಲ್ಲೂ ಸಹ ರೋಚಕತೆ ಇರುವುದು ಮುಖ್ಯ. 'ನಾನು ಹೋದರೆ ಹೋದೆನು', 'ಹಿಂದಿನವರಿಗೆ ಮುಂದೆ, ಮುಂದಿನವರಿಗೆ ಹಿಂದೆ' ಎಂಬ ಅವರ ಮುಂಡಿಗೆಯಂತಹ ಮಾತುಗಳು ನಿಜವಾದ ತತ್ತ್ವಜ್ಞಾನದ ಹಿನ್ನೆಲೆಯ ವಾಙ್ಮಯ ಪವಾಡಗಳೇ ಆಗಿವೆ.

**ಜನನದ ಪವಾಡ :**

ಬೀರಪ್ಪ-ಬಚ್ಚಮ್ಮ ದಂಪತಿಗಳಿಗೆ ಸಂಪತ್ತು, ಅಧಿಕಾರ, ಗೌರವ ಮೊದಲಾದ ಸಕಲ ಸಮೃದ್ಧಿ ಇದ್ದರೂ, ಸಂತತಿ ಇಲ್ಲದ ಕೊರಗು ಮಾತ್ರ ಉಳಿದುಕೊಂಡಿತ್ತು. ಗುರುಹಿರಿಯರ ಮಾತನ್ನು ಕೇಳಿ ಅದಕ್ಕಾಗಿ ಸಂತತಿ ಪ್ರಾಪ್ತಿಗೆಂದು ತಿರುಪತಿಯ ಶ್ರೀನಿವಾಸನನ್ನು ಆರಾಧಿಸಿದರು. ಅವರ ವಯಸ್ಸು ಆಗಲೇ ಮಧ್ಯವಯಸ್ಸನ್ನು ಮೀರಿತ್ತು. ಭಗವಂತನ ದಯೆಯಿಂದ ಗರ್ಭಿಣಿಯಾಗಿ ಬಚ್ಚಮ್ಮ ಗಂಡುಮಗುವಿಗೆ ಜನ್ಮವಿತ್ತಳು. ಶ್ರೀನಿವಾಸನ ಕೃಪೆಯ ಸ್ಮರಣೆಗಾಗಿ ತಿಮ್ಮಪ್ಪ ಎಂದೇ ಹೆಸರಿಟ್ಟರು. ಹೀಗೆ ಅವರ ಜನನವು ಸಹ ದೈವಿಕ ಹಿನ್ನೆಲೆಯಲ್ಲಿಯೇ ನಡೆದುದು ವಿಶೇಷ.

**ಕನಕಪ್ರಾಪ್ತಿಯ ಹಿರಿಮೆ :**

ಶ್ರೀಕನಕದಾಸರ ಪವಾಡಗಳಲ್ಲಿ ಮೊದಲನೆಯದು ಅವರಿಗೆ ಅಪಾರವಾದ ಕನಕದ ರಾಶಿ ದೊರೆತದ್ದು ಎನ್ನಬಹುದು. ಕಿರಿಯವಯಸ್ಸಿನಲ್ಲಿರುವಾಗಲೇ ಅವರೊಮ್ಮೆ ಕಾರಣಾಂತರದಿಂದ ಒಂದೆಡೆ ಭೂಖನನವನ್ನು ಮಾಡಿಸುತ್ತಿದ್ದಾಗ ಅಲ್ಲಿ ಏಳು ಕೊಪ್ಪರಿಗೆಯಷ್ಟು ನಿಧಿ ಅವರಿಗೆ ಗೋಚರಿಸಿತು. ಆ ಕಾಲದ ಪದ್ಧತಿಯಂತೆ ಅದನ್ನು ಅವರು ತೆಗೆದುಕೊಂಡು ಜೀರ್ಣವಾಗಿದ್ದ ಅನೇಕ ಪ್ರಾಚೀನ ದೇವಸ್ಥಾನಗಳನ್ನು ಜೀರ್ಣೋದ್ಧಾರ ಮಾಡಿಸಿದರು. ಜನರ ಹಿತಕ್ಕಾಗಿ ಕೆರೆ, ಬಾವಿಗಳನ್ನು ನಿರ್ಮಾಣಮಾಡಿಸಿದರು. ಬಡಬಗ್ಗರಿಗೆ ದಾನವಾಗಿತ್ತರು. ಜನರಿಗೆ ಅದೆಲ್ಲ ಅಚ್ಚರಿಯ ಸಂಗತಿಯಾಗಿ ಕಂಡಿತು. ಕನಕರಾಶಿಯನ್ನು ಕಂಡ ಅಪೂರ್ವತೆ ಹಾಗೂ ಅದನ್ನೆಲ್ಲ ಸ್ವಾರ್ಥಕ್ಕಾಗಿ ಬಳಸದೆ ಕೇವಲ ಜನತೆ ಹಾಗೂ ಜನಾರ್ದನನಿಗಾಗಿ ವಿನಿಯೋಗಿಸಿದ ನಿಸ್ಪೃಹತೆ, ಔದಾರ್ಯ ಅವರನ್ನು ವಿಸ್ಮಯಪಡಿಸಿತು. ಕನಕದರಾಶಿಯ ದರ್ಶನದೊಂದಿಗೆ ಕನಕದಂತಿದ್ದ ಅವರ ವ್ಯಕ್ತಿತ್ವದ ಪರಿಚಯವೂ ಆಗಿ ಅಂದಿನಿಂದ ಜನ ಅವರನ್ನು ಕನಕ, ಕನಕಪ್ಪ ಕನಕನಾಯಕ ಎಂದು ಕರೆಯತೊಡಗಿದರು. ಹೀಗೆ ತಿಮ್ಮಪ್ಪ ಕನಕಪ್ಪ ಎಂದಾಗುವಂತಾಯಿತು.

**ದೈವಾನುಗ್ರಹದಿಂದ ದಾಸತ್ವಪ್ರಾಪ್ತಿ :**

ಯುದ್ಧದಲ್ಲಿ ಕನಕನ ಸಾಮರ್ಥ್ಯ ಅಪಾರವಾಗಿತ್ತು. ಅವನ ಶಕ್ತಿಸಾಮರ್ಥ್ಯವನ್ನು ಗುರುತಿಸಿದ ಜನ ಸೇನೆಯಲ್ಲಿ ಕನಕ ನೆರೆದನೆಂದರೆ ಶತ್ರುಗಳ ಎದೆ ನಡುಗುವುದು

ಎಂಬ ಕೀರ್ತಿಗೆ ಪಾತ್ರನಾದ. ಆಗ ನಡೆದ ಕೆಲವು ಯುದ್ಧಗಳಲ್ಲಿ ಯಶಸ್ಸನ್ನು ಗಳಿಸಿದ. ಆಗೊಮ್ಮೆ ಶತ್ರುಗಳೊಂದಿಗೆ ನಡೆದ ಘೋರ ಸಂಗ್ರಾಮದಲ್ಲಿ ಕನಕ ಶತ್ರುಗಳ ಸಂಚಿಗೆ ಬಲಿಯಾದ. ಹಿಂದಿನಿಂದ ಬಿದ್ದ ಶತ್ರುಗಳ ಪೆಟ್ಟು ಕನಕನನ್ನು ಘಾಸಿಗೊಳಿಸಿತು. ಮೈ-ಕೈಗಳೊಂದಿಗೆ ತಲೆಗೂ ಪೆಟ್ಟು ತಾಗಿ ಮೂರ್ಛಿತನಾಗಿ ನೆಲಕ್ಕೊರಗಿದ. ಜೊತೆಗಾರರು ದಿಕ್ಕಾಪಾಲಾಗಿ ಓಡಿಹೋದರು. ನಿಧಿಯೊಂದು ಲಭಿಸಿದಂತೆ ಶತ್ರುಗಳು ಊರನ್ನು ಕೊಳ್ಳೆಹೊಡೆಯಲು ಧಾವಿಸಿದರು. ಅನಾಥನಾಗಿ ಬಿದ್ದಿದ್ದ ಕನಕನಿಗೆ ಭಗವಂತನ ವಾಣಿ ಕೇಳಿಸಿತು. 'ನಾನು ಹೇಳುತ್ತಲೇ ಇರುವೆ ನನ್ನ ದಾಸನಾಗು ದಾಸನಾಗು ಎಂದು; ಈಗಲಾದರೂ ದಾಸನಾಗುವೆಯಾ? ಹಾಗಾದಲ್ಲಿ ನಿನಗೆ ರಕ್ಷಣೆ ನೀಡುವೆನು'; ಕನಕ ಸಮ್ಮತಿಸಿದ. ಎಚ್ಚೆತ್ತ ಕನಕ ಒಳಗಿನಿಂದಲೂ ಎಚ್ಚೆತ್ತ. ಚಿಕ್ಕಂದಿನಿಂದ ಇದ್ದ ಭಗವಂತನ ಕಡೆಗಿನ ತುಡಿತ ಹೆಚ್ಚಾಯಿತು. ದಾಸನಾಗಲು ಹೊರಟೇಬಿಟ್ಟ ಅರಸರ ದಾಸ್ಯದಿಂದ ಸಾಧಿಸಲಾಗದ್ದನ್ನು ಭಗವಂತನ ದಾಸ್ಯದಿಂದ ಸಾಧಿಸುವ ದೀಕ್ಷೆ ಅವನದಾಯಿತು. ಡಣಾಯಕನಾಗಿ ಜನರನ್ನಾಳಿದ ಅವರು ಮುಂದೆ ಹರಿದಾಸರಾಗಿ ಜನಮಾನಸದಲ್ಲಿ ನೆಲೆಸುವಂತಾದದ್ದು ಇಂತಹ ಅಪೂರ್ವ ದೈವಾನುಗ್ರಹದಿಂದ. ದುರ್ಜನರೊಂದಿಗೆ ಹೋರಾಡುವ ಅವರ ಶೌರ್ಯ, ದುಷ್ಟತನದೊಂದಿಗೆ ಹೋರಾಡುವ ಆಧ್ಯಾತ್ಮಿಕ ಶಕ್ತಿಯಾಗಿ ಪರಿವರ್ತಿತವಾಯಿತು. ಅಧ್ಯಾತ್ಮದ ದಾಸ್ಯ ಲೌಕಿಕದ ಅಧಿಕಾರಕ್ಕಿಂತ ಹೆಚ್ಚು ಶಕ್ತಿಯುತ ಎಂಬುದನ್ನು ಜಗತ್ತಿಗೆ ತೋರುವ ಧೀಮಂತ ವ್ಯಕ್ತಿಯಾಗಿ ಅವರು ರೂಪುಗೊಂಡರು.

**ಶ್ರೀವ್ಯಾಸರಾಜರಿಂದ ದೊರೆತ ವಿಶಿಷ್ಟ ಮನ್ನಣೆ :**

ಶ್ರೀವ್ಯಾಸರಾಜರಿಂದ ದೀಕ್ಷೆ ಪಡೆದ ಶ್ರೀಕನಕದಾಸರ ಸಾಧನೆ ಅಪೂರ್ವವೆನ್ನಿಸಿತು. ಶ್ರೀವ್ಯಾಸರಾಜರ ಪ್ರಿಯ ಶಿಷ್ಯರಲ್ಲಿ ಒಬ್ಬರಾಗುವ ಹಿರಿಮೆ ಅವರದಾಯಿತು. ತೀರ್ಥವನ್ನು ಕೊಡುವಾಗ ಶ್ರೀಕನಕದಾಸರನ್ನು ಆದರದಿಂದ ಹತ್ತಿರ ಕರೆದು [೧]ತೀರ್ಥಕೊಡುವಷ್ಟು ವಿಶೇಷ ಪ್ರೀತಿಯನ್ನು ಅವರ ಮೇಲೆ ಶ್ರೀವ್ಯಾಸರಾಜರು ತೋರಿಸಿದರು. ಮೇರು ವ್ಯಕ್ತಿತ್ವದ ಶ್ರೀವ್ಯಾಸರಾಜರು ವಿದ್ವಾಂಸರ ಪ್ರತಿಭೆಯನ್ನು ಮೆಚ್ಚುಗೆಯ ಸೂಚಕವಾಗಿ ಒಮ್ಮೆ ತಲೆಯಾಡಿಸುವುದು ಸಹ ನೂರು

---

೧. ಕನಕದಾಸನ ಮೇಲೆ ದಯಮಾಡಲು ವ್ಯಾಸ-
ಮುನಿ ಮಠಿಕರೆಲ್ಲರು ದೂರುತಿಹರೊ ॥
ತೀರ್ಥವನು ಕೊಡುವಾಗ ಕನಕನ್ನ ಕರೆಯೆನಲು
ಧೂರ್ತರಾಗಿದ್ದ ವಿದ್ವಾಂಸರೆಲ್ಲ
ಸಾರ್ಥಕವಾಯಿತು ಇವರ ಸನ್ಯಾಸಿತನವೆನ್ಲ
ಪೂರ್ತ್ಯಾಗಲೆಂದು ಯತಿ ನಗುತಲಿಹನು ॥

– ಶ್ರೀಪುರಂದರದಾಸರು

ಮೇರುಪರ್ವತಗಳಷ್ಟು ಬೆಲೆಬಾಳುವುದು ಎಂಬ ಪ್ರಸಿದ್ಧಿ ಪಡೆದಿತ್ತು[೧]. ಅಂತಹ ಶ್ರೀವ್ಯಾಸತೀರ್ಥರ ಪರಮಾಪ್ತರ ಸಾಲಿನಲ್ಲಿ ಗುರುತಿಸಲ್ಪಟ್ಟದ್ದು ಶ್ರೀಕನಕದಾಸರ ಮಹತ್ಸಾಧನೆಗಳಲ್ಲೊಂದು.

**ಆದಿಕೇಶವನನ್ನು ಕಾಗಿನೆಲೆಗೆ ಸ್ಥಳಾಂತರಿಸಿದ ಪ್ರಸಂಗ :**

ಶ್ರೀಕನಕದಾಸರ ತಾರುಣ್ಯದಲ್ಲೊಮ್ಮೆ ಅವರ ಆರಾಧ್ಯದೈವ ಬಾಡದ ಆದಿಕೇಶವ ಸ್ವಪ್ನದಲ್ಲಿ ದರ್ಶನವಿತ್ತು, 'ತನ್ನನ್ನು ಕಾಗಿನೆಲೆಗೆ ಕರೆದೊಯ್ದು ಪ್ರತಿಷ್ಠಾಪಿಸಲು' ಆದೇಶ ನೀಡಿದನಂತೆ. ಕೂಡಲೆ ಶ್ರೀಕನಕದಾಸರು ಮೇಲೆದ್ದು ದೇವಸ್ಥಾನದಲ್ಲಿದ್ದ ಆದಿಕೇಶವನನ್ನು ತಾವೊಬ್ಬರೆ ಕಿತ್ತು ಹೆಗಲಮೇಲೆ ಹೊತ್ತುಕೊಂಡು ಕಾಗಿನೆಲೆಗೆ ಧಾವಿಸಿದರಂತೆ. ಕಾಗಿನೆಲೆ ಬಾಡದಿಂದ ಸುಮಾರು ೨೦ ಕಿ.ಮೀ. ಗಿಂತ ಹೆಚ್ಚು ದೂರದ್ದು. ಅಷ್ಟು ದೂರದವರೆಗೆ ಅವರು ಒಬ್ಬರೇ ಆ ಮೂರ್ತಿಯ ಭಾರವನ್ನು ಧರಿಸಿ ಸಾಗಿದ್ದು ಆಚ್ಚರಿಯ ಸಂಗತಿಯೇ ಆಗಿತ್ತು. ಆದರೆ, ಬಾಡದ ಜನ ಆ ಮೂರ್ತಿಯನ್ನು ಅಲ್ಲಿಂದ ಪಲ್ಲಟಗೊಳಿಸುವ ಕಾರ್ಯಕ್ಕೆ ಒಪ್ಪಿಗೆ ಸೂಚಿಸದೆ, ಶ್ರೀಕನಕದಾಸರನ್ನು ಹಿಡಿದು ಮೂರ್ತಿಯನ್ನು ಹಿಂದಕ್ಕೆ ತರಲೆಂದು ದೊಡ್ಡ ಗುಂಪಿನಲ್ಲಿ ಹಿಂಬಾಲಿಸಿ ನಡೆದರಂತೆ. ಆಗ ಬಾಡ ಹಾಗೂ ಬಂಕಾಪುರಗಳಿಗೆ ಬೆಂಕಿ ಹತ್ತಿದ ದೃಶ್ಯ ಆ ಜನತೆಗೆ ಕಂಡು, ಅವರೆಲ್ಲ ಅದನ್ನು ಆರಿಸಲೆಂದು ಪುನಃ ಬಾಡದತ್ತ ಸಾಗಿದರಂತೆ. ಹಾಗೆ ತೆರಳಿದ ಜನರಿಗೆ ನಿಜಕ್ಕೂ ಅಲ್ಲಿ ಯಾವುದೇ ಬೆಂಕಿ ಬಿದ್ದ ಪ್ರಸಂಗ ಇರಲೇ ಇಲ್ಲ ಎಂಬುದು ತಿಳಿಯಿತು. ಆಗ ಅವರಿಗೆ ಅದು ಸ್ವತಃ ಆದಿಕೇಶವನು ಶ್ರೀಕನಕದಾಸರಿಗೆ ನೀಡಿದ ಆದೇಶ ಎಂಬುದು ಮನವರಿಕೆಯಾಗಿ ಶ್ರೀಕನಕದಾಸರ ಆ ಕಾರ್ಯಕ್ಕೆ ಸಹಕಾರ ನೀಡಿದರು ಎಂದು ಪ್ರತೀತಿ. ಹೀಗೆ ಭಗವಂತನಿಗೆ ಅತ್ಯಂತ ಪ್ರಿಯಭಕ್ತರಾದದ್ದು ಶ್ರೀಕನಕದಾಸರ ಹಿರಿಮೆ.

**ಪ್ರಾಮಾಣಿಕ ಬಾಳ್ವೆಯ ರಹಸ್ಯವನ್ನು ಬಿಚ್ಚಿಟ್ಟ ಬಾಳೆಹಣ್ಣಿನ ಪ್ರಸಂಗ :**

ಶ್ರೀವ್ಯಾಸರಾಜರು ಶ್ರೀಕನಕದಾಸರ ನಿಜ ಯೋಗ್ಯತೆಯನ್ನು ಮಠದಲ್ಲಿನ ಪಂಡಿತಂ-ಮನ್ಯರಾದ ಕೆಲವರಿಗೆ ತಿಳಿಸಿಕೊಡಲೆಂದು ಉಪಾಯವೊಂದನ್ನು ಹೂಡಿದರು. ಕನಕನ ಸಮೇತ ಅವರನ್ನೆಲ್ಲ ಕರೆದು ಅವರ ಕೈಯಲ್ಲಿ ಬಾಳೆಹಣ್ಣುಗಳನ್ನಿರಿಸಿ ಅವನ್ನು ಯಾರೂ ಇಲ್ಲದ ಸ್ಥಳದಲ್ಲಿ ಮೆದ್ದು ಬನ್ನಿರೆಂದು ಆದೇಶವಿತ್ತರು. ಆ ವಿದ್ವಾಂಸರೆಲ್ಲ ಊರ ಹೊರಗೆ ಹೋಗಿ ತಮಗೆ ಸರಿ ಎಂದು ತೋಚಿದ ಏಕಾಂತಸ್ಥಳದಲ್ಲಿ ಅದನ್ನು ತಿಂದು

---

೧. ಶ್ಲಾಘಾಕಂಪನಮೇಕಮೇವ ಶಿರಸಃ ಶ್ರೀವ್ಯಾಸಯೋಗೀಶಿತುಃ।
ಮೇರೂಣಾಂ ಶತಮರ್ಹತಿ ಕ್ಷಿತಿತಲೇ ವಿದ್ಯಾ ಸುವಿದ್ಯಾವತಾಮ್ ॥
- ಸೋಮನಾಥಕವಿ (ಶ್ರೀವ್ಯಾಸಯೋಗಿ ಚರಿತ ೧/೧೪)

ಮರಳಿದರು. ಅದನ್ನು ಶ್ರೀವ್ಯಾಸರಾಜರಿಗೆ ವರದಿ ಮಾಡಿದರು ಸಹ. ಕನಕ ಮಾತ್ರ ತನಗೆ ಯಾರೂ ಇಲ್ಲದ ಆ ಏಕಾಂತಸ್ಥಳ ತೋರಲೇ ಇಲ್ಲ ಎಂದು ಬಾಳೆಹಣ್ಣನ್ನು ವ್ಯಾಸತೀರ್ಥರ ಮುಂದಿರಿಸಿದ. ಶರೀರದಲ್ಲಿ ಶಬ್ದ, ವಾಕ್ ಮೊದಲಾದವುಗಳಲ್ಲಿ, ಸಕಲ ಇಂದ್ರಿಯಗಳಲ್ಲಿ ತತ್ತ್ವಾಭಿಮಾನಿ ದೇವತೆಗಳು ತುಂಬಿರುವಾಗ ಯಾರೂ ಇರದ ಸ್ಥಳ ದೊರೆಯುವುದು ಹೇಗೆ? ಅಂತಹ ಸ್ಥಳ ದೊರೆಯದೇ ಇರುವಾಗ ಆ ಹಣ್ಣನ್ನು ತಾನು ತಿನ್ನುವುದಾದರೂ ಹೇಗೆ? ಎಂದು ವಿವರಿಸಿದ. ಶ್ರೀವ್ಯಾಸರಾಜರು ಕೂಡಲೇ ವಿದ್ವಾಂಸರಿಗೆ ತಿಳಿಸಿದರು; ಜ್ಞಾನವು ಕೋಡಗನ ಕೈಯಲ್ಲಿನ ಮಾಣಿಕ್ಯದಂತಾಗಬಾರದು, ಕೋಣನ ಮುಂದೆ ನುಡಿಸಿದ ಕಿನ್ನರಿಯಂತಾಗಬಾರದು, ಕಿವುಡನ ಮುಂದೆ ಬಾರಿಸುವ ಕೊಳಲನಾದವಾಗಬಾರದು, ಕುರುಡನ ಮುಂದೆ ಕನ್ನಡಿ ಹಿಡಿದಂತಾಗಬಾರದು. ಈ ಕನಕನ ಮಾತನ್ನು ಕೇಳಿದಿರಾ. ಇವರ ಮಹಿಮೆಯನ್ನು ಮೂಢಜನರು ಅರಿಯಲಾದೀತೆ. ಇಡೀ ನಾಡನ್ನೇ ಹುಡುಕಿದರು ಇಂತಹ ಅನುಸಂಧಾನದ ವ್ಯಕ್ತಿಯನ್ನು ಕಾಣಲು ಸಾಧ್ಯವಿಲ್ಲ. ಪಂಡಿತರ ಮುಖ ನಾಚಿಕೆಯಿಂದ ಜೋತು ಬಿದ್ದವು. ಸರ್ವತ್ರ ಭಗವಂತ ನೆಲೆಸಿರುವನು. ಅವನ ಆಜ್ಞಾಧಾರಕರಾದ ತತ್ತ್ವಾಭಿಮಾನಿದೇವತೆಗಳು ನೆಲೆಸಿರುವರು. ಪ್ರತಿಯೊಬ್ಬನ, ಪ್ರತಿಯೊಂದು ಕಾರ್ಯವನ್ನು ಪ್ರತಿಕ್ಷಣದಲ್ಲೂ ಅವರೆಲ್ಲ ಗಮನಿಸುತ್ತಿರುವರು ಎಂಬ ಶಾಸ್ತ್ರತತ್ತ್ವವನ್ನು ಕನಕ ನಿತ್ಯಜೀವನದಲ್ಲಿ ಅಳವಡಿಸಿಕೊಂಡಿದ್ದ ರೀತಿ ವಿದ್ವಾಂಸರಿಗೆ ಪಾಠವೆಂದೆನಿಸಿತು. ನಿಜವಾದ ವೇದಾಂತ ಎಂದರೆ ಇದೇ; ಕೇಳುವುದು ಒಂದು ಭಾಗ- ವಾದರೆ ಅದನ್ನು ಅನುಷ್ಠಾನಕ್ಕೆ ತಂದು ಅನುಭವಾರೂಢವನ್ನಾಗಿಸಿಕೊಳ್ಳುವುದು ನಿಜವಾದ ಸಾಧನೆ. ಇದರಲ್ಲಿ ಕನಕ ಕಂಡ ಯಶಸ್ಸು ಅನುಪಮವಾಗಿತ್ತು. ಇದು ಶ್ರೀಮದಾಚಾರ್ಯರ 'ಶಾಸ್ತ್ರಾರ್ಥಯುಕ್ತಾನುಭವಃ ಪ್ರಮಾಣಂ ತೂತ್ತಮಂ ಮತಮ್ ।' ಎಂಬ ಬ್ರಹ್ಮಸೂತ್ರ-ಭಾಷ್ಯದ ಮಾತನ್ನು ಜ್ಞಾಪಿಸುವ ಸಂದೇಶ. ಅಲ್ಲದೆ ಪ್ರತಿಯೊಬ್ಬನ ಪ್ರತಿಕಾರ್ಯಕ್ಕೂ, ಪ್ರತಿಕ್ಷಣದಲ್ಲೂ ೧೨ ಸಾಕ್ಷಿಗಳಿರುವರು ಎಂಬ ಮಹಾಭಾರತದ ವಾಕ್ಯಕ್ಕೂ ಇದು ನಿದರ್ಶನ:

ಆದಿತ್ಯಚಂದ್ರಾವನಲೋऽನಿಲಶ್ಚ
ದ್ಯೌ ಭೂಮಿರಾಪೋ ಹೃದಯಂ ಮನಶ್ಚ ।
ಅಹಶ್ಚ ರಾತ್ರಿಶ್ಚ ಉಭೇ ಚ ಸಂಧ್ಯೇ
ಧರ್ಮಶ್ಚ ಜಾನಾತಿ ನರಸ್ಯ ವೃತ್ತಮ್ ॥

ಪಂಡಿತರು ಬರೀ ಇದನ್ನು ಕೇಳಿದವರಾಗಿದ್ದರೆ, ಕನಕ ಅದನ್ನು ತಿಳಿದವನಾಗಿದ್ದ; ತಿಳಿದು ನಡೆದವನಾಗಿದ್ದ[೧].

---

೧. ಮರುದಿನ ಅವರವರ ಪರೀಕ್ಷಿಸಬೇಕೆಂದು
ಕರೆದು ವಿದ್ವಾಂಸರ ಕನಕಸಹಿತ

**ಕೈಯೊಳಗಿದ್ದದನ್ನು ಗುರುತಿಸಿದ ದಿವ್ಯದೃಷ್ಟಿ:**

ಇನ್ನೊಂದು ಪ್ರಸಂಗ: ವಿದ್ವಾಂಸರ ಪರೀಕ್ಷೆ ಶ್ರೀವ್ಯಾಸರಾಜರಿಂದ ಮತ್ತೊಮ್ಮೆ ನಡೆಯಿತು. ತುಂಬಿದ ಸಭೆಯಲ್ಲಿ ತಮ್ಮ ಮುಷ್ಟಿಯನ್ನು ಮುಂದೆ ಮಾಡಿ ಘೋಷಿಸಿದರು; 'ನನ್ನ ಮುಷ್ಟಿಯಲ್ಲಿರುವುದೇನು ಹೇಳಿರಿ? ನೋಡೋಣ' ಪಂಡಿತರಿಗೆ ಆಶ್ಚರ್ಯವೆನ್ನಿಸಿತು. ತಮಗೆ ತೋಚಿದನ್ನು ಹೇಳತೊಡಗಿದರು. ಅವರ ಉತ್ತರವನ್ನು ಶ್ರೀವ್ಯಾಸರಾಜರು ಒಪ್ಪಲಿಲ್ಲ. ಕೊನೆಗೆ ಕನಕನ ಸರದಿ ಬಂತು; ಕೂಡಲೇ ಕನಕ ಹೇಳಿದ. 'ಈತನೀಗ ವಾಸುದೇವನು' ಎಂದರೆ, ಅವರ ಕೈಯಲ್ಲಿದ್ದದ್ದು ವಾಸುದೇವ ಸಾಲಿಗ್ರಾಮ. ಕನಕನ ದಿವ್ಯದೃಷ್ಟಿ ಪಂಡಿತರನ್ನು ದಿಗ್ಭ್ರಾಂತಿಗೊಳಿಸಿತು, ಅವರ ಕಣ್ಣನ್ನು ತೆರೆಸಿತು. ಕನಕ ಹೇಳಿದ ಉತ್ತರಮಾತ್ರವಲ್ಲದೇ ಅದನ್ನು ಹೇಳಿದ ರೀತಿಯು ಸಹ ಅದ್ಭುತವಾಗಿತ್ತು; ಕನಕನ ಮುಂಡಿಗೆಗಳಲ್ಲಿ ಅದೂ ಒಂದಾಗಿದೆ[೧].

---

ತ್ವರಿತದಲಿ ಕರದಲ್ಲಿ ಕದಳಿಫಲವನೆ ಕೊಟ್ಟು
ಯಾರಿರದ ಸ್ಥಳದಲ್ಲಿ ಮೆದ್ದು ಬನ್ನಿರೆನಲು ॥
ಊರ ಹೊರಗೆ ಹೋಗಿ ಬ್ಯಾರೆಬ್ಯಾರೆ ಕುಳಿತು
ತ್ವರಿತದಿಂ ಮೆದ್ದು ವಿದ್ವಾಂಸರೆಲ್ಲ
ತೋರಲಿಲ್ಲವು ಎನಗೆ ಏಕಾಂತಸ್ಥಳವೆನುತ
ಸಾರಿ ಕದಳಿಫಲವ ತಂದು ಮುಂದಿಟ್ಟ ॥
ಡಿಂಬದೊಳು ಶಬ್ದವಾಗಾದಿ ಶ್ರೋತ್ರಗಳಲ್ಲಿ
ಇಂಬಾಗಿ ತತ್ತ್ವೇಶರೆಲ್ಲ ತುಂಬಿಹರು
ತಿಂಬುವುದು ಹ್ಯಾಂಗೆನುತ ವ್ಯಾಸರಾಯರ ಕೇಳೆ
ಸಂಭ್ರಮದಲವರೆಲ್ಲ ಕುಳಿತು ಕೇಳಿದರು ॥
ಮಾಣಿಕವು ಕೋಡಗನ ಕೈಯಲ್ಲಿ ಇದ್ದಂತೆ
ಕೋಣನಿದಿರಿಗೆ ಕಿನ್ನರಿ ಮೀಟಿದಂತೆ
ವೇಣುಧ್ವನಿ ಬಧಿರನ ಬಳಿ ಮಾಡಿದಂತೆ ಕಣ್ಣು
ಕಾಣದವನಿಗೆ ಕನ್ನಡಿಯ ತೋರಿದಂತೆ ॥
ನೋಡಿದಿರ ಈ ಕನಕನಾಡುವ ಮಾತುಗಳ
ಮೂಢಜನರರಿಯಬಲ್ಲರೆ ಮಹಿಮೆಯ
ನಾಡಾಡಿಯಂತೆಯೇ ಮಾಡಿಬಿಟ್ಟರು ಇವಗೆ
ನಾಡೆಲ್ಲ ಹುಡುಕಿದರು ಈಡಾರ ಕಾಣೆ ॥ – ಶ್ರೀಪುರಂದರದಾಸರು
ಏಕಾಂತದಿ ತಿನಲು ಆ ಕದಳಿಫಲ ಕೊಡೆ
ತಾ ಕೈಲಿ ಹಿಡಿದು ಕುಳಿತ
ಏಕೆನಲು ಸರ್ವತ್ರ ಶ್ರೀಕಾಂತ ತಾ ವ್ಯಾಪ್ತ
ನಾ ಕಾಣೆನೇಕಾಂತ – ಜ್ಞಾನಿ ಸಂತ ॥ – ಗಡದಿನ್ನಿ ಶೇಷವಿಠಲದಾಸರು

೧. ಈತನೀಗ ವಾಸುದೇವನು ಲೋಕದೊಡೆಯ
ಈತನೀಗ ವಾಸುದೇವನು ॥ ಪ ॥

**ನಾನು ಹೋದರೆ ಹೋದೇನು :**

ಒಮ್ಮೆ ತುಂಬಿದ ಸಭೆಯಲ್ಲಿ ಶ್ರೀವ್ಯಾಸರಾಜರು ಪಂಡಿತರ ಮುಂದೆ ಮತ್ತೊಂದು ಸಮಸ್ಯೆಯನ್ನು ಇಟ್ಟರು. ಮೋಕ್ಷಕ್ಕೆ ಹೋಗುವವರು ಯಾರು? ಹೆಚ್ಚು ಜನರ ಉತ್ತರ ನಾನು, ನಾನು ಎಂಬುದೇ ಆಗಿತ್ತು. ವಿದ್ವಾಂಸರ ಅಹಂಕಾರದ ಪರಿ ಆದಾಗಿತ್ತು. ಕೊನೆಗೆ ಕನಕನನ್ನು ಕೇಳಿದಾಗ ಕನಕ ಉತ್ತರಿಸಿ 'ನಾನು ಹೋದರೆ ಹೋಗಬಹುದು'. ಪಂಡಿತರ ಕೋಪಕ್ಕೆ ಮಿತಿ ಇಲ್ಲದಂತಾಯಿತು. ತಮ್ಮಂತಹ ಪಂಡಿತಾಗ್ರೇಸರರಿರುವಾಗ ತಾನು ಮಾತ್ರ ಮೋಕ್ಷಕ್ಕೆ ಹೋಗಬಲ್ಲೆ ಎಂದರೆ ಅವರಾರು ಹೋಗುವುದಿಲ್ಲ

---

ಈತನೀಗ ವಾಸುದೇವ ಈ ಸಮಸ್ತ ಲೋಕದೊಡೆಯ
ದಾಸಗೊಲಿದು ತೇರನೇರಿ ತೇಜಿ ಪಿಡಿದು ನಡೆಸಿದಾತ ॥ ಅ. ಪ ॥
ದನುಜೆಯಾಳ್ದನಣ್ಣನಯ್ಯನ ಪಿತನ ಮುಂದೆ ಕೌರವೇಂದ್ರ
ನನುಜೆಯನಾಳಿದವನ ಶಿರವ ಕತ್ತರಿಸುತ
ಅನುಜೆಯಾಳಿದವನ ಬೆಂಕಿ ಮುಟ್ಟದಂತೆ ಕಾಯ್ದ ರುಗ್ಮ-
ನನುಜೆಯಾಳಿದವನ ಮೂರ್ತಿಯನ್ನು ನೋಡಿರೊ ॥ ೧ ॥
ನರನ ಸುತನರಣ್ಯದಲ್ಲಿ ಗಿರಿಯೊಳ್ನಿಂತು ತನ್ನ ರೋಷದಿ।
ಶರಗಳನ್ನು ತೀಟುತಿಪ್ಪನ ಯೋಚಿಸಿ
ಭರದಲವನ ಕರದು ಕುರುಹ ತೋರಿ ಪತ್ರವನ್ನು ಹಾರಿಸಿದವನ
ಶಿರವನ್ನು ಛೇದಿಸಿದ ದೇವ ಕಾಣೆರೋ ॥ ೨ ॥
ಸೃಷ್ಟಿಕರ್ತಗೆ ಮಗನಾದವನಿಗಿಷ್ಟಭೂಷಣ ಅಶನವಾದನ
ಜ್ಯೇಷ್ಠಪುತ್ರಗೆ ವೈರಿ ತೊಡೆಯ ಛೇದಿಸೆಂದು ಬೋಧಿಸಿ
ಕಷ್ಟವನ್ನು ಕಳೆದು ಭಕ್ತರಿಷ್ಟವನ್ನು ಕಾದು ಉ -
ತ್ಕೃಷ್ಟ ಮಹಿಮನಾದ ದೇವ ಕಾಣೆರೋ ॥ ೩ ॥
ಕ್ರೂರವಾದ ಫಣಪಬಾಣ ತರಣಿಜಾನು ನಿರೀಕ್ಷಿಸ್ಯಾಗ
ವೀರನೆಚ್ಚ ಯೆಸುಗೆ ಒಪ್ಪುದನ್ನು ಈಕ್ಷಿಸಿ
ಧಾರಿಣಿಯ ಪದದೊಳೌಕಿ ಚರಣಭಜಕ ನರನ ಕಾಯ್ದ
ಭಾರಕರ್ತನಾದ ದೇವನೀತ ಕಾಣಿರೊ ॥ ೪ ॥
ವ್ಯೋಮಕೇಶನಿಪ್ಪ ದೆಸೆಯ ಮಹಾಮಹಿಮೆಯುಳ್ಳ
ಸಾಮಜವನೇರಿ ಬರುವ ಶಕ್ತಿಯನೀಕ್ಷಿಸಿ
ಪ್ರೇಮದಿಂದ ಉರಮನೊಡ್ಡಿ ಡಿಂಗರಿಗನ ಕಾಯ್ದ ಸಾರ್ವ-
ಭೌಮ ಬಾಡದಾದಿಕೇಶವನ್ನ ನೋಡಿರೊ ॥ ೫ ॥

– ಶ್ರೀಪುರಂದರದಾಸರ 'ಕನಕದಾಸನ ಮೇಲೆ ದಯಮಾಡಲು' ಕೃತಿಯಲ್ಲೂ ಸಹ ಈ ವಿವರ ದಾಖಲಾಗಿದೆ:

ಕರದಲ್ಲಿ ಮೂರ್ತಿಯನು ಪಿಡಿದು ಕೇಳುತ್ತಿರಲು
ಅರಿಯದಜ್ಞಾನದಲಿ ಪೇಳುತಿರಲು
ತ್ವರದಿ ಕನಕನು ಬಂದು ವಾಸುದೇವನ ರೂಪ
ಪರಬೊಮ್ಮ ಪುರಂದರವಿಠಲನೆಂದು ಪೇಳಿದನು ॥ – ಶ್ರೀಪುರಂದರದಾಸರು

ಎಂದಾಯಿತಲ್ಲ. ಎಂತಹ ಅಹಂಕಾರ, ಎಂತಹ ಉದ್ಧಟತನ. ಶ್ರೀವ್ಯಾಸರಾಜರಂತಹ ಗುರುಗಳಿರುವಾಗ ಅವರ ಮುಂದೆ ಈ ಮಾತೆ. ಜ್ಞಾನಿವರೇಣ್ಯರಾದ ಶ್ರೀವ್ಯಾಸರಾಜರು ನಗುತ್ತಾ ಕನಕನಿಗೆ ಹೇಳಿದರು. 'ಕನಕ ನಿನ್ನ ಮಾತಿನ ಅರ್ಥವನ್ನು ನೀನೆ ಇವರಿಗೆ ವಿವರಿಸು'. ಶ್ರೀಕನಕದಾಸರು ಕೂಡಲೇ ಹೇಳಿದರು 'ನಾನು ಮೋಕ್ಷಕ್ಕೆ ಹೋಗುವ ವಿಚಾರವನ್ನು ಇಲ್ಲಿ ಪ್ರಸ್ತಾಪಿಸಿಲ್ಲ. ಪ್ರತಿಯೊಬ್ಬರಿಗೂ ಮೋಕ್ಷಕ್ಕೆ ತೆರಳುವ ಅರ್ಹತೆ ಏನು ಎಂಬುದನ್ನು ಮಾತ್ರ ತಿಳಿಸಿದ್ದೇನೆ. ನಾನು ಎಂದರೆ ಅಹಂಕಾರ; ಅಹಂಕಾರ ಅದರಂತೆ ಮಮಕಾರಗಳನ್ನು ತೊರೆದವರಿಗೆ ಮಾತ್ರವೇ ಮೋಕ್ಷಕ್ಕೆ ಹೋಗಲು ಸಾಧ್ಯ ಎಂಬುದು ನನ್ನ ಭಾವ'. ಭಗವದ್ಗೀತೆಯ 'ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿ ಗಚ್ಛತಿ' ಎಂಬ ಮಾತಿನ ಭಾವವನ್ನು ಕನಕ ಹೇಳಿದ ರೀತಿ ಒಂದು ಮುಂಡಿಗೆಯೇ ಆಗಿತ್ತು. ಮನಸ್ಸಿನಲ್ಲೇ ಮಂಡಿಗೆ ತಿನ್ನುತ್ತಿದ್ದ ಜನಕ್ಕೆ ಈ ಮುಂಡಿಗೆಯ ಭಾವ ಮಂಡೆ ಬಾಗಿಸುವಂತೆ ಮಾಡಿತು.

**ಜನತೆಗಾದ ಜನಾರ್ದನನ ದರ್ಶನ :**

ಶ್ರೀಕನಕದಾಸರು ಅಪರೋಕ್ಷಜ್ಞಾನಿ ಎಂದು ಈ ಪ್ರಸಂಗಗಳಿಂದ ಜನರಿಗೆ ಅರಿವಾಗತೊಡಗಿತು. ಹಾಗಿದ್ದಲ್ಲಿ ತಮಗೂ ದೇವರು ಕಾಣುವಂತೆ ಅವರು ಮಾಡಲಿ ಎಂದು ಪಂಡಿತಮಂಡಲಿ ತಮ್ಮ ಬಯಕೆಯನ್ನು ಗುರುಗಳಾದ ವ್ಯಾಸತೀರ್ಥರ ಮುಂದೆ ಇರಿಸಿತು. ಶ್ರೀವ್ಯಾಸರಾಜರು ಕೂಡಲೆ ಕನಕನಿಗೆ ಅವರ ಅಪೇಕ್ಷೆಯನ್ನು ತಿಳಿಸಿದರು. ಕನಕ ಅದಕ್ಕೆ ಸಮ್ಮತಿಸಿದ. ಮಾರನೆಯ ದಿನ ಪೂಜೆಯ ವೇಳೆಗೆ ಕಾಣಿಸಿಕೊಳ್ಳಲು ಭಗವಂತನನ್ನು ಪ್ರಾರ್ಥಿಸುವುದಾಗಿ ತಿಳಿಸಿದ. ಮಾರನೆಯ ದಿನ ಆ ಸಮಯ ಒದಗಿತು. ಜನರೆಲ್ಲ ಭಗವಂತನನ್ನು ಕಾಣಲು ಕಾತರಿಸುತ್ತಿದ್ದರು. ಆ ವಿಷಯ ಎಲ್ಲೆಡೆ ಹರಡಿದ್ದರಿಂದ ಸಾಗರದಂತೆ ಜನತೆ ಸೇರಿತ್ತು. ಪೂಜಾ ಸ್ಥಳಕ್ಕೆ ನಾಯಿಯೊಂದು ಭರದಿಂದ ನುಗ್ಗಿಬಿಟ್ಟಿತು. ಪಂಡಿತರಿಂದ ಪ್ರಾರಂಭಿಸಿ ಎಲ್ಲರೂ ಮೈಲಿಗೆ-ಮೈಲಿಗೆ ಎಂದು ಕೂಗಾಡತೊಡಗಿದರು. ಕೆಲವರಂತೂ ಅದರ ಮೇಲೆ ಸಿಕ್ಕಿದ್ದನ್ನು ಎಸೆದು ಓಡಿಸಲು ಪ್ರಯತ್ನಿಸಿದರು. ನಾಯಿ ಕಾಣೆಯಾಯಿತು. ಕಾದ ಜನ ಭಗವಂತ ಬರಲೇ ಇಲ್ಲ ಎಂದು ಶ್ರೀಕನಕದಾಸರನ್ನು ಆಕ್ಷೇಪಿಸಿದರು. ಆಗ ಶ್ರೀಕನಕದಾಸರು ನುಡಿದು 'ಭಗವಂತ ಬಂದಿದ್ದ ಆದರೆ, ನೀವೆಲ್ಲ ಗುರುತಿಸದೇ ಓಡಿಸಿದ್ದರಿಂದ ಮರೆಯಾದ' ಆಗಷ್ಟೇ ಜನಕ್ಕೆ ತಿಳಿದದ್ದು 'ನಾಯಿ ರೂಪದಲ್ಲಿ ಬಂದಿದ್ದು ಭಗವಂತನೇ' ಎಂಬುದು. ಈ ಪ್ರಕರಣದ ಮೂಲಕ ಕನಕದಾಸರು ದೇವರನ್ನು ಕಾಣುವ ಪರಿಯನ್ನು ಶಾಸ್ತ್ರೀಯ ರೀತಿಯಲ್ಲಿ ತಿಳಿಸಿದ್ದರು. ಭಗವಂತ ಎಲ್ಲೆಡೆಯೂ ಇರುವನು, ಅವನ ಸನ್ನಿಧಾನವಿರದ ಚರಾಚರ ವಸ್ತುವೇ ಇಲ್ಲ. ಅದನ್ನು ಕಾಣುವ ದೃಷ್ಟಿ ಮಾತ್ರ ನಮ್ಮದಾಗಬೇಕು. ಇದು

ಗೀತೆಯಲ್ಲಿ ಬಂದಿರುವ ಭಗವಂತನ ಮಾತಿನ ಅರ್ಥವೇ ಆಗಿದೆ[1]. ವಸ್ತುಗಳು ಬೇರೆ ಆಗಿದ್ದರೂ ಅವುಗಳಲ್ಲಿ ನೆಲೆಸಿರುವ ಭಗವಂತ ಮಾತ್ರ ಒಬ್ಬನೇ ಆಗಿರುವನು. ಅವನು ಸದಾ ಒಂದೇ ತೆರನಾಗಿರುವನು ಎಂದು ಇದರ ಅರ್ಥ[2]. ಹೀಗೆ ಶಾಸ್ತ್ರ ಓದಿದ ಪಂಡಿತರು ಕಾಣಲಾಗದ್ದನ್ನು ಶ್ರೀಕನಕದಾಸರು ತಮ್ಮ ಅನುಭವದಿಂದ ಹೇಳುತ್ತಿದ್ದರು. ಆಗಲೇ ಅವರು 'ಡೊಂಕುಬಾಲದ ನಾಯಕರೆ ನೀವೇನೂಟ ಮಾಡಿದಿರಿ[3]' ಎಂದು ಹಾಡಿದರು ಎಂದು ಐತಿಹ್ಯ.

ಆ ಬಳಿಕ ಶ್ರೀವ್ಯಾಸರಾಜರು ಶ್ರೀಕನಕದಾಸರಿಗೆ ಇನ್ನೊಮ್ಮೆ ಹಾಗೆ ದೇವರನ್ನು ತೋರಿಸಲೆಂದು ಅಲ್ಲಿಯ ಜನರ ಪರವಾಗಿ ತಿಳಿಸಿದರು. ಅದಕ್ಕೆ ಶ್ರೀಕನಕದಾಸರು ಸಮ್ಮತಿಸಿ, ಪುನಃ ದೇವರನ್ನು ಪ್ರಾರ್ಥಿಸಿದರು. ಮತ್ತೊಂದು ದಿನ ಪೂಜೆಯ ಕಾಲದಲ್ಲಿ ಘಟಸರ್ಪವೊಂದು ಸರಸರನೆ ಅಲ್ಲಿಗೆ ಹರಿದುಬಂದಿತು. ಭೀತರಾದ ಜನರು ಅಲ್ಲಿಂದ ಪಲಾಯನಗೈದರು. ಅದರ ಅರ್ಥವನ್ನು ತಿಳಿದಿದ್ದ ಶ್ರೀವ್ಯಾಸರಾಜರು ಅದಕ್ಕೆ ಕ್ಷೀರದ ನೈವೇದ್ಯವನ್ನು ಮಾಡಿ ಆರತಿ ಬೆಳಗಿದರು. ಆ ಬಳಿಕವೆ ಜನರಿಗೆ ಸರ್ಪರೂಪದಲ್ಲಿ ಭಗವಂತನೇ ಆಗಿಮಿಸಿದ್ದ ಎಂದು ತಿಳಿದದ್ದು. ಹೀಗೆ ಭಗವಂತನೊಂದಿಗೆ ಆಪ್ತತೆಯನ್ನು ಬೆಳೆಸಿಕೊಂಡಿದ್ದು ಶ್ರೀಕನಕದಾಸರ ಪ್ರಮುಖ ಸಾಧನೆಯಾಗಿತ್ತು.

**ತಿರುಪತಿಯಲ್ಲಿ ತೋರಿದ ಮಹತಿ :**

ಒಮ್ಮೆ ಶ್ರೀಕನಕದಾಸರು ತಿರುಪತಿ ಯಾತ್ರೆಗೆ ತೆರಳಿದ್ದರು. ಆಗಲೆ ಅವರ ಹೆಸರು ಪ್ರಸಿದ್ಧವಾಗಿತ್ತು. ಅವರು ಅಲ್ಲಿಗೆ ಬರುವ ವಿಚಾರವು ಸಹ ಅಲ್ಲಿಯ ಅಧಿಕಾರಿಗಳಿಗೆ ಸಂಬಂಧಿಸಿದವರಿಂದ ತಿಳಿದು ಬಂದಿತ್ತು. ಅವರೆಲ್ಲ ಅವರನ್ನು ಸ್ವಾಗತಿಸಲು ಕಾತರದಿಂದ ಸಕಲ ಸಿದ್ಧತೆಗಳೊಂದಿಗೆ ಕಾಯುತ್ತಿದ್ದರು. ಶ್ರೀಕನಕದಾಸರು ಅಲ್ಲಿಗೆ ತೆರಳಿದರು. ಇವರೇ ಶ್ರೀಕನಕದಾಸರೆಂದು ಗುರುತಿಸದ ಅವರು ಅವರನ್ನು ಶ್ರೀಕನಕದಾಸರು ಎಲ್ಲಿ ಬರುತ್ತಿರುವರು ಎಂದು ಪ್ರಶ್ನಿಸಿದರಂತೆ. ಕೂಡಲೆ ಅವರು ಉತ್ತರಿಸಿದರು; 'ಮುಂದೆ ಹೋಗುವವರಿಗೆ ಹಿಂದೆ, ಹಿಂದೆ ಬರುವವರಿಗೆ ಮುಂದೆ[4]. ಅರ್ಥವಾಗದ ಆ ಜನ ತಮ್ಮ

---

೧. ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।
ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ॥ – ಗೀತಾ (೫/೧೮)

೨. ವ್ಯಾಸರಾಯರು ಪೇಳೆ ಶ್ರೀಶನ್ನ ಕರೆಯಲು
ತಾ ಶ್ವಾನನಾಗಿ ಬಂದ
ಭೂಸುರರು ಹೊಡೆದಟ್ಟೆ ಶೇಷರೂಪದಿ ಕರೆದೆ
ಆ ಸರ್ಪ ಕಂಡೋಡಿದರು – ನಿಜ ಮೂಢರು ॥ – ಶ್ರೀಗಡದಿನ್ನಿ ಶೇಷವಿಠಲದಾಸರು

೩. ಈ ಕೃತಿ ಶ್ರೀಪುರಂದರದಾಸರದು ಎಂದೂ ಪ್ರತೀತಿ ಇದೆ.

೪. 'ಸಾಧನೆಯಲ್ಲಿ ಮುಂದುವರೆದವರನ್ನು ತಾವು ಅನುಸರಿಸುವರು; ತಮ್ಮ ಸಾಧನೆಗಾಗಿ ತಮ್ಮ ಅನುಯಾಯಿಗಳಾಗಿ ಬರುವವರಿಗೆ ದಾರಿ ತೋರುವವರು' ಎಂಬ ಇನ್ನೊಂದು ಸ್ವರಸರಾದ

ಪ್ರತೀಕ್ಷೆಯನ್ನು ಮುಂದುವರೆಸಿದರು. ಆಮೇಲೆ ತಿಳಿಯಿತು ಅವರೇ ಶ್ರೀಕನಕದಾಸರೆಂದು. ಆ ಜನ ಅರ್ಥಮಾಡಿಕೊಳ್ಳದೆ ಸೋತಿದ್ದರು. ಮುಂದೆ ಬರುವವರಿಗೆ ಹಿಂದೆ, ಹಿಂದೆ ಬರುವವರಿಗೆ ಮುಂದೆ ಎಂದರೆ ಅವರೇ ಎಂದು ಅರ್ಥವಲ್ಲವೇ? ಎಂದು ಆ ಬಳಿಕವಷ್ಟೇ ಅವರಿಗೆ ಅದು ತಿಳಿದದ್ದು. ಶ್ರೀಕನಕದಾಸರ ಈ ಮಾತಿಗೆ ಮತ್ತೊಂದು ಒಳಅರ್ಥವೂ ಇದ್ದಿತು. ಹಿಂದೆ ಇರುವವರಿಗೆ ಎಂದರೆ, ವಿಹಿತಸಾಧನೆಯನ್ನು ಮಾಡಿಕೊಳ್ಳದೆ ಹಿಂದೆ ಇರುವವರಿಗೆ ಮುಂದೆ ಎಂದೂ, ಮುಂದೆ ಇರುವವರಿಗೆ ಎಂದರೆ, ಸಾಧನೆಯಲ್ಲಿ ಮುಂದೆ ಸಾಗಿದವರಿಗೆ ಹಿಂದೆ ಎಂದೂ ಅರ್ಥ. ಎಂದರೆ, ಬಗೆಬಗೆಯ ಸಾಧಕರಿದ್ದು ಅವರ ಸಾಧನೆ ಅವರದ್ದೇ ಆಗಿರುವುದರಿಂದ ಅದಕ್ಕಾಗಿ ಅಹಂಕಾರ ಪಡುವುದು ತರವಲ್ಲ ಎಂದು ಅದರ ಅರ್ಥ. ಇದು ಶ್ರೀಕನಕದಾಸರ ಅಪೂರ್ವ ವಿನಯೋಕ್ತಿಯೂ ಆಗಿತ್ತು. ಆಗೊಮ್ಮೆ ತಿಮ್ಮಪ್ಪನೊಂದಿಗೆ ಶ್ರೀಕನಕದಾಸರು ಮಾತನಾಡಿದರು ಎಂದೂ ಹೇಳುವುದುಂಟು[೧].

**ರಥ ಮುಂದೆ ಸಾಗಿದ ಪವಾಡ :**

ತಿರುಪತಿಯ ಬ್ರಹ್ಮೋತ್ಸವಕಾಲದಲ್ಲೊಮ್ಮೆ ಶ್ರೀಕನಕದಾಸರು ಅಲ್ಲಿಗೆ ತೆರಳಿದ್ದಾಗ ಇವರನ್ನು ಗುರುತಿಸದ ಅಲ್ಲಿಯ ಅಧಿಕಾರಿಗಳು ರಥ ಎಳೆಯುವ ಅವಕಾಶವನ್ನು ಕಲ್ಪಿಸಲಿಲ್ಲ. ಆಗ, ಎಷ್ಟೇ ಜನರು ಎಳೆದರೂ ಸಹ ಆ ರಥವು ಮುಂದೆ ಸಾಗದೇ ದೃಢವಾಗಿ ನಿಂತುಬಿಟ್ಟಿತಂತೆ. ಕೊನೆಗೂ ಅದು ಕನಕದಾಸರಿಗಾದ ಅಪಮಾನದ ಫಲ ಎಂದು ಸಂಬಂಧಿಸಿದವರು ತಿಳಿದುಕೊಂಡು, ಶ್ರೀಕನಕದಾಸರ ಬಳಿಗೆ ತೆರಳಿ ಕ್ಷಮೆ ಯಾಚಿಸಿ ರಥವನ್ನು ಎಳೆಯಲು ಕೇಳಿಕೊಂಡರಂತೆ. ಕೂಡಲೇ ಶ್ರೀಕನಕದಾಸರು 'ಬಾರೋ ಭಾಗ್ಯದ ನಿಧಿಯೇ' ಎಂಬ ಕೃತಿಯನ್ನು ರಚಿಸಿ, ಪ್ರಾರ್ಥಿಸಿ ತೇರನ್ನೆಳೆದಾಗ ಅದು ಕೂಡಲೆ ಸರಸರನೆ ಮುಂದೆ ತೆರಳಿತಂತೆ. ಶ್ರೀಹರಿಯು ಭಕ್ತವತ್ಸಲ, ಶ್ರೀಕನಕದಾಸರು ನೈಜ ಭಕ್ತರು ಎಂಬುದಕ್ಕೆ ಇದೊಂದು ನಿದರ್ಶನ.

**ಧನಕನಕದ ರಾಶಿಯನ್ನು ತೊರೆದ ಅಪೂರ್ವ ವೈರಾಗ್ಯ :**

ಮೇಲಿನ ಘಟನೆಯಿಂದ ಶ್ರೀಕನಕದಾಸರ ಹಿರಿಮೆ ಜನತೆಗೆ ತಿಳಿದು, ಅವರೆಲ್ಲ ಅವರನ್ನು ದೈವೀ ಸಂಪತ್ತಿನವರು ಎಂದು ವಿಶೇಷವಾಗಿ ಆದರಿಸಿದರು. ಆಗೊಮ್ಮೆ ಭಕ್ತರ ಕನಸಿನಲ್ಲಿ ಕಾಣಿಸಿಕೊಂಡ ಶ್ರೀವೇಂಕಟೇಶ್ವರ 'ತನಗೆ ನೀಡಲು ತಂದ ಕಾಣಿಕೆಗಳನ್ನೆಲ್ಲ ಕನಕದಾಸರಿಗೆ ಒಪ್ಪಿಸಿದರೆ ಅದು ತನಗೆ ತಲುಪುವುದು' ಎಂದು ಸೂಚನೆ ನೀಡಿದನಂತೆ. ಅದರಂತೆ ಜನ ಕಾಣಿಕೆಗಳನ್ನೆಲ್ಲ ಶ್ರೀಕನಕದಾಸರ ಮುಂದೆ

---

ಅರ್ಥವು ಇದರಲ್ಲಿ ಅಡಗಿದೆ. ಇದು ಶ್ರೀಕನಕದಾಸರ ಅಪಾರ ವಿನಯ ಹಾಗೂ ಅಪಾರ ಆತ್ಮವಿಶ್ವಾಸಗಳಿಗೆ ಅಪೂರ್ವ ನಿದರ್ಶನ.

೧. ತಿರುಪತಿ ತಿಮ್ಮಪ್ಪ ಮಾತಾಡ್ಯಾನೋ ಮುಂದಕಾ – ಗೀಗೀಪದ(ಪರಿಶಿಷ್ಟ-೧, ಪು. ೩೪೨)
ತಿರುಪತಿ ತಿಮ್ಮಪ್ಪನ ಮಾತಾಡಿಸಿದನು ಏಕತಾರಿ ಹಾಡು (ಪರಿಶಿಷ್ಟ-೧, ಪು. ೩೪೧)

ಸುರಿಯತೊಡಗಿದರಂತೆ. ಅದು ದೊಡ್ಡ ರಾಶಿಯಾಗಿ ಬೆಳೆದಾಗ ಶ್ರೀಕನಕದಾಸರು ಮನಸ್ಸಿನಲ್ಲಿಯೇ ಭಗವಂತನನ್ನು ವಿಶೇಷವಾಗಿ ಆರಾಧಿಸಿ ಅವನಿಗೆ ಸಮರ್ಪಿಸಲು ಕೂಡಲೇ ಅದೆಲ್ಲ ಕಾಣೆಯಾಗಿ ಶ್ರೀನಿವಾಸನ ಮುಂದೆ ಕಾಣಿಸಿಕೊಂಡಿತಂತೆ. ಸ್ವತಃ ಕನಕ ಎಂಬ ಹೆಸರಿನ ಅವರ ವಿಶಿಷ್ಟವಾದ ಗುಣ, ಕನಕವನ್ನೂ ಸಹ ಆಶಿಸದ ಅವರ ವೈರಾಗ್ಯ ಅವರ ಮೇಲಿನ ಪೂಜ್ಯತೆಗೆ ಮತ್ತೊಂದು ಕಾರಣವಾಗಿಬಿಟ್ಟಿತು.

**ನದಿ ದಾಟಿದ ಮಹಿಮೆ :**

ಶ್ರೀರಂಗಪಟ್ಟಣದ ಬಳಿಯ ಮಾದೇವಪುರ ಎಂಬ ಕಾವೇರೀ ನದಿಯ ತೀರದ ಹಳ್ಳಿಯೊಂದರ ಬಳಿ ಒಮ್ಮೆ ನದಿ ದಾಟುವ ಪ್ರಸಂಗ ಶ್ರೀಕನಕದಾಸರಿಗೆ ಬಂದಿತ್ತು. ಆ ಸಮಯದಲ್ಲಿ ಅಲ್ಲಿಯ ಅಂಬಿಗರು ದಾಸರಿಗೆ ಅವಮಾನ ಪಡಿಸಿ ಕೆಳಕ್ಕೆ ಇಳಿಸಿದರಂತೆ. ಆಗ ಶ್ರೀಕನಕದಾಸರು ಅವರಿಗೆ 'ಸಾವಿರ ಗಳಿಸಿದರೂ ಸಂಜೆಗೆ ಲಯವಾಗಲಿ, ನಳ್ಳಿಗುಳ್ಳೆಯಂತೆ ಮಕ್ಕಳಾಗಲಿ' ಎಂದು ಶಾಪವಿತ್ತರಂತೆ. ಮುಂದೆ ತೋಟವೊಂದರ ಒಡೆಯನೊಬ್ಬನು ಬಾಳೆ ಎಲೆಯನ್ನು ಕೊಡದಿದ್ದಾಗ, ಅವನಿಗೂ ಬಾಳೆ ಬೆಳೆದರು ಫಲ ಕೊಡದಿರಲಿ ಎಂದು ಶಪಿಸಿದರಂತೆ. ಅವರ ಶಾಪ ಸತ್ಯವಾಗಿ ಇಂದಿಗೂ ಅಲ್ಲಿ ಹಾಗೆ ನಡೆದಿದೆ ಎನ್ನುವರು. ಮುಂದೆ ಅವರು ಬಾಳೆ ಎಲೆ ಮೇಲೆ ಕುಳಿತೆ ನದಿಯನ್ನು ದಾಟಿದರು ಎಂದು ಪ್ರತೀತಿ[೧]. ಶ್ರೀಕನಕದಾಸರ ಬಾಯಲ್ಲಿ ಶಾಪವಚನ ಬರುವ ಸಂಭವ ಇಲ್ಲ. ಆದರೆ, ವಿನಾಕಾರಣವಾಗಿ ಇತರರನ್ನು ಅವಮಾನಿಸುವ ಜನಗಳಿಗೆ ಪಾಠ ಕಲಿಸಲೆಂದು ಅಂತಹ ಮಹನೀಯರು ಹೀಗೆ ಶಾಪ ನೀಡುವುದುಂಟು. ಎಂದರೆ, ಅವರ ಶಾಪವಚನವು ಸಹ ಲೋಕಕಲ್ಯಾಣದ ಉದ್ದೇಶವನ್ನು ಹೊಂದಿರುವುದೇ ಹೊರತು, ಕೇವಲ ಕೇಡುಬಯಸುವಂತಹ ಕ್ಷುಲ್ಲಕ ಉದ್ದೇಶದಿಂದ ಕೂಡಿರುವುದಿಲ್ಲ. ಇದರಿಂದ ಸೌಮ್ಯತೆ ಜ್ಞಾನಿಗಳಿಗೆ ಅಗತ್ಯವಾದರೂ, ಪ್ರಸಂಗ ಒದಗಿದಾಗ ನಿಷ್ಠುರವಾಗಿಯೂ ನಡೆದುಕೊಳ್ಳಬೇಕು ಎಂಬ ಸಂದೇಶವು ತಿಳಿಯುವುದು.

**ಆನೆಯನ್ನು ನಿಗ್ರಹಿಸಿದ ಕೌಶಲ :**

ಶ್ರೀಕನಕದಾಸರ ಪ್ರಯಾಣ ಒಮ್ಮೆ ನಂಜನಗೂಡಿನ ಕಡೆಗೆ ಸಾಗಿತ್ತು. ದಾರಿಯಲ್ಲಿ ಒಂದು ವಿಚಿತ್ರವಾದ ಪ್ರಸಂಗ; ನೂರಾರು ಜನ ಗಾಬರಿಯಿಂದ ಓಡಿಬರುತ್ತಿದ್ದರು. ಆ ಕಡೆಗೆ ಆಗಮಿಸುತ್ತಿದ್ದ ಶ್ರೀಕನಕದಾಸರನ್ನು ಕುರಿತು – 'ಸ್ವಾಮಿ ತಾವ್ಯಾರೋ

೧. ಅಲ್ಲಿ ಇಂದಿಗೂ ಇದರ ಕುರುಹಾಗಿ ಅಂಬಿಗರೇ ಕಟ್ಟಿದ ಪುಟ್ಟ ಕನಕನ ಗುಡಿ, ಶ್ರೀಕನಕದಾಸರು ಸ್ನಾನ ಮಾಡಿದರೆಂದು ಹೇಳುವ ಕನಕನ ಕಲ್ಲು ಹಾಗೂ ಅದರ ಮೇಲೆ ಮೂಡಿರುವ ಬಾಳೆಲೆಯ ಗುರುತು – ಇಷ್ಟನ್ನು ಅಲ್ಲಿಯ ಜನ ತೋರಿಸುವರು. ಆ ಕಲ್ಲಿಗೆ ಪೂಜೆ ಸಲ್ಲಿಸಿದರೆ ಎಂತಹ ಚರ್ಮರೋಗವು ವಾಸಿಯಾಗುವುದೆಂದು ಅಲ್ಲಿಯ ಜನರ ನಂಬಿಕೆ. ಇಂದಿಗೂ ಅಲ್ಲಿಯ ಅಂಬಿಗ ಕುಲದವರು ಶ್ರೀಕನಕದಾಸರ ಹಬ್ಬವನ್ನಾಚರಿಸುತ್ತಾರೆ ಎಂದೂ ಹೇಳುವರು.

ತಿಳಿಯದು, ಕೂಡಲೇ ಹಿಂದಿರುಗಿ, ಆನೆಯೊಂದು ಮದವೇರಿ ಇತ್ತ ಧಾವಿಸುತ್ತಿದೆ; ಅದರ ನಿಯಂತ್ರಣ ಯಾರಿಗೂ ಸಾಧ್ಯವಾಗದೇ ಹೋಗಿದೆ, ಸ್ವಲ್ಪ ತಡವಾದರೂ ಅಪಾಯ ತಪ್ಪಿದ್ದಲ್ಲ' ಎಂದು ಹೇಳಿ ಓಡತೊಡಗಿದರು. ಶ್ರೀಕನಕದಾಸರು ಆ ಮಾತಿನಿಂದ ವಿಚಲಿತರಾಗಲಿಲ್ಲ. ಅಲ್ಲಿಂದ ಬೇರೆಡೆಗೆ ತೆರಳಲೂ ಇಲ್ಲ; ನಿಶ್ಚಿಂತೆಯಿಂದ ಅದೇ ದಾರಿಯಲ್ಲಿ ಮುಂದೆ ಸಾಗಿದರು. ಆನೆ ಧಾವಿಸಿ ಬಂದೇ ಬಿಟ್ಟಿತು. ಶ್ರೀಕನಕದಾಸರು ಕೂಡಲೇ ಅದನ್ನು ತಮ್ಮ ಕೈಯಿಂದ ಸ್ಪರ್ಶಿಸಿದರು. ಎಂತಹ ಆಶ್ಚರ್ಯ! ಕೂಡಲೇ ಆನೆ ಶಾಂತವಾಯಿತು; ಅವರ ಮುಂದೆ ನಿಂತು ಸೊಂಡಿಲನ್ನು ಮುಂದೆ ಮಾಡಿ ಅವರನ್ನು ಮೇಲೆ ಎತ್ತಿ ತನ್ನ ಮೇಲೆ ಕೂರಿಸಿಕೊಂಡು ಬಿಟ್ಟಿತು. ಅದರ ಮೇಲೆ ಕುಳಿತೇ ಶ್ರೀಕನಕದಾಸರು ದೇವಸ್ಥಾನಕ್ಕೆ ತೆರಳಿದರು. ಜನರಿಗೆ ಆಶ್ಚರ್ಯವೋ ಆಶ್ಚರ್ಯ. ಮದ್ದಾನೆಯನ್ನು ಹಾಗೆ ಮಂತ್ರಮುಗ್ಧವನ್ನಾಗಿಸಿದ ಅವರ ಸಾಮರ್ಥ್ಯಕ್ಕೆ ಜನ ಮಣಿದರು. ಅದರ ರಹಸ್ಯವನ್ನು ಕೇಳಲು ಬಯಸಿದಾಗ ತಿಳಿಸಿದರು. 'ಭಗವಂತ ಎಲ್ಲೆಡೆ ಇರುವನು, ಅವನನ್ನು ನಂಬಿದವರನ್ನು ಎಂದೂ ಕೈಬಿಡನು; ಆನೆಯಲ್ಲಿರುವ ಭಗವಂತನನ್ನು ನಾನು ಸ್ತುತಿಸಿದೆ; ಅವನು ಆನೆಯ ಮದವನ್ನಿಳಿಸಿದ; ತನ್ನ ಬಳಿಗೆ ನನ್ನನ್ನು ಕರೆಸಿಕೊಂಡ'. ಶ್ರೀಕನಕದಾಸರ ತತ್ತ್ವಜ್ಞಾನದ ಪರಿಪಾಕ ಅಚ್ಚರಿ ಹುಟ್ಟಿಸುವಂತಹುದು[೧]:

---

೧. ಶ್ರೀಕನಕದಾಸರ ಈ ಕೆಳಗಿನ ಪದದಲ್ಲಿ ಈ ಪ್ರಸಂಗದ ಸೂಚನೆಯನ್ನು ಗುರುತಿಸಬಹುದು:

ಆನೆಯ ನೋಡಿರಯ್ಯ ನೀವೆಲ್ಲರೂ
ಆನಂದ ಪಡೆಯಿರಯ್ಯ .... ॥ ಪ ॥
ತಾನು ತನ್ನವರೆಂಬ ಮಾನವರ ಸಲಹಿದ ॥ ಅ. ಪ. ॥
ಪಾಂಡುಚಕ್ರೇಶನ ಸುತಗೆ ಒಲಿದ ಆನೆ।
ಕಡುಗಲಿಮಾಗಧನ ಒರಸಿದಾನೆ ॥
ಹಿಂಡುಗೋಪಳರೊಳು ಹಿರಿಯನ ಕಳೆಯದಾನೆ।
ಲಂಡರಿಗೆ ಎದೆಗೊಡುವ ಪುಂಡ ಆನೆ ॥ ೧ ॥
ಬಾಲಕನ ನುಡಿಕೇಳಿ ಖಳನ ಸೀಳಿದಾನೆ।
ಪಾಲುಂಡು ವಿದುರನ ಸಲಹಿದಾನೆ ॥
ಲೋಲಾಕ್ಷಿಯ ಮಾನಭಂಗಕ್ಕೊದಗಿದಾನೆ।
ಖೂಳ ಶಿಶುಪಾಲನ ಸೀಳಿದಾನೆ ॥ ೨ ॥
ಅಜಮಿಳನಿಗೆ ನಿಜಪದವಿಯ ಕೊಟ್ಟಾನೆ
ಕುಜನರೆಲ್ಲರನು ವರ್ಜಿಸಿದಾನೆ ॥
ಅಜಪಿತ ಕಾಗಿನೆಲೆಯಾದಿಕೇಶವನೆ।
ತ್ರಿ(ಶ್ರೀ)ಜಗವಲ್ಲಭ ತಾನು ಭಜಕರ ವಶವಾನೆ ॥ ೩ ॥ (ಪು. ೮೦)

– ಇದರಂತೆ 'ಆನೆ ಬರುತಾದೆ ನೋಡಮ್ಮ। ಮದ್ದಾನೆ ಬರುತಾದೆ' ಹಾಗೂ 'ಆನೆ ಬಂದಿದೆ ಇದಿಗೋ ಮದ್ದಾನೆ' ಎಂಬ ಇನ್ನೆರಡು ಕೀರ್ತನೆಗಳು ಸಹ ಉಪಲಬ್ಧವಿದ್ದು ಅವು ಸಹ ಈ ಘಟನೆಯ ಪ್ರಾಮಾಣ್ಯಕ್ಕೆ ಸಾಕ್ಷಿಯಂತಿವೆ.

ಪದ್ಮಪುರಾಣದ ಉತ್ತರಖಂಡದಲ್ಲಿ ಬರುವ ಗೀತೆಯ ೧೬ನೇ ಅಧ್ಯಾಯದ ಫಲಶ್ರುತಿಯ ಕಥೆ ಇದೇ ತೆರನಾಗಿದೆ. ರಾಜಧಾನಿಯೇ ಮದವೇರಿದ ಆನೆಯಿಂದ ಕಂಗೆಟ್ಟಿದ್ದಾಗ ಅಲ್ಲಿಗೆ ಆಗಮಿಸಿದ ವಾಸುದೇವ ಎಂಬ ಬ್ರಾಹ್ಮಣ ಅದರ ಮೇಲೆ ಮಂತ್ರವೊಂದನ್ನು ಪಠಿಸಿ ನೀರನ್ನು ಪ್ರೋಕ್ಷಿಸುತ್ತಲೇ ಅದರ ಮದವಿಳಿದು ಶಾಂತವಾದ ಕಥೆ ಅಲ್ಲಿದೆ. ತನ್ನ ಆ ಶಕ್ತಿಗೆ ಆ ಬ್ರಾಹ್ಮಣ ನೀಡಿದ ಉತ್ತರ ಇದೇ ತೆರನಾಗಿತ್ತು. ಭಗವಂತನ ಮಹಿಮೆಯನ್ನು ಬಣ್ಣಿಸುವ ಭಗವದ್ಗೀತೆಯ ಹದಿನಾರನೆಯ ಅಧ್ಯಾಯದ ನಿತ್ಯ ಪಠನೆಯಿಂದಾಗಿ ಅಂತಹ ಸಿದ್ಧಿ ತನಗೆ ಲಭಿಸಿದೆ ಎಂಬುದು ಅವನ ಉತ್ತರವಾಗಿತ್ತು. ಶ್ರೀಕನಕದಾಸರ ಕಥೆ ಇಂತಹುದೇ ಆಗಿದೆ. ಶ್ರೀಮದ್ಭಾಗವತದ ಸಪ್ತಮಸ್ಕಂಧದಲ್ಲಿ ಬರುವ ಪ್ರಹ್ಲಾದನ ಕಥೆಯಲ್ಲೂ ಇಂತಹ ಪವಾಡಗಳ ಸರಮಾಲೆ ಕಾಣುವುದು. ವಿಷಸರ್ಪ, ಮದ್ದಾನೆ, ಕಾಡ್ಗಿಚ್ಚು ಮೊದಲಾದ ಹಿರಣ್ಯಕಶಿಪು ಒಡ್ಡಿದ ಎಲ್ಲ ಅಪಾಯಗಳಿಂದಲೂ ಪ್ರಹ್ಲಾದ ಅನಾಯಾಸದಿಂದ ಪಾರಾದ ಘಟನೆಯು ಸಹ ಈ ಬಗೆಯದೇ ಆಗಿದೆ.

**ಕುಮ್ಮೂರಿನಲ್ಲಿ ವೇಂಕಟೇಶ್ವರ ಪ್ರತಿಷ್ಠಾಪನೆ :**

ಪ್ರತಿವರ್ಷವೂ ಬ್ರಹ್ಮೋತ್ಸವದ ಕಾಲಕ್ಕೆ ತಿರುಪತಿಗೆ ತೆರಳಿ ಶ್ರೀವೇಂಕಟೇಶನನ್ನು ಸಂದರ್ಶಿಸುವುದು ಶ್ರೀಕನಕದಾಸರ ವಿಶಿಷ್ಟ ಕಾರ್ಯಗಳಲ್ಲೊಂದಾಗಿತ್ತು. ಮುಂದೊಮ್ಮೆ ವೃದ್ಧಾಪ್ಯದಲ್ಲಿ ಅವರಿಗೆ ಅಷ್ಟು ದೂರದ ಪ್ರಯಾಣ ಸಾಧ್ಯವಾಗದ ಸನ್ನಿವೇಶ ಒದಗಿತು. ಆಗೊಮ್ಮೆ ಸ್ನಾನಕ್ಕೆಂದು ಕೆರೆಗೆ ನಡೆದಿದ್ದಾಗ 'ನಾನು ಬರುತ್ತೇನೆ, ಕರೆದುಕೊಂಡು ಹೋಗು' ಎಂಬ ಧ್ವನಿ ಅವರ ಕಿವಿಗೆ ಕೇಳಿಸಿತಂತೆ. ಸುತ್ತಲೂ ಹುಡುಕಿ ನೋಡಿದಾಗ ತಾವು ಬಟ್ಟೆ ಒಗೆಯುತ್ತಿದ್ದ ಕಲ್ಲಿನ ತಳಭಾಗದಿಂದ ಆ ಧ್ವನಿ ಬಂದಂತಾಗಿತ್ತು ಎಂಬುದು ತಿಳಿಯಿತು. ಕೂಡಲೇ ಅದನ್ನು ಎತ್ತಿ ನೋಡಿದಾಗ ಸುಂದರ ಚನ್ನಕೇಶವಮೂರ್ತಿ ಗೋಚರಿಸಿತು. ಅದನ್ನು ತಂದು ಶ್ರೀಕನಕದಾಸರು ಕಾಗಿನೆಲೆಯ ಸಮೀಪದ ಇಂಗಳಗುಂದಿಯಲ್ಲಿ ಪ್ರತಿಷ್ಠಾಪಿಸಿದರು. ಅದರಂತೆ ಇನ್ನೊಮ್ಮೆ ತಿಮ್ಮಕೇಶವನು ಸಹ ಅಂತಹುದೇ ಸೂಚನೆ ನೀಡಿದಾಗ ಶ್ರೀಕನಕದಾಸರು ಅದಕ್ಕಾಗಿ ಕಾಯತೊಡಗಿದರು. ಆಗ ತಿರುಪತಿಯ ಕಡೆಯಿಂದ ಸಾಗಿಬಂದ ಅತ್ಯಂತ ಪ್ರಕಾಶಮಾನವಾದ ಜ್ಯೋತಿಯು ಕಾಣಿಸಿತು. ಅದು ಮುಂದೆ ಕಾಗಿನೆಲೆಯ ಬಳಿಯ ಕುಮ್ಮೂರಿನ ಚಿಕ್ಕ ಬೆಟ್ಟವನ್ನೇರಿತು. ತಾನು ಅಲ್ಲಿ ನೆಲೆಸಿರುವೆನೆಂಬ ಸೂಚನೆಯನ್ನು ಭಗವಂತ ನೀಡಿದ. ಆ ಸ್ಥಳ ಮುಂದೆ ತಿಮ್ಮಕೇಶವ ದೇವಸ್ಥಾನ ಎಂದು ಪ್ರಸಿದ್ಧವಾಗಿ ಜನರ ಆರಾಧನೆಗೆ ಪಾತ್ರವಾಯಿತು.

**ಪಾತ್ರೆ ತೊಳೆಯುವಾಗಲೂ ತತ್ತ್ವದರ್ಶನ :**

ಶ್ರೀಕನಕದಾಸರ ಚಿಂತನೆಯ ಶುದ್ಧಿಯನ್ನು ಸಾರಲೆಂದು ಶ್ರೀವ್ಯಾಸರಾಜರು ಹೂಡಿದ ಉಪಾಯಗಳಲ್ಲಿ ಇನ್ನೊಂದು ಹೀಗಿದೆ. ಒಮ್ಮೆ ಅವರು ಮಠದ ಪ್ರತಿಷ್ಠಿತ ಪಂಡಿತರಿಗೂ, ಶ್ರೀಕನಕದಾಸರಿಗೂ ತಂಬಿಗೆಗಳನ್ನು ನೀಡಿ ಅದನ್ನು ಸ್ವಚ್ಛವಾಗಿ ತೊಳೆದುಕೊಂಡು ಬರಲು

ಹೇಳಿದರು. ಆದರಲ್ಲಿ ಹೆಚ್ಚಿನ ಜನ ಹೊರಗೆ ಮಾತ್ರ ಝುಗಝುಗಿಸುವಂತೆ ಪಾತ್ರೆಗಳನ್ನು ತೊಳೆದು ತಂದು ಗುರುಗಳ ಮುಂದಿರಿಸಿದರು. ಶ್ರೀಕನಕದಾಸರು ತೊಳೆದ ಪಾತ್ರೆ ಮಾತ್ರ ಅಷ್ಟಾಗಿ ಹೊಳೆಯುತ್ತಿರಲಿಲ್ಲ. ಉಳಿದ ಪಂಡಿತರಿಗೆ ಗೆಲುವು ತಮ್ಮದೇ ಎಂದು ಒಳಗೊಳಗೆ ಖುಷಿ. ಶ್ರೀವ್ಯಾಸರಾಜರು ಹೊಳೆಯುತ್ತಿದ್ದ ನೂರಾರು ಪಾತ್ರೆಗಳನ್ನೂ ಶ್ರೀಕನಕದಾಸರು ತಂದಿಟ್ಟ ಪಾತ್ರೆಯನ್ನೂ ಗಮನಿಸಿ ಶ್ರೀಕನಕದಾಸರನ್ನು ಕುರಿತು ಕಾರಣ ಕೇಳಿದರು. ಶ್ರೀಕನಕದಾಸರು ಕೂಡಲೇ ಉತ್ತರಿಸಿದರು. ತಮ್ಮ ಪಾತ್ರೆ ಹೊರಗೆ ಹಾಗೆ ಕಂಡರೂ ಒಳಗೆ ಶುದ್ಧವಾಗಿದೆ ಎಂಬುದನ್ನು ಪರೀಕ್ಷಿಸಲು ಕೇಳಿಕೊಂಡರು. ಹಾಗೆ ಮಾಡಿದ ವ್ಯಾಸರಾಜರು, ಉಳಿದವರು ತೊಳೆದ ಪಾತ್ರೆಗಳನ್ನು ಪರೀಕ್ಷಿಸಿದಾಗ ಅವರು ಮಾಡಿದ ವಂಚನೆ ತಿಳಿಯಿತು. ಶ್ರೀಕನಕದಾಸರು ನುಡಿದರು. ಅಂತರಂಗ ಶುದ್ಧಿ ಹಾಗೂ ಬಹಿರಂಗ ಶುದ್ಧಿ ಎರಡೂ ಪಾವಿತ್ರ್ಯಕ್ಕೆ ಮುಖ್ಯ. ಆದರಲ್ಲೂ ಅಂತರಂಗ ಶುದ್ಧಿ ಹೆಚ್ಚು ಪ್ರಧಾನ. ಹಾಲು ಮೊದಲಾದವುಗಳನ್ನು ಸಂಗ್ರಹಿಸುವ ಪಾತ್ರೆ ಒಳಗೆ ಶುದ್ಧವಿಲ್ಲದಿದ್ದಲ್ಲಿ ಅದರೊಳಗಿನ ಪದಾರ್ಥಗಳು ಕೆಟ್ಟು ಹಾಳಾಗುವವು. ಅದರಂತೆ ಮನಃಶುದ್ಧಿಯಿಲ್ಲದವನ ಸಾಧನೆ ವ್ಯರ್ಥವಾಗುವುದು ಎಂಬ ಅವರಿಂದ ಪ್ರಕಟಗೊಂಡ ತತ್ತ್ವ ಎಲ್ಲರಿಗೂ ಪಾಠವಾಯಿತು. ಇಂದು ಸಮಾಜದಲ್ಲಿ ನಡೆಯುತ್ತಿರುವುದು ಹಾಗೆಯೇ. ತೋರಿಕೆಗೆ ಆಚಾರವಂತರಂತೆ ಕಾಣುವ ಹೆಚ್ಚಿನವರು ಅಂತರಂಗದಲ್ಲಿ ಅನಾಚಾರಿಗಳಾಗಿರುವುದು ಗುಟ್ಟಿನ ಸಂಗತಿಯೇನಲ್ಲ. ದಾಸಸಾಹಿತ್ಯದ 'ಆಚಾರವಿಲ್ಲದ ನಾಲಿಗೆ', 'ನಗೆಯು ಬರುತಿದೆ', 'ಉದರವೈರಾಗ್ಯವಿದು' ಮೊದಲಾದ ಅನೇಕ ಕೃತಿಗಳು ಇಂತಹ ಆಷಾಢಭೂತಿತನವನ್ನು ಕಟುವಾಗಿ ಟೀಕಿಸಿವೆ. ಶ್ರೀಜಗನ್ನಾಥದಾಸರ ಹರಿಕಥಾಮೃತಸಾರದ ಒಂದು ಪದ್ಯ ಈ ಪ್ರಸಂಗದ ವಿಶ್ಲೇಷಣೆಯಂತಿದೆ[1].

**ಮಾರಿರೋಗವನ್ನು ಪರಿಹರಿಸಿದ ಯೋಗಸಿದ್ಧಿ :**

ಉಡುಪಿಯ ಯಾತ್ರಾ ಪ್ರಸಂಗದಲ್ಲಿ ತೀರ್ಥಪುರವೆಂಬ ಹಳ್ಳಿಯಲ್ಲಿ ನಡೆದ ಘಟನೆ. ಶ್ರೀಕನಕದಾಸರು ಆ ಗ್ರಾಮಕ್ಕೆ ಬರುವ ವೇಳೆಗೆ ಅಲ್ಲಿ ಮಾರಿರೋಗವು ವ್ಯಾಪಕವಾಗಿ ಹರಡಿ ಜನರೆಲ್ಲ ಬಹಳವಾಗಿ ಪರಿತಪಿಸುತ್ತಿದ್ದರು. ಶ್ರೀಕನಕದಾಸರ ಸಿದ್ಧಿಯ ಬಗ್ಗೆ ಕೇಳಿದ ಜನ, ಕೂಡಲೆ ಅವರ ಬಳಿಗೆ ತೆರಳಿ ಮಾರಿರೋಗದ ಉಪಕ್ರಮದಿಂದ ಪಾರು ಮಾಡಲು ಕೇಳಿಕೊಂಡರಂತೆ. ಕೂಡಲೇ ಶ್ರೀಕನಕದಾಸರು ಜಂಬೀರ ರಸದಲ್ಲಿ ತುಳಸೀದಳಗಳನ್ನು

---

೧. ಬೆಳಗಿದ್ದೂಜೆಯು ನೋಳ್ಪರಿಗೆ ಥಳ-
ಥಳಿಸುತಲಿ ಕಂಗೊಳಿಸುವಂದದಿ
ತೊಳೆದು ದೇಹವ ನಾಮಮುದ್ರೆಗಳಿಂದಲಂಕರಿಸಿ।
ಒಲಿಸಿ ನಿತ್ಯ ಕುತರ್ಕಯುಕ್ತಿಗ-
ಳಲವಬೋಧರ ಶಾಸ್ತ್ರಮರ್ಮವ
ತಿಳಿಯದಿಹ ನರ ಬರಿದೆ ಇದರೊಳು ಶಂಕಿಸಿದರೇನು ॥ - ಹರಿಕಥಾಮೃತಸಾರ (೧೫/೨೨)

ಹಾಕಿ ಶ್ರೀಹರಿಯನ್ನು ಪರಿಪರಿಯಾಗಿ ಪ್ರಾರ್ಥಿಸಿ, ರೋಗತಪ್ತರೆಲ್ಲ ಅದನ್ನು ಪಾನ ಮಾಡಲು ತಿಳಿಸಿದರು. ಹಾಗೆ ಮಾಡುತ್ತಲೇ ಅವರೆಲ್ಲರೂ ರೋಗಮುಕ್ತರಾಗಿ ಮುಂಚಿನಂತೆ ಆರೋಗ್ಯಯುಕ್ತರಾದರಂತೆ[೨]. ಹೀಗೆ ಅವರು ಸಾವಿರಾರು ಜನರನ್ನು ಉದ್ಧರಿಸಿದ ಕರುಣಾಳುಗಳು. ಯೋಗಸಿದ್ಧಿಯನ್ನು ಹೀಗೆ ಲೋಕಲ್ಯಾಣಕ್ಕೆ ಉಪಯೋಗಿ-ಸಿದ ಹಿರಿಮೆ ಅವರದಾಯಿತು. ಅನೇಕ ಜನ ಯೋಗಿಗಳ ಸೋಗಿನಲ್ಲಿ ಜನರಿಗೆ ವಂಚನೆ ಮಾಡಿ, ದ್ರೋಹ ಬಗೆಯುವುದು ಇಂದಿನ ದಿನಗಳಲ್ಲಿ ಸಾಮಾನ್ಯವೆನ್ನಿಸಿದೆ. ಜನರನ್ನು ವಂಚಿಸುವುದು ಜನಾರ್ದನನು ಮೆಚ್ಚದ ಅತ್ಯಂತ ಹೇಯವಾದ ಕಾರ್ಯ. ಆರ್ತ ಜನರ ನೋವನ್ನು ಪರಿಹರಿಸುವುದೇ ಜನಾರ್ದನನ ಸೇವೆ ಎಂಬ ಶಾಸ್ತ್ರದ ಸಂದೇಶವನ್ನು ಹೀಗೆ ತಮ್ಮ ಜೀವನದುದ್ದಕ್ಕೂ ಶ್ರೀಕನಕದಾಸರು ತಮ್ಮ ಯೋಗಸಿದ್ಧಿಯಿಂದ ತೋರಿಸಿಕೊಟ್ಟರು[೨].

**ಮಾನಸಪೂಜೆಯ ಸಿದ್ಧಿ :**

ಶ್ರೀಕನಕದಾಸರ ಮಾನಸಪೂಜೆಯ ಹಿರಿಮೆಯನ್ನು ಸಾರುವ ಮತ್ತೊಂದು ಪ್ರಸಂಗ ಹೀಗಿದೆ. ಉಡುಪಿಯಲ್ಲಿದ್ದಾಗ ಒಮ್ಮೆ ಅವರು ಶ್ರೀಕೃಷ್ಣನ ಗುಡಿಯ ಹೊರವಲಯದಲ್ಲಿ ಸಂಚರಿಸುತ್ತಿದ್ದಾಗ ಶ್ರೀಕೃಷ್ಣನ ನೈವೇದ್ಯಕ್ಕೆಂದು ಪಾಕ ಮಾಡುವವರು ಬಸಿದ ಗಂಜಿ ಹೊರಕ್ಕೆ ಬೀಳುತ್ತಿತ್ತು. ಇದನ್ನು ಕಂಡ ಶ್ರೀಕನಕದಾಸರು ಕೂಡಲೇ ಅದನ್ನು ಕೃಷ್ಣಾರ್ಪಣ ಎಂದು ಬಿಟ್ಟರು. ಆ ಬಳಿಕ ನೈವೇದ್ಯಕಾಲಕ್ಕೆ ಯತಿಗಳು ಅದು ಆಗಲೇ ನಿವೇದಿತ ಎಂಬುದನ್ನು ಗಮನಿಸಿ ಕಾರಣ ಹುಡುಕಿದಾಗ, ಶ್ರೀಕನಕದಾಸರು ಮಾಡಿದ ಕಾರ್ಯ ತಿಳಿದು, ಅವರ ಉಪಾಸನೆಯ ಮಟ್ಟವನ್ನು ತಿಳಿದು ಸಂತೋಷಪಟ್ಟು ಅವರನ್ನು ಅಭಿನಂದಿಸಿದರು ಎಂದು ಪ್ರತೀತಿ. ಶ್ರೀವಿಜಯದಾಸರ ಸುಳಾದಿಯೊಂದರ 'ಜತೆ'ಯಲ್ಲಿ ಇದರ ಸೂಚನೆ ಕಾಣಬಹುದು:

ಅಚ್ಯುತಗರ್ಪಿತವೆಂದು ದಾಸರೆನಲು ಕಲ-
ಗಚ್ಚು ಕುಡಿದ ಕಾಣೋ ವಿಜಯವಿಠಲ ಮೆಚ್ಚಿ॥

**ಶ್ರೀಕೃಷ್ಣನ ಅಪೂರ್ವಸಂದರ್ಶನದ ಸಿದ್ಧಿ :**

ಶ್ರೀಕನಕದಾಸರ ಸಾಧನೆಯ ಉತ್ತುಂಗವೆಂದರೆ, ಉಡುಪಿಯ ಶ್ರೀಕೃಷ್ಣನ ಅಪೂರ್ವ ಸಂದರ್ಶನ. ಒಬ್ಬ ವ್ಯಕ್ತಿಯ ಸ್ಮರಣೆಗಾಗಿ ಕಿಂಡಿಯೊಂದು ನಿರ್ಮಾಣವಾಯಿತೆಂಬುದು

---

೧. ಇದು ಶ್ರೀಕನಕದಾಸರನ್ನು ಕುರಿತ ರಾಮಲಿಂಗಕವಿಯ ಕನಕದಾಸರ ಚರಿತ್ರೆ ಎಂಬ ಕೃತಿಯಲ್ಲಿ ದಾಖಲಾಗಿರುವ ಮಹಿಮೆ.

೨. ಐಜಿ ವೇಂಕಟರಾಮಾಚಾರ್ಯರೆಂಬ ಹೆಸರಿನಿಂದ ದಿಗ್ದಂತಿ ಪಂಡಿತರಾಗಿದ್ದ ಮಹನೀಯರು ಮುಂದೆ ವಾಸುದೇವವಿಠಲ ಅಂಕಿತದಿಂದ ಹರಿದಾಸರೂ ಆಗಿ ಪ್ರಸಿದ್ಧರಾದವರು; ಅವರು ಸಹ ಒಮ್ಮೆ ತಮ್ಮ ಪ್ರಾಂತದಲ್ಲಿ ಮಾರಿ ಬೇನೆ ಕಾಣಿಸಿಕೊಂಡಾಗ ಇದೇ ರೀತಿಯಾಗಿ 'ಅಂಜಿಸುವುದ್ಯಾಕಮ್ಮ ಕಂಜೋದ್ಭವನಮ್ಮ' ಎಂಬ ಕೃತಿಯೊಂದನ್ನು ರಚಿಸಿ ದೇವಿಯನ್ನು ಪ್ರಾರ್ಥಿಸಿಕೊಂಡಾಗ ಆ ಪ್ರಾಂತ ಮಾರಿ ಬೇನೆಯಿಂದ ಬಿಡುಗಡೆ ಕಂಡಿತು ಎಂದು ಹೇಳುವುದುಂಟು.

ಸಾಮಾನ್ಯ ಸಂಗತಿಯೇನಲ್ಲ. ಶ್ರೀಕನಕದಾಸರು ತಮ್ಮ ಉಡುಪಿಕ್ಷೇತ್ರದ ಸಂದರ್ಶನದ ಸಂದರ್ಭದಲ್ಲಿ ಶ್ರೀಕೃಷ್ಣನನ್ನು ವಿಶಿಷ್ಟ ರೀತಿಯಲ್ಲಿ ದರ್ಶನ ಮಾಡುವ ಬಯಕೆ ಹುಟ್ಟಿತು. ಶ್ರೀಕೃಷ್ಣ ಅವರ ಬಯಕೆಯನ್ನು ಪೂರೈಸಿ ಅನುಗ್ರಹಿಸಿದ. ಆ ಕಥೆಯ ಸಾಂಕೇತಿಕಾರ್ಥ ಮಾತ್ರ ಅತ್ಯಂತ ಮಾರ್ಮಿಕವಾದುದು. ಭಕ್ತನು ಭಗವಂತನನ್ನು ತನ್ನೆಡೆಗೆ ತಿರುಗಿಸಿಕೊಳ್ಳುವುದು ಎಂದರೆ ಅನುಗ್ರಹೋನ್ಮುಖನನ್ನಾಗಿಸಿಕೊಳ್ಳುವುದು ಎಂದರ್ಥ. ಇದಕ್ಕೆ ಅಗತ್ಯವಾದದ್ದು ಪರಿಪಕ್ವ ಭಕ್ತಿ; ಅದು ಶ್ರೀಕನಕದಾಸರಿಗೆ ಸಿದ್ಧಿಸಿತ್ತು. ಭಗವಂತನನ್ನು ನೋಡುವ ಪ್ರಯತ್ನ ಭಕ್ತನದು. ಆದರೆ, ಅನುಗ್ರಹಿಸಿ ದರ್ಶನ ನೀಡುವುದು ಭಗವಂತನ ಕರುಣೆಗೆ ಸೇರಿದ್ದು. ಶ್ರೀಕನಕದಾಸರಿಗೆ ಅಂತಹ ವಿಶೇಷ ಕರುಣೆ ಲಭಿಸಿತ್ತು ಎಂಬುದು ಅದರ ಒಟ್ಟು ತಾತ್ಪರ್ಯ. ಶ್ರೀಕೃಷ್ಣನನ್ನು ಎದುರಿಗೆ ನೋಡುವಾಗಲೂ ಮನಸ್ಸನ್ನು ಎಲ್ಲಿಯೋ ಇರಿಸಿದ್ದವರಿಗೆ ಕೃಷ್ಣ ವಿಮುಖನೇ ಸರಿ. ಆದರೆ, ಗೋಡೆ ಅಡ್ಡ ಇದ್ದಾಗಲೂ ಕೃಷ್ಣನತ್ತಲೇ ಗಮನಹರಿಸಿದ ಶ್ರೀಕನಕದಾಸರಿಗೆ ಶ್ರೀಕೃಷ್ಣ ದರ್ಶನ ನೀಡಿದ. ಇದರಲ್ಲಿ ಎದ್ದು ಕಾಣುವ ಭಕ್ತನ ಏಕಾಗ್ರತೆಯು ಭಗವಂತನ ದರ್ಶನಕ್ಕೆ ಸಾಧನ ಎಂಬ ಅಂಶ. ಶ್ರೀಕನಕದಾಸರು ಭಕ್ತರಿಗೆಲ್ಲ ಆದರ್ಶವಾಗಿ ಕಾಣುವುದು ಈ ಹಿನ್ನೆಲೆಯಲ್ಲಿ. ಬಗೆಯಲ್ಲಿ ವಿಷಯ ತುಂಬಿಕೊಂಡವನಿಗೆ ಯಾವ ಕ್ಷೇತ್ರಕ್ಕೆ ಹೋದರೂ ಭಗವಂತನು ಕಾಣಲಾರ. ಆದರೆ, ಬಗೆಯಲ್ಲಿ ಭಗವಂತನನ್ನು ಹೊಂದಿದವರಿಗೆ ಅವರಿದ್ದಲ್ಲಿಯೇ ದರ್ಶನ ನೀಡುವನು ಎಂಬುದು ಇಲ್ಲಿಯ ಪವಾಡದ ದರ್ಶನ ಎನ್ನಬಹುದು.

**ನಿರ್ಯಾಣದ ಪವಾಡ :**

ಶ್ರೀಕನಕದಾಸರ ಜನನದಂತೆ ಅವರ ನಿರ್ಯಾಣವು ಸಹ ಒಂದು ಪವಾಡವೇ ಆಯಿತು. ೯೦ ಮೀರಿದ ಪ್ರಾಯದಲ್ಲೂ ಅವರ ಆರೋಗ್ಯ ಉತ್ತಮವಾಗಿಯೇ ಇದ್ದಿತು. ಕಣ್ಣು, ಕೈ, ಕಾಲು, ಕಿವಿಗಳನ್ನೊಳಗೊಂಡಂತೆ ಸಕಲ ಇಂದ್ರಿಯಗಳೂ ಪಟುವಾಗಿಯೇ ಇದ್ದವು. ಚಿಕ್ಕಂದಿನಲ್ಲಿ ಮಾಡಿದ ಶಸ್ತ್ರಾಭ್ಯಾಸಾದಿಗಳಿಂದಾಗಿ ಹುರಿಕಟ್ಟಿದ ದೇಹ ಮುಂದೆ ಅಧ್ಯಾತ್ಮ ಚಿಂತನೆಯಿಂದಾಗಿ ಪರಿಪಕ್ವವಾದ ಮನಸ್ಸು ಇವೆರಡರಿಂದಾಗಿ ಅವರ ಆರೋಗ್ಯ ಸಾಮಾನ್ಯವಾಗಿ ಜ್ಞಾನಪ್ರಪಂಚದಲ್ಲಿ ಕೃಷಿ ಮಾಡಿದವರಿಗೆ ಹೇಗೋ ಹಾಗೆ ಉತ್ತಮವಾಗಿಯೇ ಇದ್ದಿತು. ಅವರು ದೇಹ ತೊರೆಯುವ ಮುನ್ನ ಶ್ರೀಪುರಂದರದಾಸರು ತಿರುಪತಿಯ ಶ್ರೀನಿವಾಸನ ಸನ್ನಿಧಿಗೆ ನೀಡಲೆಂದು ಒಪ್ಪಿಸಿದ್ದ ಅವರ ತಂಬೂರಿಯನ್ನು ತಿರುಪತಿಯ ಭಂಡಾರದಲ್ಲಿಟ್ಟರಂತೆ. ತಮ್ಮ ಏಕತಾರ ತಂಬೂರಿಯನ್ನು ಹಾಗೂ ದಂಡವನ್ನು ಶ್ರೀನಿವಾಸನ ಗರ್ಭಗೃಹದ ಪ್ರವೇಶದ್ವಾರದ ಮೇಲ್ಭಾಗದಲ್ಲಿ ಇರಿಸಿದರಂತೆ. ಬಳಿಕ ಕಾಗಿನೆಲೆಗೆ ಬಂದು ಗರ್ಭಗುಡಿಯೊಳಗೆ ತೆರಳಿ ಶ್ರೀಹರಿಯ ಸೇವೆಯನ್ನು ಪೂರೈಸಿ [೧]ನಿರ್ಯಾಣ

---

೧. ಶ್ರೀಕನಕದಾಸರು ವೈಕುಂಠಯಾತ್ರೆ ಮಾಡಿದ್ದು ತಿರುಪತಿಯಲ್ಲಿ ಎಂದು ಕೆಲವರು, ಕಾಗಿನೆಲೆಯಲ್ಲಿ ಎಂದು ಕೆಲವರು, ಕದರಮಂಡಲಗಿ ಎಂದು ಮತ್ತೆ ಕೆಲವರು ಹೇಳುವರು. ಕದರಮಂಡಲಗಿಯಲ್ಲಿ

ಹೊಂದಿದರಂತೆ. ಅದ್ಭುತವೆನ್ನಿಸುವ ನಿರ್ಯಾಣ ಶ್ರೀಕನಕದಾಸರದಾಗಿತ್ತು. ಶ್ರೀಹರಿಯ ಅನುಗ್ರಹದಿಂದ ಜನಿಸಿದ ಅವರು ಶ್ರೀಹರಿಪದವನ್ನೇ ಸೇರಿದರು.

ಹೀಗೆ ಅನೇಕ ಪವಾಡಗಳು ಶ್ರೀಕನಕದಾಸರಿಗೆ ಸಂಬಂಧಿಸಿದಂತೆ ಪ್ರಚಾರದಲ್ಲಿವೆ. ಇಂತಹ ಪವಾಡಗಳನ್ನು ಅಸಂಭಾವಿತ ಎಂದು ತಳ್ಳಿ ಹಾಕುವ ಜನರೂ ಇರುವರು. ಆದಕ್ಕೆ ಕಾರಣವಿಲ್ಲ. ಇದರಲ್ಲಿ ಕೆಲವು ಪವಾಡಗಳು ಐತಿಹಾಸಿಕವಲ್ಲದಿದ್ದರೂ ಸಹ ಅವುಗಳಿಂದ ತಿಳಿದು ಬರುವ ಸಂದೇಶ ತುಂಬಾ ತಾತ್ತ್ವಿಕವಾಗಿರುತ್ತದೆ. ಆ ಅಂಶವನ್ನು ಗ್ರಹಿಸುವುದರಲ್ಲಿ ವಿವೇಕವಿದೆ. ಶ್ರೀಮನ್ಮಧ್ವಾಚಾರ್ಯರ ಮಹಾಭಾರತತಾತ್ಪರ್ಯನಿರ್ಣಯದಲ್ಲಿನ 'ಶಿಕ್ಷಾ ಗ್ರಾಹ್ಯಾ ನಾರ್ಥಾಃ ಕಥಂಚನ' (೨೨/೩೮೫) ಎಂಬುದಾಗಿ ಮಹಾಭಾರತದ ಉಪಾಖ್ಯಾನಗಳ ಬಗ್ಗೆ ಬಂದಿರುವ ಮಾತು ಇಂತಹ ಜ್ಞಾನಿಗಳ ಪವಾಡಗಳಿಗೂ ಅನ್ವಯಿಸುತ್ತದೆ.

## ಶ್ರೀಕನಕದಾಸರು ಮತ್ತು [1]ಮಧ್ವಸಿದ್ಧಾಂತ

ಶ್ರೀಮಧ್ವಾಚಾರ್ಯರ ಮತದ ಮೇಲೆ ಪೂರ್ಣ ಶ್ರದ್ಧೆಯಿರಿಸಿ ಶ್ರೀಕನಕದಾಸರು ಆ ಮತವನ್ನು ಅನುಸರಿಸಿದವರು ಎಂಬುದಕ್ಕೆ ಅನೇಕ ಆಧಾರಗಳಿವೆ. ಮೊದಲನೆಯದಾಗಿ ಅವರು ಶ್ರೀವ್ಯಾಸರಾಜರ ಶಿಷ್ಯರಾದವರು ಎಂಬುದು. ಶ್ರೀವ್ಯಾಸರಾಜರ ಶಿಷ್ಯರಾಗಿ ಅವರ ಬಳಿಯಲ್ಲಿ ಅನೇಕ ದಿವಸಗಳ ಕಾಲ ನೆಲೆಸಿದ್ದರು. ಆ ಕಾಲದಲ್ಲಿ ಅವರಿಗೆ ಶ್ರೀವಾದಿರಾಜರು ಹಾಗೂ ಶ್ರೀಪುರಂದರದಾಸರ ನಿಕಟಸಂಪರ್ಕ ಒದಗಿತು. ಹೀಗಾಗಿ ಮಾಧ್ವತತ್ತ್ವದ ಪರಿಜ್ಞಾನ ಹಾಗೂ ಅದರ ಅನುಷ್ಠಾನ ಅವರಿಗೆ ಸಾಧ್ಯವಾಯಿತು[2].

ಶ್ರೀಮಧ್ವಾಚಾರ್ಯರನ್ನು ಅವರು ಶ್ರೀವಾಯುದೇವರ ಅವತಾರ ಎಂಬುದಾಗಿ ತಮ್ಮ ಅನೇಕ ಕೃತಿಗಳಲ್ಲಿ ಸ್ಪಷ್ಟವಾಗಿ ಸ್ತುತಿಸಿದ್ದಾರೆ[3].

---

ಶ್ರೀಕನಕದಾಸರ ಕುಟಿಯೊಂದು ಇದೆ. ಆದರೆ, ಶ್ರೀಕನಕದಾಸರ ಸಮಾಧಿ ಎಂದು ಪ್ರಸಿದ್ಧವಿರುವುದು ಕಾಗಿನೆಲೆಯಲ್ಲಿಯೇ. ಆದ್ದರಿಂದ ಅವರ ನಿರ್ಯಾಣ ಸ್ಥಳ ಕಾಗಿನೆಲೆ ಎಂಬುದೇ ಸೂಕ್ತ.

೧. ಶ್ರೀಕನಕದಾಸರು ತಮ್ಮ ಜೀವನದ ಮೊದಲ ಹಂತದಲ್ಲಿ ರಾಮಾನುಜ ಪಂಥದ ಅನುಯಾಯಿಗಳಾಗಿದ್ದವರು; ಮುಂದೆ ಶ್ರೀವ್ಯಾಸರಾಜರ ಶಿಷ್ಯತ್ವವನ್ನು ಹೊಂದಿದ ಮೇಲೆ ಶ್ರೀಮಧ್ವಾಚಾರ್ಯರ ಸಿದ್ಧಾಂತವನ್ನು ಅನುಸರಿಸಿ ವೈಷ್ಣವದೀಕ್ಷೆಯನ್ನು ಪಡೆದರು. ಇದರ ಬಗ್ಗೆ ಹೆಚ್ಚಿನ ವಿವರಗಳಿಗೆ ನಮ್ಮ ಪ್ರಕಾಶನದ 'ಸಂತ-ಕವಿ-ಭಕ್ತ ಕನಕದಾಸರು' ಎಂಬ ಕೃತಿಯನ್ನು ನೋಡಬಹುದು.

೨. '... ಅವರು (ಶ್ರೀಕನಕದಾಸರು) ಐತಿಹಾಸಿಕವಾಗಿ ದಾಸಸಂಪ್ರದಾಯಕ್ಕೆ ಸೇರುತ್ತಾರೆ ಹಾಗೂ ಮಾಧ್ವರು ಇದನ್ನು ತಮ್ಮ ಸಂಪ್ರದಾಯವಾಗಿ ಉಳಿಸಿಕೊಂಡು ಬಂದಿದ್ದಾರೆ; ಜೊತೆಗೆ ಅವರ ಸ್ಮೃತಿ ಹಾಗೂ ಕೃತಿಗಳನ್ನು ಕೂಡಾ' – ಕನಕನ ಸುತ್ತಮುತ್ತ; ಸಂಕಥನಗಳ ಜಿಜ್ಞಾಸೆ (ಪ್ರ: ಮಂಗಳೂರು ವಿಶ್ವವಿದ್ಯಾನಿಲಯ; ಪು. ೩೩)

೩. 'ಕದರಮಂಡಲಗಿಯ ಕರುಣಿ ಹನುಮರಾಯ' ಎಂಬ ಪದದಲ್ಲಿ 'ಮುಖ್ಯಪ್ರಾಣನಾಥ' ಎಂದು ಕರೆದಿರುವುದು ಗಮನಾರ್ಹ. ಮುಖ್ಯಪ್ರಾಣ ಎಂಬ ಪದ ಮಾಧ್ವರು ವಾಯುದೇವರಿಗೆ ಅನ್ವಯಿಸಿ ಹೇಳುವ ಪದವಾಗಿದೆ.

ಶ್ರೀಮಧ್ವಾಚಾರ್ಯರ ಜೀವೋತ್ತಮರಾದ ವಾಯುದೇವರ ತೃತೀಯಾವತಾರ ಎಂಬುದು ಮಧ್ವಮತದ ಮತ್ತೊಂದು ಮುಖ್ಯ ಪ್ರಮೇಯ. ಶ್ರೀಕನಕದಾಸರ ಅನೇಕ ಕೃತಿಗಳಲ್ಲಿ ಈ ವಿಷಯ ಸ್ಪಷ್ಟವಾಗಿಯೇ ಬಂದಿದೆ[೨]:

[೨] ಎಷ್ಟು ಪೊಗಳಲಿ ನಾನು ಎನ್ನೊಡೆಯ ನಿಮ್ಮ ವಿ-
ಶಿಷ್ಟ ಮಹಿಮೆಗಳನು ಸುಜನರಿಗೆ ಬಂದ
ಕಷ್ಟವಳಿಯಲ್ಕೆ ನೀ ಸುರಕಾಮಧೇನು ॥ ಪ ॥

ವಿಷ್ಣುವೆ ಪರಮದೈವವೆಂದು ದುಷ್ಟ ರಾಕ್ಷಸರನ್ನು ಕೊಂದೆ
ಸೃಷ್ಟಿಸಿ ಪಾಲಿಪ ಶ್ರೀರಾಮರಮೇಶ
ಇಷ್ಟ ಭಕ್ತರೊಳು ಶ್ರೇಷ್ಠನೆಂದೆನಿಸಿದೆ ॥ ಅ.ಪ.॥

ತಾಯಿಯಪ್ಪಣೆಗೊಂಡು ಸೇವೆಗೆ ರಘುಪತಿ
ರಾಯನಲ್ಲಿ ನಿಂದು ತನ್ನಾನಿಮ್ಮಾತ್ಮ ಸುಖ
ಬಯಸೆನೆಂದು ಶ್ರೀ ಹರಿಗೆ ನುಡಿಬಂದು
ಕಾಯಬೇಕು ಸುಗ್ರೀವನನೆನುತಲಿ
ತೋಯಜಾಕ್ಷಗೆನೆ ಪೇಳಿ ವಾಲಿಯನು
ಪಾಯದಿಂದಲಿ ಕೊಲ್ಲಿಸಿ ರವಿಜಗೆ ಸ-
ಹಾಯ ಮಾಡಿದೆ ವಾಯುತನಯ ॥ ೧ ॥

ಕಡಲ ಬೇಗನೆ ಹಾರಿ ಶ್ರೀರಾಮರ
ಮಡದಿಗುಂಗುರವ ಕೊಟ್ಟು ಅಲ್ಲಿದ್ದ ದನುಜರ
ಹೊಡೆದು ಬಲು ಹಂತಕಾರಿ ಮಾಡಿದೆ ಶೌರಿ
ಒಡೆಯಗೆ ವಾರ್ತೆಯ ಪೇಳಿ ಶೀಘ್ರದಿ
ನಡೆಸಿ ಸೈನ್ಯವ ದಶಮುಖನ ಶಿರವ

---

೧. ಕನಕರು ರಚಿಸಿದ 'ಹರಿಭಕ್ತಿಸಾರ', 'ರಾಮಧಾನ್ಯಚರಿತೆ', 'ನಳಚರಿತೆ', 'ಮೋಹನತರಂಗಿಣಿ' ಮತ್ತು 'ನರಸಿಂಹಸ್ತವ' ಕಾವ್ಯಗಳ ಮೂಲಕ ಮಾಧ್ವಮತ ತತ್ತ್ವವನ್ನು ಪ್ರಚುರಪಡಿಸಿದರು.

– ಬಯಲು ಆಲಯದೊಳಗೊ (ಪು. ೧೯)

ತಿಮ್ಮಪ್ಪನಂತಹ ಶೂದ್ರ ಹಿನ್ನೆಲೆಯಿಂದ ಬಂದ ವ್ಯಕ್ತಿಯೊಬ್ಬ ಮಧ್ವಮತ ಸಿದ್ಧಾಂತಕ್ಕೆ ಬ್ರಾಹ್ಮಣ ಪರಿಸರಕ್ಕೆ ಸಲ್ಲುವಂತಾದದ್ದು ಬ್ರಾಹ್ಮಣ ಪಂಡಿತ ಮಂಡಳಿಯ ನಡುವೆ ಕುಳಿತು ಕಲಿಯುವಂತಾದದ್ದು ಅವರ ಜತೆಯಾಗಿಯೇ, ಅವರು ಬರೆದ ಕೀರ್ತನೆ ಸಾಹಿತ್ಯವನ್ನು ಬರೆದದ್ದು ಅವರಿಗಿಂತ ಮುಂದೆ ಹೋಗಿ ನಾಲ್ಕು ಕಾವ್ಯಗಳನ್ನು ರಚಿಸುವಂತಾದದ್ದು ಮಹತ್ವದ ಮಾತಾಗಿದೆ.

– ಆತ್ಮ ಯಾವ ಕುಲ(ಪ್ರ.ಸಂಪಾದಕರು: ಕೆ. ರೇವಣಪ್ಪ; ಸಂಪಾದಕರು: ಡಾ. ಜಗನ್ನಾಥ ಆರ್ ಗೇನಣ್ಣವರ; ಪ್ರ: ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರ; ತೃತೀಯಾವೃತ್ತಿ ೨೦೧೫; ಪು. ೩೧)

೨. ಪು. ೬೪; ಶ್ರೀಕನಕಸಾಹಿತ್ಯದರ್ಶನ-೪; ಪ್ರ: ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕರ್ನಾಟಕ ಸರ್ಕಾರ.

ನೊಡೆಸಿದಾಕ್ಷಣ ಲೋಕಮಾತೆಯ
ನೊಡಗೂಡಿಸಿದೆ ಶ್ರೀವಾಸುದೇವರಿಗೆ ॥ ೨ ॥

**ಮೂರು [೧]ರೂಪವ ತಾಳಿ ಮಹಾಯೋಗ್ಯರುಗಳಿಗೆ**
**ಸಾರ ತತ್ತ್ವವ ಪೇಳ್ದೆ ಶರಣು ಹೊಕ್ಕ ಮನುಜರ**
ಘೋರ ದುರಿತವ ಸೀಳ್ದೆ ಧೀರ ತನು
ಧುರದುಂಡಿ ಹನುಮಯ್ಯ ಸೇವಿಸಿದ ನಿ
ಮ್ಮಂಘ್ರಿ ಕಮಲವ ದೂರ ಮಾಡದೆ ಎನ್ನ ಸಲಹಯ್ಯ
ಕರುಣಾವಾರಿಧಿಯೆ ನೀವೆನ್ನಗಲೆ
ಕಾಗಿನೆಲೆಯಾದಿಕೇಶವ ಮುತ್ತತ್ತಿ ದೊರೆಯೆ ॥ ೩ ॥

***

[೨]ಶರಣು ಶರಣು ಶರಣು ದಶರಥ ರಾಮದೂತಗೆ ॥ ಪ ॥
ಶರಣು ಕುರುಕುಲಲಾಧೀಶಗೆ
ಶರಣು ವೈಷ್ಣವ ಮತ ವಿಲಾಸಗೆ
ಶರಣು ಮುಖ್ಯಪ್ರಾಣಗೆ ॥ ಅ.ಪ ॥
ವಾರಿಧಿಯನು ವೇಗದಿ ದಾಟಿ ವನವ ಕಿತ್ತಿದಾತಗೆ
ಮೇರೆಯಿಲ್ಲದೆ ಅಸುರರ ಸಂಹರಿಸಿದ ರಣಶೂರಗೆ
ವಾರಿಜಾಕ್ಷಿ ಸೀತಾದೇವಿಗೆ ವರದ ಮುದ್ರಿಕೆಯನಿತ್ತಗೆ
ಧೀರತನದಲಿ ಅಕ್ಷಕುಮಾರನ ಪ್ರಾಣವನು ಕೊಂಡಗೆ ॥ ೧ ॥
ರಾಜಸೂಯವ ರಚಿಸಬೇಕೆಂದು ರಾಜರ ಸೀಳಿದಾತಗೆ
ರಾಜಮುಖಿಯಳ ರಕ್ಷಿಸಿ ಮೃಗರಾಜಗೆ ಒಲಿದಾತಗೆ
ತ್ರಿಜಗವಂದಿತ ದೇವಗೆ ಸಜ್ಜನರ ಪ್ರಿಯ ಎನಿಪಗೆ
ರಾಜ ಧರ್ಮಗೆ ಅನುಜನಾದಗೆ ರಾಜಪೂಜಿತ ರಾಜಗೆ ॥ ೨ ॥
ಧಾರಿಣಿಯೊಳು ದುರ್ವಾದಿ ದೈತ್ಯರ ಗಂಟಲಗಾಣವಾದಗೆ
ದುರ್ವಾದಿಗಳ ಪತಿಯಾದಗೆ
**ಮೂರೇಳು ಮತವನೆಲ್ಲ ಮುರಿದ ಧೀರ ಮಧ್ವರಾಯಗೆ**
ಸಾರ ತತ್ತ್ವಗಳನೆಲ್ಲ ಶೋಧಿಸಿ ಸೂರೆ ಮಾಡಿದಾತಗೆ
ಊರ್ವಿಯೊಳು ವರ ಪರದೇವತಾದಿಕೇಶವ ದೊರೆ ದಾಸಗೆ ॥ ೩ ॥

'ವಾಯುದೇವರನ್ನು ದ್ವೇಷಿಸುವವರಿಗೆ ದುರ್ಗತಿ ಖಚಿತ' ಎಂಬ ಮಧ್ವಸಿದ್ಧಾಂತದ ಪ್ರಮೇಯ ಶ್ರೀಕನಕದಾಸರ ಕೃತಿಯಲ್ಲಿ ತುಂಬಾ ಸ್ಫುಟವಾಗಿಯೇ ನಿರೂಪಿತ-

---

೧. ಶ್ರೀಕನಕದಾಸರ ಕೇಶವನಾಮವು ಶ್ರೀಮಧ್ವಾಚಾರ್ಯರ ದ್ವಾದಶಸ್ತೋತ್ರದ 'ಕೇಶವ ಕೇಶವ ಶಾಸಕ ವಂದೇ' ಎಂಬ ೬ನೇ ಅಧ್ಯಾಯದ ವಿವರಣೆಯೇ ಆಗಿದೆ.

೨. ಪು. ೨೭, ಕನಕಸಾಹಿತ್ಯದರ್ಶನ–೪; ಪ್ರ: ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕರ್ನಾಟಕ ಸರ್ಕಾರ.

ವಾಗಿರುವುದು ಅವರ ಮಾಧ್ವದೀಕ್ಷೆಗೆ ಮತ್ತೊಂದು ಪ್ರಬಲ ಪುರಾವೆ[೨]:

[೨]ಅಂಧಂತಮಸು ಇನ್ನಾರಿಗೆ ಗೋ-
ವಿಂದನ ನಿಂದಿಸುವರಿಗೆ ॥ ಪ ॥
ಸಂದೇಹವಿಲ್ಲ ಸಾರಿಸಾರಿಗೆ ವಾಯು-
ನಂದನನ ವಂದಿಸದವರಿಗೆ ॥ ಅ.ಪ ॥
ಮಾತುಮಾತಿಗೆ ಹರಿಯ ನಿಂದಿಸಿ ಸ-
ರ್ವೋತ್ತಮ ಶಿವನೆಂದು ವಾದಿಸಿ
ಧಾತುಗ್ರಂಥಗಳೆಲ್ಲ ತೋರಿಸಿ ವೇ-
ದಾಂತ ಪ್ರಮಾಣಗಳ ಹಾರಿಸಿ
ಸೋತು ಸಂಕಟಪಟ್ಟು ಘಾತಕ ಒಡಲೊಳಗಿಟ್ಟು
ನೀತಿ ಹೇಳುವ ಕೆಟ್ಟ ಜಾತಿಗಳಿಗಲ್ಲದೆ ॥ ೧ ॥
ಮೂಲಕವತಾರಕ್ಕೆ ಭೇದವು - ಮುಖ್ಯ-
ಶೀಲ ಪಂಡಿತರೊಳಗೆ ಅತಿವಾದವು
ಲೀಲಾ ಸಾದೃಶ್ಯವ ತೋರುತ - ಲಿಂಗ-
ಭಂಗವಿಲ್ಲದ ದೇಹ ಹಾರುತ
ಮೂಲ ಗುರುವು ಕುಂತೀಬಾಲನೆನ್ನದೆ ವೃಥಾ
ಶೀಲಗೆಟ್ಟಂಥ ಖೂಳರಿಗಲ್ಲದೆ ಮತ್ತೆ ॥ ೨ ॥
ವ್ಯಾಸರ ಮಾತುಗಳಾಡುತ ವಿ-
ಶ್ವಾಸ ಘಾತಕತನ ಮಾಡುತ
ದೋಷವೆಂದರೆ ನುಡಿ ಕೇಳದೆ ಸಂ-
ತೋಷವೆಂದರೆ ನೋಡಿ ಬಾಳದೆ

---

೧. ಉತ್ತಪ್ತಾತ್ಯುತ್ಕಟತ್ವಿಟ್ -ಪ್ರಕಟಕಟಕಟ-ಧ್ವಾನಸಂಘಟ್ಟನೋದ್ಯ-
ದ್ವಿದ್ಯುದ್ವ್ಯೂಢಸ್ಫುಲಿಂಗ-ಪ್ರಕರವಿಕಿರಣೋ-ತ್ಕ್ವಾಥಿತೇ ಬಾಧಿತಾಂಗಾನ್ ।
ಉದ್ಗಾಢಂ ಪಾತ್ಯಮಾನಾ -ತಮಸಿ ತತ ಇತಃ- ಕಿಂಕರೈಃ ಪಂಕಿಲೇ ತೇ
ಪಂಕ್ತಿರ್ಗ್ರಾವ್ಣಾಂ ಗರಿಮ್ಣಾ - ಗ್ಲಪಯತಿ ಹಿ ಭವ-ದ್ವೇಷಿಣೋ ವಿದ್ವದಾದ್ಯ ॥
ಕ್ಷುತ್ಕ್ಷಾಮಾನ್ ರೂಕ್ಷರಕ್ಷೋ-ರದಖರನಖರ-ಕ್ಷುಣ್ಣವಿಕ್ಷೋಭಿತಾಕ್ಷಾನ್
ಆಮಗ್ನಾನಂಧಕೂಪೇ -ಕ್ಷುರಮುಖಮುಖರೈಃ -ಪಕ್ಷಿಭಿರ್ವಿಕ್ಷತಾಂಗಾನ್ ।
ಪೂಯಾಸೃಙ್ಮೂತ್ರವಿಷ್ಠಾ-ಕ್ರಿಮಿಕುಲಕಲಿಲೇ -ತತ್ಕ್ಷಣಕ್ಷಿಪ್ತಶಕ್ತ್ಯಾ-
ದ್ಯಸ್ತ್ರವ್ರಾತಾರ್ದಿತಾಂಸ್ತ್ವ-ದ್ದ್ವಿಷ ಉಪಜಿಹತೇ- ವಜ್ರಕಲ್ಪಾ ಜಲೂಕಾಃ ॥
– ಶ್ರೀಹರಿವಾಯುಸ್ತುತಿ (೧೧,೧೩)

೨. ಪು. ೧೪೯; ಕನಕಸಾಹಿತ್ಯದರ್ಶನ-೪; ಪ್ರ: ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕರ್ನಾಟಕ ಸರ್ಕಾರ.

ಶೇಷಶಯನ ನಾ ಆದಿಕೇಶವರಾಯನ
**ದಾಸರೊಡೆಯ ಮಧ್ವದ್ವೇಷಿಗಳಿಗಲ್ಲದೆ** ॥ ೩ ॥

ಮೇಲುಕೋಟೆ, ಶ್ರೀರಂಗಪಟ್ಟಣ ಮೊದಲಾದ ಅನೇಕ ಸ್ಥಳಗಳಿಗೆ ಮಾಧ್ವರು ಹಾಗೂ ಮಾಧ್ವೇತರರು ಆದ ಸಂತರು ಜ್ಞಾನಿಗಳು ಸಂದರ್ಶನ ಮಾಡಿದ ನಿದರ್ಶನಗಳು ವಿಪುಲವಾಗಿ ದೊರೆಯುವವು. ಆದರೆ, ಶ್ರೀವೈಷ್ಣವ ಪಂಥದ ಪರಮದೀಕ್ಷೆಯ ಅಂತಹ ಯಾವ ಪ್ರಧಾನ ಸಂತರೂ ಸಹ ಉಡುಪಿಯ ಶ್ರೀಕೃಷ್ಣನನ್ನು ಸಂದರ್ಶಿಸಿದ ದಾಖಲೆ ಕಂಡುಬರುವುದಿಲ್ಲ. ಆದರೆ, ಶ್ರೀಕನಕದಾಸರು ಉಡುಪಿಯ ಶ್ರೀಕೃಷ್ಣನ ವಿಶೇಷಾನುಗ್ರಹಕ್ಕೆ ಪಾತ್ರವಾಗಿದ್ದ ವಿವರ ಅವರ ಸಾಧನೆಯ ಶಿಖರ ಎಂದೇ ಪ್ರಖ್ಯಾತ. ಮಾಧ್ವರಲ್ಲಿ ಉಡುಪಿಯಾತ್ರೆ, ಶ್ರೀಕೃಷ್ಣನ ಸಂದರ್ಶನ ಜೀವನದ ಪರಮಸಿದ್ಧಿಗಳಲ್ಲಿ ಒಂದು ಎಂದು ಪರಿಗಣಿತವಾಗಿದೆ. ಅದನ್ನು ಮಹಾತಪಸ್ಸಿನಂತೆ ಸಾಧಿಸಿದ ಶ್ರೀಕನಕದಾಸರು ಪೂರ್ಣಮಾಧ್ವದಿಕ್ಷೆಯವರು ಎಂಬುದಕ್ಕೆ ಮತ್ತೊಂದು ಪ್ರಬಲ ಪುರಾವೆ.

ರಾಮಾನುಜಮತದ ದಶಾವತಾರದ ಪರಿಕಲ್ಪನೆಯಲ್ಲಿ ಬುದ್ಧ ಪರಿಗಣಿತನಾಗಿಲ್ಲ; ಬದಲಾಗಿ ಬಲರಾಮ ಪರಿಗಣಿತನಾಗಿರುವನು. ಎಂದರೆ, ಅವರ ನಿರೂಪಣೆಯಂತೆ ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ದಾಶರಥಿರಾಮ, ಬಲರಾಮ, ಕೃಷ್ಣ ಹಾಗೂ ಕಲ್ಕಿ – ಇವು ಮಹಾವಿಷ್ಣುವಿನ ದಶಾವತಾರಗಳು. ಆದರೆ, ಮಧ್ವಸಿದ್ಧಾಂತದಲ್ಲಿ ಬಲರಾಮ ದಶಾವತಾರದಲ್ಲಿ ಪರಿಗಣಿತನಾಗಿಲ್ಲ. ಅಲ್ಲಿ ಒಭಂತ್ತನೆಯ ಅವತಾರವಾಗಿ ಪರಿಗಣಿತನಾಗಿರುವುದು 'ಬುದ್ಧ'. ಶ್ರೀಮಧ್ವಾಚಾರ್ಯರ ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಈ ವಿಷಯ ವಿವರವಾಗಿ ನಿರೂಪಿತವಾಗಿದೆ. ಅವರ ದ್ವಾದಶಸ್ತೋತ್ರ ಕೃತಿಯಲ್ಲಿ ೭ನೆಯ ಹಾಗೂ ೯ನೆಯ ಸ್ತೋತ್ರಗಳು ದಶಾವತಾರ ಸ್ತೋತ್ರಗಳಾಗಿದ್ದು ಅವುಗಳಲ್ಲಿ ಬುದ್ಧನ ಸ್ತೋತ್ರವೇ ಬಂದಿದೆ. ದಶಾವತಾರವನ್ನು ಶ್ರೀಕನಕದಾಸರ ಕೃತಿಗಳು ಅಪಾರ ಸಂಖ್ಯೆಯಲ್ಲಿದ್ದು ಅವುಗಳಲ್ಲೆಲ್ಲ ದಶಾವತಾರದಲ್ಲಿ ಪರಿಗಣಿತನಾಗಿರುವುದು ಬುದ್ಧನ[೧] ಹೊರತು

---

೧. **ಉಟ್ಟದ್ದು ಬಿಟ್ಟುತಾ ನಿಂತಿಹನೆ** – ರಂಗ (ರಂಗನೆಂಥವನೆಂಥವನೆಲೆ)
**ಸಾಧಿಸಿ ತ್ರಿಪುರರ ಗೆಲಿದವನೆ** – (ಗೋವಿಂದ ಹರಿ ಗೋವಿಂದ)
**ಬತ್ತಲೆ ನಿಂತಹವನೆಂದೆನೆ** – ತೇಜಯನೇರಿ (ನಿನ್ನ ನಾನೇನಂದೆನೊ)
ಭಂಡನಂದದಿ ಪುಂಡರೀಕಾಕ್ಷನು
ಕಂಡಕಂಡಲ್ಲಿಗೆ ತಿರುಗ್ಯಾನ್ಯಾ
**ಕಂಡ ಕಂಡಲ್ಲಿಗೆ ತಿರುಗಿ ತ್ರಿಪುರರ**
**ಹೆಂಡಿರನೆಲ್ಲ ಕೆಡಿಸ್ಯಾನ್ಯಾ** ॥ (ದ್ಯಾವಿ ನಮ್ಮ ದ್ಯಾವರು ಬಂದಾರು)
ಪತಿವ್ರತೆಯರ ವ್ರತವಳಿಯಬೇಕೆನುತಲಿ
ಅತಿಶಯದಿ ತ್ರಿಪುರದ ಸ್ತ್ರೀಯರ

ಬಲರಾಮನಲ್ಲ, ರಾಮಾನುಜರನ್ನು ಪ್ರಸ್ತಾಪಿಸುವ ಅವರ ಮೋಹನತರಂಗಿಣಿಯಲ್ಲಿ

---

ನುತ ಬೌದ್ಧ ರೂಪದಿ ಬಹು ಭಂಗಪಡಿಸಿದ
ರತಿಪತಿಪಿತನೆಂಬ ಮಾಸಾಳಮ್ಮ॥ (ತಾಳಲ್ಲಲ್ಲಲ್ಲೊ)
ಕಥೆಯನು ನಿರ್ಮಿಸಿ ಪತಿವ್ರತೆಯರ ಘನ
ವ್ರತಗಳ ಕೆಡಿಸಿದ ಗೋವಿಂದ
ಜತೆಯಗಲದ ಪುರತ್ರಿತಯ ಗೆಲಿದು ದೇ-
ವತೆಗಳ ಸಲಹಿದೆ ಗೋವಿಂದ॥ (ಪರಮ ಪುರುಷ ಹರಿ ಗೋವಿಂದ)
ರಮಣಿಯರ್ಗೊಲಿದು ಬತ್ತಲೆ ನಿಂತೆ ಗೋವಿಂದ। (ಗೋವಿಂದ ಸಲಹೆನ್ನನು)
ಸಾಧಿಸಿ ತ್ರಿಪುರರ ಗೆಲಿದವನೆ - ಪ್ರತಿ- ॥ (ರಾಮ ಗೋವಿಂದ ಹರೇ)
ಮೂಗ್ರಾಮ ಮುರಿದು .............. ॥ (ಈತನೇನೆ ನಿನ್ನ ಮಗನು)
ಉಟ್ಟಿದ್ದ ವಸ್ತ್ರವ ಬಿಸುಡುತಿದೆ - ತನ್ನ॥ (ಮಗುವಿನ ಮರುಳಿದು)
ಇತ್ತ ಬಾರೆಂದೆನಲು ಬತ್ತಲೆ ನಿಲ್ಲುತಿದೆಕೊ (ಮಗುವ ತಡೆಯಬಾರದೆ ಮಾನಿನಿಯರು)
ಮೂರು ಪುರದಬಲೆಯರ ವ್ರತಗಳನೆ ಕೆಡಿಸಲಿಕೆ
ದೇರೊಂದು ಅಶ್ವತ್ಥ ವೃಕ್ಷವಾಗಿ
ನಾರಿಯರ ವ್ರತಭಂಗಗೆಯ್ಯಲಾ ದೆಸೆಯಿಂದ
ಊರುತ್ರಯವದು ತಿರುಗುವುದು ನಿಲ್ಲಲಾಗ
ನೀರ ಮಸ್ತಕದಲಿ ಧರಿಸಿದನ ಕರವಿಲ್ಲ
ನಾರಿಯೊಳು ನಾರಾಯಣಾಸ್ತ್ರವಾಗಿ
ಘೋರತನವೆತ್ತ ತ್ರಿಪುರದ ಕೀಲ ಪರಿದ ಮದ-
ನಾರಿ ಸಖ ಬುದ್ಧನೆ ಶರಣೆಂಬೆನು॥ (ನೋಡಯ್ಯ ನಿನ್ನ ದಾಸರ)
ನಾರಿಯರ ಚೆಲ್ವಿಕೆಯ ನೋಡಿ ತೆರೆದೆಯೊ ಬಾಯ॥ (ಏನು ಕಾರಣ ಬಾಯಿ ತೆರೆದಿ)
ದಿಗಂಬರ ವೇಷವ ತಾಳ್ದ॥ (೧)
ಮೈಮೇಲ್ಗೇಣರವೆ ಇಲ್ಲ॥ (೨)
ಬತ್ತಲೆ ನಿಂದು ........... ॥(೩) (ನಾರಾಯಣನೆ ಈತ-ನಾರಿ ಒಳ್ಳೆಯ)
ಕೊಂದು ತ್ರಿಪುರಾಸುರರ ಅವರ ಸತಿಯರ ಕೆಡಿಸಿ (ಯಾದವಗಿರಿವಾಸನಹುದೋ)
ಲೀಲೆಗೋಸುಗ ಬಂದು ನಿರ್ವಾಣದಲಿ ನಿಂದು।
ಆ ಲಜ್ಜೆಗಾಗಿ ತಲೆ ಬಾಗಿ ಮಲಗಿದೆಯೊ॥ (ಯಾಕೆ ನೀನಿಲ್ಲಿ ಪವಡಿಸಿದೆ ಹರಿಯೆ)
ಪುರತ್ರಯ ವಧುಗಳ ಗೆಲಿದಗೆ ಮಂಗಳ॥ (ಅಂಬುಜದಳಾಕ್ಷಗೆ ಮಂಗಳ)
ಪುರತ್ರಯ ವಧು ವ್ರತವಳಿದಗೆ ಮಂಗಳಂ॥ (ಮಂಗಳಂ ಸರ್ವಜೀವ ರಕ್ಷಕಗೆ)

***

ಪರಮಪತಿವ್ರತೆಯರ ಮಾನಭಂಜನ
ತುರಗವಾಹನ ಪವಿತ್ರಾಂಗ
ಸುರಪತಿ ಮುಖ್ಯದೇವೋತ್ತುಂಗ ಜಯತು ಶ್ರೀ-
ವರ ತ್ರೈಜಗದಂತರಂಗ॥ - ಮೋಹನ ತರಂಗಿಣಿ (೫/೧೦)
ಓಪ್ಪಲದೊಳಗಿರ್ದ ಪತಿವ್ರತೆಯರ ಗೆದ್ದು
ಮುಪ್ಪುರಗೊಂಡ ಮಾಧವನ

ಬಂದಿರುವ ದಶಾವತಾರ ನಿರೂಪಣೆಯಲ್ಲೂ ಬುದ್ಧನ ಉಲ್ಲೇಖವೇ ಇರುವುದು ಸಹ ಗಮನಾರ್ಹ. ಇದು ಶ್ರೀಕನಕದಾಸರ ಮಾಧ್ವದೀಕ್ಷೆಯನ್ನು ಸ್ಫುಟಪಡಿಸುವ ಮತ್ತೊಂದು ಅಂಶ.

ಶ್ರೀಹರಿಯ ನಾಮಗಳಲ್ಲಿ 'ಹರಿ' ಎಂಬ ನಾಮಕ್ಕೆ ಶಬ್ದಕ್ಕೆ ಮಧ್ವಮತದಲ್ಲಿ ವಿಶೇಷವಾದ ಮಹತ್ವವಿದೆ. 'ಶ್ರೀಗುರುಭ್ಯೋನಮಃ ಹರಿ ಓಂ' ಎಂಬ ಮಾಧ್ವರ ಸಕಲ ಕಾರ್ಯಾರಂಭದ ಮಾತು ಇದಕ್ಕೆ ಉತ್ತಮ ನಿದರ್ಶನ. ಹರಿ ಎಂಬುದು ಬಿಂಬರೂಪ ದರ್ಶನಕ್ಕಿಂತ ಮುಂಚಿತವಾಗಿ ಪ್ರತಿಯೊಬ್ಬ ಸಾಧಕನಿಗೆ ಉಪಾಸನೆಗೆ ವಿಹಿತವಾದ ಶ್ರೀಹರಿಯ ರೂಪ. ಹರಿಕಥಾಮೃತಸಾರ ಎಂಬ ಶ್ರೀಜಗನ್ನಾಥದಾಸರ ಕೃತಿಯ ಹೆಸರು ಇದಕ್ಕೆ ಸೂಚಕ. ಶ್ರೀಕನಕದಾಸರ ಹೆಚ್ಚಿನ ಕೃತಿಗಳಲ್ಲಿ ಹರಿ ಎಂಬ ನಾಮದ ಉಚ್ಚಾರಣೆ ಬಹಳವಾಗಿ ಕಂಡುಬರುವುದು (ನೊಂದೆ ಹರಿಯೆನ್ನದೆ ಇತ್ಯಾದಿ). ಹರಿಭಕ್ತಿಸಾರ ಎಂಬ ಕೃತಿಯಂತೂ ಪ್ರಸಿದ್ಧವೇ ಇದೆ.

ದೇವತಾತಾರತಮ್ಯವು ಮಧ್ವಸಿದ್ಧಾಂತದ ಪ್ರಧಾನಪ್ರಮೇಯಗಳಲ್ಲೊಂದು[೨]; ಆನಂದ ಸಾಮ್ಯವನ್ನು ಹೇಳುವ ಶ್ರೀರಾಮಾನುಜ ಸಿದ್ಧಾಂತ ಈ ತತ್ತ್ವವನ್ನು ಅಂಗೀಕರಿಸಿಲ್ಲ. ಆದರೆ, ಶ್ರೀಕನಕದಾಸರ ಕೃತಿಗಳಲ್ಲಿ ತಾರತಮ್ಯ ತತ್ತ್ವವು ಸ್ಫುಟವಾಗಿ ನಿರೂಪಿತವಾಗಿರುವುದು, ಅವರು ಅನುಸರಿಸಿದ್ದು ಮಧ್ವಸಿದ್ಧಾಂತವನ್ನೇ ಹೊರತು ರಾಮಾನುಜಸಿದ್ಧಾಂತವನ್ನಲ್ಲ ಎಂಬುದಕ್ಕೆ ಮತ್ತೊಂದು ಪುರಾವೆ[೩].

---

ಅಪ್ಪಣೆವಡೆದು ಬಿತ್ತರಿಸುವ ಕೃತಿ ಜೇನು
ತುಪ್ಪದ ತೋರಿಯಾಗಲೆರಿಯ ॥ – ಮೋಹನತರಂಗಿಣಿ (೧೮/೧)

೧. ಶ್ರೀಕನಕದಾಸರು ರಾಮಾನು ಪಂಥದ ಅನುಯಾಯಿಗಳಾಗಿದ್ದಾಗಲೂ, ಅವರ ಮತವನ್ನು ಪೂರ್ಣವಾಗಿ ಅನುಸರಿಸುತ್ತಿರಲಿಲ್ಲ ಎಂಬುದಕ್ಕೆ, ಅವರ ಮೋಹನ ತರಂಗಿಣಿ ಕೃತಿಯಲ್ಲಿ ಕಂಡುಬರುವ ಶಿವ, ಪಾರ್ವತಿ, ಗಣೇಶ ಮೊದಲಾದವರ ಸ್ತೋತ್ರಗಳು ಸಾಕ್ಷಿಯಾಗಿವೆ (ಮೋಹನತರಂಗಿಣಿ ಪದ್ಯಗಳು–೧,೮,೧೦,೧೨). ರಾಮಾನುಜ ಪಂಥದಲ್ಲಿ ಶಿವ ಹಾಗೂ ಅವ ಪತ್ನಿ ಪುತ್ರರಾದ ಪಾರ್ವತಿ, ಗಣೇಶ, ಸ್ಕಂದರ ಬಗ್ಗೆ ಪೂಜ್ಯ ಭಾವವಿಲ್ಲ. ಆದ್ದರಿಂದ ಶ್ರೀಕನಕದಾಸರು ಅವರ ಸಿದ್ಧಾಂತವನ್ನು ಪೂರ್ಣವಾಗಿ ಆ ಕಾಲದಲ್ಲೂ ಒಪ್ಪಿರಲಿಲ್ಲ ಎಂಬುದು ಸ್ಫುಟಪಡುವುದು:

೨. ವಂದೇ ವಿಷ್ಣುಂ ನಮಾಮಿ ಶ್ರಿಯಮಥ ಚ ಭುವಂ ಬ್ರಹ್ಮವಾಯೂ ಚ ವಂದೇ
ಗಾಯತ್ರೀಂ ಭಾರತೀಂ ತಾಮಪಿ ಗರುಡಮನಂತಂ ಭಜೇ ರುದ್ರ ದೇವಮ್ ।
ದೇವೀರ್ವಂದೇ ಸುಪರ್ಣೀಮಹಿಪತಿದಯಿತಾಂ ವಾರುಣೀಮಪ್ಯುಮಾಂ ತಾ–
ಮಿಂದ್ರಾದೀನ್ ಕಾಮಮುಖ್ಯಾನಪಿ ಸಕಲಸುರಾಂಸ್ತದ್ಗುರೂನ್ ಮದ್ಗುರೂಂ ಶ್ಚ॥
– ತಾರತಮ್ಯಸ್ತೋತ್ರ

೩. ಬಲ್ಲವರೆ ಬಲ್ಲರು ಎಲ್ಲವರರಿಯರು ।
ಫುಲ್ಲಲೋಚನ ಪರಬ್ರಹ್ಮನೆಂಬುದನು ॥ ಪ ॥
ಅಜನು ಅಧಿಕ ಬಲ್ಲ ಅನಲಸ್ನೇಹಿತ ಬಲ್ಲ ।
ಗಜಚರ್ಮಾಂಬರ ಬಲ್ಲ ಗರುಡ ಬಲ್ಲ ।

ಕಾಗಿನೆಲೆ ಶ್ರೀಕನಕದಾಸರ ಪ್ರಧಾನವಾದ ಕಾರ್ಯಕ್ಷೇತ್ರ. ಅಲ್ಲಿ ಆದಿಕೇಶವ ಅವರ ಆರಾಧ್ಯದೈವ ಹಾಗೂ ಅವರ ಕೃತಿಗಳ ಅಂಕಿತನಾಮ. ಅಂತಹ ಆದಿಕೇಶವನನ್ನು ಅವರ ಕಾಗಿನಲೆಯಲ್ಲಿ ಪ್ರತಿಷ್ಠಾಪನೆ ಮಾಡಿಸಿದ್ದು ಅವರ ಗುರುವರ್ಯರಾದ ಮಾಧ್ವಯತಿ ಶ್ರೀವ್ಯಾಸರಾಜರಿಂದಲೇ ಎಂಬುದು ಸುಪ್ರಸಿದ್ಧ. ಅದರಂತೆ ಕಾಗಿನೆಲೆಯ ದೇವಸ್ಥಾನದ ಆವರಣದಲ್ಲಿಯೇ ಮಾಧ್ವಪೀಠವೊಂದಾದ ಉಡುಪಿಯ ಭಂಡಾರಕೆರೆ ಮಠದ ಶ್ರೀರಾಜವಂದ್ಯತೀರ್ಥರು ಎಂಬ ಯತಿಗಳ ವೃಂದಾವನವೊಂದಿದ್ದು ಅದಕ್ಕೆ ನಿತ್ಯಪೂಜೆಯ ವ್ಯವಸ್ಥೆಯೂ ಇದೆ. ಇದೂ ಸಹ ಶ್ರೀಕನಕದಾಸರ ಮಾಧ್ವದೀಕ್ಷೆಗೆ ಪೂರಕವೆನ್ನಿಸುವ ಅಂಶ.

ಮಧ್ವಮತದ ಬಗ್ಗೆ ಬಹಳ ಸ್ಪಷ್ಟವಾಗಿಯೇ ಇದು ತಾರಕವಾದ ಮತ ಎಂಬ ಅವರ ಉಗಾಭೋಗ ಇನ್ನಷ್ಟು ಸ್ಫುಟವಾಗಿ ಅವರು ಮಾಧ್ವವೈಷ್ಣವದೀಕ್ಷೆ ಹೊಂದಿದ್ದಕ್ಕೆ ಪುರಾವೆಯಾಗುವುದು:

ಮಧುವಿನಂತಹ ಮತ ಮಧ್ವಮತ
ಅದ ನಂಬಿದವರಿಗೆ ದುರಿತಹತ
ಶಾಸ್ತ್ರಸಮ್ಮತವಾದ ಆನಂದಮತ
ಇದ ನಂಬಿ ನಡೆವನೆ ಬಹುಪೂತ
ಹರಿಸರ್ವೋತ್ತಮ ಎನುವ ಮತ
ವಾಯುಜೀವೋತ್ತಮನು ಇರುವ ಮತ
ಶಾಸ್ತ್ರಾರ್ಥಗಳ ತಿಳಿಪ ಮತ
ಸೂತ್ರಾರ್ಥಗಳ ಪೇಳ್ವ ಮತ
ಕನಕನು ನಂಬಿ ನಡೆವ ಮತ
ಆದಿಕೇಶವಗೆ ಇದು ಸಮ್ಮತ ||

ಶ್ರೀಕನಕದಾಸರ ಸ್ಮಾರಕವಾಗಿ ಉಡುಪಿಯ ಶ್ರೀಕೃಷ್ಣಮಠದಲ್ಲಿ ಇಂದೂ ಸಹ ಶ್ರೀಕೃಷ್ಣದೇವರಿಗೆ ಗಂಜಿ ನೈವೇದ್ಯದ ಪದ್ಧತಿ ಉಳಿದುಕೊಂಡು ಬಂದಿದೆ. ಕನಕದಾಸರಿಗೆ ವಿಶಿಷ್ಟಾದ್ವೈತಸಂಪ್ರದಾಯದಲ್ಲಿ ಆ ರೀತಿಯ ಯಾವುದೇ ಸ್ಮಾರಕ ಉಳಿದುಕೊಂಡು ಬಂದಿಲ್ಲ. ಇದು ಶ್ರೀಕನಕದಾಸರು ಮಾಧ್ವರೆಂಬುದಕ್ಕೂ ಮಾಧ್ವರು ಅವರನ್ನು ತಮ್ಮವರು ಎಂದು ಗುರುತಿಸಿಕೊಂಡಿರುವುದಕ್ಕೂ ಉತ್ತಮ ನಿದರ್ಶನ.

---

ಭುಜಗೇಶ್ವರನು ಬಲ್ಲ ಭೂರಿಲೋಚನ ಬಲ್ಲ।
ತ್ರಿಜಗಾಧಿಪತಿ ತ್ರಿವಿಕ್ರಮನೆಂಬುದನು ॥೧॥

– ಇಲ್ಲಿ ಮೊದಲು ಅಜ, ಆ ಬಳಿಕ ಅನಲಸ್ನೇಹಿತನೆಂದರೆ ವಾಯು ಅನಂತರ ಗಜಚರ್ಮಾಂಬರನಾದ ಶಿವ ಹಾಗೂ ಗರುಡ, ಭುಜಗೇಶ್ವರನಾದ ಶೇಷ, ಭೂರಿಲೋಚನ ಎನಿಸಿದ ಇಂದ್ರ. ಹೀಗೆ ದೇವತಾತಾರತಮ್ಯ ಕ್ರಮ ಮಧ್ವಸಿದ್ಧಾಂತಕ್ಕೆ ಸಂಪೂರ್ಣ ಅನುಗುಣವಾದುದು.

ಶ್ರೀಕನಕದಾಸರ ಕೃತಿಗಳನ್ನು ತಮ್ಮ ನಿತ್ಯ ಪಾರಾಯಣದ ಕೃತಿಗಳಲ್ಲಿ ವಿಶಿಷ್ಟಾದ್ವೈತ ಸಂಪ್ರದಾಯದ ಯಾರು ಅಳವಡಿಸಿಕೊಂಡ ದಾಖಲೆ ಇಲ್ಲ. ಆದರೆ, ಮಾಧ್ವರ ಮನೆಮನೆಗಳಲ್ಲಿ ಶ್ರೀಕನಕದಾಸರ ಅನೇಕ ಕೃತಿಗಳು ನಿತ್ಯ ಪಠ್ಯವಾಗುತ್ತಿವೆ. ಹಿಂದೆ ಹೇಳಿದಂತೆ ಅವರ 'ಈಶ ನಿನ್ನ ಚರಣ ಭಜನೆ' ಕೃತಿ ಹಾಗೂ 'ತನು ನಿನ್ನದು ಜೀವನ ನಿನ್ನದು', 'ನೀ ಮಾಯೆಯೊಳಗೋ ನಿನ್ನೊಳು ಮಾಯೆಯೊ', 'ದಾಸನಾಗೋ ಭವಪಾಶ ನೀಗೋ' ಮೊದಲಾದ ಅನೇಕ ಕೃತಿಗಳು ಇದಕ್ಕೆ ನಿದರ್ಶನ. ಶ್ರೀಕನಕದಾಸರು ಕೊಂಡಾಡಿರುವ ಬಂಕಾಪುರದ ನರಸಿಂಹ ಹಾಗೂ ಕಾಗಿನೆಲೆಯಾದಿಕೇಶವ ದೇವರಿಗೆ ಇಂದೂ ಸಹ ಮಾಧ್ವರದೇ ಪೂಜೆ. ಶ್ರೀಕನಕದಾಸರ ಕೃತಿಗಳಾದ ಹರಿಭಕ್ತಿಸಾರ ಮೊದಲಾದವುಗಳ ಪ್ರವಚನವು ಸಹ ಮಾಧ್ವಮಠಗಳಲ್ಲಿ ನಡೆಯುತ್ತಿರುವುದು ಗಮನಾರ್ಹವಾದ ಸಂಗತಿ.

ತಿರುಪತಿಯ ದಾಸಸಾಹಿತ್ಯಪ್ರಾಜೆಕ್ಟ್ ಪ್ರಕಾಶನಪಡಿಸಿರುವ ಮಾಧ್ವಹರಿದಾಸರ ಚಿತ್ರಗಳಲ್ಲಿ ಶ್ರೀಕನಕದಾಸರಿಗೂ ಸ್ಥಾನವಿದೆ. ಕರ್ನಾಟಕ ಸರ್ಕಾರ ಮೊದಲಾದ ಅನೇಕ ಸಂಸ್ಥೆಗಳು ಇತ್ತೀಚಿನ ದಿನಗಳಲ್ಲಿ ಸ್ಥಾಪಿಸಿರುವ ಶ್ರೀಕನಕದಾಸರ ಯಾವುದೇ ಶಿಲ್ಪಗಳಲ್ಲೂ ಸಹ ಅವರ ಹಣೆಯ ಮೇಲೆ ಮಾಧ್ವ ವೈಷ್ಣವ ಲಾಂಛನವಿದೆಯೇ ಹೊರತು ವಿಶಿಷ್ಟಾದ್ವೈತಿಗಳ ತ್ರಿಪುಂಡ್ರ ಲಾಂಛನವಲ್ಲ.

ಮಧ್ವಪರಂಪರೆಯ ಮಹಿಪತಿದಾಸರ ಪುತ್ರ ಕೃಷ್ಣರಾಯರೆಂಬವರು ರಚಿಸಿರುವ ಕೃತಿಯೊಂದರಲ್ಲಿ ಶ್ರೀಕನಕದಾಸರ ಹೆಸರು ದಾಖಲಾಗಿದ್ದು ಅವರು ಪರಂಪರೆಯಿಂದ ಅಂಗೀಕೃತರಾದವರು ಎಂಬುದಕ್ಕೆ ಸಾಕ್ಷಿಯಾಗುವುದು. ಆದರಂತೆ ಅನಂತರದ ವರಗಡದಿನ್ನಿಶೇಷವಿಠ್ಠಲದಾಸರು ಶ್ರೀಕನಕದಾಸರನ್ನು ಕುರಿತು ಒಂದು ಪೂರ್ಣ ಕೃತಿಯನ್ನೇ [೧]ರಚಿಸಿರುವುದು, ವೈಷ್ಣವ ದಾಸಪರಂಪರೆ ಅವರನ್ನು ಅಂಗೀಕರಿಸಿದೆ

---

೧. ಶ್ರೀವಿಜಯದಾಸರ ಕೃತಿಯೊಂದರಲ್ಲಿ 'ಸುಜನಶಿರೋಮಣಿ' ಎಂಬುದಾಗಿ ಶ್ರೀಕನಕದಾಸರ ಪ್ರಸ್ತಾಪವಿರುವುದು ಅವರು ದಾಸಪರಂಪರೆಯಲ್ಲಿ ಗುರುತಿಸಲ್ಪಟ್ಟಿದ್ದವರು ಎಂಬುದಕ್ಕೆ ಪೋಷಕವಾದ ಶ್ರೇಷ್ಠ ಪುರಾವೆ:

ವಿಜಯೀಂದ್ರ ವಾದಿರಾಜ ಮೊದಲಾದ
ನಿಜವರ ಶಿಷ್ಯರುಗಳು
ವ್ರಜಕೆ ಶಾಸ್ತ್ರಾರ್ಥವನು ಬೋಧಿಸುತ
ದ್ವಿಜಕುಲ ಸಂಭವರಾದ ಪುರಂದರ
**ಸುಜನ ಶಿರೋಮಣಿ ಕನಕ ಪ್ರಮುಖ**
ಪೂಜಿತ ಪದಯುಗಳಾಂಬುಜ ಯತಿಶೇಖರ
ವಿಜಯಸಾರಥಿಯು ಪ್ರಸನ್ನವಾಗಲೆಂದು..... ॥ – ಶ್ರೀವಿಜಯದಾಸರು

ಮಹಿಪತಿದಾಸರ ಪುತ್ರರಾದ ಕಾಖಂಡಕಿ ಕೃಷ್ಣರಾಯರ ಕೃತಿಯೊಂದರಲ್ಲೂ ಸಹ ಕನಕದಾಸರ ಉಲ್ಲೇಖ ಬಂದಿದ್ದು ಅದರಲ್ಲಿ ಕನಕದಾಸರನ್ನು **ಸಂತಮತಿ, ಹರಿಭಕ್ತಿ ಉಲ್ಲಾಸಕರ** ಎಂಬ

ಎಂಬುದಕ್ಕೆ ಮತ್ತೊಂದು ಪುರಾವೆಯಾಗಿದೆ. ಶ್ರೀವಿಜಯದಾಸರ ಕೃತಿಯೊಂದರಲ್ಲಿ ಬಂದಿರುವ 'ಸುಜನಶಿರೋಮಣಿಕನಕ' ಎಂಬ ಮಾತಂತೂ ಶ್ರೀಕನಕದಾಸರ ಮಾಧ್ವದೀಕ್ಷೆಗೆ ಸ್ಪಷ್ಟ ನಿದರ್ಶನ. ಹರಿದಾಸ ಲಕ್ಷಣವನ್ನು ತಿಳಿಸುವ ಹರಿದಾಸ-

---

ವಿಶೇಷಣಗಳಿಂದ ಉಲ್ಲೇಖಿಸಿರುವುದು ಗಮನಾರ್ಹ:
ನೆನೆದು ನಮಿಸುವೆ ನಾನನುದಿನ ಹರಿಪದ-
ವನಜ ಮಧುಪರಾದ ಅನುಭವ ಶರಣರ
ನೆರೆತಾಳವಾಕರ ಸಂತಮತಿ ಕನಕರ ಹರಿಭಕ್ತಿ ಉಲ್ಲಾಸಕರ — ಕಾಖಂಡಕಿ ಕೃಷ್ಣರಾಯರು

'ಯತಿಗಳೊಳು ಪ್ರಖ್ಯಾತರಾಗಿಹ ವಿಜಯೀಂದ್ರನಾಮಕರಾದ ಯೋಗೀಶ್ವರರು
ಶ್ರೀನಿವಾಸರ ಪೆಸರ ಧರಿಸಿದ ಶಿಷ್ಯರೂ ಮೂವರು ಸೇವೆಯನು ಸಲಿಸುತ್ತಲಿರ್ದರು –
ಪುರಂದರಕನಕನುವಾದಿರಾಜರು ಬಳಿಯೊಳಿರ್ದರು ರಾಜರನುದಿನ ಬಂದು ಕಾಣುವರು ॥'
— ರಾಘವೇಂದ್ರಪ್ಪ ಕವಿ (ಸಾರಸ್ವತಪರಿಣಯ)

ಶ್ರೀಗಡದಿನ್ನಿ ಶೇಷವಿಠ್ಠಲ ದಾಸರ ಕೃತಿಯಂತು ಪ್ರತ್ಯೇಕವಾಗಿ ಕನಕದಾಸರ ಪ್ರಶಂಸೆಯೇ ಆಗಿದೆ:
ಕನಕದಾಸರ ಪಾದ ವನಜವ ಸ್ಮರಿಸುವ
ಮನುಜರೆ ಪರಮ ಧನ್ಯರು ॥ ಪ ॥
ಹನುಮಾಂತರ್ಗತ ಜನಕಜೆರಮಣನ
ಘನ ಜ್ಞಾನ ಭಕುತಿ ಕೊಡುವ ಭಾವ ಕಡಿವ ॥ ಅ.ಪ. ॥
ಆಶಿಸಿದಾಗೀವೆ ಸೊಸಿಲಿ ದರ್ಶನ
ದಾಸ ನೀನಾಗೆಳೆಂದು
ಶ್ರೀಶನೆ ಬೆಂಬತ್ತಿ ದಾಸದೀಕ್ಷೆಯ ಕೊಡಿಸಿ
ತಾ ಸೇವೆ ಕೊಂಡವನ – ನಿಜ ಜವನ ॥ ೧ ॥
ವ್ಯಾಸರಾಯರು ಪೇಳೆ ಶ್ರೀಶನ್ನ ಕರೆಯಲು
ತಾ ಶ್ವಾನನಾಗಿ ಬಂದ
ಭೂಸುರರು ಹೊಡೆದಟ್ಟೆ ಶೇಷರೂಪದಿ ಕರೆದೆ
ಆ ಸರ್ಪ ಕಂಡೋಡಿದರು – ನಿಜ ಮೂಢರು ॥ ೨ ॥
ಏಕಾಂತದಿ ತಿನಲು ಆ ಕದಳಿಫಲ ಕೊಡೆ
ತಾ ಕೈಲಿ ಹಿಡಿದು ಕುಳಿತ
ಏಕೆನಲು ಸರ್ವತ್ರ ಶ್ರೀಕಾಂತ ತಾ ವ್ಯಾಪ್ತ
ನಾ ಕಾಣೆನೇಕಾಂತ – ಜ್ಞಾನಿ ಸಂತ ॥ ೩ ॥
ಭಕ್ತಿ ಸಾರವ ಕಥೆ ಪದ್ಯೋಕ್ತಿಗಳ ನುಡಿದು
ಕಿತ್ತೆಸೆದ ಮೂಢ ರೂಢಿ
ಯುಕ್ತವಾದಾನಂದ ಉಕ್ತಿಗಳಿಗನುಸರಿಸಿ
ಭಕ್ತಿಲಿ ಗೋವಿಂದನ – ಭಜಿಸಿರೆಂದನ ॥ ೪ ॥
ಹೀನಜನೆಂದು ದೇವಸ್ಥಾನದಿಂದಟ್ಟಲು
ಮಾನವಂತರನೆ ತೊರೆದ
ಮಾನಿ ವರಗಡದಿನ್ನಿ ಶೇಷವಿಠ್ಠಲ ಭಕ್ತಗೆ
ತಾನೊಲಿದು ದರ್ಶನವಿತ್ತ – ಹಿಂದಿರುಗುತ್ತ ॥ ೫ ॥ —ಗಡದಿನ್ನಿ ಶೇಷವಿಠ್ಠಲದಾರು

ಸುಳಾದಿಯನ್ನು ಬರೆದ ಶ್ರೀವಿಜಯದಾಸರು ಮಾಡಿರುವ ಆ ಉಲ್ಲೇಖ ತುಂಬಾ ಪ್ರಮುಖವೆನ್ನಿಸುವಂತಹುದು.

ಪೂರ್ಣವಾಗಿ ವೈಷ್ಣವದೀಕ್ಷೆಯನ್ನು ಹೊಂದಿ ಮಧ್ವಮತದ ಸಕಲ ತತ್ತ್ವಗಳನ್ನು ಸಹ ನಿಷ್ಠೆಯಿಂದ ಪರಿಪಾಲಿಸುವ ಭಕ್ತರನ್ನು ಮಾತ್ರವೇ ಮಾಧ್ವಪರಂಪರೆ ತನ್ನ ಗುರುಪರಂಪರೆಯಲ್ಲಿ ಸೇರಿಸಿಕೊಳ್ಳುವುದು. ಅದಿಲ್ಲವಾದಲ್ಲಿ ಸಾಹಿತ್ಯ, ಸಂಗೀತ ಮೊದಲಾದ ಎಷ್ಟೇ ಕಾರಣಗಳಿದ್ದರೂ, ಅವುಗಳನ್ನು ಅದು ಮೆಚ್ಚಿಕೊಳ್ಳುವುದೇ ಹೊರತು, ತನ್ನ ಪರಂಪರೆಯಲ್ಲಿ ಮಾನ್ಯ ಮಹನೀಯರಲ್ಲಿ ಪರಿಗಣಿಸದು. ಆದರೆ, ಶ್ರೀಕನಕದಾಸರನ್ನು ಮಾಧ್ವ ಪರಂಪರೆ ಆದರದಿಂದ ತನ್ನವರಂತೇ ಕಂಡು ಗೌರವಿಸುತ್ತಾ ಬಂದಿರುವುದು ಅವರು ಪೂರ್ಣಮಾಧ್ವದೀಕ್ಷೆಯನ್ನು ಪಡೆದವರಾಗಿದ್ದರು ಎಂಬುದಕ್ಕೆ ಜ್ವಲಂತ ನಿದರ್ಶನ ಎನ್ನಬಹುದು[೧].

ಶ್ರೀಕನಕದಾಸರು ಶ್ರೀಮನ್ಮಧ್ವಾಚಾರ್ಯರನ್ನು ಗುರುಗಳೆಂದು ಅಂಗೀಕರಿಸಿ ಅವರ ಮತವನ್ನು ಪೂರ್ಣವಾಗಿ ಅನುಸರಿಸಿದ್ದಕ್ಕೆ ದಾಖಲೆಯಾಗಿ ಅನೇಕ ಕೃತಿಗಳು ಉಪಲಬ್ಧವಿವೆ. ಅವುಗಳಲ್ಲಿ ಕೆಲವು ಹೀಗಿವೆ:

[೨]ಜಯಮಂಗಲಂ ನಿತ್ಯ ಶುಭಮಂಗಲಂ
ವಾತಜಾತನು ಆಗಿ ಖ್ಯಾತಿಯಲಿ ಮೆರೆದಗೆ
ಸೇತುವೆಯ ಭರದಿಂದ ಲಂಘಿಸಿದಗೆ
ಸೀತೆಯನು ವಂದಿಸುತೆ ಉಂಗುರವನಿತ್ತವಗೆ
ದೈತ್ಯಪುರವನು ಭರದಲುರಿಸಿದವಗೆ ॥ ೧ ॥

ವಸುಧೆಯಲಿ ಕುಂತಿನಂದನನಾಗಿ ಉದಿಸಿದಗೆ
ಕುಸುಮವನು ತಂದು ದ್ರೌಪದಿಗಿತ್ತಗೆ
ಕುಶಲತನದಲಿ ಕೌರವಾದಿಗಳ ಸಂಹರಿಸಿ-
ದಸಹಾಯ ವೀರ ಶ್ರೀ ಭೀಮಸೇನನಿಗೆ ॥ ೨ ॥

ಮಧ್ಯಗೃಹದಾತನಾ ಸತಿಯಲ್ಲಿ ಉದಿಸಿದಗೆ
ಬೌದ್ಧ ಚಾರ್ವಾಕ ಮಾಯ್ಗಳ ಜರಿದಗೆ

---

೧. ಶ್ರೀಕನಕದಾಸರ ಕೀರ್ತನೆಗಳನ್ನು ಪ್ರಪ್ರಥಮಬಾರಿಗೆ ಪ್ರತ್ಯೇಕವಾಗಿ ಪ್ರಕಾಶನಪಡಿಸಿದ ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯ ಉಡುಪಿ ಪ್ರಮುಖ ಮಾಧ್ವಸಂಸ್ಥೆಗಳಲ್ಲೊಂದು. ಅದರಂತೆ, ಶ್ರೀಕನಕದಾಸರ ಕೃತಿಗಳನ್ನು ಪ್ರತ್ಯೇಕವಾಗಿ ತನ್ನ ಹರಿದಾಸಕೀರ್ತನ ತರಂಗಿಣಿ ಸಂಪುಟಗಳಲ್ಲಿ ಪ್ರಕಾಶನಪಡಿಸಿದ ಬೆಂಗಳೂರಿನ ಸುಬೋಧ ಪ್ರಕಟನಾಲಯವು ಸಹ ಮಾಧ್ವರ ನೇತೃತ್ವದ ಸಂಸ್ಥೆ.

೨. ಪು: ೭೯; ಕನಕಸಾಹಿತ್ಯದರ್ಶನ-೪; ಪ್ರ: ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕರ್ನಾಟಕ ಸರ್ಕಾರ.

ಮಧ್ವಶಾಸ್ತ್ರವನೆಲ್ಲ ಸಜ್ಜನರಿಗೊರೆದಗೆ
ಮುದ್ದು ಶ್ರೀಆದಿಕೇಶವನ ಭಜಕನಿಗೆ ॥ ೩ ॥

**

[೧] ಪರಮಪದವಿಯನೀವ ಗುರುಮುಖ್ಯ ಪ್ರಾಣನ
ಧರೆಯೊಳಗುಳ್ಳ ಮಾನವರೆಲ್ಲ ಭಜಿಸಿರೊ ॥ ಪ ॥

ಅಂದು ತ್ರೇತಾಯುಗದಿ ಹನುಮನಾಗವತರಿಸಿ
ಬಂದು ದಾಶರಥಿಯ ಪಾದಕೆರಗಿ
ಸಿಂಧುವನು ದಾಂಟಿ ಮುದ್ರಿಕೆಯಿತ್ತು ದಾನವರ
ವೃಂದಪುರ ದಹಿಸಿ ಚೂಡಾಮಣಿಯ ತಂದವನ ॥ ೧ ॥

ದ್ವಾಪರಯುಗದಲಿ ಭೀಮಸೇನನೆನಿಸಿ
ಶ್ರೀಪತಿಯ ಪಾದ ಕಡುಭಜಕನಾಗಿ
ಕೋಪಾವೇಶದಲಿ ದುಶ್ಯಾಸನನ ಸೀಳಿ
ಭೂಪನ ಜಲದೊಳಗೆ ಕರೆಕರೆದು ಜರೆದವನ ॥ ೨ ॥

ಕಲಿಯುಗದಲಿ ತುರೀಯಾಶ್ರಮವನೆ ಧರಿಸಿ
ಕಲುಷದ ಮಾಯಿಗಳನೆ ಸೋಲಿಸಿ
ಖಿಲವಾದ ಮಧ್ವಮತವನು ಬಲಿದೆನಿಸಿ ಕಾಗಿ-
ನೆಲೆಯಾದಿಕೇಶವನೆ ಪರದೈವವೆಂದವನ ॥ ೩ ॥

**

[೨] ಅರಿತು ಭಜಿಪರ್ಯಾರಯ್ಯ ರಂಗಯ್ಯ ನಿನ್ನ ॥ ಪ ॥
ಸಿರಿದೇವಿಯು ಕಿರುಬೆರಳಲ್ಲಿರುವ ಸೊಬಗನ್ನು
ಅರಿಯಲಾರಳೊ ದೇವ ॥ ಅ ॥
ಇಂದಿರಾದೇವಿಯು ಅರಿಯಲಾರಳು ದೇವ-
ಬೃಂದಾರಕರೆಲ್ಲ ನಿಂದು ಯೋಚಿಪರು ಆ-
ನಂದತೀರ್ಥರ ಮತದೊಳಗೆ ಬಂದವರೆಲ್ಲ
ಎಂದಿಗಾದರು ಪರಮಾನಂದ ಪೊಂದುವರು ॥ ೧ ॥
ಮಾನವರಲಿ ಹೀನವರ್ಗ ತುಂಬಿಹುದೊ

**

---

೧. ಪು: ೭೫; ಕನಕಸಾಹಿತ್ಯದರ್ಶನ-೪; ಪ್ರ: ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕರ್ನಾಟಕ ಸರ್ಕಾರ.

೨. ಪು. ೧೭೭; ಕನಕಸಾಹಿತ್ಯದರ್ಶನ-೪; ಪ್ರ: ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕರ್ನಾಟಕ ಸರ್ಕಾರ.

[೧] ಆನಂದವಾಯಿತು ನಿನ್ನಂದವು ಹನುಮ ॥ ಪ ॥
ಏನೆಂದು ಹೇಳಲಿ ನಿನ್ನ ಚಂದವು
ದಾನವಾಂತಕ ಮುಖ್ಯಪ್ರಾಣ ನಿನ್ನ ಸೊಬಗು ॥ ಅ.ಪ. ॥
ನೊಸಲ ತಿದ್ದಿದ ಊರ್ಧ್ವಪುಂಡ್ರವು ಶರಿದೊ-
ಳೆಸೆವೊ ಕಿರೀಟ ಮಕರಕುಂಡಲವು
ಅಸುರದಲ್ಲಣವಾದ ಹಸನಾದ ಲಾಂಗೂಲ ॥ ೧ ॥
ಉಟ್ಟ ಕೌಪೀನ ಕಟಿಸೂತ್ರವು ನಡುವು
ಕಟ್ಟಿದ ಕಾಸೆ ಕಾಂಚೀದಾಮವು
ತೊಟ್ಟ (ಕಬಾಯಿ) ಹೊಳೆವ ದಿಟ್ಟ ಜಗಜಟ್ಟಿ ॥ ೨ ॥
ಕಡಗ ಕಂಕಣ ತೋಳಬಾಪುರಿ ದೊಡ್ಡ
ಬೆಡಗು ನಿನ್ನಯ ರೂಪುರೇಖರಿ
ಅಡಿಗಡಿಗೊಲಿಯುತ್ತ ನಡೆದು ಭಕ್ತರ ಕಾವ ॥ ೩ ॥
ಹನುಮಂತ ಭೀಮ ಮಧ್ವಮೂರುತಿ ನಿನ್ನ
ಘನವಾದ ಮಹಿಮೆಯೆಂಬ ವಾರುತಿ ಗು-
ಣನಿಧಿ ದಿಗಂತ ವಿಶ್ರಾಂತ ಕೀರುತಿಯೊಳಗೆ ॥ ೪ ॥
ಸೃಷ್ಟಿಗೆ ಬಲು ವಿದ್ಯಗೊಂಡೆಯಪುರದ
ದಿಟ್ಟ ಕಪಿಕುಲದೊಳು (ದಿಂಡು ಆ)
ಶ್ರೇಷ್ಠ ಪ್ರಸನ್ನ ಆದಿಕೇಶವನ ದಾಸ ॥ ೫ ॥

**

ದೇವಕಿಯೊಳು ಪುಟ್ಟಿದಾನೆ ವಸು-
ದೇವನ ಪೆಗಲೊಳೈತಂದ ಮದ್ದಾನೆ
ಶ್ರೀವಾಸುದೇವನೆಂಬಾನೆ
ಭಾವೀಬ್ರಹ್ಮಾದ್ಯಮರರು ಪೂಜಿಪ ಪಟ್ಟದಾನೆ ॥ [೨] (ಆನೆ ಬಂದಿದದಕೋ ಮದ್ದಾನೆ)

[೩] ಆನಂದತೀರ್ಥರ ಮನದಲೊಪ್ಪುವ ಮುತ್ತ
ಶ್ರೀನಿಧಿ ಆದಿಕೇಶವನೆಂಬೊ ಅಣಿಮುತ್ತು ॥ (ಮುತ್ತು ಬಂದಿದೆ ಕೇರಿಗೆ)

**

೧. ಪದಸಂಖ್ಯೆ –೭. ಪು. ೬; ಪ್ರ: ಶ್ರೀಕನಕದಾಸರ ಕೀರ್ತನೆಗಳು; ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ; ೨೦೧೪.
೨. ಪು. ೪೨೪; ಕನಕಸಾಹಿತ್ಯದರ್ಶನ–೪; ಪ್ರ: ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕರ್ನಾಟಕ ಸರ್ಕಾರ.
೩. ಪು. ೨೫೫; ಕನಕಸಾಹಿತ್ಯದರ್ಶನ–೪; ಪ್ರ: ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕರ್ನಾಟಕ ಸರ್ಕಾರ.

**ನಗುವುದೆಲ್ಲವು [೧]ಮಾರುತಿವಲ್ಲಭಗರ್ಪಣವು ಇದು**
**(ಕರ್ಮದೊಡ್ಡದು ಜಗದಿ ಕರ್ಮವರಿತವರಿಗೆ)**

**••**

**ಮೂರು ರೂಪವ ತಾಳಿ ಮಹಾಯೋಗ್ಯರುಗಳಿಗೆ**
**ಸಾರತತ್ತ್ವವ ಪೇಳ್ದೆ ಶರಣುಹೊಕ್ಕ ಮನುಜರ**
**ಘೋರದುರಿತವ ಸೀಳ್ದೆ**
**ಧೀರತನುಧುರದುಂಡಿ ಹನುಮಯ್ಯರಿಂ ಸೇವಿಸಿದ ನಿ-**
**ಮ್ಮಂಘ್ರಿ ಕಮಲವ ದೂರ ಮಾಡದೆ ಸಲಹಯ್ಯ**
**ಕರುಣಾವಾರಿಧಿಯೇ ನೀನೆನ್ನನೀಗಲೆ ಆದಿಕೇಶವ ಮುತ್ತೆತ್ತಿ ದೊರೆಯೆ ॥**

- ಇಲ್ಲಿಯ ಮಾರುತಿವಲ್ಲಭಗರ್ಪಣವು ಎಂಬ ಮಾತು ಮಧ್ವಸಿದ್ಧಾಂತದ ಶ್ರೀ-ಭಾರತೀರಮಣಮುಖ್ಯಪ್ರಾಣಾಂತರ್ಗತ ಎಂಬ ಅನುಸಂಧಾನ ಕ್ರಮದ ಮುಖ್ಯಭಾವವಾಗಿದೆ.

**[೨]ತತ್ತ್ವಾಭಿಮಾನಿಗಳೆಂಬ ಭಕ್ತರೆದುರಲಿ ಸಂಸಾರವೆನ್ನುವ ಅನ್ನವ**
**ರಥಕೆ ಬಲಿಕೊಟ್ಟು ದ್ವಾದಶನಾಮ ಊರ್ಧ್ವಪುಂಡ್ರ ಮುದ್ರೆ**
**ಅಂಗಾರಕ್ಷತೆಯೆಂಬ ಚಿತ್ರವಸ್ತ್ರಗಳಿಂದಲಂಕರಿಸಿ**
**(ತನುವ ಪಡೆದುದಕೇನು ಸಾರ್ಥಕ)**

- ಅದೇ ದಂಡಕದಲ್ಲಿನ ದ್ವಾದಶನಾಮ, ಊರ್ಧ್ವಪುಂಡ್ರ, ಮುದ್ರೆ, ಅಂಗಾರಕ್ಷತೆಗಳು ಎಂಬ ಮಾತಿನಲ್ಲಿ ಸಕಲ ಮಾಧ್ವವೈಷ್ಣವಚಿಹ್ನೆಗಳು ಸ್ಪಷ್ಟವಾಗಿ ನಿರೂಪಿತವಾಗಿವೆ.

**ಮಾಡುವುದು ಶಾಸ್ತ್ರಪ್ರವಚನಗಳು ನೋಡುವುದು**
**ಡಿಂಬನೊಳು ಬಿಂಬನ ಪ್ರತಿಮೆಯೆದುರಿನಲಿ**
**ಕೂಡುವುದು ಸಾಲಿಗ್ರಾಮ ಮಂತ್ರದಿ ತಂತ್ರಸಾರದಿ**

---

೧. **'ಮಾರುತಿವಲ್ಲಭಗರ್ಪಣವು'** ಎಂಬ ಈ ಮಾತು ಶ್ರೀಕನಕದಾಸರ 'ಕರ್ಮ ದೊಡ್ಡದು' ಎಂಬ ದಂಡಕದಲ್ಲಿ (- ಪ್ರ: ಶ್ರೀಕನಕದಾಸರ ಕೀರ್ತನೆಗಳು, ಮೈಸೂರು ವಿಶ್ವವಿದ್ಯಾನಿಲಯ, ಪು. ೨೧) ಬಂದಿದೆ. ಇದರರ್ಥ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಹರಿಗರ್ಪಿತ ಎಂದು. ಇದು ಮಾಧ್ವರಲ್ಲಿ ಮಾತ್ರ ಇರುವ ಸಮರ್ಪಣದ ರೀತಿ. ಆದ್ದರಿಂದ ಶ್ರೀಕನಕದಾಸರು ಮಧ್ವಸಿದ್ಧಾಂತದ ಅನುಯಾಯಿಗಳು ಎಂಬುದು ನಿಶ್ಚಿತವಾಗುವುದು; **'ಮಾರುತಿವಲ್ಲಭ ಜಾನಕಿಕಾಂತ'** ಎಂಬ ಶ್ರೀಮಧ್ವಾಚಾರ್ಯರ ದ್ವಾದಶಸ್ತೋತ್ರದಲ್ಲಿನ **'ಮಾರುತಿವಲ್ಲಭ'** ಎಂಬ ಪದವನ್ನೇ ಶ್ರೀಕನಕದಾಸರು ಉಪಯೋಗಿಸಿರುವುದು ಸಹ ಗಮನಾರ್ಹ.

೨. ದಂಡಕ -೩, ಪು. ೩೨೪; ಪ್ರ: ಶ್ರೀಕನಕದಾಸರ ಕೀರ್ತನೆಗಳು; ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ; ೨೦೧೪.

ನೀಡುವುದು ಅಭಿಷೇಕ ಅರ್ಚನೆ ಧೂಪದೀಪಗಳು
ನೀಡುವುದು ನೈವೇದ್ಯ ಅಗ್ನಿಯೊಳು ಹೂಡುವುದು
ವೈಶ್ವದೇವ ಬಲಿಹರಣಗಳು[೧]
(ಮಾಡಿದರು ದಾರೀ ಪ್ರಪಂಚವ ಮಾಡಿದರು ದಾರೀ)

– ಈ ದಂಡಕದಲ್ಲಿನ ತಂತ್ರಸಾರ ಎಂದರೆ, [೨]ಶ್ರೀಮನ್ಮಧ್ವಾಚಾರ್ಯರಿಂದ ಪ್ರಣೀತವಾದ [೩]ತಂತ್ರಸಾರಸಂಗ್ರಹ ಕೃತಿಯಾಗಿದೆ[೪].

ಶ್ರೀಕನಕದಾಸರ ಮುಂಡಿಗೆಗಳು ವಿದ್ವತ್ಪ್ರಪಂಚಕ್ಕೆ ಸವಾಲೆನ್ನಿಸಿರುವ ಕೃತಿಗಳು. ಅವುಗಳ ಪರಿಕಲ್ಪನೆ ಹಾಗೂ ಅರ್ಥವಿವರಣೆ ಮಧ್ವಸಿದ್ಧಾಂತಕ್ಕೆ ಮಾತ್ರವೇ ಹೊಂದುವಂತಹವು ಎನ್ನುವುದು ಅವರ ಮಾಧ್ವದೀಕ್ಷೆಗೆ ಮತ್ತೊಂದು ಪ್ರಬಲ ಕಾರಣ[೫].

## ಶ್ರೀಕನಕದಾಸರ ಕೃತಿಗಳು

ಶ್ರೀಕನಕದಾಸರ ಕೃತಿರಚನೆಯ ಕಾರ್ಯ ಪ್ರಾರಂಭವಾದ ಕಾಲದ ಬಗ್ಗೆ ಸ್ಪಷ್ಟಮಾಹಿತಿ ಲಭಿಸುವುದಿಲ್ಲ. ಪ್ರಾಯಃ ಅವರು ದಾಂಪತ್ಯಜೀವನದಲ್ಲಿ ಆನಂದದಿಂದ

---

೧. ದಂಡಕ: ೭, ಪು. ೩೩೩; ಪ್ರ: ಶ್ರೀಕನಕದಾಸರ ಕೀರ್ತನೆಗಳು; ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ; ೨೦೧೪.

೨. 'ಕನಕದಾಸರ ಕೀರ್ತನೆಗಳ ತಾತ್ವಿಕನೆಲೆಗಟ್ಟು ಸರಳವಾಗಿದೆ. ಇದರ ಹಂದರವನ್ನು ಸ್ಥೂಲವಾಗಿ ವಿಷ್ಣುಪಾರಮ್ಯ, ಮಧ್ವಸಿದ್ಧಾಂತದ ಮೇಲಣ ನಿಷ್ಠೆ ಭಕ್ತಿ–ಜ್ಞಾನ–ಕರ್ಮಗಳ ಸಂಕಲನ, ಭಕ್ತಿಯ ವಿಭಿನ್ನನೆಲೆಗಳು, ಅನುಭಾವದ ನೆಲೆ ಹಾಗೂ ಸಾಕಾರ ಸಗುಣ ಭಗವಂತನ ಕಲ್ಪನೆಗಳಿಗೆ ಮಿತಗೊಳಿಸಿ ಅಭ್ಯಾಸಮಾಡಲು ಸಾಧ್ಯವಿದೆ.' – ಕನಕಚಿಂತನ ೨೦೧೧–೧೨
(ಪ್ರ: ಮಂಗಳೂರು ವಿಶ್ವವಿದ್ಯಾನಿಲಯ; ಕನಕದಾಸಸಂಶೋಧನ ಕೇಂದ್ರ; ಪು. ೧೪೪)

೩. ಶ್ರೀಮಧ್ವಾಚಾರ್ಯರ ಈ ತಂತ್ರಸಾರಸಂಗ್ರಹ ಕೃತಿ ವೈಷ್ಣವ ದೀಕ್ಷೆ, ವೈಷ್ಣವ ಮಂತ್ರಗಳು, ಪೂಜಾ ವಿಧಾನ, ಪ್ರತಿಷ್ಠಾ ವಿಧಾನ, ಮೂರ್ತಿ ನಿರ್ಮಾಣವಿಧಿ ಮೊದಲಾದ ಅನೇಕ ವಿಧಿಗಳನ್ನು ತಿಳಿಸಿಕೊಡುವ ಕೃತಿ; ಇತ್ತೀಚೆಗೆ ಕರ್ನಾಟಕ ಸರ್ಕಾರ ಹಾಗೂ ಇತರ ಅನೇಕ ಸಂಸ್ಥೆಗಳಿಂದ ಪ್ರತಿಷ್ಠಾಪಿತವಾಗಿರು ಕನಕದಾಸರ ವಿಗ್ರಹಗಳ ಹಣೆಯಲ್ಲಿ ಮಾಧ್ವರ ಚಿಹ್ನೆಯಾದ ನಾಮವನ್ನೇ ಅಳವಡಿಸಿರುವುದು ಸಹ ಅವರು ಮಾಧ್ವದೀಕ್ಷೆಯನ್ನು ಪಡೆದದ್ದಕ್ಕೆ ಗಮಕವಾಗಿದೆ.

೪. ಹೀಗೆ ಶ್ರೀಮಧ್ವಾಚಾರ್ಯರನ್ನು ಉಲ್ಲೇಖಿಸುವ ಶ್ರೀಕನಕದಾಸರ ಅನೇಕ ಕೃತಿಗಳು ಉಪಲಬ್ಧ–ವಿದ್ದರೂ ಸಹ, '... ಆದರೆ, ಮಧ್ವಾಚಾರ್ಯರ ಹೆಸರಾಗಲೀ, ಅವರ ಧರ್ಮದ ಪ್ರಸ್ತಾಪವಾಗಲೀ ಕನಕದಾಸರ ರಚನೆಯಲ್ಲಿ ಇಲ್ಲವೇ ಇಲ್ಲ.... ಹೀಗಿರುವಾಗ ಕನಕದಾಸನನ್ನು ಮಾಧ್ವ ದಾಸ, ಮಾಧ್ವಮತೀಯನೆನ್ನುವಲ್ಲಿ ಅರ್ಥವೇ ಇಲ್ಲ' ಎಂದು ಪ್ರೊ. ಎಂ.ಎಂ. ಕಲಬುರ್ಗಿಯವರು ಬರೆದಿರುವುದು (ಕನಕದಾಸರ ವಿಷಯದಲ್ಲಿ ಸೃಷ್ಟಿಗೊಂಡಿರುವ ಗೊಂದಲಗಳು: ಕನಕದಾಸರ ಒಂದು ಅಧ್ಯಯನ; ಪ್ರ: ವಿದ್ಯಾನಿಧಿ ಪ್ರಕಾಶನ, ಗದಗ; ಪು. ೩೮೩; ೨೦೦೭) ಅತ್ಯಂತ ವಿಷಾದಕರ. ಉಪಲಬ್ಧ ಸಮಸ್ತ ದಾಖಲೆಗಳ ಪ್ರಯೋಜನವನ್ನು ಪೂರ್ಣವಾಗಿ ಪಡೆಯದೆ ಕೈಗೊಳ್ಳುವ ಇಂತಹ ತೀರ್ಮಾನಗಳು ಎಂದೂ ಸಹ ಸಂಶೋಧನೆ ಎನ್ನಿಸಲಾರವು.

೫. ವಿವರಗಳಿಗೆ ನಮ್ಮ ಪ್ರಕಾಶನದ 'ಸಂತ–ಕವಿ–ಭಕ್ತ ಕನಕದಾಸ' ಕೃತಿಯನ್ನು ನೋಡಬಹುದು.

ಇದ್ದ ಸಮಯದಲ್ಲಿ ಆ [೧]ಕಾರ್ಯ ಪ್ರಾರಂಭವಾಗಿದ್ದಿರಬಹುದು. ಮೋಹನ-ತರಂಗಿಣಿಯು ಪ್ರಾಯಃ ಆ ಕಾಲದ ರಚನೆ. ಅದರಲ್ಲಿನ ಜೀವನೋತ್ಸಾಹ, ವಿವಾಹಾದಿ ಉತ್ಸವಗಳ ಬಗೆಗಿನ ಸಂಭ್ರಮ, ಯುದ್ಧ ಮೊದಲಾದಂತಹ ಸಾಹಸಕಾರ್ಯಗಳ ಬಗೆಗಿನ ರೋಚಕ ನಿರೂಪಣೆ, ವಿವಿಧ ಮನೋಹರ ವಸ್ತುಗಳ ರಮಣೀಯವಾದ ವರ್ಣನೆಗಳು, ಪುರದ ನರ-ನಾರಿಯರ ಬಗೆಬಗೆಯ ವರ್ಣನೆ, ಮುಖ್ಯವಾಗಿ ಕೃತಿಯಲ್ಲಿ ಎದ್ದು ಕಾಣುವ ಶೃಂಗಾರಪ್ರಧಾನವಾದ ನಿರೂಪಣೆ ಮೊದಲಾದವುಗಳು ಇದಕ್ಕೆ ಗಮಕ. ಆ ಕಾಲದಲ್ಲಿ ಅವರು ಪ್ರಭಾವಿ ಹರಿದಾಸರಲ್ಲಿ ಒಬ್ಬರು ಎನ್ನಿಸಲು ಅವರ ಕಂಠಸಿರಿಯೂ ಸಹ ಒಂದು ಪ್ರಧಾನ ಕಾರಣವಾಗಿರುವ ಸಾಧ್ಯತೆ ಇದೆ.

ಅನಂತರ ಕಾಲದ ರಚನೆ ನಳಚರಿತ್ರೆ ಕೃತಿ. ಮಹಾಭಾರತದ ನಳೋಪಾಖ್ಯಾನವನ್ನು ಆಧರಿಸಿದ ಆ ಕೃತಿಯಲ್ಲಿ ಶೃಂಗಾರದ ವರ್ಣನೆ ಗೌಣವಾಗಿ ಸುಂದರಜೀವನದ ವರ್ಣನೆ ಪ್ರಧಾನವಾಗಿ ಗೋಚರಿಸುವುದು. ಜೀವನೋತ್ಸಾಹದಲ್ಲಿ ಬದಲಾವಣೆ ಕಾಣದಿದ್ದರೂ ಅದನ್ನು ನೋಡುವ ದೃಷ್ಟಿಯಲ್ಲಿ ಹೆಚ್ಚಿನ ಪಕ್ವತೆ ಕಂಡುಬಂದು ನಳದಮಯಂತಿಯರ ವ್ಯಕ್ತಿತ್ವ ಆದರ್ಶ, ಯಶಸ್ವೀ ಜೀವನಕ್ಕೆ ಪ್ರೇರಕ ಎಂಬ ಭಾವ ಮೂಡಿದೆ. ದಮಯಂತಿಯ ಪಾತ್ರದ ಬಗ್ಗೆ ನೀಡಿರುವ ಒತ್ತು ಅವರು ತಮ್ಮ ಪತ್ನಿಯ ಬಗ್ಗೆ ಹೊಂದಿರುವ ಪವಿತ್ರ ಪ್ರೀತಿಗೆ ಸಂಕೇತದಂತಿದೆ; ಶ್ರೀಕನಕದಾಸರಿಗೆ ಸ್ತ್ರೀ ಸಂಕುಲದ ಬಗ್ಗೆ ಇರುವ ಆದರಕ್ಕೂ ನಿದರ್ಶನವಾಗಿದೆ.

ಶ್ರೀರಾಮಧಾನ್ಯಚರಿತ್ರೆ ಇವೆರಡರ ಅನಂತರದ ಕೃತಿ ಎನ್ನಬಹುದು. ಅದರಲ್ಲಿ ಶೃಂಗಾರಭಾವ ಪೂರ್ತಿ ಮರೆಯಾಗಿದೆ. ದಾಂಪತ್ಯದ ಚಿತ್ರಣಕ್ಕೂ ಅದರಲ್ಲಿ ಅವಕಾಶವಿಲ್ಲ. ಅಲ್ಲಿ ಕಂಡುಬರುವುದು ಎರಡು ಧಾನ್ಯಗಳ ಮಧ್ಯದಲ್ಲಿನ ಸಂಘರ್ಷದ ಕಥೆ. ಅಲ್ಲಿ ಭಕ್ತಿಯ ಅಂಶ ಕ್ರಮೇಣ ಹೆಚ್ಚಿನ ಪ್ರಾಧಾನ್ಯ ಪಡೆದುಕೊಂಡಿರುವುದು ಗೋಚರಿಸುವುದು. ವಿನಾಕಾರಣವಾಗಿ ಜಾತಿ ಆಧಾರದ ಮೇಲೆ ಜಗಳ ತೆಗೆಯುವ ಜನಗಳ ಸ್ವಭಾವದ ವಿಡಂಬನೆಯಾಗಿಯೂ ಸಹ ಆ ಕೃತಿ ರಚಿತವಾಗಿರುವಂತಿದೆ. ಜೀವನಕ್ಕೆ ಅಗತ್ಯವಾದ ಧಾನ್ಯಗಳಲ್ಲಿನ ಸಂಘರ್ಷ ಅರ್ಥಹೀನವಾಗಿರುವಂತೆ ಸಮಾಜದ ಒಳಿತಿಗೆ ಕಾರಣವಾಗದ ಜಾತಿಯ ಮೊದಲಾದ ಕಾರಣದ ಸಂಘರ್ಷವು ಸಹ ಅರ್ಥಹೀನ ಎಂಬ ಭಾವವನ್ನು ಅದರಲ್ಲಿ ಗುರುತಿಸಬಹುದು.

ಶ್ರೀವ್ಯಾಸರಾಜರ ಸಂಪರ್ಕ ಶ್ರೀಕನಕದಾಸರಿಗೆ ಮಧ್ವಸಿದ್ಧಾಂತದ ಅವಲೋಕನಕ್ಕೆ ಕಾರಣವಾಯಿತು. ವಿಷ್ಣುಸರ್ವೋತ್ತಮತ್ವ, ಅವನ ಗುಣಪೂರ್ಣತ್ವ, ಸಕಲ

---

೧. ಶ್ರೀಕನಕದಾಸರು ದಾಸದೀಕ್ಷೆ ವಹಿಸುವ ಮುನ್ನವೇ ಸಾವಿರಾರು ಹಾಡುಗಳನ್ನು ಬರೆದಿದ್ದರು ಎಂಬಂತೆ ಜಾನಪದ ಮೂಲದ ಕೃತಿಗಳಲ್ಲಿ ಉಲ್ಲೇಖ ಉಂಟು; ಅದರಲ್ಲಿ ಸತ್ಯಾಂಶವಿರುವಂತೆ ಕಾಣುವುದು; ದಾಸದೀಕ್ಷೆಯನ್ನು ಸ್ವೀಕರಿಸಿದ ಬಳಿಕ ಅವರ ಹೆಚ್ಚಿನ ಕೃತಿಗಳು ಕೀರ್ತನಸ್ವರೂಪದ್ದಾಗಿದ್ದವು ಎನ್ನಬಹುದು.

ದೋಷದೂರತ್ವ, ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುವ ಅಪಾರವಾದ ಹಿರಿಮೆ, ಇತರ ಸಕಲ ದೇವತೆಗಳ ಮೇಲೆ ಅವನ ನಿಯಂತ್ರಣ, ಭಕ್ತರ ಮೇಲಿನ ಅಪಾರವಾದ ಕಾರುಣ್ಯ, ಮುಖ್ಯವಾಗಿ ಅನಾದಿಕಾಲದಿಂದ ಅನಂತಕಾಲದ ವರೆಗೆ ಪ್ರತಿಯೊಬ್ಬರ ಹಿತೈಷಿಯಾಗಿ ಬಿಂಬನಾಗಿ ಸಕಲ ವಿಧದ ಉನ್ನತಿಗೂ ತೋರುವ ಕೃಪೆ ಮೊದಲಾದ ತತ್ತ್ವಗಳು ಅವರ ಮನಸ್ಸಿಗೆ ಹಿಡಿಸಿದವು. ಶ್ರೀಹರಿಯು ಸ್ವಾಮಿ, ಉಳಿದ ಸಕಲರೂ ಅವನಿಗೆ ಪ್ರೀತಿಪಾತ್ರರಾದ ದಾಸರು ಎಂಬ ಮಧ್ವಸಿದ್ಧಾಂತದ ಪ್ರಧಾನವಾದ ಸಂದೇಶ ಅವರನ್ನು ಹರಿದಾಸರನ್ನಾಗಲು ಪ್ರೇರೇಪಿಸಿತು. ಆ ವೇಳೆಗೆ ಶ್ರೀವ್ಯಾಸರಾಜರ ಸನ್ನಿಧಿಯಲ್ಲೇ ನೆಲೆಸಿದ್ದ ಶ್ರೀವಾದಿರಾಜರ, ಶ್ರೀಪುರಂದರದಾಸರ ನಿಕಟ ಸಂಪರ್ಕವೂ ಒದಗಿ ಮಧ್ವಸಿದ್ಧಾಂತದ ರಹಸ್ಯತತ್ತ್ವಗಳ ಪರಿಜ್ಞಾನ ಅವರಿಗೆ ಲಭಿಸುವಂತಾಯಿತು. ಅದರ ಫಲಶ್ರುತಿ ಎಂಬಂತೆ ಅವರ ಹೆಚ್ಚಿನ ಕೃತಿಗಳು ರಚಿತವಾಗಿವೆ. ಹರಿಭಕ್ತಿಸಾರದಂತಹ, ಮಧ್ವಸಿದ್ಧಾಂತದ ಪ್ರಮೇಯಗಳನ್ನೇ ಉಲ್ಲೇಖಿಸಿ ರಚಿತವಾದ ಕೀರ್ತನೆಗಳ ಸಂಖ್ಯೆಯೇ ಬಹಳ. ಮಧ್ವಾಚಾರ್ಯರನ್ನು ಹನುಮಂತ, ಭೀಮಸೇನನಾಗಿ ಅವತರಿಸಿದ ವಾಯುದೇವರ ಮೂರನೆಯ ಅವತಾರ ಎಂಬುದನ್ನು ಇಡೀ ಪರಂಪರೆಯೇ ಒಪ್ಪಿರುವ ಸಂಗತಿ. ಅದನ್ನು ಶ್ರೀಕನಕದಾಸರು ಸಹ ಸ್ಪಷ್ಟವಾಗಿ ಉಲ್ಲೇಖಿಸಿರುವುದು ಅವರ ಮಾಧ್ವದೀಕ್ಷೆಗೆ ಉತ್ತಮ ಪುರಾವೆ. ಮಧ್ವಸಿದ್ಧಾಂತದಲ್ಲಿ ದೇವತಾ ತಾರತಮ್ಯ, ಜಗತ್ಸತ್ಯತ್ವ ಮೊದಲಾದ ಪ್ರಮೇಯಗಳು ಅವರ ಕೃತಿಯಲ್ಲಿ ಸ್ಪಷ್ಟವಾಗಿಯೇ ನಿರೂಪಿತವಾಗಿವೆ. ಅವರ ಹರಿಭಕ್ತಿಸಾರ ಕೃತಿಯಂತೂ ಮಧ್ವಸಿದ್ಧಾಂತದ ಪರಿಕಲ್ಪನೆಯಲ್ಲಿ ಮೂಡಿಬಂದ ಭಗವಂತನ ಪಾರಮ್ಯವನ್ನು ಬಗೆಬಗೆಯಾಗಿ ನಿರೂಪಿಸುವ ಅದ್ಭುತ ಕೃತಿ. ಅದು ಸಹ ಅವರ ಅನಂತರದ ಕೃತಿಗಳಲ್ಲಿ ಒಂದು ಎಂಬುದು ನಿಃಸಂಶಯ. ಸಂಗ್ರಹವಾಗಿ ಹೇಳುವುದಾದರೆ, ಶ್ರೀಕನಕದಾಸರು ಆರಂಭದ ಹಂತದಲ್ಲಿ ಕವಿಗಳಾಗಿ ಬರವಣಿಗೆಯ ಲೋಕಕ್ಕೆ ತೆರೆದುಕೊಂಡವರು. ಆ ಬಳಿಕ ಭಕ್ತಕವಿಯಾಗಿ ರೂಪುಗೊಂಡು ಹರಿದಾಸರ ಸಾಲಿಗೆ ಸೇರಿದವರು. ಮೊದಲಿಗೆ ತಿಮ್ಮಪ್ಪನಾದ ಅವರು ಬಳಿಕ ತಿಮ್ಮಪ್ಪನಾಯಕನಾದರು, ಕನಕನಾಯಕನಾದರು, ಕವಿ ಕನಕ ಎನ್ನಿಸಿದರು, ಕೊನೆಗೆ ಭಕ್ತಕವಿಯಾಗಿ ಶ್ರೀಕನಕದಾಸರೆಂದು ಸುಪ್ರಸಿದ್ಧರಾದರು.

ಅವರ ಕೀರ್ತನೆಗಳಲ್ಲಿ ಭಗವದ್ಭಕ್ತಿಯನ್ನು ಸಾರುವ ಕೃತಿಗಳದ್ದು ಸಿಂಹಪಾಲು. ಒಂದರ್ಥದಲ್ಲಿ ಅವರ ಎಲ್ಲ ಕೀರ್ತನೆಗಳು ಹರಿಭಕ್ತಿಸಾರದಂತೆ ಇರುವವು. ಕೆಲವೆಡೆ ಹರಿಭಕ್ತಿಸಾರದ ಪದ್ಯಗಳ ವಿಸ್ತಾರ ಕಂಡುಬಂದರೆ, ಮತ್ತೆ ಕೆಲವು ಕಡೆ ಅವರ ಕೀರ್ತನೆಗಳ ಸಂಕ್ಷಿಪ್ತ ರೂಪ ಹರಿಭಕ್ತಿಸಾರದಲ್ಲಿ ಕಾಣುವುದು[೧].

ಶ್ರೀಕನಕದಾಸರು ಕೃತಿ ರಚನೆಗೆ ಮೊದಲಿಗೆ ಆರಿಸಿಕೊಂಡದ್ದು ಸಾಂಗತ್ಯ. ಮೋಹನ-ತರಂಗಿಣಿ ಸಾಂಗತ್ಯದ ಕೃತಿ. ನರಸಿಂಹಸ್ತವ ಎಂಬ ಸಾಂಗತ್ಯದ ಕೃತಿಯು ಸಹ ಪ್ರಾಯಃ ಆ ಮುಂಚಿನ ಕಾಲದ್ದೇ ಆಗಿರಬೇಕು ಎನ್ನಲು ಸಾಂಗತ್ಯದ ಛಂದಸ್ಸು ಮಾತ್ರವಲ್ಲದೇ ಅದರಲ್ಲಿ

---

೧. ಪ್ರಸ್ತುತ ಅನುವಾದದಲ್ಲಿ ಈ ವಿಶೇಷಾಂಶವನ್ನು ಉದ್ದಕ್ಕೂ ನಿರೂಪಿಸಲಾಗಿದೆ.

ಕಂಡುಬರುವ ರಾಮಾನುಜರ ಉಲ್ಲೇಖವೂ ಗಮಕ. ಆದರೆ, ಅನಂತರದ ಅವರ ಮೂರು ಸ್ವತಂತ್ರ ಕೃತಿಗಳು ಸಹ ಭಾಮಿನಿ ಷಟ್ಪದಿಯಲ್ಲಿ ರಚಿತವಾದವು. ಕಾವ್ಯದ ಯಶಸ್ಸಿಗೆ, ಸರಳತೆಗೆ, ನಿರೂಪಣೆಗೆ ಷಟ್ಪದಿ ಹೆಚ್ಚು ಪರಿಣಾಮಕಾರಿಯಾದ ಮಾಧ್ಯಮ ಎಂಬುದು ಇದರಿಂದ ತಿಳಿಯುವುದು. ಇದು ಅವರಿಗೆ ಕುಮಾರವ್ಯಾಸಭಾರತ ಮೊದಲಾದವುಗಳಿಂದ ದೊರೆತ ಪ್ರೇರಣೆ ಎನ್ನಬಹುದಾದರೂ, ಅದಕ್ಕಿಂತಲೂ ಮುಖ್ಯವಾಗಿ ಶ್ರೀವಾದಿರಾಜರ ಸ್ವಪ್ನಪದ ಮೊದಲಾದ ಕೃತಿಗಳಿಂದ ದೊರೆತ ಪ್ರೇರಣೆ ಎನ್ನಬಹುದು. ಮೋಹನತರಂಗಿಣಿಯು ೪೨ ಸಂಧಿಗಳ ಸುಧೀರ್ಘ ಕೃತಿ. ಮಹಾಕಾವ್ಯಕ್ಕೆ ವಿಹಿತವಾದ ಸಕಲ ಲಕ್ಷಣಗಳನ್ನು ಒಳವಡಿಸಿಕೊಂಡಿರುವ ಕೃತಿ. ನಳಚರಿತ್ರೆ ಹಾಗೂ ರಾಮಧಾನ್ಯಚರಿತೆ ಕೃತಿಗಳು ಖಂಡಕಾವ್ಯಗಳು. ನಳಚರಿತ್ರೆ ಮಹಾಭಾರತವನ್ನು ಆಧರಿಸಿದ ಕೃತಿಯಾದರೆ, ರಾಮಧಾನ್ಯಚರಿತೆ ರಾಮಾಯಣದ ಸ್ಫೂರ್ತಿಯನ್ನು ಹೊಂದಿದ ಕೃತಿ. ನಳಚರಿತ್ರೆಯನ್ನು ಆಧರಿಸಿ ಅನೇಕ ಕೃತಿಗಳು ಸಂಸ್ಕೃತ ಹಾಗೂ ಕನ್ನಡದಲ್ಲಿ ರಚಿತವಾಗಿದ್ದರೂ, ನಳಚರಿತ್ರೆ ಎಂದಕೂಡಲೆ ಜ್ಞಾಪಕಕ್ಕೆ ಬರುವ ಕೃತಿ ಶ್ರೀಕನಕದಾಸರ ನಳಚರಿತ್ರೆಯೇ ಆಗಿದೆ ಎಂಬಲ್ಲಿ ಇದರ ಯಶಸ್ಸು ಎದ್ದು ಕಾಣುವುದು. ಕನ್ನಡದ ಹೆಚ್ಚಿನ ಕವಿಗಳು ಅನುಭಾವಿಗಳ ಸಾಲಿಗೆ ಸೇರುವುದಿಲ್ಲ ಎಂಬ ಕಾರಣದಿಂದಲೇ ಅವರಾರು ಶ್ರೀಕನಕದಾಸರಂತೆ ವಿಶೇಷ ಹಿರಿಮೆಯನ್ನು ಪಡೆದುಕೊಂಡಿಲ್ಲ. ಪಂಪ, ಕುಮಾರವ್ಯಾಸಾದಿಗಳು ಮಹಾಕಾವ್ಯ ಪ್ರಾಕಾರಕ್ಕೆ ಸೇರಿದ ರಚನೆಗಳನ್ನು ಮಾತ್ರ ಹೊಂದಿದ್ದರೆ, ಶ್ರೀಕನಕದಾಸರು ಮಹಾಕಾವ್ಯ, ಖಂಡಕಾವ್ಯ, ಕೀರ್ತನೆ, ದಂಡಕ, ಮುಂಡಿಗೆ, ಉಗಾಭೋಗ, ಸುಳಾದಿ ಮೊದಲಾದ ಬಹುಬಗೆಯ ರಚನೆಗಳನ್ನು ಮಾಡುವ ಮೂಲಕ ರಚನೆಯಲ್ಲೂ ಅಪಾರ ವೈವಿಧ್ಯವನ್ನು ಮೆರೆದಿರುವರು.

ಸದ್ಯಕ್ಕೆ ತಿಳಿದುಬಂದಿರುವಂತೆ ಅವರ ರಚನೆ ಎಂಬುದಾಗಿ ತಿಳಿದಿರುವ ಕೃತಿಗಳ[೧] ವಿವರ ಹೀಗಿದೆ:

| | | |
|---|---|---|
| ೦೧. ಮೋಹನ ತರಂಗಿಣಿ | ೦೨. ಶ್ರೀನರಸಿಂಹಸ್ತವ | ೦೩. ನಳಚರಿತ್ರೆ |
| ೦೪. ಶ್ರೀರಾಮಧಾನ್ಯ ಚರಿತ್ರೆ | ೦೫. ಹರಿಭಕ್ತಿಸಾರ | ೦೬. ವ್ಯಾಸಗೋಷ್ಠೀ |
| ೦೭. ಕೀರ್ತನೆಗಳು | ೦೮. ಉಗಾಭೋಗಗಳು | ೦೯. ದಂಡಕಗಳು |
| ೧೦. ಸುಳಾದಿ | ೧೧. ಮುಂಡಿಗೆಗಳು | |

**

## ಶ್ರೀಕನಕದಾಸರ ಶೈಲಿ

ಹರಿದಾಸಸಾಹಿತ್ಯದಲ್ಲಿ ತಮ್ಮ ಅತ್ಯಂತ ಸುಲಭ ಹಾಗೂ ಸರಳ ಶೈಲಿಗೆ ಹೆಸರಾದವರು ಶ್ರೀಪುರಂದರದಾಸರು. ತಮ್ಮ ಕಾವ್ಯಮಯಶೈಲಿಗೆ ಹೆಸರಾದವರು ಶ್ರೀಕನಕದಾಸರು. ಸರಳತೆ, ಸ್ಪಷ್ಟತೆ, ಗೇಯತೆ ಮೊದಲಾದ ವಿಶಿಷ್ಟ ಗುಣಗಳೊಂದಿಗೆ

೧. ಶ್ರೀಕನಕದಾಸರ ಎಲ್ಲ ಕೃತಿಗಳ ಬಗ್ಗೆ ಹೆಚ್ಚಿನ ಮಾಹಿತಿಯನ್ನು ನಮ್ಮ ಪ್ರಕಾಸನದ 'ಸಂತ-ಕವಿ-ಭಕ್ತ ಕನಕದಾಸರು' ಎಂಬ ಕೃತಿಯನ್ನು ನೋಡಬಹುದು.

ಅಪಾರವಾದ ಗಾಂಭೀರ್ಯ ಹಾಗೂ ದೇಶೀ ಶೈಲಿ ಅವರ ಕೃತಿಗಳ ವಿಶೇಷತೆ. ಜಾನಪದ ಶೈಲಿಯ ಕೃತಿಗಳ ಹರಿದಾಸರೆಂದರೆ ಶ್ರೀಕನಕದಾಸರೊಬ್ಬರೆ. ಅದಕ್ಕೆ ಅವರು ವಾಸಿಸುತ್ತಿದ್ದ ಕಾಗಿನೆಲೆ ಪರಿಸರ ಹಾಗೂ ಅವರ ಜಾತಿ ಕಾರಣವಾದವು ಎನ್ನಬಹುದು.

'ಅವನ ಹೇಳಿಕೆಯಲ್ಲಿ ಕೊಂಚವೂ ಮುಸುಕಿಲ್ಲ ಮಬ್ಬಿಲ್ಲವಾಗಿ ಅದನ್ನು ಅರ್ಥಮಾಡಿಕೊಳ್ಳುವುದಕ್ಕೆ ತೊಡಕೂ ಇಲ್ಲ; ತಡವೂ ಇಲ್ಲ. ವಸ್ತು ಘಟನೆ ದೃಶ್ಯ ನಮ್ಮ ಮುಂದೆ ರೂಪುಗೊಂಡು ನಿಲ್ಲುವಂತೆ ಮಾಡಬಲ್ಲ ವಾಸ್ತವನೋಟ, ವಾಸ್ತವ ನಿರೂಪಣೆ, ಕನಕದಾಸನ ಶಕ್ತಿ ಮತ್ತು ಯುಕ್ತಿ.[೧]'

'ಅವನ ವಾಣಿಯಲ್ಲಿ ಸಹಜಸೊಮ್ಮು ದೇಸಿಯ ಸವಿದಿರುಳು ಮೈಗೊಂಡಿವೆ[೨]'.

'ಸರಳತೆ ಹೃದ್ಯತೆಗಳೇ ಅವರ ಶೈಲಿಯ ವಿಶಿಷ್ಟತೆ. ಎಲ್ಲಿಯೂ ಅವರ ಭಾಷೆ ಪೆಡಸಾಗಿಲ್ಲ. ಎತ್ತಿಕೊಂಡ ವಸ್ತು ಭಾವಗಳಿಗೆ ಉಚಿತವಾಗಿ ಸರಳವಾದ ಮಾತುಗಳಲ್ಲಿ ವಿಶೇಷವಾದ ಅರ್ಥವನ್ನು ವಿಸ್ತರಿಸುತ್ತ ಹೋಗುತ್ತಾರೆ. ಅವರು ತಮ್ಮ ಕವಿ ವಿಶಿಷ್ಟವಾದ ಸಹಜ ಪ್ರತಿಭೆಯಿಂದ ಮನಸ್ಸಿನ ಉದಾರತೆಯಿಂದ ವಸ್ತು ವೈವಿಧ್ಯ ಹಾಗೂ ಛಂದೋವೈವಿಧ್ಯಗಳಿಂದ ಸಮಕಾಲೀನ ಜೀವನಪ್ರಜ್ಞೆಯಿಂದ ಪಂಥಬದ್ಧವಲ್ಲದೆ ಉದಾತ್ತವ್ಯಕ್ತಿತ್ವದಿಂದ ದಾಸಪರಂಪರೆಯಲ್ಲಿ ಮಾತ್ರವಲ್ಲ ಕನ್ನಡಕವಿಗಳ ಪಂಕ್ತಿಯಲ್ಲಿಯೂ ವಿಶಿಷ್ಟಸ್ಥಾನವನ್ನು ಸಂಪಾದಿಸಿಕೊಂಡಿದ್ದಾರೆ.[೩]'

'ಅವರ ಕಾವ್ಯ ಕುಮಾರವ್ಯಾಸರ ಭಾರತದಷ್ಟೇ ಜನಪ್ರಿಯವಾಗಿದೆ. ಜನಮನ್ನಣೆ ಗಳಿಸಿದ ಕಾವ್ಯವಾಗಿದೆ. ಅಲ್ಲಿಯ ವಸ್ತು, ಅದರ ನಿರ್ವಹಣೆ ಹಾಗೂ ಅಲ್ಲಿ ಬರುವ ವರ್ಣನೆಗಳು ಎಂತಹವರನ್ನೂ ಸೆಳೆದುಕೊಳ್ಳಬಲ್ಲ ಮೋಹಕ ಶಕ್ತಿಯನ್ನು ಪಡೆದಿವೆ.... ಸಣ್ಣ ಕಥಾವಸ್ತುವೊಂದಕ್ಕೆ ಒಳ್ಳೆಯ ಕಾವ್ಯದ ಚೌಕಟ್ಟನ್ನೂ, ಸ್ಥಾನವನ್ನೂ ಕೊಟ್ಟ ಯಶಸ್ಸು ಕನಕದಾಸರದ್ದು. ಚೌಂಡರಸನ ಕೈಯಲ್ಲಿ ಸೊರಗಿದ್ದ ಮೂಲೆಗುಂಪಾಗಿದ್ದ ಕಾವ್ಯವಸ್ತುವಿಗೆ ಜೀವಕಳೆಯನ್ನಿತ್ತ ಕೀರ್ತಿ ಕನಕದಾಸರಿಗೆ ನಿಸಂದೇಹವಾಗಿ ಸಲ್ಲುತ್ತದೆ. ಯಾವುದೇ ಸನ್ನಿವೇಶವನ್ನು ಕಥಾವಸ್ತುವನ್ನು ಸಮರ್ಥವಾಗಿ ನಿರ್ವಹಿಸಬಲ್ಲ ಶಕ್ತಿ ಅವರದ್ದು. ಶೈಲಿಯಲ್ಲಿ ಸರಳತೆ ಕಂಡು ಬಂದರೂ ಕಾವ್ಯ ಸೌಂದರ್ಯಕ್ಕೆ ಕೊರತೆಯಿಲ್ಲ.[೪]'

ಶ್ರೀಕನಕದಾಸರ ಶೈಲಿ ಈಗಾಗಲೇ ತಿಳಿಸಿರುವಂತೆ, ಅವರು ದಾಸರಲ್ಲಿ ಕವಿಗಳು. ಆದ್ದರಿಂದ ಕಾವ್ಯಮಯ ಶೈಲಿ. ಕವಿಗಳಲ್ಲಿ ದಾಸರು ಆದ್ದರಿಂದ ಅವರ ಶೈಲಿ ತಾತ್ತ್ವಿಕ.

---

೧. ಎಸ್.ವಿ.ರಂಗಣ್ಣ(ಶೈಲಿ ಪು. ೨೬೫) – ಕನಕದಾಸರ ಒಂದು ಅಧ್ಯಯನ(ಪ್ರ: ವಿದ್ಯಾನಿಧಿ ಪ್ರಕಾಶನ, ಗದಗ; ೨೦೦೭; ಪು.೧೩೦)

೨. ಡಾ. ರಂ.ಶ್ರೀ. ಮುಗಳಿ (ಕನ್ನಾ ಪು. ೧೫೮)– ಕನಕದಾಸರ ಒಂದು ಅಧ್ಯಯನ (ಪ್ರ: ವಿದ್ಯಾನಿಧಿ ಪ್ರಕಾಶನ, ಗದಗ; ೨೦೦೭; ಪು.೧೩೦)

೩. ಡಾ. ಜಿ.ಎಸ್.ಶಿವರುದ್ರಪ್ಪ – ಕನಕದಾಸರ ಒಂದು ಅಧ್ಯಯನ (ಪ್ರ: ವಿದ್ಯಾನಿಧಿ ಪ್ರಕಾಶನ, ಗದಗ; ೨೦೦೭; ಪು.೧೩೦)

೪. ಕನಕದಾಸರ ಒಂದು ಅಧ್ಯಯನ (ಪ್ರ: ವಿದ್ಯಾನಿಧಿ ಪ್ರಕಾಶನ, ಗದಗ; ೨೦೦೭; ಪು.೩೦೫)

ಅವರ ಕೃತಿಗಳು ವಿಷಯದ ದೃಷ್ಟಿಯಿಂದ ಹರಿಭಕ್ತಿಸಾರ. ನಿರೂಪಣೆಯ ದೃಷ್ಟಿಯಿಂದ ಮೋಹನತರಂಗಿಣಿ, ಅಣಕದ ದೃಷ್ಟಿಯಿಂದ ರಾಮಧಾನ್ಯಚರಿತೆ, ರೋಚಕತೆಯ ದೃಷ್ಟಿಯಿಂದ ನಳಚರಿತ್ರೆ, ಗೇಯತೆಯ ದೃಷ್ಟಿಯಿಂದ ಕೀರ್ತನೆಗಳು, ವಿಷಯವ್ಯಾಪ್ತಿಯ ದೃಷ್ಟಿಯಿಂದ ತಾತ್ತ್ವಿಕ ವಿಶ್ವಕೋಶ, ಪ್ರಾರ್ಥನೆಯ ದೃಷ್ಟಿಯಿಂದ ನರಸಿಂಹಸ್ತವ, ಪಾಂಡಿತ್ಯದ ದೃಷ್ಟಿಯಿಂದ ವ್ಯಾಸಗೋಷ್ಠಿ[೧],

ಹರಿದಾಸಪರಂಪರೆಯ ಏಕಮಾತ್ರ ಸಾಂಗತ್ಯದ ಮಹಾಕಾವ್ಯ ಎಂಬ ದೃಷ್ಟಿಯಿಂದ ಅವರ ಮೋಹನತರಂಗಿಣಿ ಅಮರವೆನ್ನಿಸುವ ಕೃತಿ. ಪೌರಾಣಿಕ ಕಥಾನಿರೂಪಣೆಗೆ ಆದರ್ಶಪ್ರಾಯವೆನ್ನಿಸುವ ಕಾರಣದಿಂದ ನಳಚರಿತ್ರೆ ಅತ್ಯಂತ ರೋಚಕ. ಅಣಕು ಕಾವ್ಯಗಳಲ್ಲಿ ಅಪೂರ್ವ ಸಂದೇಶವನ್ನು ನೀಡುವ ದೃಷ್ಟಿಯಲ್ಲಿ ಅವರ ರಾಮಧಾನ್ಯಚರಿತೆ ಅನುಪಮ, ಭೌತಿಕ ಸುಖದಲ್ಲಿ ಮೈಮರೆತ ಜನಗಳನ್ನು ಆಧ್ಯಾತ್ಮಿಕದತ್ತ ಮುಖಮಾಡಿಸುವಲ್ಲಿ ಅವರ ಕೃತಿಗಳು ಉಪನಿಷತ್ತು.

*****

## [೨]ಹರಿಭಕ್ತಿಸಾರ[೩]

ಹರಿಭಕ್ತಿಸಾರ ಶ್ರೀಕನಕದಾಸರ ಕೃತಿರಾಜ ಎನ್ನಬಹುದು. ಗಾತ್ರದಲ್ಲಿ ಅವರ ಇತರ ಮೂರು ಕಾವ್ಯ ಕೃತಿಗಳಿಗಿಂತ ಕಿರಿದಾದರೂ, ವಿಷಯ, ವಿಷಯದಲ್ಲಿನ ಪರಿಪಕ್ವತೆ, ನಿರೂಪಣೆಯ ಗಾಂಭೀರ್ಯ, ಅನುಭವದ ಗಾಢತನ, ಶೈಲಿಯ ಓಘ ಎಲ್ಲದಕ್ಕಿಂತ

೧. ಶ್ರೀಕನಕದಾಸರ ಶ್ರೀವ್ಯಾಸಗೋಷ್ಠಿ ಕೃತಿಯ ಉಲ್ಲೇಖ ರಾಘವೇಂದ್ರಪ್ಪಕವಿಯ 'ಸಾರಸ್ವತಪರಿಣಯ' ಎಂಬ ಕೃತಿಯಲ್ಲಿ ಬಂದಿದೆ; ಈ ಬಗ್ಗೆ ಹೆಚ್ಚಿನ ವಿವರಗಳನ್ನು ನಮ್ಮ ಪ್ರಕಾಶನದ 'ಸಂತ-ಕವಿ-ಭಕ್ತ ಕನಕದಾಸರು' ಎಂಬ ಕೃತಿಯಲ್ಲಿ ಕೊಡಲಾಗಿದೆ.

೨. ಹಂಪೆಯ ಹರಿಹರ ಎಂಬುದಾಗಿ ಪ್ರಸಿದ್ಧನಾಗಿರುವ ಹರಿಹರ ಕವಿ ರಕ್ಷಾಶತಕ ಮತ್ತು ಪಂಪಾಶತಕ ಎಂಬ ಎರಡು ಕೃತಿಗಳನ್ನು ಬರೆದಿದ್ದು, ಅವು ಅವನ ಆತ್ಮಕಥನದ ಸ್ವರೂಪದಲ್ಲಿ ರಚಿತವಾಗಿವೆ. ರಕ್ಷಾಶತಕದಲ್ಲಿ ನೂರೊಂದು ಪದ್ಯಗಳಿದ್ದು ಪ್ರತಿಯೊಂದು ಪದ್ಯದ ಕೊನೆಯಲ್ಲಿ 'ಪಂಪಾಪುರದರಸ ವಿರೂಪಾಕ್ಷ ರಕ್ಷಿಪುದೆನ್ನಂ' ಎಂದು ಬರುವುದು. ಸ್ರಗ್ಧರಾ, ಮಹಾಸ್ರಗ್ಧರಾ ಛಂಧಸ್ಸಿನಲ್ಲಿ ಅವನ ಈ ಕೃತಿ ರಚಿತವಾಗಿದೆ. ಶ್ರೀಕನಕದಾಸರ ಹರಿಭಕ್ತಿಸಾರ ಒಂದು ರೀತಿಯಲ್ಲಿ ಇದಕ್ಕೆ ಉತ್ತರವೆಂಬಂತೆ ಹರಿಭಕ್ತಿಯ ಕಥಾನಕವಾಗಿ ರಚಿತವಾಗಿದೆ. ಶ್ರೀಕನಕದಾಸರು ಸಹ ಹರಿಹರರಂತೆ ವಿಜಯನಗರದ ಪರಿಸರದಲ್ಲಿ ದೀರ್ಘಕಾಲ ನೆಲೆಸಿದ್ದವರು ಎಂಬುದು ಸಹ ಗಮನಾರ್ಹವಾದ ಅಂಶ.
ಈ ಕೃತಿಯು ಒಟ್ಟು ೩೦ಕ್ಕಿಂತ ಹೆಚ್ಚು ಬಾರಿ ಪ್ರಕಾಶನಗೊಂಡಿದೆ.

೩. ಇದರ ಅನಂತರದ ಕೃತಿಗಳಾದ 'ನರಹರಿಭಕ್ತಿಸಾರ' (ಅಜ್ಞಾತ ಕರ್ತೃಕ, ಸುಮಾರು ೧೭೦೦), 'ಜಿನಭಕ್ತಿಸಾರ' ಎಂಬ ಚಂದ್ರಸಾಗರವರ್ಣಿಯ ಕೃತಿ (೧೮೧೦), 'ಭಕ್ತಿಸುಧಾರಸ' ಎಂಬ ರಾಮಬ್ರಹ್ಮಾನಂದ ಯೋಗಿಯ ಕೃತಿ (೧೮೪೦), 'ಕೃಷ್ಣರಾಜಭಕ್ತಿಸಾರ' ಎಂಬ ದೇವಲಾಪುರದ ನಂಜುಂಡ ಎಂಬವರ ಕೃತಿ (೧೮೪೧) ಮೊದಲಾದವುಗಳ ಮೇಲೆ ಶ್ರೀಕನಕದಾಸರ ಈ ಕೃತಿಯ ಪ್ರಭಾವವನ್ನು ಗುರುತಿಸಬಹುದು.

ಮಿಗಿಲಾಗಿ ಭಗವಂತನ ಬಗ್ಗೆ ಎದ್ದು ಸಮರ್ಪಣಾ ಭಾವ, ಮುಖ್ಯವಾಗಿ ಅನುಭಾವ ದೃಷ್ಟಿ - ಇವೇ ಮೊದಲಾದ ಕಾರಣದಿಂದ ನಿಃಸಂಶಯವಾಗಿಯೂ ಇದು ಅವರ ಕೃತಿರಾಜ ಎನ್ನಬೇಕು. ಇದು ಶತಕಪ್ರಾಕಾರಕ್ಕೆ ಸೇರುವ ಕೃತಿ[1].

ಇಲ್ಲಿ ಹರಿ ಎಂದರೆ ಅವರ ಮೆಚ್ಚಿನ ಆರಾಧ್ಯದೇವತೆಯಾದ ಶ್ರೀಹರಿ. ಕಾಗಿನೆಲೆಯ ನರಸಿಂಹಾದಿಕೇಶವ, ಬಂಕಾಪುರದ ನರಸಿಂಹ ಹಾಗೂ ಕೇಶವ, ಬಾಡದ ರಂಗನಾಥ, ತಿರುಪತಿಯ ವೇಂಕಟೇಶ, ಶ್ರೀರಂಗದ ರಂಗನಾಥ, ಉಡುಪಿಯ ಶ್ರೀಕೃಷ್ಣ ಮೊದಲಾಗಿ ಎಲ್ಲ ರೂಪದ ದೇವನೆಂದರೆ ಈ ಶ್ರೀಹರಿಯೆ. ಮಧ್ವಪಂಥದ ಪೂರ್ಣ ಅನುಯಾಯಿಯಾಗಿ ಸಿದ್ಧಿಪಡೆದ ಶ್ರೀಕನಕದಾಸರ ಈ ಕೃತಿ ಭಕ್ತಿಸಾಹಿತ್ಯದಲ್ಲಿ ಒಂದು ಸಂಚಲವನ್ನೇ ಉಂಟುಮಾಡಿತು ಎನ್ನಬಹುದು.

ಶ್ರೀಕನಕದಾಸರ [2]ಹರಿಭಕ್ತಿಸಾರ ಹರಿದಾಸಸಾಹಿತ್ಯದಲ್ಲಿಯೇ ಪ್ರಪ್ರಥಮಬಾರಿಗೆ ಭಕ್ತಿಪ್ರಮೇಯವನ್ನು ಕುರಿತು ರಚಿತವಾದ ಅಪೂರ್ವಕೃತಿ. ನೂರೆಂಟು ಪದ್ಯಗಳ ಇದು ಶತಕಸಾಹಿತ್ಯಕ್ಕೆ ಸೇರುವ ಕೃತಿ. ಭಾಮಿನಿಷಟ್ಪದಿಯಲ್ಲಿ ರಚಿತವಾಗಿರುವ ಈ ಕೃತಿಯಲ್ಲಿ ಒಟ್ಟು ನೂರೆಂಟು ಪದ್ಯಗಳಿದ್ದು ಅನಂತರದ ನಾಲ್ಕು ಪದ್ಯಗಳು ಫಲಶ್ರುತಿಯ ರೂಪವಾಗಿವೆ. ಮೊದಲ ಹದಿನಾರು ಪದ್ಯಗಳಲ್ಲಿ ಶ್ರೀರಾಮ ಹಾಗೂ ಶ್ರೀಕೃಷ್ಣರೂಪದ ಶ್ರೀಹರಿಯ ಸ್ತೋತ್ರ ಕಂಡುಬಂದರೆ ಅ ಮುಂದಿನ ಪದ್ಯಗಳಲ್ಲಿ ಶ್ರೀಹರಿಯ ಹಿರಿಮೆ ಬಗೆಬಗೆಯಲ್ಲಿ ನಿರೂಪಿತವಾಗಿದೆ.

ಶ್ರೀಹರಿಯು ಸರ್ವತಂತ್ರಸ್ವತಂತ್ರ, ಅನಂತಾನಂತಕಲ್ಯಾಣಗುಣಗಣಪರಿಪೂರ್ಣ, ಸಕಲದೋಷದೂರ; ಈ ಜಗತ್ತಿನ ಸೃಷ್ಟಿ, ಸ್ಥಿತಿ, ಲಯ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷ ಎಂಬ ಅಷ್ಟಮಹಾಕಾರ್ಯಗಳು ನಡೆಯುವುದು ಅವನಿಂದಲೇ. ಅವನ ಪ್ರೇರಣೆ ಇಲ್ಲದ ಇತರ ಸಕಲರೂ ಕೇವಲ ಬೊಂಬೆಗಳಿದ್ದಂತೆ. ಆಡಿಸಿದರಷ್ಟೇ ಬೊಂಬೆಗಳು ಆಡುವಂತೆ ಶ್ರೀಹರಿಯ ಪ್ರೇರಣೆಯಿಂದ ಮಾತ್ರವೇ ರಮಾಬ್ರಹ್ಮಾದಿಗಳನ್ನೊಳಗೊಂಡ ಈ ಜಗತ್ತು ತನ್ನ ಅಸ್ತಿತ್ವವನ್ನು, ಚಟುವಟಿಕೆಯನ್ನು

---

೧. ಹರಿಭಕ್ತಿಸಾರ ಕೃತಿಯು ಈವರೆಗೆ ಸುಮಾರು ೪೦ ಸಲ ಪ್ರಕಾಶಿತವಾಗಿದೆ. ಆದರೆ ಅರ್ಥಸಮೇತ ಪ್ರಕಾಶನಗೊಂಡಿರುವುದು ಮೂರ್ನಾಲ್ಕು ಸಲ ಮಾತ್ರ. ೧೮೬೮, ೧೮೭೬ ಮತ್ತು ೧೮೭೯ರಲ್ಲಿ ಸರಸ್ವತಿ ನಿಲಯ, ಮುದ್ರಾಕ್ಷರ ಶಾಲೆ, ಮದ್ರಾಸ್ ಇಂದ ಪ್ರಕಾಶಿತ ಕೃತಿಯಲ್ಲಿ ಇದನ್ನು ವಿಷ್ಣುಭಕ್ತಿಸಾರ ಎಂದು ಕರೆಯಲಾಗಿದೆ. ಕೆಲವು ಪ್ರಕಾಶನದಲ್ಲಿ ಭಕ್ತಿಸಾರ ಎಂದಷ್ಟೇ ಇದೆ. ಮೂರಕ್ಕಿಂತ ಹೆಚ್ಚು ಸಲ ತೆಲುಗು ಲಿಪಿಯಲ್ಲೂ ಪ್ರಕಾಶಿತವಾಗಿರುವುದು ವಿಶೇಷ.

೨. ಭಕ್ತಿಸಾರ ಎಲ್ಲ ಕಾಲಕ್ಕೂ ಸಲ್ಲಬಲ್ಲ ಕೃತಿ. ಒಳಗಿನ ಪರಮಾತ್ಮನನ್ನು ನೋಡುವ ಕಣ್ಣು ಬೇಕು, ಅವನೊಂದಿಗೆ ಮಾತನಾಡುವ ನಾಲಿಗೆ ಬೇಕು. ಹಾಗೆ ಹುಟ್ಟುವ ಭಕ್ತಿ ಬಾಳಿಗೆ ಬೆಳಕಾಗುತ್ತದೆ ಮತ್ತು ಲೌಕಿಕ ಜಂಜಡದಿಂದ ದೂರವಿಡುತ್ತದೆ.

- ಕನಕಚಿಂತನ ೨೦೧೧-೧೨ (ಪ್ರ: ಮಂಗಳೂರು ವಿಶ್ವವಿದ್ಯಾನಿಲಯ; ಪು. ೨೨೧)

ಹೊಂದಿದೆ. ಬ್ರಹ್ಮದೇವರು ಶ್ರೀಹರಿಯ ಹಿರಿಯ ಮಗ. ಶ್ರೀರುದ್ರದೇವರು ಬ್ರಹ್ಮದೇವರ ಮಗ. ಅಂದರೆ, ಶ್ರೀಹರಿಯ ಮೊಮ್ಮಗ. ಅವರಿಬ್ಬರು ತಮ್ಮನ್ನು ಕುರಿತು ತಪಸ್ಸು ಮಾಡುವ ಭಕ್ತರಿಗೆ ವರವನ್ನು ಕೊಡುವರಾದರೂ, ಆ ವರಗಳ ದುರುಪಯೋಗ ನಡೆದಾಗ ಅವುಗಳನ್ನು ನಿಯಂತ್ರಿಸುವ ಸಾಮರ್ಥ್ಯವನ್ನು ಹೊಂದಿಲ್ಲ. ಶ್ರೀಹರಿಯು ಹಾಗಲ್ಲ. ಅವನು ಅಯೋಗ್ಯರಿಗೆ ವರಗಳನ್ನು ನೀಡುವುದೇ ಇಲ್ಲ. ಬ್ರಹ್ಮರುದ್ರರು ಕೊಟ್ಟ ವರಗಳನ್ನು ದೈತ್ಯರು ದುರುಪಯೋಗ ಮಾಡಿಕೊಂಡಾಗ, ಆ ವರಗಳನ್ನು ವಿಫಲಗೊಳಿಸಿ ನಿಗ್ರಹಿಸುವ ಮಹಾಸಾಮರ್ಥ್ಯವನ್ನು ಅವನು ಹೊಂದಿರುವನು.

ಶ್ರೀಹರಿಯ ಒಬ್ಬ ಮಗನಾದ ಬ್ರಹ್ಮದೇವ ಜಗತ್ತಿನ ಸೃಷ್ಟಿಯನ್ನು ಮಾಡುವ ಕಾರ್ಯವನ್ನು ಮಾಡಿದರೆ, ಆ ಶ್ರೀಹರಿಯ ಇನ್ನೊಬ್ಬ ಮಗನಾದ ಕಾಮ ಸ್ತ್ರೀ-ಪುರುಷರಲ್ಲಿ ಪರಸ್ಪರ ಆಕರ್ಷಣೆಯನ್ನುಂಟುಮಾಡಿ ಪ್ರಜಾವೃದ್ಧಿಗೆ ಕಾರಣನಾಗುವನು. ಶ್ರೀಹರಿಯು ದುಷ್ಟನಿಗ್ರಹವನ್ನು ಮಾಡಲು ಸಮರ್ಥನಾಗಿರುವಂತೆ, ಶಿಷ್ಟರಕ್ಷಣೆಯನ್ನು ಮಾಡುವ ಮಹಾಕರುಣಾಳುವೂ ಆಗಿರುವನು. ತನ್ನ ಭಕ್ತರಾದವರು ಕಾರಣಾಂತರದಿಂದ ಅಪರಾಧಗಳನ್ನೆಸಗಿದರೂ ಮನ್ನಿಸುವ ಕರುಣಾಳು ಅವನು. ಸಂಸಾರ ಹೇಯವಾದುದು, ತನ್ನ ಕರ್ಮಗಳ ಫಲದಿಂದಾಗಿ ಜೀವನಿಗೆ ಬರುವ ಜನ್ಮಗಳು ಅನಂತವಾದುವು. ಜೀವರು ಹುಟ್ಟದಿರುವ ಊರುಗಳಿಲ್ಲ, ತಿನ್ನದಿರುವ ಆಹಾರವಿಲ್ಲ, ನುಡಿಯದಿರುವ ಭಾಷೆಗಳಿಲ್ಲ. ಹೀಗೆ ಜನ್ಮಗಳ ಸಂಖ್ಯೆ ಅಗಣಿತ[೧]. ಶ್ರೀಹರಿಭಕ್ತಿಸಾರದ ಅನೇಕ ಹುಟ್ಟುಗಳಲ್ಲಿ ಜೀವ ಕುಡಿಯು ತಾಯಿಯ ಹಾಲಿನ ಸಿಡಿದ ಬಿಂದುಗಳು ಸಹ ಕ್ಷೀರಸಮುದ್ರಕ್ಕೆ ಎರಡರಷ್ಟಾಗುವವು; ಅವನು ತಿಂದ ಅನ್ನ ಮೇರುಪರ್ವತಕ್ಕೆ ಇಮ್ಮಡಿಯಾಗುವುದು. ಇಷ್ಟಾಗಿಯೂ ಅವನಿಗೆ ಮಡಿದ ಮಕ್ಕಳು ಮೊದಲಾದವುಗಳ ಮೇಲೆ ಹುಟ್ಟುವ

---

೧. ಶ್ರೀಹರಿಭಕ್ತಿಸಾರದ 'ಮಣ್ಣು ಮಣ್ಣನೊಳುದಿಸಲದರಲಿ' ಎಂಬ ಪದ್ಯಕ್ಕೆ, ಶ್ರೀಕನಕದಾಸರ ಈ ಕೆಳಗಿನ ಪದ್ಯ ವಿವರಣೆಯಂತಿದೆ (ಇದರಲ್ಲಿ ಒಂದು ನುಡಿ ಬಿಟ್ಟುಹೋದಂತಿದೆ):

ಮಣ್ಣಿನ ಮಹಿಮೆ ಮನುಜ ನೀನರಿಯೆ
ಷಣ್ಮಹಿಷಿಯುತ ಸರ್ವೋತ್ತಮನ ಲೀಲೆ ॥ ಪ ॥
ಮಣ್ಣಲ್ಲಿ ದೊರಕಿದಳು ಮಾತಾಯಿ ಸೀತಾ
ಮಣ್ಣಳೆದ ವಾಮನ ಮಹಬಲಿಯ ಬೇಡಿ
ಮಣ್ಣು ಪಾವನವಾಯ್ತು ರಾಮಪದಸ್ಪರ್ಶದಿ
ಮಣ್ಣುಂಡ ಬಾಯಲಿ ಬ್ರಹ್ಮಾಂಡ ತೋರಿದ ಕೃಷ್ಣ ॥ ೧ ॥
ಮಣ್ಣಿಗೇ ನಡೆಯಿತು ಮಹಾಭಾರತ ಯುದ್ಧ
ಮಣ್ಣಿಗೇ ಮಡಿದರ ಸಂಖ್ಯೆಗೆಣೆಯಿಲ್ಲ
ಮಣ್ಣಲ್ಲಿ ಬಿತ್ತೆ ಬೀಜ ಮಹಾವೃಕ್ಷವಾಗುವುದು
ಅಣ್ಣ ನಮ್ಮಾದಿಕೇಶವನನುಗ್ರಹದಿಂ ॥ ೨ ॥

ಮೋಹ ಸುಲಭವಾಗಿ ಅಳಿಯುವುದಿಲ್ಲ. ಅದು ಅಳಿಯದ ಹೊರತು ಅವನಿಗೆ ಈ ಸಂಸಾರದಿಂದ ಬಿಡುಗಡೆ ಇಲ್ಲ. ಹಾಗೆ ಮೋಹ ಅಳಿಯುವ ದೊಡ್ಡ ಸಾಧನವೆಂದರೆ ಶ್ರೀಹರಿಯ ಅನುಗ್ರಹವೊಂದೇ.

ಅಂತಹ ಅನುಗ್ರಹ ಲಭಿಸಲು ಅವನ ಸತತ ಸ್ಮರಣೆ ಅತ್ಯಗತ್ಯ. ಸ್ಮರಣೆಗೆ ಭಕ್ತಿಯು ತೀರಾ ಅಗತ್ಯ. ಅಂತಹ ಭಕ್ತಿ ಹುಟ್ಟಲು ಅವನ ಹಿರಿಮೆಯ ಜ್ಞಾನ ಇರಲೇಬೇಕು. ಹಾಗಿಲ್ಲದ ಭಕ್ತಿ ಮೂಢಭಕ್ತಿಯಾದೀತೇ ಹೊರತು ನೈಜಭಕ್ತಿಯಾಗದು. ಅದಕ್ಕೆ ಜೀವನಿಗೆ ದೇಹಾದಿಗಳ ಮೇಲೆ ವೈರಾಗ್ಯ ಹುಟ್ಟಬೇಕು. ಯೋಗ್ಯ ಗುರುಗಳು ಲಭಿಸಿ ಬ್ರಹ್ಮಜ್ಞಾನದ ಉಪದೇಶ ದೊರೆಯಬೇಕು.

ಅಂತಹ ಉಪದೇಶಗಳನ್ನು ತಪ್ಪದೆ ಪಾಲಿಸಿ ಶ್ರೀಹರಿಯ ಹಿರಿಮೆಯನ್ನು ತನ್ನ ಜೀವನದ ಹಾಗೂ ಜಗತ್ತಿನ ಪ್ರತಿಯೊಂದು ಕಾರ್ಯದ ಹಿನ್ನೆಲೆಯಲ್ಲೂ ಗುರುತಿಸಿ ಸಂಭ್ರಮಿಸುವುದೇ ದೊಡ್ಡ ಸಾಧನೆ. ಇಂತಹ ಸಾಧನೆಯನ್ನು ಮಾಡುವವರಿಗೆ ಅವನ ಅನುಗ್ರಹದಿಂದ ಮುಕ್ತಿಯು ಲಭಿಸಿ ಪರಿಪೂರ್ಣ ಆನಂದದಿಂದ ಕೂಡಿದ ಸಿದ್ಧಿ ಲಭಿಸುವುದು. ಇಂತಹ ಸಾಧನೆಗೆ ಶ್ರವಣ ಅತ್ಯಂತ ಪ್ರಮುಖವಾದ ಸಾಧನ. ಹೀಗೆ ಹರಿಭಕ್ತಿಯ ಬಗ್ಗೆ ಸಕಲ ಮಾಹಿತಿಗಳನ್ನು ಒಂದೆಡೆ ಕಲಾತ್ಮಕವಾಗಿ, ಕಾವ್ಯಾತ್ಮಕವಾಗಿ, ತಾತ್ವಿಕವಾಗಿ ಮನಮುಟ್ಟುವಂತೆ ಸಂಗ್ರಹಿಸಿಕೊಡುವ ಹಿರಿಮೆ ಹರಿಭಕ್ತಿಸಾರ ಕೃತಿಯದಾಗಿದೆ.

ಹರಿಭಕ್ತಿಯೇ ಸಕಲ ಜೀವನದ ಒಟ್ಟು ಸಾರ ಎಂಬ ಇಲ್ಲಿಯ ಭಾವ ವೇದಾಂತದ ಸಾರಸರ್ವಸ್ವ. ಅವರ ಎಲ್ಲ ಕೃತಿಗಳೂ ಒಂದರ್ಥದಲ್ಲಿ ''ಹರಿಭಕ್ತಿಸಾರ''ಗಳೆನಿಸಿವೆ.

*****

## ಹರಿಭಕ್ತಿಸಾರ ಹಾಗೂ ಹರಿಕಥಾಮೃತಸಾರ

ಮುಂದೆ ದಾಸಚತುಷ್ಟಯರಲ್ಲಿ ಕೊನೆಯವರೆನ್ನಿಸಿದ ಶ್ರೀಜಗನ್ನಾಥದಾಸರಿಂದ ಶ್ರೀಹರಿಕಥಾಮೃತಸಾರವೆಂಬ ಬೃಹತ್ಕೃತಿ ರಚಿತವಾಯಿತು. ಫಲಶ್ರುತಿಯನ್ನು ಸೇರಿ ಒಟ್ಟು ೧೦೧೩ ಪದ್ಯಗಳ ಆ ಕೃತಿ ಒಟ್ಟು ೩೩ ಸಂಧಿಗಳನ್ನು ಹೊಂದಿದೆ. ಅದರಲ್ಲಿ ಫಲಶ್ರುತಿ ಸಂಧಿಯ ರಚನೆ ಮಾತ್ರ ಕರ್ಜಗಿದಾಸರೆಂದು ಪ್ರಸಿದ್ಧರಾದ ಶ್ರೀಶ್ರೀದವಿಠಲದಾಸರದು. ಶ್ರೀಜಗನ್ನಾಥದಾಸರ ಆ ಕೃತಿ ಇಂದು ವೈಷ್ಣವರಲ್ಲಿ ತುಂಬಾ ಪ್ರಸಿದ್ಧವಾಗಿರುವ ತಾತ್ತ್ವಿಕ ಕೃತಿಯಾಗಿದೆ. ಪಾಮರರಂತೆ ಪಂಡಿತರು ಸಹ ಅದನ್ನು ಜ್ಞಾನಪ್ರಾಪ್ತಿಗಾಗಿ ಅಧ್ಯಯನ ಮಾಡುವುದುಂಟು. ಮಾನ್ವಿ, ರಾಯಚೂರು ಹಾಗೂ ಅದರ ಸುತ್ತಮುತ್ತಲಿನ ಪ್ರಾಂತಗಳಲ್ಲಿ ವೈಶ್ಯರು, ಶೂದ್ರರು ಸೇರಿದಂತೆ ಎಲ್ಲ ಜಾತಿಯ ಜನರು ಸಹ ಅದನ್ನು ಶ್ರದ್ಧಾಭಕ್ತಿಯಿಂದ ಓದುವುದುಂಟು. ಅಷ್ಟು ಮಾತ್ರವಲ್ಲದೆ

ಅದರ ಸಂದೇಶ ಎಂಬ ಕಾರಣದಿಂದ ಏಕಾದಶೀ ಮೊದಲಾದ ವ್ರತಗಳ ಆಚರಣೆಯನ್ನು ಸಹ ಶ್ರದ್ಧೆಯಿಂದ ಮಾಡುವರು. ಅಂತಹ ಕೃತಿಗೆ ಶ್ರೀವ್ಯಾಸರಾಜರು, ಶ್ರೀಪುರಂದರದಾಸರು ಹಾಗೂ ಶ್ರೀವಾದಿರಾಜರು ಮೊದಲಾದವರ ಅನುಗ್ರಹ-ಕಾರಣವಾಯಿತೆಂದು ಫಲಶ್ರುತಿ ಸಂಧಿಯಲ್ಲಿ ಉಲ್ಲೇಖವಿದೆ. [೧]ಸೂಕ್ಷ್ಮವಾಗಿ ಗಮನಿಸಿದಾಗ ಅದರ ಮೇಲೆ ಶ್ರೀಕನಕದಾಸರ ಹರಿಭಕ್ತಿಸಾರದ ಪ್ರಭಾವವೂ ಸಹ ಇರುವುದು ಸ್ಪಷ್ಟವಾಗಿ ಗೋಚರಿಸುತ್ತದೆ[೨].

---

೧. ಶ್ರೀಕನಕದಾಸರ ಬಗ್ಗೆ ಇತ್ತೀಚಿನ ದಶಕಗಳಲ್ಲಿ ತುಂಬಾ ಗಮನಾರ್ಹ ಎನ್ನಿಸುವ ರೀತಿಯಲ್ಲಿ ಸಂಶೋಧನೆ, ಪ್ರಕಾಶನ ಕಾರ್ಯಗಳು ನಡೆದಿವೆ ಎಂಬುದು ಸಂತೋಷದ ಸಂಗತಿ. ಅದಕ್ಕಾಗಿ ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರ, ಕನಕದಾಸ ಅಧ್ಯಯನ ಸಂಶೋಧನ ಪೀಠ, ಎಂ.ಜಿ.ಎಂ ಕಾಲೇಜ್, ಉಡುಪಿ, ರಾಷ್ಟ್ರೀಯಸಂತಕವಿ ಕನಕದಾಸ ಅಧ್ಯಯನ ಕೇಂದ್ರ, ಬೆಂಗಳೂರು, ಕನಕದಾಸರ ಸಂಶೋಧನ ಕೇಂದ್ರ, ಮಂಗಳಗಂಗೋತ್ರಿ, ಮಂಗಳೂರು ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕರ್ನಾಟಕ ಸರ್ಕಾರ ಹೀಗೆ ಅನೇಕ ಸಂಸ್ಥೆಗಳು ಶ್ರೀಕನಕದಾಸರ ಬಗ್ಗೆ ವಿಚಾರ ಸಂಕಿರಣ, ಗ್ರಂಥಪ್ರಕಾಶನ, ಕೃತಿ ಸಂಪಾದನೆ ಮೊದಲಾದ ಕಾರ್ಯಗಳನ್ನು ಹಮ್ಮಿಕೊಂಡು ಉತ್ತಮ ಕೆಲಸವನ್ನು ಮಾಡಿವೆ. ಮುಖ್ಯವಾಗಿ ಶ್ರೀಕನಕದಾಸರ ಮುಖ್ಯಕಾರ್ಯಕ್ಷೇತ್ರವಾದ ಕಾಗಿನೆಲೆ ಹಾಗೂ ಬಾಡ ಕ್ಷೇತ್ರಗಳ ಅಭಿವೃದ್ಧಿ ಕಾರ್ಯ ಉತ್ತಮ ಮಟ್ಟದಲ್ಲಿ ನಡೆದಿದೆ. ಬಾಡದಲ್ಲಿ ಶ್ರೀಕನಕದಾಸರ ಅರಮನೆಯ ಜೀರ್ಣೋದ್ಧಾರ ಕಾರ್ಯ ಹಾಗೂ ವಸ್ತುಪ್ರದರ್ಶನ ಮೊದಲಾದ ಕಾರ್ಯಗಳು ಅಪಾರವೆಚ್ಚದಲ್ಲಿ ನಡೆದು, ಅವರ ಸಾಧನೆಯನ್ನು ಚಿರಸ್ಥಾಯಿಯಾಗಿಸುವ ನಿಟ್ಟಿನಲ್ಲಿ ಯಶಸ್ವಿಯಾಗಿ ನಡೆಯುತ್ತಿವೆ. ಪ್ರಾಯಃ ಒಬ್ಬ ಹರಿದಾಸರ ಬಗ್ಗೆ ಅನೇಕ ಸಂಸ್ಥೆಗಳು ಇಷ್ಟು ವ್ಯಾಪಕವಾಗಿ ಕಾರ್ಯ ಮಾಡುತ್ತಿರುವುದು ಸಣ್ಣ ಸಾಧನೆ ಏನಲ್ಲ. ಹಾಗೆ ನೋಡಿದರೆ ಶ್ರೀಪುರಂದರದಾಸರು ಮೊದಲಾದ ಇತರ ದಾಸರ ಬಗ್ಗೆ ಈ ಬಗೆಯ ಕಾರ್ಯ ಅಷ್ಟಾಗಿ ನಡೆದಿಲ್ಲ ಎನ್ನಬಹುದು. ಈ ಮಾದರಿಯಲ್ಲಿ ಅವರ ಬಗ್ಗೆಯೂ ಸಹ ಸರ್ಕಾರ ಹಾಗೂ ಪ್ರತಿಷ್ಠಿತ ಸಂಸ್ಥೆಗಳಿಂದ ಸಂಶೋಧನ ಮೊದಲಾದ ಕಾರ್ಯಗಳು ನಡೆದಲ್ಲಿ ಅದು ದಾಸಸಾಹಿತ್ಯಕ್ಕೆ, ಕನ್ನಡ ಸಾಹಿತ್ಯಕ್ಕೆ– ಒಟ್ಟಾಗಿ ಜಾಗತಿಕ ಸಾಹಿತ್ಯಕ್ಕೆ ಸಲ್ಲುವ ದೊಡ್ಡ ಕೊಡುಗೆಯಾಗಿ ಮಾನ್ಯವಾಗುವುದು.

೨. 'ಆದರೆ, 'ಹರಿಭಕ್ತಿಸಾರ' ಎಂಬ ಕಿರುಕಾವ್ಯದ ಹೆಚ್ಚಿನ ಭಾಗಗಳಲ್ಲಿ ಸಾಂಪ್ರದಾಯಿಕ ಚಿಂತನೆಯ, ಕುರುಡ ದೈವಾರಾಧನೆ ರೀತಿಯ, ಒಣವೇದಾಂತದ ಸಾಲುಗಳೇ ಹೆಚ್ಚಾಗಿರುವುದು ಶೋಚನೀಯ ಸಂಗತಿಯಾಗಿದೆ.' (ಪು. ೧೮೮); ....... 'ಈ ಕೃತಿಯು ತನ್ನಲ್ಲಿನ ವಿಪರೀತ ಏಕತಾನತೆ ಮತ್ತು ಕ್ಲೀಷೆಗಳ ಬಾಲಿಶತನ– ದಿಂದಾಗಿ ತುಂಬಾ ಪೇಲವವಾಗಿ ಕಾಣುತ್ತದೆ. ಇತರ ಕೃತಿಗಳಲ್ಲಿ ದಾಖಲಾದ ಬದುಕಿನ ಪರವಾದ ನಿಷ್ಠೆ, ಲವಲವಿಕೆ, ಖಚಿತತೆ ಮತ್ತು ಸೃಜನಶೀಲತೆಯ ಸಹಜವಾದ ಸೊಬಗು 'ಹರಿಭಕ್ತಿಸಾರ'ದಲ್ಲಿ ಕಣ್ಮರೆಯಾಗಿರುವುದು ವಿಷಾದನೀಯವಾಗಿದೆ' (ಪು. ೧೯೪).

– ಪ್ರೊ. ಕಾಳೇಗೌಡ ನಾಗವಾರ (ಬದುಕಿನ ಅನನ್ಯತೆಯ ಹಂಬಲ - ಕನಕಚಿಂತನ; ೨೦೧೧-೨೦೧೨; ಪ್ರ: ಕನಕದಾಸ ಸಂಶೋಧನ ಕೇಂದ್ರ, ಮಂಗಳೂರು ವಿಶ್ವವಿದ್ಯಾಲಯ, ಮಂಗಳಗಂಗೋತ್ರಿ; ೨೦೧೩)

ಹರಿಭಕ್ತಿಸಾರ – ವಿಷ್ಣುಭಕ್ತಿಯ ಗರಗಸಕ್ಕೆ ಸಿಕ್ಕಿ ನೋಯುತ್ತಿರುವ ಕನಕಕಾವ್ಯ.

– ಕನಕಚಿಂತನ ೨೦೧೧–೧೨ (ಪ್ರ: ಮಂಗಳೂರು ವಿಶ್ವವಿದ್ಯಾನಿಲಯಪು. ೧೯೫)

'ನೂರ ಹತ್ತು ಪದ್ಯಗಳ ಈ ಕೃತಿ ಭಾವಗೀತಾತ್ಮಕವಾದ ಖಂಡಕಾವ್ಯದಂತಿದೆ. ವಾಸ್ತವವಾಗಿ ಇದು ಷಟ್ಪದೀ ರೂಪದ ಶತಕವಲ್ಲದೆ ಬೇರೆ ಅಲ್ಲ. 'ದೇವ ರಕ್ಷಿಸು ನಮ್ಮನನವರತ' ಎಂದು ಕಡೆಯಾಗುವ ಒಂದೊಂದು ಪದ್ಯದಲ್ಲೂ ಕನಕದಾಸರ ಭಕ್ತಹೃದಯದ ಮೊರೆ ಅತ್ಯಂತ ಸಹಜವಾಗಿ,

ಹರಿಕಥಾಮೃತಸಾರ ಎಂಬ ಹೆಸರಿನಲ್ಲೇ ಶ್ರೀಕನಕದಾಸರ ಹರಿಭಕ್ತಿಸಾರದ ಪ್ರಭಾವ ಸ್ಪಷ್ಟವಾಗಿ ಎದ್ದು ಕಾಣುವುದು. ಅದು ಹರಿಕಥಾಮೃತಸಾರವಾದರೆ, ಇದು ಹರಿಭಕ್ತಿಸಾರ. ಭಾಮಿನಿ ವೃತ್ತವು ಸಹ ಹರಿಭಕ್ತಿಸಾರದ ಪ್ರೇರಣೆಯೇ ಎನ್ನಬಹುದು. ಹರಿಯ ಸರ್ವೋತ್ತಮತ್ವಾದಿ ಪ್ರಮೇಯಗಳ ನಿರೂಪಣೆಯಲ್ಲೂ ಸಹ. ಪುರಾಣಗಳಲ್ಲಿ ಬಂದ ಭಕ್ತರ ಕಥೆಯನ್ನು ತತ್ತ್ವನಿರೂಪಣೆಗೆ [೧]ಶ್ರೀಕನಕದಾಸರು ಬಳಸಿಕೊಂಡಿರುವುದು ಹನುಮಂತ, ವಿಭೀಷಣ, ಶ್ರುತಾಯುಧ ಮೊದಲಾದವರ ಉಲ್ಲೇಖದಲ್ಲಿ ಕಂಡು-ಬರುವುದು. ಅದರಂತೆ ಶ್ರೀಹರಿಕಥಾಮೃತಸಾರದಲ್ಲೂ ಅರ್ಜುನ, ದರ್ಯೋಧನ, ವಿದುರ ಮೊದಲಾದವರ ನಿದರ್ಶನವನ್ನಿತ್ತು ಭಗವಂತನ ಕಾರುಣ್ಯಾದಿ ಗುಣಗಳ ನಿರೂಪಣೆ ಬಂದಿದೆ. ಹರಿಕಥಾಶ್ರವಣದ ಹಿರಿಮೆ 'ಶ್ರವಣಮನಕಾನಂದವೀವುದು' ಎಂಬ ಹರಿಕಥಾಮೃತಸಾರದ ಮಾತಿನಲ್ಲಿ ಬಂದಿದ್ದರೆ, 'ಕೇಳುವುದು ಹರಿಕಥೆಯ[೨]' ಎಂಬ ಮಾತಿನಲ್ಲಿ ಹರಿಭಕ್ತಿಸಾರದಲ್ಲಿ ಬಂದಿದೆ.

******

ಕರುಣಾಪೂರ್ಣವಾಗಿ ಕಿವಿಗೆ ಬೀಳುತ್ತದೆ. ಅದು ತನ್ನ ಕಳಕಳಿಯಿಂದ ಹರಿಹರನ ಪಂಪಾಶತಕ, ರಕ್ಷಾಶತಕಗಳ ನೆನಪನ್ನು ತರುತ್ತದೆ. ಹರಿಭಕ್ತಿಸಾರದ ನಿರರ್ಗಳವಾದ ಓಟ, ಅದರಲ್ಲಿ ವ್ಯಕ್ತವಾಗಿರುವ ಜೀವದ ಅನಿತ್ಯತಾಭಾವ, ಅನನ್ಯ ಶರಣಾಗತಿ ಅತ್ಯಂತ ಹೃದಯಸ್ಪರ್ಶಿಯಾಗಿದೆ.' – ಜಿ.ಎಸ್. ಶಿವರುದ್ರಪ್ಪ (ಮಹಾತ್ಮ ಕನಕದಾಸರ ಪ್ರಶಸ್ತಿ, ಪ್ರ: ಶ್ರೀಕನಕದಾಸರ ನಾಲ್ಕನೇ ಶತಮಾನೋತ್ಸವ ರಾಜ್ಯ ಸಮಿತಿ, ಬೆಂಗಳೂರು, ೧೯೬೫, ಪು. ೧೪೧) ಇದು ಈ ಕೆಳಗಿನ ವಿಮರ್ಶೆಗೆ ಉತ್ತರರೂಪವಾಗಿರುವುದು ಗಮನಾರ್ಹ.

೧. ಇದರಲ್ಲಿ ಪ್ರಸ್ತಾಪಿತವಾಗಿರುವ ೧೬ ರಾಜರುಗಳ ಬಗ್ಗೆ ಅವರ 'ಇರಬಂದುದಿಲ್ಲ ಸಂಸಾರ' ಎಂಬ ಕೃತಿಯಲ್ಲಿ 'ದಶರಥ ಮೊದಲಾದ ಷೋಡಶರಾಯರುಗಳೆಲ್ಲಿ?' ಎಂಬ ಮಾತು ಗಮನಾರ್ಹ.

೨. ಶ್ರೀಕನಕದಾಸರು ಶಿವನ ಸ್ತೋತ್ರಗಳನ್ನು ತಮ್ಮ ಮೋಹನತರಂಗಿಣಿ ಮೊದಲಾದ ಕೃತಿಗಳಲ್ಲಿ ಮಾತ್ರವಲ್ಲದೇ ಅನೇಕ ಕೀರ್ತನೆಗಳಲ್ಲೂ ಸಹ ಮಾಡಿರುವರು. ಇದು ಅವರು ಕೇವಲ ಸಾಂಪ್ರದಾಯಿಕವಾದ ರಾಮಾನುಜ ಮತದವರೇ ಹೊರತು ವಾಸ್ತವವಾಗಿ ಮಾಧ್ವವೈಷ್ಣವ ಮತದವರು ಎಂಬುದಕ್ಕೆ ಸ್ಪಷ್ಟ ನಿದರ್ಶನ. ಈ ಮೊದಲೆ ತಿಳಿಸಿರುವಂತೆ, ಶಿವನನ್ನು ಶ್ರೀವೈಷ್ಣವ ಮತ ಎಂದೂ ಆದರದಿಂದ ಕಂಡಿಲ್ಲ, ಮಾಧ್ವವೈಷ್ಣವ ಮತದಲ್ಲಿ ಶಿವ ಮನೋನಿಯಾಮಕ ದೇವತೆ. ಶಿವನ ಅನುಗ್ರಹವಿಲ್ಲದ ಯಾವನೂ ಸಹ ಮುಕ್ತಿಯ ಹಾದಿಯನ್ನು ಕಂಡುಕೊಳ್ಳಲಾರ ಎಂಬುದು ಆ ಮತದ ವಿಶೇಷ ಪ್ರಮೇಯಗಳಲ್ಲೊಂದು (ಮುಕುತಿಪಥಕೆ ಮನವೀವ ಮಹಾರುದ್ರದೇವ –ಶ್ರೀಪುರಂದರದಾಸರು).

ದಾಸನಾಗಬೇಕು ಸದಾ ಶಿವನ ದಾಸನಾಗಬೇಕು, ಬ್ರಹ್ಮಹೆಮ್ಮಗ ರುದ್ರ ಮೊಮ್ಮಗ – ಹರಿಭಕ್ತಿಸಾರ. ಇದು ಮಧ್ವಸಿದ್ಧಾಂತದಲ್ಲಿ ಬ್ರಹ್ಮ ವಿಷ್ಣುವಿನ ಮಗ, ಶಿವ ಬ್ರಹ್ಮನ ಮಗ ಎಂಬ ತತ್ತ್ವವನ್ನು ಆದರಿಸಿದ ಮಾತು.

'ಶಿವ ಶಿವ ಶಿವ ಎನ್ನಿರೋ' ಎಂಬ ಕೀರ್ತನೆಯಲ್ಲಿ 'ಪೃಥ್ವಿಗೆ ಸದ್ಗುರುವಾಗಬೇಕಾದರೆ ನೀವು ತತ್ತ್ವಪತಿ ಆದಿಕೇಶವನ ಕೂಡಬೇಕಾದರೆ, ಶಿವ ಶಿವ ಶಿವ ಎನ್ನಿರೋ' ಎಂಬ ಮಾತು ಶಿವನ ಆರಾಧನೆ ಶ್ರೀಹರಿಯ ಆರಾಧನೆಗೆ ಅತ್ಯಗತ್ಯ ಎಂಬ ಮಾಧ್ವ ತತ್ತ್ವವನ್ನೇ ಅವಲಂಬಿಸಿದೆ.

## ಪ್ರಸ್ತುತ ಕೃತಿ

ಶ್ರೀಕನಕದಾಸರ ಹರಿಭಕ್ತಿಸಾರ ಕನ್ನಡದಲ್ಲಿ ಅನುವಾದ ಹಾಗೂ ವಿವರಣೆಗಳ ಸಮೇತ ಅಷ್ಟಾಗಿ ಪ್ರಕಟವಾಗಿಲ್ಲ. ಬಂದಿರುವ ಒಂದೆರಡು ಅನುವಾದಗಳಲ್ಲಿ ಪಾಠಶುದ್ಧಿ ಹಾಗೂ ವಿವರಣೆಗಳಲ್ಲಿ ನಿಖರತೆ ಅಷ್ಟಾಗಿ ಕಂಡುಬರುವುದಿಲ್ಲ. ಪ್ರಸ್ತುತ ನಮ್ಮ ಪ್ರತಿಷ್ಠಾನದ ಈ ಕೃತಿಯು ಶ್ರೀಕನಕದಾಸರ ಹರಿಭಕ್ತಿಸಾರವನ್ನು ಅನುವಾದ ಹಾಗೂ ವಿವರಣೆಗಳ ಸಮೇತವಾಗಿ ನೀಡುತ್ತಿದೆ. ಇದರ ಅವಲೋಕನ ಶ್ರೀಕನಕದಾಸರ ಮಾಧ್ವದೀಕ್ಷೆಯನ್ನು ಸ್ಫುಟಪಡಿಸುವುದರೊಂದಿಗೆ, ಮಧ್ವಸಿದ್ಧಾಂತದ ಪರಿಕಲ್ಪನೆಯ ಭಕ್ತಿಯ ಸ್ವರೂಪವನ್ನು ಬಗೆಬಗೆಯಲ್ಲಿ ಅನಾವರಣಗೊಳಿಸುತ್ತದೆ.

*****

ಈ ಕೃತಿಯ ಪ್ರಕಾಶನದ ಪ್ರಾಯೋಜಕರು ಸಾಹಿತಿ ಹಾಗೂ ಕರ್ನಾಟಕ ಸರ್ಕಾರದ ಎಂ.ಎಲ್.ಸಿಯೂ ಆಗಿದ್ದ ದಿ. ಸರಿತಾ ಕುಸುಮಾಕರ ದೇಸಾಯಿ ಅವರು. ಡಿಟಿಪಿ ಕಾರ್ಯ ನಮ್ಮ ಪ್ರತಿಷ್ಠಾನದ್ದು. ಸಹಕಾರ ಚಿ. ಆನಂದಪದ್ಮನಾಭ (ಸುದರ್ಶನ) ಹಾಗೂ ಚಿ. ಪ್ರವೀಣ ಅವರದ್ದು. ಕರಡು ತಿದ್ದುವ ಕೆಲಸ ನನ್ನ ಪುತ್ರ ಚಿ. ಜಯಂತನದು; ಪೂರ್ಣಸಹಕಾರ ನನ್ನ ಧರ್ಮಪತ್ನಿ ಶ್ರೀಮತಿ ಜಯಶ್ರೀ ವಿ. ಪಿ ಹಾಗೂ ಸೊಸೆ ಶ್ರೀಮತಿ ಶ್ರುತಿ ವ್ಯಾಸನಕೆರೆ ಇವರದ್ದು; ಮುದ್ರಣ ವಾಗರ್ಥ ಅವರದ್ದು. ಇವರೆಲ್ಲರಿಗೂ ನಮ್ಮ ಪ್ರತಿಷ್ಠಾನವು ಋಣಿ.

ಬೆಂಗಳೂರು (೦೯.೦೫.೨೦೧೭) ವ್ಯಾಸನಕೆರೆ ಪ್ರಭಂಜನಾಚಾರ್ಯ
ಶ್ರೀಹೇಮಲಂಬಿ ಸಂವತ್ಸರ - ಶ್ರೀನೃಸಿಂಹಜಯಂತೀ

॥ ಶ್ರೀ ॥

# ಶ್ರೀಕನಕದಾಸವಿರಚಿತ ಹರಿಭಕ್ತಿಸಾರ

ಶ್ರೀಯರಸ ಗಾಂಗೇಯನುತ ಕೌಂ-
ತೇಯವಂದಿತಚರಣ ಕಮಲದ-
ಳಾಯತಾಂಬಕರೂಪ ಚಿನ್ಮಯ ದೇವಕೀತನಯ ॥
ರಾಯ ರಘುಕುಲವರ್ಯ ಭೂಸುರ-
ಪ್ರೀಯ ಸುರಪುರನಿಲಯ ಚನ್ನಿಗ-
ರಾಯ ಚತುರೋಪಾಯ ರಕ್ಷಿಸು ನಮ್ಮನನವರತ ॥ ೧ ॥

ದೇವದೇವ ಜಗದ್ಭರಿತ ವಸು-
ದೇವಸುತ ಜಗದೇಕನಾಥ ರ-
ಮಾವಿನೋದಿತ ಸಕಲಸಜ್ಜನವಿನುತ ಗುಣಭರಿತ ।
ಭಾವಜಾರಿಪ್ರಿಯ ನಿರಾಮಯ
ರಾವಣಾಂತಕ ರಘುಕುಲಾನ್ವಯ
ದೇವ ಅಸುರವಿರೋಧಿ ರಕ್ಷಿಸು ನಮ್ಮನನವರತ ॥ ೨ ॥

ಅನುಪಮಿತಚಾರಿತ್ರ ಕರುಣಾ-
ವನಧಿ ಭಕ್ತಕುಟುಂಬಿ ಯೋಗೀ -
ಜನಹೃದಯಪರಿಪೂರ್ಣ ನಿತ್ಯಾನಂದ ನಿಗಮನುತ ।
ವನಜನಾಭ ಮುಕುಂದ ಮುರಮ-
ರ್ದನ ಜನಾರ್ದನ ತ್ರೈಜಗತ್ಪಾ-
ವನ ಸುರಾರ್ಚಿತ ದೇವ ರಕ್ಷಿಸು ನಮ್ಮನನವರತ ॥ ೩ ॥

ಕಮಲಸಂಭವವಿನುತ ವಾಸವ-
ನಮಿತ ಮಂಗಳಚರಿತ ದುರಿತ-
ಕ್ಷಮಿತ ರಾಘವ ವಿಶ್ವಪೂಜಿತ ವಿಶ್ವ ವಿಶ್ವಮಯ ।
ಅಮಿತವಿಕ್ರಮ ಭೀಮ ಸೀತಾ-
ರಮಣ ವಾಸುಕಿಶಯನ ಖಗಪತಿ-
ಗಮನ ಕಂಜಜನಯ್ಯ ರಕ್ಷಿಸು ನಮ್ಮನನವರತ ॥ ೪ ॥

ಕ್ಷೀರವಾರಿಧಿಶಯನ ಶಾಂತಾ-
ಕಾರ ವಿವಿಧವಿಚಾರ ಗೋಪೀ-
ಜಾರ ನವನಿತಚೋರ ಚಕ್ರಾಧಾರ ಭವದೂರ ।
ಮಾರಪಿತ ಗುಣಹಾರ ಸರಸಾ-
ಕಾರ ರಿಪುಸಂಹಾರ ತುಂಬುರು-
ನಾರದಪ್ರಿಯ ವರದ ರಕ್ಷಿಸು ನಮ್ಮನನವರತ ॥ ೫ ॥

ತಾಮರಸದಳನಯನ ಭಾರ್ಗವ-
ರಾಮ ಹಲಧರರಾಮ ದಶರಥ-
ರಾಮ ಮೇಘಶ್ಯಾಮ ಸದ್ಗುಣಧಾಮ ನಿಸ್ಸೀಮ ।
ಸಾಮಗಾನಪ್ರೇಮ ಕಾಂಚನ-
ದಾಮಧರ [೧]ಸುತ್ರಾಮವಿರಚಿತ-
ಕಾಮ ರವಿಕುಲಸೋಮ ರಕ್ಷಿಸು ನಮ್ಮನನವರತ ॥ ೬ ॥

ವೇದಗೋಚರ ವೇಣುನಾದವಿ-
ನೋದ ಮಂದರಶೈಲಧರ ಮಧು-
ಸೂದನಾಚ್ಯುತ ಕಂಸದಾನವರಿಪು ಮಹಾಮಹಿಮ ।
ಯಾದವೇಂದ್ರ ಯಶೋದನಂದನ
ನಾದಬಿಂದುಕಳಾತಿಶಯ ಪ್ರ-
ಹ್ಲಾದರಕ್ಷಕ ವರದ ರಕ್ಷಿಸು ನಮ್ಮನನವರತ ॥ ೭ ॥

ಅಕ್ಷಯಾಶ್ರಿತ ಸುಜನಜನಸಂ-
ರಕ್ಷಣ ಶ್ರೀವತ್ಸಕೌಸ್ತುಭ
ಮೋಕ್ಷದಾಯಕ ಕುಟಿಲದಾನವಶಿಕ್ಷ ಕುಮುದಾಕ್ಷ ।
ಪಕ್ಷಿವಾಹನ ದೇವಸಂಕುಲ-
ಪಕ್ಷ ಜಗದಧ್ಯಕ್ಷ ವರನಿಟಿ-
ಲಾಕ್ಷಸಖಿ ಸರ್ವೇಶ ರಕ್ಷಿಸು ನಮ್ಮನನವರತ ॥ ೮ ॥

---

೧. ಸುತ್ರಾಮವಿನಮಿತಕಾಮ (ಪಾ.)

ಚಿತ್ರಕೂಟನಿವಾಸ ವಿಶ್ವಾ-
ಮಿತ್ರಕ್ರತುಸಂರಕ್ಷ ಶಶಿರವಿ-
ನೇತ್ರ ಭವ್ಯಚರಿತ್ರ ಸದ್ಗುಣಗಾತ್ರ ಸತ್ಪಾತ್ರ ।
ಧಾತ್ರಿಜಾಂತಕ ಕಪಟನಾಟಕ-
ಸೂತ್ರ ಪರಮಪವಿತ್ರ ಫಲ್ಗುಣ-
ಮಿತ್ರ ವಾಕ್ಯವಿಚಿತ್ರ ರಕ್ಷಿಸು ನಮ್ಮನನವರತ ॥ ೯ ॥

ಮಂಗಳಾತ್ಮಕ ದುರಿತತಿಮಿರಪ-
ತಂಗ ಗರುಡತುರಂಗ ರಿಪುಮದ-
ಭಂಗ ಕೀರ್ತಿತುರಂಗ ಪುರಹರಸಂಗ ನೀಲಾಂಗ ।
ಅಂಗದಪ್ರಿಯನಂಗಪಿತ ಕಾ-
ಳಿಂಗಮರ್ದನ ಅಮಿತ ಕರುಣಾ-
ಪಾಂಗ ಶ್ರೀನರಸಿಂಗ ರಕ್ಷಿಸು ನಮ್ಮನನವರತ ॥ ೧೦ ॥

ದಾಶರಥಿ ವೈಕುಂಠನಗರನಿ-
ವಾಸ ತ್ರೈಜಗದೀಶ ಪಾಪವಿ-
ನಾಶ ಪರಮವಿಲಾಸ ಹರಿ ಸರ್ವೇಶ ದೇವೇಶ ।
ವಾಸುದೇವ ದಿನೇಶಶತಸಂ-
ಕಾಶ ಯದುಕುಲವಂಶತಿಲಕ ಪ-
ರಾಶರಾನತದೇವ ರಕ್ಷಿಸು ನಮ್ಮನನವರತ ॥ ೧೧ ॥

ಕುಂದಕುಡ್ಮಲರದನ ಪರಮಾ -
ನಂದ ಹರಿ ಗೋವಿಂದ ಸನಕಸ-
ನಂದವಂದಿತ ಸಿಂಧುಬಂಧನ ಮಂದರಾದ್ರಿಧರ ।
ಇಂದಿರಾಪತಿ ವಿಜಯಸಖ ಅರ-
ವಿಂದನಾಭ ಪುರಂದರಾರ್ಚಿತ
ನಂದಕಂದ ಮುಕುಂದ ರಕ್ಷಿಸು ನಮ್ಮನನವರತ ॥ ೧೨ ॥

ಬಾಣಬಾಹುಚ್ಛೇದ ರಾವಣ-
ಪ್ರಾಣನಾಶನ ಪುಣ್ಯನಾಮ ಪು-
ರಾಣಪುರುಷೋತ್ತಮ ನಿಪುಣ ಅಣುರೇಣುಪರಿಪೂರ್ಣ ।
ಕ್ಷೋಣಿಪತಿ ಸುಲಲಿತ ಸುದರ್ಶನ-
ಪಾಣಿ ಪಾಂಡವರಾಜಕಾರ್ಯಧು-
ರೀಣ ಜಗನಿರ್ಮಾಣ ರಕ್ಷಿಸು ನಮ್ಮನನವರತ ॥ ೧೩ ॥

ನೀಲವರ್ಣ ವಿಶಾಲಶುಭಗುಣ-
ಶೀಲ ಮುನಿಕುಲಪಾಲ ಲಕ್ಷ್ಮೀ-
ಲೋಲ ರಿಪುಶಿಶುಪಾಲಮಸ್ತಕಶೂಲ ವನಮಾಲ ।
ಮೂಲಕಾರಣ ವಿಮಲಯಾದವ-
ಜಾಲಹಿತ ಗೋಪಾಲ ಅಗಣಿತ-
ಲೀಲ ಕೋಮಲಕಾಯ ರಕ್ಷಿಸು ನಮ್ಮನನವರತ ॥ ೧೪ ॥

ನಾಗನಗರಿಧರಿತ್ರಿಕೋಶವಿ-
ಭಾಗ ತಂತ್ರನಿಯೋಗ ಗಮನಸ-
ರಾಗ ಪಾಂಡವರಾಜಜಿತಸಂಗ್ರಾಮ ನಿಸ್ಸೀಮ ।
ಯೋಗಗಮ್ಯ ಭವಾಬ್ಧಿವಿಷಧರ
ನಾಗ ಗಾರುಡಮಂತ್ರವಿಧ ಭವ-
ರೋಗವೈದ್ಯ ವಿಚಿತ್ರ ರಕ್ಷಿಸು ನಮ್ಮನನವರತ ॥ ೧೫ ॥

[೧]ಶ್ರೀಮದುತ್ಸಹದೇವನುತ ಶ್ರೀ -
ರಾಮ ನಿನ್ನಯ ಚರಣಸೇವಕ
ಪ್ರೇಮದಿಂ ಸಾಷ್ಟಾಂಗವೆರಗುತೆ ಮಾಳ್ಪೆ ಬಿನ್ನಪವ ।
ಈ ಮಹಿಯೊಳೀವರೆಗೆ ನಾವ್ ಸು-
ಕ್ಷೇಮಿಗಳು ನಿನ್ನಯ ಪಾದಾಬ್ಜ-
ಕ್ಷೇಮವಾರ್ತೆಯನರುಹಿ ರಕ್ಷಿಸು ನಮ್ಮನನವರತ ॥ ೧೬ ॥

೧. ಶ್ರೀಮದುತ್ತುಸ್ಕದೇವನುತ (ಪಾ.)

ಈಗಲೀ ಮರ್ಯಾದೆಯಲಿ ಶರ-
ಣಾಗತರ ಸೇವೆಯೊಳು ಪೊಂಪುಳಿ-
ಯಾಗಿ ಬಾಳುವರೇನು ಧನ್ಯರೊ ಹರ ಮಹಾದೇವ ।
ಭೋಗಭಾಗ್ಯವ ಬಯಸಿ ಮುಕ್ತಿಯ
ನೀಗಿ ನಿಮ್ಮನು [೧]ಭಜಿಸಲರಿಯದ-
ಯೋಗಿಗಳ ಮಾತೇನು ರಕ್ಷಿಸು ನಮ್ಮನನವರತ ॥ ೧೭ ॥

ಭಕ್ತಿಸಾರದ ಚರಿತೆಯನು ಹರಿ-
ಭಕ್ತರಾಲಿಸುವಂತೆ ರಚಿಸುವೆ
ಯುಕ್ತಿಯಲಿ ಬರೆದೋದಿದವರಿಷ್ಟಾರ್ಥ ಸಿದ್ಧಿಪುದು ।
ಮುಕ್ತಿಗಿದು ನೆಲೆದೋರುವುದು [೨]ಹರಿ-
ಭಕ್ತರನು ಲಾಲಿಪುದು ನಿಜಪತಿ
ಭಕ್ತಿಗೊಲಿವಂದದಲಿ ರಕ್ಷಿಸು ನಮ್ಮನನವರತ ॥ ೧೮ ॥

ನಳಿನಲೋಚನ ನಿಮ್ಮ ಮೂರ್ತಿಯ
ಕಳೆ ಬೆಳೆಗುತಿದೆ ಲಹರಿಯಲಿ
ಭೂತಳದೊಳಚ್ಚರಿಯಾದ ನಾಮಾಮೃತಸಮುದ್ರದಲಿ ।
ಬಳಸುವರು ಸತ್ಕವಿಗಳವರ-
ಗ್ಗಳಿಕೆ ಎನಗಿನಿತಿಲ್ಲ ಸನ್ಮತಿ-
ಗಳಿಗೆ ಮಂಗಳವಿತ್ತು ರಕ್ಷಿಸು ನಮ್ಮನನವರತ ॥ ೧೯ ॥

ಗಿಳಿಯ ಮರಿಯನು ತಂದು ಪಂಜರ-
ದೊಳಗೆ ಪೋಷಿಸಿ ಕಲಿಸಿ ಮೃದುನುಡಿ-
ಗಳನು ಲಾಲಿಸಿ ಕೇಳ್ವ ಪರಿಣತರಂತೆ ನೀನೆನಗೆ ।
[೩]ತಿಳುಹಿ ಮತಿಯನು ಎನ್ನ ಜಿಹ್ವೆಗೆ
ಮೊಳಗುವಂದದಿ ನಿನ್ನ ನಾಮಾ -
ವಳಿಯ ಪೊಗಳಿಕೆಯಿತ್ತು ರಕ್ಷಿಸು ನಮ್ಮನನವರತ ॥ ೨೦ ॥

---

೧. ಭಜಿಸದರಾಗಿಗಳ ಮಾತೇನು (ಪಾ.)
೨. ಹರಿಭಕ್ತರೊಲಿದಾಲಿಪುದು (ಪಾ.)
೩. ತಿಳುಹು (ಪಾ.)

ಪೊಗಳಲಳವೇ ನಿನ್ನ ನಾಮವ
ಸುಗುಣ ಸಚ್ಚಾರಿತ್ರಕಥನ
ಅಗಣಿತೋಪಮ ಅಮಿತವಿಕ್ರಮ ಗಮ್ಯ ನೀನೆಂದು ।
ನಿಗಮತತಿ ಕೈವಾರಿಸುತ ಪದ -
ಯುಗವ ಕಾಣದೆ ಬಳಲುತಿದೆ ವಾ-
ಸುಕಿಶಯನ ಸರ್ವೇಶ ರಕ್ಷಿಸು ನಮ್ಮನನವರತ ॥ ೨೧ ॥

ವೇದಶಾಸ್ತ್ರಪುರಾಣಪುಣ್ಯದ
ಹಾದಿಯನು ನಾನರಿಯೆ ತರ್ಕದ
ವಾದದಲಿ ಗುರುಹಿರಿಯರರಿಯದ ಮೂಢಮತಿ ಎನಗೆ ।
ಆದಿಮೂರುತಿ ನೀನು ನೆರೆ ಕರು-
ಣೋದಯನು ಹೃದಯಾಂಗಣದಿ ಜ್ಞಾ-
ನೋದಯವನೆನಗಿತ್ತು ರಕ್ಷಿಸು ನಮ್ಮನನವರತ ॥ ೨೨ ॥

ಹಸಿವರಿತು ತಾಯ್ತನ್ನ ಶಿಶುವಿಗೆ
ಒಸೆದು ಮೊಲೆಕೊಡುವಂತೆ ನೀ ಪೋ-
ಷಿಸದೆ ಬೇರಿನ್ನಾರು ಪೋಷಕರಾಗಿ ಸಲಹುವರು ।
ಬಸಿರೊಳಗೆ ಬ್ರಹ್ಮಾಂಡಕೋಟಿಯ
ಪಸರಿಸಿದ ಪರಮಾತ್ಮ ನೀನೆಂ-
ದುಸುರುತಿವೆ ವೇದಗಳು ರಕ್ಷಿಸು ನಮ್ಮನನವರತ ॥ ೨೩ ॥

ಇಬ್ಬರಣುಗರು ನಿನಗೆ ಅವರೊಳ-
ಗೊಬ್ಬಮಗನೀರೇಳುಲೋಕದ
ಹೆಬ್ಬೆಳಸು ಬೆಳೆವಂತೆ ಕಾರಣಕರ್ತನಾದವನು ।
ಒಬ್ಬ ಮಗನದ ಬರೆವ ಕರಣಿಕ-
ರಿಬ್ಬರೀ ಲೋಕಪ್ರಸಿದ್ಧರು
ಹಬ್ಬಿಸಿದೆ ಪ್ರಾಣಿಗಳ ರಕ್ಷಿಸು ನಮ್ಮನನವರತ ॥ ೨೪ ॥

ಸಿರಿಯು ಕುಲಸತಿ ಸುತನು ಕಮಲಜ
ಹಿರಿಯಸೊಸೆ ಶಾರದೆ ಸಹೋದರಿ
ಗಿರಿಜೆ ಮೈದುನ ಶಂಕರನು ಸುರರೆಲ್ಲ ಕಿಂಕರರು ।
ನಿರುತ ಮಾಯೆಯು ದಾಸಿ ನಿಜಮಂ-
ದಿರವಜಾಂಡವು ಜಂಗಮಸ್ಥಾ-
ವರ ಕುಟುಂಬಿಗ ನೀನು ರಕ್ಷಿಸು ನಮ್ಮನನವರತ ॥ ೨೫ ॥

ಸಾಗರನ ಮಗಳರಿಯದಂತೆ ಸ-
ರಾಗದಲಿ ಸಂಚರಿಸುತಿಹೆ ಉ-
ದ್ಯೋಗವೇನು ನಿಮಿತ್ತಕಾರಣವೆಲ್ಲ ಲೋಕದಲಿ ।
ಭಾಗವತರಾದವರ ಸಲಹುವ-
ನಾಗಿ ಸಂಚರಿಸುವುದು ಈ ಭವ-
ಸಾಗರದಿ ಮುಳುಗಿಸದೆ ರಕ್ಷಿಸು ನಮ್ಮನನವರತ ॥ ೨೬ ॥

ಹಸ್ತಿವಾಹನನಾದಿಯಾದ ಸ-
ಮಸ್ತದೇವನಿಕಾಯದೊಳಗೆ ಪ್ರ-
ಶಸ್ತನಾವನು ನಿನ್ನವೊಲು ಶರಣಾಗತರ ಪೊರೆವ ।
ಹಸ್ತಕಲಿತ ಸುದರ್ಶನದೊಳರಿ-
ಮಸ್ತಕವನಿಳುಹುವ ಪರಾತ್ಪರ
ವಸ್ತುವಲ್ಲವೆ ನೀನು ರಕ್ಷಿಸು ನಮ್ಮನನವರತ ॥ ೨೭ ॥

ಹಗೆಯರಿಗೆ ವರವೀವರಿಬ್ಬರು
ತೆಗೆಯಲರಿಯರು ಕೊಟ್ಟ ವರಗಳ
ತೆಗೆದುಕೊಡುವ ಸಮರ್ಥರಾರೀ ಜಗಕೆ ನಿನ್ನಂತೆ ।
ಸುಗುಣರಿನ್ನಾರುಂಟು ಕದನವ
ಬಗೆದು ನಿನ್ನೊಳು ಜೈಸುವವರೀ-
ಜಗದೊಳುಂಟೇ ದೇವ ರಕ್ಷಿಸು ನಮ್ಮನನವರತ ॥ ೨೮ ॥

ಸುಮನಸರ ವೈರದಲಿ ಕೆಲವರು
ಕುಮತಿಗಳು ತಪದಿಂದ ಭರ್ಗನ
ಕಮಲಜನ ಪದಯುಗವ ಮೆಚ್ಚಿಸಿ ವರವ ಪಡೆದಿಹರು ।
ಸಮರಮುಖದೊಳಗುಪಮೆಯಲಿ ವಿ-
ಕ್ರಮದಿ ವೈರವ ಮಾಡಿದವರಿಗೆ
ಅಮರಪದವಿಯನಿತ್ತೆ ರಕ್ಷಿಸು ನಮ್ಮನನವರತ ॥ ೨೯ ॥

ಬಲಿಯ ಬಂಧಿಸಿ ಮೊರೆಯಿಡುವ ಸತಿ-
ಗೊಲಿದು ಅಕ್ಷಯವಿತ್ತು ಕರುಣದಿ
ಮೊಲೆಯನುಣಿಸಿದ ಬಾಲಿಕೆಯ ಪಿಡಿದಸುವನಪಹರಿಸಿ ।
ಶಿಲೆಯ ಸತಿಯಳ ಮಾಡಿ ತ್ರಿಪುರರ
ಲಲನೆಯರ ವ್ರತಗೆಡಿಸಿ ಕೂಡಿದ
ಕೆಲಸ ಉತ್ತಮವಾಯ್ತು ರಕ್ಷಿಸು ನಮ್ಮನನವರತ ॥ ೩೦ ॥

ಕರಿಯ ಕಾಯ್ದಾಜಲದಿ ಮಕರಿಯ
ತರಿದು [೧]ಹಿರಣ್ಯಕನನ್ನು ಸೀಳ್ದಾ
ತರಳನನು ತಲೆಗಾಯ್ದು ಶಕಟಾಸುರನ ಹತಮಾಡಿ ।
ದುರುಳಕಂಸನ ಕೊಂದು ಮಗಧನ
ಮುರಿದು ವತ್ಸನ ಹಮ್ಮಳಿಸಿ ಖರ-
ಹರಣವನು ಹಿಂಗಿಸಿದೆ ರಕ್ಷಿಸು ನಮ್ಮನನವರತ ॥ ೩೧ ॥

ಶಿಶುತನದ ಸಾಮರ್ಥ್ಯದಲಿ ಕೆಲ -
ರಸುರರನು ಸಂಹರಿಸಿ ಚಕ್ರವ
ಬಿಸುಟು ಯೌವನಕಾಲದಲಿ ಆ ಪಾಂಡುಸುತರಿಂದ ।
ವಸುಮತಿಯ ಭಾರವನಿಳುಹಿ ಸಾ-
ಹಸದಿ ಮೆರೆದವನಾಗಿ ನೀ ಮೆ-
ಚ್ಚಿಸಿದೆ ತ್ರಿಜಗವನೆಲ್ಲ ರಕ್ಷಿಸು ನಮ್ಮನನವರತ ॥ ೩೨ ॥

೧. ಹಿರಣ್ಯಾಕ್ಷನ (ಪಾ.)

ಎಲ್ಲರಲಿ ನೀನಾಗಿ ಸುಮನಸ-
ರಲ್ಲಿ ಅತಿಹಿತನಾಗಿ ಯಾದವ-
ರಲ್ಲಿ ಬಾಂಧವನಾಗಿ ದಾನವರಲ್ಲಿ ಹಗೆಯಾಗಿ ।
ಕೊಲ್ಲಿಸಿದೆ ಭೀಮಾರ್ಜುನರ ಕೈ-
ಯಲ್ಲಿ ಕೌರವರ ಕುಲವನೆಲ್ಲವ
ಬಲ್ಲಿದನು ನೀನಹುದು ರಕ್ಷಿಸು ನಮ್ಮನನವರತ ॥ ೩೩ ॥

ನರಗೆ ಸಾರಥಿಯಾಗಿ ರಣದೊಳು
ತುರಗ ನೀರಡಸಿದರೆ ವಾರಿಯ
ಸರಸಿಯನು ನಿರ್ಮಿಸಿ ಕಿರೀಟಿಯ ಕೈಲಿ ಸೈಂಧವನ ।
ಶಿರವ ಕೆಡಹಿಸಿ ಅವನ ತಂದೆಯ
ಕರತಲಕೆ ನೀಡಿಸಿದೆ ಹರಹರ
ಪರಮ ಸಾಹಸಿ ನೀನು ರಕ್ಷಿಸು ನಮ್ಮನನವರತ ॥ ೩೪ ॥

ಬವರದಲಿ ಖತಿಗೊಂಡು ಗದೆಯೊಳು
ಕವಿದು ನಿನ್ನ ಶ್ರುತಾಯುಧನು ಹೊ-
ಕ್ಕವಘುಡಿಸಿ ಹೊಯ್ದಾಡಿ ತನ್ನಾಯುಧದಿ ತಾ ಮಡಿದ ।
ವಿವರವೇನೋ ತಿಳಿಯೆ ನಿಮ್ಮಾ-
ಯವನು ನೀನೇ ಬಲ್ಲೆ ನಿನ್ನಾ-
ಯವನು ಬಲ್ಲವರುಂಟೆ ರಕ್ಷಿಸು ನಮ್ಮನನವರತ ॥ ೩೫ ॥

ಇಳೆಗೆ ಪತಿಯಾದವನು ಯಾದವ-
ರೊಳಗೆ ಬಾಂಧವ ನಿನಗೆ ಸೋದರ-
ಅಳಿಯನಾದಭಿಮನ್ಯುವನು ಕೊಲ್ಲಿಸಿದೆ ಕೊಳಗುಳದಿ ।
[೧]ಅಳಲಿನಬ್ಧಿಯೊಳದ್ದಿ ತಂಗಿಯ
ಬಳಲಿಸಿದೆ ಕುಲಗೋತ್ರಬಾಂಧವ -
ರೊಳಗೆ ಕೀರ್ತಿಯ ಪಡೆದೆ ರಕ್ಷಿಸು ನಮ್ಮನನವರತ ॥ ೩೬ ॥

---

೧. ಅಳಲಿನಂಬುಧಿಯೊಳದ್ದಿ (ಪಾ.)

ತಾಯನಗಲಿದ [೧]ತನಯನಾ ರಾ-
ಧೇಯನೊಳಗೆ ರಹಸ್ಯದಲಿ ಕುಲ -
ದಾಯವನು ನೆರೆ ತಿಳುಹಿ ಅರ್ಜುನನಿಂದ ಕೊಲ್ಲಿಸಿದೆ ।
ಮಾಯಮಂತ್ರದ ಕುಟಿಲಗುಣವ-
ನ್ಯಾಯವೋ ಸುನ್ಯಾಯವೋ ನಿ-
ನ್ನಾಯವನು ನೀ ಬಲ್ಲೆ ರಕ್ಷಿಸು ನಮ್ಮನನವರತ ॥ ೩೭ ॥

ಕೊಲ್ಲ ಬಗೆದವನಾಗಿ ನೀ ಹಗೆ-
ಯಲ್ಲಿ ಸಖ್ಯವ ಬೆಳೆಸಲದು ಹಿತ-
ವಲ್ಲ ನಿನ್ನಯ ಗುಣವ ಬಲ್ಲವರಿಲ್ಲ ಯದುಕುಲದಿ ।
ಗೊಲ್ಲನಾರಿಯರೊಳು ಪ್ರವರ್ತಕ-
ನಲ್ಲವೇ ಭಾವಿಸಲು ಲೋಕದೊ-
ಳೆಲ್ಲರೂ ಸರಿ ನಿನಗೆ ರಕ್ಷಿಸು ನಮ್ಮನನವರತ ॥ ೩೮ ॥

ಮಗನ ಕೊಂದವನಾಳುವಂತಹ
ಸುಗುಣೆಯರು ಹದಿನಾರುಸಾವಿರ
ಸೊಗಸುಗಾತಿಯರವರ ಮೋಹದ ಬಲೆಗೆ ವಿಟನಾಗಿ ।
ಬಗೆಬಗೆಯ ರತಿಕಲೆಗಳಲಿ ಕೂ-
ರುಗುರ ನಾಟಿಸಿ ಮೆರೆದು ನೀ
ಜಗಕೆ ಪಾವನನಾದೆ ರಕ್ಷಿಸು ನಮ್ಮನನವರತ ॥ ೩೯ ॥

ಏನು ಮಾಡಿದಡೇನು ಕರ್ಮವ
ನೀನೊಲಿಯದಿನ್ನಿಲ್ಲವಿದಕನು-
ಮಾನವುಂಟೇ ಭ್ರಮರಕೀಟನ್ಯಾಯದಂದದಲಿ ।
ನೀನೊಲಿಯೆ ತೃಣ ಪರ್ವತವು ಪುಸಿ-
ಯೇನು ನೀ ಪತಿಕರಿಸೆ ಬಳಿಕಿ-
ನ್ನೇನು ಚಿಂತಿಸಲೇಕೆ ರಕ್ಷಿಸು ನಮ್ಮನನವರತ ॥ ೪೦ ॥

---

೧. ತನಯನೀ ರಾಧೇಯನೊಳಗೆ (ಪಾ.)

ಎಷ್ಟು ಮಾಡಲು ಮುನ್ನ ತಾ ಪಡೆ-
ದಷ್ಟೆ ಎಂಬುದ ಲೋಕದೊಳು ಮತಿ-
ಗೆಟ್ಟ ಮಾನವರಾಡುತಿಹರಾಮಾತದಂತಿರಲಿ।
ಪಟ್ಟವಾರಿಂದಾಯ್ತು ಧ್ರುವನಿಗೆ
ಕೊಟ್ಟ ವರ ತಪ್ಪಿತೇ ಕುಚೇಲನಿ-
ಗಿಷ್ಟಬಾಂಧವ ನೀನು ರಕ್ಷಿಸು ನಮ್ಮನನವರತ ॥ ೪೧ ॥

ತನ್ನ ದೇಹಾತುರದಲಡವಿಯೊ-
ಳನ್ಯರನು ಸಂಹರಿಸುತಿರುತಿರೆ
ನಿನ್ನ ನಾಮದೊಳಧಿಕವೆರಡಕ್ಷರವ ಬಣ್ಣಿಸುತ।
ಧನ್ಯನಾದನು ಮುನಿಕುಲದಿ ಸಂ-
ಪನ್ನನಾದನು ನೀನೊಲಿದ ಬಳಿ-
ಕಿನ್ನು ಪಾತಕವುಂಟೆ ರಕ್ಷಿಸು ನಮ್ಮನನವರತ ॥ ೪೨ ॥

ನಿನ್ನ ಸತಿಗಳುಪಿದ ದುರಾತ್ಮನ
ಬೆನ್ನಿನಲಿ ಬಂದವನ ಕರುಣದಿ
ಮನ್ನಿಸಿದ ಕಾರಣ ದಯಾಪರಮೂರ್ತಿಯೆಂದೆನುತ।
ನಿನ್ನ ಭಜಿಸಿದ ಸಾರ್ವಭೌಮರಿ-
ಗಿನ್ನು ಇಹಪರವುಂಟು ಸದ್ಗುಣ-
ರನ್ನ ಸಿರಿಸಂಪನ್ನ ರಕ್ಷಿಸು ನಮ್ಮನನವರತ ॥ ೪೩ ॥

ವೀರರಾವಣನೊಡನೆ ಹೋರಿದ
ವೀರರಗ್ಗದ ಕಪಿಗಳವರೊಳು
ಮಾರುತನ ಮಗನೇನು ಧನ್ಯನೊ ಬ್ರಹ್ಮಪಟ್ಟದಲಿ।
ಸೇರಿಸಿದೆ ನಿನ್ನಂತೆ ಕೊಡುವ ಉ-
ದಾರಿಯಾವನು ತ್ರಿಜಗದೊಳಗಾ-
ಕಾರಣದಿ ನಂಬಿದೆನು ರಕ್ಷಿಸು ನಮ್ಮನನವರತ ॥ ೪೪ ॥

ಶಿವಶಿವಾ ನೀ ಮಾಡಿದುಪಕಾ-
ರವನು ಮರೆದವರುಂಟೆ ಪಾಪದಿ
[೧]ನವೆದಜಾಮಿಳಗೊಲಿದು ಪ್ರಾಣವಿಯೋಗಕಾಲದಲಿ।
ಜವನವರ ಕೈಗೊಪ್ಪಿಸದೆ ಕಾ-
ಯ್ದವನು ನೀ ಮಾಧವನು ಮಿಕ್ಕಾ-
ದವರಿಗುಂಟೇ ಕರುಣ ರಕ್ಷಿಸು ನಮ್ಮನನವರತ ॥ ೪೫ ॥

ಹೆತ್ತ ಮಗಳನು ಮದುವೆಯಾದವ-
ವನುತ್ತಮನು ಗುರುಪತ್ನಿಗಳುಪಿದ
ಚಿತ್ತಜನ ಮಾವನು ಕೃತಘ್ನನು ನಿನಗೆ ಮೈದುನನು।
ಹೊತ್ತು ತಪ್ಪಿಸಿ ಕಾಮದಲಿ ಮುನಿ-
ಪೋತ್ತಮನ ಮಡದಿಯನು ನೆರದವ-
ಗಿತ್ತೆ ಕೈವಲ್ಯವನು ರಕ್ಷಿಸು ನಮ್ಮನನವರತ ॥ ೪೬ ॥

ಇಲ್ಲಿಹನು ಅಲ್ಲಿಲ್ಲವೆಂಬೀ
ಸೊಲ್ಲು ಸಲ್ಲದು ಹೊರಗೊಳಗೆ ನೀ-
ನಿಲ್ಲದಿಲ್ಲನ್ಯತ್ರ್ಯವೆಂಬುದನೆಲ್ಲ ಕೆಲಕೆಲರು।
ಬಲ್ಲರಿಳೆಯೊಳು ಭಾಗವತರಾ -
ದೆಲ್ಲರಿಗೆ ವಂದಿಸದ ಕುಜನರಿ-
ಗಿಲ್ಲ ಸದ್ಗತಿ ನೋಡಿ ರಕ್ಷಿಸು ನಮ್ಮನನವರತ ॥ ೪೭ ॥

ಸಿರಿಯ ಸಂಪತ್ತಿನಲಿ ನೀ ಮೈ-
ಮರೆದು ಮದಗರ್ವದಲಿ ದೀನರ
ಕರುಣದಿಂದೀಕ್ಷಿಸದೆ ಕಡೆಗಣ್ಣಿಂದ ನೋಡುವರೆ।
ಹರಹರ ಅನಾಥರನು ಪಾಲಿಸಿ
ವರವ ಕೊಡುವ ಉದಾರಿಯೆಂಬೀ
ಬಿರುದ ಬಿಡುವರೆ ತಂದೆ ರಕ್ಷಿಸು ನಮ್ಮನನವರತ ॥ ೪೮ ॥

೧. ಕೆಲವರ ಸಂಪಾದನೆಯ ಪ್ರತಿಗಳಲ್ಲಿ 'ನೆನೆದಜಾಮಿಳಗೊಲಿದು' ಎಂಬ ಅಪಪಾಠ ಮುದ್ರಿತವಾಗಿದೆ.

ದೀನ ನಾನು ಸಮಸ್ತಲೋಕಕೆ
ದಾನಿ ನೀನು ವಿಚಾರಿಸಲು ಮತಿ-
ಹೀನ ನಾನು ಮಹಾಮಹಿಮ ಕೈವಲ್ಯಪತಿ ನೀನು ।
ಏನ ಬಲ್ಲೆನು ನಾನು ನೆರೆ ಸು-
ಜ್ಞಾನಮೂರುತಿ ನೀನು ನಿನ್ನ ಸ-
ಮಾನರುಂಟೇ ದೇವ ರಕ್ಷಿಸು ನಮ್ಮನನವರತ ॥ ೪೯ ॥

ತರಳತನದಲಿ ಕೆಲವುದಿನ ದುರು-
ಭರದ ಗರ್ವದಿ ಕೆಲವುದಿನ ಮೈ-
ಮರೆದು ನಿಮ್ಮಡಿಗೆರಗದಾದೆನು ವಿಷಯಕೇಳಿಯಲಿ ।
ನರಕಭಾಜನನಾಗಿ ಕಾಮಾ-
ತುರದಿ ಪರಧನ ಪರಸತಿಗೆ ಮನ
ಹರಿದ ಪಾಪವ ಕಳೆದು ರಕ್ಷಿಸು ನಮ್ಮನನವರತ ॥ ೫೦ ॥

ಮರೆದೆನಭ್ಯುದಯದಲಿ ನಿಮ್ಮನು
ಮರೆಯೆನಾಪತ್ತಿನಲಿ ಪೊರೆಯೆಂ-
ದೊರಲುವೆನು ಮನವೇಕಭಾವದೊಳಿಲ್ಲ ನಿಮ್ಮಡಿಯ ।
ಮರೆದು ಬಾಹಿರನಾದವನ ನೀ
ಮರೆವರೇ ಹಸು ತನ್ನ ಕಂದನ
ಮರೆವುದೇ ಮಮತೆಯಲಿ ರಕ್ಷಿಸು ನಮ್ಮನನವರತ ॥ ೫೧ ॥

ಧಾರಿಣಿಗೆ ವರಚಕ್ರವರ್ತಿಗ-
ಳಾರುಮಂದಿ ನೃಪಾಲಕರು ಹದಿ-
ನಾರುಮಂದಿಯು ಧರಣಿಯನು ತಾವಾಳ್ದ ನೃಪರೆನಿತೋ ।
ವೀರರನು ಮೆಚ್ಚಿದಳೆ ಧರಣೀ
ನಾರಿ ಬಹುಮೋಹದೊಳು ನಿನ್ನನು
ಸೇರಿ ಓಲೈಸುವಳು ರಕ್ಷಿಸು ನಮ್ಮನನವರತ ॥ ೫೨ ॥

ಭಾರಕರ್ತನು ನೀನು ಬಹು ಸಂ-
ಸಾರಿಯೆಂಬುದ ನಿಗಮತತಿ
ಕೈವಾರಿಸುತ್ತಿದೆ ದಿವಿಜಮನುಜಭುಜಂಗರೊಳಗಿನ್ನು ।
ಆರಿಗುಂಟು ಸ್ವತಂತ್ರ ನಿನ್ನಂ-
ತಾರು ಮುಕ್ತಿಯನೀವ ಸದ್ಗುರು-
ವಾರು ಜಗದಧ್ಯಕ್ಷ ರಕ್ಷಿಸು ನಮ್ಮನನವರತ ॥ ೫೩ ॥

ಗತಿವಿಹೀನರಿಗಾರು ನೀನೇ
ಗತಿ ಕಣಾ ಪತಿಕರಿಸಿ ಕೊಡು ಸ-
ದ್ಗತಿಯ ನೀನೆಲೆ ದೇವ ನಿನಗಪರಾಧಿ ನಾನಲ್ಲ ।
ಶ್ರುತಿವಚನವಾಡುವುದು ಶರಣಾ-
ಗತರ ಸೇವಕನೆಂದು ನಿನ್ನನು-
ಮತವಿಡಿದು ನಂಬಿದೆನು ರಕ್ಷಿಸು ನಮ್ಮನನವರತ ॥ ೫೪ ॥

ಈಗಲೋ ಈ ದೇಹವಿನ್ನಾ-
ವಾಗಲೋ ನಿಜವಲ್ಲವೆಂಬುದ-
ನೀಗ ತಿಳಿಯದೆ ಮಡದಿ ಮನೆ ಮನೆವಾರ್ತೆಯೆಂದೆನುತ ।
ರಾಗಲೋಭದಿ ಮುಳುಗಿ ಮುಂದಣ
ತಾಗುಬಾಗುಗಳರಿಯೆ ನಿನ್ನ ಸ-
ಮಾಗಮವ ಬಯಸುವೆನು ರಕ್ಷಿಸು ನಮ್ಮನನವರತ ॥ ೫೫ ॥

[1]ಮಾಸುರಕ್ತದ ಮಡುವಿನಲಿ ನವ-
ಮಾಸ ಜನನಿಯ ಜಠರದೊಳಗಿರು-
ವಾ ಸಮಯದಲಿ ವೃತ್ತಿಯನು ಕಲ್ಪಿಸಿದ ಪ್ರಭುವಾರು ।
ನೀ ಸಲಹಿದವನಲ್ಲವೇ ಕರು-
ಣಾಸಮುದ್ರನು ನೀನಿರಲು ಕಮ-
ಲಾಸನನ ಹಂಗೇಕೆ ರಕ್ಷಿಸು ನಮ್ಮನನವರತ ॥ ೫೬ ॥

೧. ಮಾಂಸರಕ್ತದ (ಪಾ.)

ಬಲು ಮೃಗವು ಮರ ಪಕ್ಷಿ ಕೀಟಕ
ಜಲಚರೌಘದಿ ಜನಿಸಿದೆನು ಕೋ-
ಟಲೆಗೊಳಿಸಬೇಡಕಟ ಮಾನವನಾದ ಬಳಿಕಿನ್ನು ।
ಕೊಲಿಸದಿರು ಯಮನಿಂದ ಮುರಹರ
ಒಲಿದು ನಿನ್ನನು ಭಜಿಸುವವರಿಗೆ
ಕೊಲೆಗೆ ಕಾರಣವೇನು ರಕ್ಷಿಸು ನಮ್ಮನನವರತ ॥ ೫೭ ॥

ಪಂಚಭೂತದ ಕಾಯದೊಳು ನೀ
ವಂಚಿಸದೆ ಇರುತಿರಲು ಪೂರ್ವದ
ಸಂಚಿತದ ಫಲವೆನ್ನಲೇಕಿದ ಮರುಳುತನದಿಂದ ।
ಮಿಂಚಿದವರಿನ್ನುಂಟೆ ತಿಳಿಯೆ ಪ್ರ-
ಪಂಚವೆಲ್ಲಕೆ ತಪ್ಪಿದವ ನೀ
ಕೊಂಚದವನೇ ಕೃಷ್ಣ ರಕ್ಷಿಸು ನಮ್ಮನನವರತ ॥ ೫೮ ॥

ಹಲವು ಕರ್ಮಗಳಿಂದ ಮೂತ್ರದ
ಬಿಲಗಳಲಿ ಸಂಚರಿಸಿ ಪದವಿಯ
ಫಲವ ಕಾಣದೆ ಹೊಲಬು ತಪ್ಪಿದೆನೆನ್ನದೇಹದಲಿ ।
ಒಲಿದು ನೀನಿರೆ ನಿನ್ನ ಸಲುಗೆಯ
ಬಲುಮೆಯಲಿ ಬರಸೆಳೆವೆ ಮುಕ್ತಿಯ
[1]ಲಲನೆಯನು ತಳುವಿಲ್ಲ ರಕ್ಷಿಸು ನಮ್ಮನನವರತ ॥ ೫೯ ॥

ಎತ್ತಿದೆನು ನಾನಾ ಶರೀರವ
ಹೊತ್ತು ಹೊತ್ತಲಸಿದೆನು ಸಲೆ ಬೇ-
ಸತ್ತು ನಿನ್ನಯ ಪದವ ಕಾಣದೆ ತೊಳಲಿ ಬಳಲಿದೆನು ।
ಸತ್ತು ಹುಟ್ಟುವ ಹುಟ್ಟಿ ಹಿಂಗುವ
ಸುತ್ತು ತೊಡಕನು ಮಾಣಿಸೆಲೆ ಪುರು-
ಷೋತ್ತಮನೆ ಮನವೊಲಿದು ರಕ್ಷಿಸು ನಮ್ಮನನವರತ ॥ ೬೦ ॥

---

೧. ಲಲನೆಯನೆ (ಪಾ.)

ಇಂದು ಈ ಜನ್ಮದಲಿ ನೀನೇ
ಬಂಧು ಹಿಂದಣ ಜನ್ಮದಲಿ ಬಳಿ-
ಸಂದು ಮುಂದಣ ಜನ್ಮಕಧಿಪತಿಯಾಗಿ ಇರುತಿರಲು ।
ಎಂದಿಗೂ ಎನಗಿಲ್ಲ ತನು ಸಂ-
ಬಂಧ ನಿನ್ನದು ಎನಗೆ ನೀ ಗತಿ
ಎಂದು ಬಿನ್ನೈಸಿದೆನು ರಕ್ಷಿಸು ನಮ್ಮನನವರತ ॥ ೬೧ ॥

ಗಣನೆಯಿಲ್ಲದೆ ಜನನಿಯರು ಮೊಲೆ-
ಯುಣಿಸಲಾ ಪಯಬಿಂದುಗಳನದ-
ನೆಣಿಸಲಳವೇ ಸಪ್ತಸಾಗರಕಧಿಕವೆನಿಸುವುದು ।
ಬಣಗು ಕಮಲಜನದಕೆ ತಾನೇ
[೧]ಮಣಯಗಾರನು ಈತ ಮಾಡಿದ
ಕುಣಿಕೆಗಳ ನೀ ಬಿಡಿಸಿ ರಕ್ಷಿಸು ನಮ್ಮನನವರತ ॥ ೬೨ ॥

ಲೇಸ ಕಾಣೆನು ಜನನಮರಣದಿ
ಘಾಸಿಯಾದೆನು ನೊಂದೆನಕಟಾ
ಲೇಸೆನಿಸಿ ನೋಡಲು [೨]ಪರಾತ್ಪರವಸ್ತು ನೀನಾಗಿ ।
ನೀ ಸಲಹುವವನಲ್ಲವೇ ಕರು-
ಣಾಸಮುದ್ರನು ನೀನಿರಲು
ಕಮಲಾಸನನ ಹಂಗೇಕೆ ರಕ್ಷಿಸು ನಮ್ಮನನವರತ ॥ ೬೩ ॥

ಕಾಪುರುಷರೈದಾರುಮಂದಿ ಸ -
ಮೀಪದಲಿ ಕಾಡುವರು ಎನ್ನನು
ನೀ ಪರಾಮರಿಸದೆ ಪರಾಕಾಗಿಹುದು ಲೇಸಲ್ಲ ।
ಶ್ರೀಪದಾಬ್ಜದ ಸೇವೆಯಲಿ ನೆರೆ-
ಪಾಪವನು ಪರಿಹರಿಸಿ ನೀ ನಿಜ-
ರೂಪಿನಲಿ ಬಂದೊಲಿದು ರಕ್ಷಿಸು ನಮ್ಮನನವರತ ॥ ೬೪ ॥

೧. ಮಣೆಯಗಾರನು (ಪಾ.)
೨. ಪರಾಪರ ವಸ್ತು ನೀನಾಗಿ (ಪಾ.)

ಐದು ತತ್ತ್ವಗಳಾದುವೊಂದ-
ಕ್ಕೈದುಕಡೆಯಲಿ ತತ್ತ್ವ ಇಪ್ಪ-
ತ್ತೈದು ಕೂಡಿದ ತನುವಿನಲಿ ವಂಚಿಸದೆ ನೀನಿರಲು ।
ಭೇದಿಸದೆ ಜೀವಾತ್ಮ ತಾ ಸಂ-
ಪಾದಿಸಿದ ಸಂಚಿತಸುಕರ್ಮವ-
ನಾದರಿಸಿ ಕೈಕೊಂಡು ರಕ್ಷಿಸು ನಮ್ಮನನವರತ ॥ ೬೫ ॥

ಎಂಟುಗೇಣಿನ ದೇಹ ರೋಮಗ-
ಳೆಂಟು ಕೋಟಿಯು ಕೀಲ್ಗಳರವ-
ತ್ತೆಂಟು ಮಾಂಸಗಳಿಂದ ಮಾಡಿದ ಮನೆಯ ಮನವೊಲಿದು ।
ನೆಂಟ ನೀನಿರ್ದಗಲಿದೊಡೆ ಒಣ-
ಹೆಂಟೆಯಲಿ ಮುಚ್ಚುವರು ದೇಹದ-
ಲುಂಟೆ ಫಲಪುರುಷಾರ್ಥ ರಕ್ಷಿಸು ನಮ್ಮನನವರತ ॥ ೬೬ ॥

ಸ್ನಾನ ಸಂಧ್ಯಾ ಧ್ಯಾನ ಜಪ ತಪ
ದಾನ ಧರ್ಮ ಪರೋಪಕಾರ ವಿ-
[೧]ಹೀನಜನ್ಮವದಳಿವುದಲ್ಲದೆ ಬೇರೆ ಗತಿಯುಟೆ ।
ಏನು ಮಾಡಿದಡೇನು ಮುಕ್ತಿ-
ಜ್ಞಾನವಿಲ್ಲದೊಡಿಲ್ಲ ಭಕ್ತಿಗೆ
ನೀನೆ ಕಾರಣನಾಗಿ ರಕ್ಷಿಸು ನಮ್ಮನನವರತ ॥ ೬೭ ॥

ಕೋಪವೆಂಬುದು ತನುವಿನಲಿ ನೆರೆ
ಪಾಪ ಪಾತಕದಿಂದ ನರಕದ
ಕೂಪದಲಿ ಮುಳುಗುವುದು ತಪ್ಪದು ಶಾಸ್ತ್ರಸಿದ್ಧವಲೇ ।
ರಾಪುಮಾಡದೆ ಬಿಡನು ಯಮನು ನಿ-
ರಾಪರಾಧಿಯು ನೋಡಿ ಕೀರ್ತಿಕ-
ಲಾಪವನು ನೀ ಕಾಯ್ದು ರಕ್ಷಿಸು ನಮ್ಮನನವರತ ॥ ೬೮ ॥

೧. ಹೀನಕರ್ಮದೊಳಿರುವೆನಲ್ಲದೆ (ಪಾ.)

ನಿನ್ನ ಸೂತ್ರದೊಳಾಡುವವು ಚೈ-
ತನ್ಯ ಸಚರಾಚರಗಳೆಲ್ಲವು
ನಿನ್ನ ಸೂತ್ರವು ತಪ್ಪಿದರೆ [೧]ಮೊಗ್ಗುವುವು ಹೂಹೆಗಳು ।
ಇನ್ನು ನಮಗೆ ಸ್ವತಂತ್ರವೆಲ್ಲಿಯ-
ದನ್ಯಕರ್ಮ ಸುಕರ್ಮವೆಲ್ಲವು
ನಿನ್ನದೆಂದೊಪ್ಪಿಸಿದೆ ರಕ್ಷಿಸು ನಮ್ಮನನವರತ ॥ ೬೯ ॥

ಒಡೆಯ ನೀನೆಂದರಿತು ನಾ ನಿ-
ಮ್ಮಡಿಯ ಭಜಿಸದೆ ಮರುಳನಾದೆನು
ಮಡದಿಮಕ್ಕಳ ಮೋಹದಲಿ ಮನ ಸಿಲುಕುತಡಿಗಡಿಗೆ ।
ಮಡದಿಯಾರೀ ಮಕ್ಕಳಾರೀ
ಒಡಲಿಗೊಡೆಯನು ನೀನು ನೀ ಕೈ-
ಪಿಡಿದು ಮುದದಲಿ ಬಿಡದೆ ರಕ್ಷಿಸು ನಮ್ಮನನವರತ ॥ ೭೦ ॥

ಪಂಟಿಸಿದ ಮದಮುಖರು ಕೆಲಕೆಲ-
ರುಂಟು ರಿಪುಗಳು ದಂಟಿಸುತ ಬಲು-
ಕಂಟಕದಿ ಕಾಡುವರು ಕಾಯ್ಯೆ ಕಲುಷಸಂಹಾರ ।
ಬಂಟನಲ್ಲವೆ ನಾನು ದೀನರ
ನೆಂಟನಲ್ಲವೆ ನೀನು ನಿನ್ನೊಳ-
ಗುಂಟೆ ನಿರ್ದಯ ನೋಡಿ ರಕ್ಷಿಸು ನಮ್ಮನನವರತ ॥ ೭೧ ॥

[೨]ದಂಡಧರನುದ್ದಂಡ ಪಟಲತೆ
ಕೊಂಡು ಮೊರೆಹೊಗುವವರ ಕಾಣೆನು
ಪುಂಡರೀಕೋದ್ಭವನ ಶಿರವನು ಕಡಿದು ತುಂಡಿಸಿದ ।
ಖಂಡಪರಶುವು ರುದ್ರಭೂಮಿಯೊ-
ಳಂಡಲೆದು ತಿರುಗುವನು ನೀನು-
ದ್ದಂಡ ದೇವರದೇವ ರಕ್ಷಿಸು ನಮ್ಮನನವರತ ॥ ೭೨ ॥

---

೧. ಮುಗ್ಗುವವು (ಪಾ.)
೨. ದಂಡಧರನುಪಟಳದಿ ಮಿಗೆ ಮುಂಕೊಂಡು (ಪಾ.)

ಶಕ್ತಿಯೆಂಬುದು ಮಾಯೆ ಮಾಯಾ-
ಶಕ್ತಿಯದು ತನುವಿನಲ ನೀ ನಿಜ-
ಮುಕ್ತಿದಾಯಕನಿರಲು ಸುಖದುಃಖಾದಿಗಳಿಗಾರು ।
ಯುಕ್ತಿಯೊಳಗಿದನರಿತು ಮನದ ವಿ-
ರಕ್ತಿಯಲಿ ಭಜಿಸುವಗೆ ಮುಕ್ತಿಗೆ
ಭಕ್ತಿಯೇ ಕಾರಣವು ರಕ್ಷಿಸು ನಮ್ಮನನವರತ ॥ ೭೩ ॥

ಮೂರುಗುಣ ಮೊಳೆದೋರಿತದರೊಳು
ಮೂರು ಮೂರ್ತಿಗಳಾಗಿ ರಂಜಿಸಿ
ತೋರಿ ಸೃಷ್ಟಿಸ್ಥಿತಿಲಯಂಗಳ ರಚಿಸಿ ವಿಲಯದಲಿ ।
ಮೂರುರೂಪೊಂದಾಗಿ ಪ್ರಳಯದ
ವಾರಿಯಲಿ ವಟಪತ್ರಶಯನದಿ
ಸೇರಿದವ ನೀನೀಗ ರಕ್ಷಿಸು ನಮ್ಮನನವರತ ॥ ೭೪ ॥

ನೀರಮೇಲಣ ಗುಳ್ಳೆಯಂದದಿ
ತೋರಿಯಡಗುವ ದೇಹವೀ ಸಂ-
ಸಾರಬಹಳಾರ್ಣವದೊಳಗೆ ಮುಳುಗಿದೆನು ಪತಿಕರಿಸಿ ।
ತೋರಿಸಚಲಾನಂದಪದವಿಯ
ಸೇರಿಸಕಟಾ ನಿನ್ನವೊಲು ನಮ-
ಗಾರು ಬಾಂಧವರುಂಟು ರಕ್ಷಿಸು ನಮ್ಮನನವರತ ॥ ೭೫ ॥

ಹೊದ್ದಿನಿಲುವುದೆ ದರ್ಪಣದ ಮೇ-
ಲುದ್ದುರುಳಿ ಬೀಳ್ವಂತೆ ನಿಮಿಷದಿ
ಬಿದ್ದುಹೋಗುವ ಕಾಯವೀ ತನುವೆಂಬ ಪಾಶದಲಿ ।
ಬದ್ಧನಾದೆನು ಮಮತೆಯಲಿ ನೀ-
ನಿದ್ದುದಕೆ ಫಲವೇನು ಭಕ್ತಿ ವಿ-
ರುದ್ಧವಾಗದವೋಲು ರಕ್ಷಿಸು ನಮ್ಮನನವರತ ॥ ೭೬ ॥

ಕೇಳುವುದು ಕಡುಕಷ್ಟ ಕಷ್ಟದ
ಬಾಳುವೆಯ ಬದುಕೇನು ಸುಡು ಸುಡು
ಗಾಳಿಗೊಡ್ಡಿದ ಸೊಡರು ಈ ಸಂಸಾರದೇಳಿಗೆಯು ।
ಬಾಳಬೇಕೆಂಬುವಗೆ ನೆರೆ ನಿ-
ಮ್ಮೋಳಿಗವ ಮಿಗೆ ಮಾಡಿ ಭಕ್ತಿಯೊ-
ಳಾಳಿ ಬದುಕುವುದುಚಿತ ರಕ್ಷಿಸು ನಮ್ಮನನವರತ ॥ ೭೭ ॥

ದೇಹಧಾರಕನಾಗಿ ಬಹುವಿಧ
ಮೋಹದೇಳಿಗೆಯಾಗಿ ಮುಕುತಿಗೆ
ಬಾಹಿರನು ತಾನಾಗಿ ವಿಷಯಾದಿಗಳಿಗೊಳಗಾಗಿ ।
ಹೇಯವೀ ಸಂಸಾರವೆನ್ನದೆ
ಮೋಹಿಸುವ ಮತಿಗೇಡಿ ಮಾನವ
ಸಾಹಸಿಯೆ ಸಟೆಮಾತು ರಕ್ಷಿಸು ನಮ್ಮನನವರತ ॥ ೭೮ ॥

ಅಳಿವ ಒಡಲನು ನೆಚ್ಚಿ ವಿಷಯಂ-
ಗಳಿಗೆ ಕಾತರನಾಗಿ ಮಿಗೆ ಕಳ-
ವಳಿಸಿ ಕಾಲನ ಬಳಿಗೆ ಹಂಗಿಗನಾಗಿ ಬಾಳುವರೆ ।
ತಿಳಿದು ಮನದೊಳು ನಿನ್ನ ನಾಮಾ-
ವಳಿಯ ಜಿಹ್ವೆಗೆ ತಂದು ಪಾಪವ
ಕಳೆದು ಬಿಡುವುದು ಲೇಸು ರಕ್ಷಿಸು ನಮ್ಮನನವರತ ॥ ೭೯ ॥

ವರುಷ ನೂರಾಯುಷ್ಯವದರೊಳ-
ಗಿರುಳು ಕಳೆದೈವತ್ತನೈವ-
ತ್ತರಲಿ ವಾರ್ಧಿಕ ಬಾಲ್ಯ ಕೌಮಾರದಲಿ ಮೂವತ್ತು ।
ಇರದೆ ಸಂದದು ಬಳಿಕ ಇಪ್ಪ-
ತ್ತೊರುಷವದರೊಳಗಾದದಂತಃ-
ಕರಣ ನಿನ್ನೊಳು ತೋರಿ ರಕ್ಷಿಸು ನಮ್ಮನನವರತ ॥ ೮೦ ॥

ಊರು ತನಗೊಂದಿಲ್ಲ ಹೊತ್ತ ಶ-
ರೀರಗಳು ಮಿತಿಯಿಲ್ಲ ತಾ ಸಂ-
ಚಾರಿಸದ ನೆಲವಿಲ್ಲ ನುಡಿಯದ ಭಾಷೆ ಮತ್ತಿಲ್ಲ।
ಬೇರೆ ಹೊಸತೊಂದಿಲ್ಲ ಉಣ್ಣದ
ಸಾರ ವಸ್ತುಗಳಿಲ್ಲ ತನು ಸಂ-
ಚಾರವೀ ಬಗೆಯಾಯ್ತು ರಕ್ಷಿಸು ನಮ್ಮನನವರತ ॥ ೮೧ ॥

ಗೋಪುರದ ಭಾರವನು ಗಾರೆಯ
ರೂಪುದೋರಿದ ಪ್ರತಿಮೆಯಂದದಿ
ಈ ಪರಿಯ ಸಂಸಾರಭಾರವನಾರು ತಾಳುವರು।
ತಾ ಪರಾಕ್ರಮಿಯೆಂದು ಮನುಜನು
ಕಾಪಥವನೈದುವನು ವಿಶ್ವ-
ವ್ಯಾಪಕನು ನೀನಹದು ರಕ್ಷಿಸು ನಮ್ಮನನವರತ ॥ ೮೨ ॥

ಬೀಜ ವೃಕ್ಷದೊಳಾಯ್ತು ವೃಕ್ಷಕೆ
ಬೀಜವಾರಿಂದಾಯ್ತು ಲೋಕದಿ
ಬೀಜವೃಕ್ಷನ್ಯಾಯವಿದ ಭೇದಿಸುವರಾರಿನ್ನು।
ಸೋಜಿಗವ ನೀ ಬಲ್ಲೆ ನಿನ್ನೊಳು
ರಾಜಿಸುತ ಮೊಳೆದೋರುವುದು ಸುರ-
ರಾಜನಂದನನಮಿತ ರಕ್ಷಿಸು ನಮ್ಮನನವರತ ॥ ೮೩ ॥

ತೊಗಲುಬೊಂಬೆಗಳಂತೆ ನಾಲಕು-
ಬಗೆಯ ನಿರ್ಮಾಣದಲಿ ಇದರೊಳು
ನೆಗಳಿದೀ ಚೌಷಷ್ಟಿ ಲಕ್ಷಣಜಾತಿಧರ್ಮದಲಿ।
ಬಗೆಬಗೆಯ ನಾಮಾಂಕಿತದ ಜೀ-
ವಿಗಳದೆಲ್ಲವು ನಿನ್ನ ನಾಮದಿ
ಜಗಕೆ ತೋರುತ್ತಿಹವು ರಕ್ಷಿಸು ನಮ್ಮನನವರತ ॥ ೮೪ ॥

ಹೂಡಿದೆಲು ಮರಮುಟ್ಟು ಮಾಂಸದ
ಗೋಡೆ ಚರ್ಮದ ಹೊದಿಕೆ ನರಗಳ
ಕೂಡೆ ಹಿಂಡಿಗೆ ಬಿಗಿದ ಮನೆಯೊಳಗಾತ್ಮನಿರುತಿರಲು ।
ಬೀಡು ತೊಲಗಿದ ಬಳಿಕಲಾ ಸುಡು-
ಗಾಡಿನಲಿ ಬೆಂದುರಿವ ಕೊಂಪೆಯ
ನೋಡಿ ನಂಬಿರಬಹುದೆ ರಕ್ಷಿಸು ನಮ್ಮನನವರತ ॥ ೮೫ ॥

ಬೀಗಮುದ್ರೆಗಳಿಲ್ಲದೂರಿಗೆ
ಬಾಗಿಲುಗಳೊಂಭತ್ತು ಹಗಲಿರು -
ಳಾಗಿ ಮುಚ್ಚದೆ ತೆರೆದಿಹುದು ಜೀವಾತ್ಮ ತಾ ನಿರುತ ।
ನೀಗಿ ಎಲ್ಲವ ಬಿಸುಟು ಬೇಗದಿ
ಹೋಗುತಿಹ ಸಮಯದಲಿ ಇವರವ-
ರಾಗಬಲ್ಲರೆ ನೀನೆ ರಕ್ಷಿಸು ನಮ್ಮನನವರತ ॥ ೮೬ ॥

ಕೀಲು ಬಲಿದಿಹುದ್ಯೆದು ತಿರುಗುವ
ಗಾಲಿ ಎರಡರ ರಥದಿ ತ್ರೈಗುಣ-
ಶೀಲನೋರ್ವನು ಸಂಚರಿಸುತಿಹನಾ ರಥಾಗ್ರದಲಿ ।
ಕೀಲು ಕಡೆಗೊಂದೂಡಿ ಬೀಳಲು
ಕಾಲಗತಿ ತಪ್ಪುವುದು ಆದರನು-
ಕೂಲ ನಿನ್ನೊಳಗಿಹುದು ರಕ್ಷಿಸು ನಮ್ಮನನವರತ ॥ ೮೭ ॥

ಬಿಗಿದರಕುತದ ರೋಮಕೂಪದ
ತೊಗಲಕೋಟೆಯ ನಂಬಿ ರೋಗಾ-
ದಿಗಳ ಮುತ್ತಿಗೆ ಬಲಿದು ಜೀವನ ಪಿಡಿಯಲನುವಾಯ್ತು ।
ವಿಗಡಯಮನಾಳುಗಳು ಬರುತಿರೆ
ತೆಗೆಸು ಕಾಲನ ಬಲದ ಬಲು ಮು-
ತ್ತಿಗೆಯನಿದ ಪರಿಹರಿಸಿ ರಕ್ಷಿಸು ನಮ್ಮನನವರತ ॥ ೮೮ ॥

ವಾರಣಗಳೆಂಟೆಸೆವ ನಗರಕೆ
ದ್ವಾರ ಒಂಭತ್ತದಕೆ ಬಲು ಮೊನೆ-
ಗಾರರಾದಾಳುಗಳ ಕಾವಲುಗಾರರನು ಮಾಡಿ ।
ಆರರಿಯದಂತದರೊಳಗೆ ಹೃದ-
ಯಾರವಿಂದದಿ ನೀನಿರಲು ಬರಿ
ದೂರು ಜೀವನಿಗುಂಟೆ ರಕ್ಷಿಸು ನಮ್ಮನನವರತ ॥ ೮೯ ॥

ಪೇಳಲೆನ್ನಳವಲ್ಲವೀಯಮ-
ನಾಳುಗಳು ನೆರೆಯಂಗದೇಶವ
ದಾಳಿಮಾಡುವರಕಟಕಟ ಸೆರೆಸೂರೆಗಳ ಪಿಡಿದು ।
ಕಾಳು ಮಾಡುವರಿನ್ನು ತನುವಿದು
ಬಾಳಲರಿಯದು ಕೋಟೆ ಅವರಿಗೆ
ಕೋಳು ಹೋಗದ ಮುನ್ನ ರಕ್ಷಿಸು ನಮ್ಮನನವರತ ॥ ೯೦ ॥

ನಾಲಿಗೆಯು ನಾಸಿಕವು ನಯನಕ-
ಪಾಲ ಪದ ಪಾಣಿಗಳು ತನುವಿನ
ಮೂಲಕರ್ತೃವಿನಲ್ಲಿ ಪರಿಚಾರಕರು ತಾವಾಗಿ ।
ಲೀಲೆಯಿಂದಿರುತಿರ್ದು ಕಡೆಯಲಿ
ಕಾಲ ತೀರಿದ ಬಳಿಕಲದರನು-
ಕೂಲ ನಿನ್ನೊಳಗಿಹುದು ರಕ್ಷಿಸು ನಮ್ಮನನವರತ ॥ ೯೧ ॥

ಸತ್ತವರಿಗಳಲೇಕೆ ತನ್ನನು
ಹೊತ್ತವರು ಹೆತ್ತವರುಗಳು ತಾವ್-
ಸತ್ತು ಹೋಗುವರಲ್ಲದುಳಿವರೆ ಮರುಗಲೇಕಿನ್ನು ।
ಮೃತ್ಯು ಬೆನ್ನಿನೊಳಿಹುದು ತಾವಿ-
ನ್ನತ್ತು ಮಾಡುವುದೇನು ಪೂರ್ವದ
ತೆತ್ತಿಗನು ನೀನೀಗ ರಕ್ಷಿಸು ನಮ್ಮನನವರತ ॥ ೯೨ ॥

ಮಣ್ಣು ಮಣ್ಣಿನೊಳುದಿಸಲದರಲಿ
ಮಣ್ಣುಬೊಂಬೆಗಳಾಗಿ ರಂಜಿಸಿ
ಮಣ್ಣಿನಾಹಾರದಲಿ ಜೀವವ ಹೊರೆದು ಉಪಚರಿಸಿ ।
ಮಣ್ಣಿನಲಿ ಬಂಧಿಸಿದ ದೇಹವ
ಮಣ್ಣುಕೂಡಿಸಬೇಡ [೧]ಜ್ಞಾನದ
ಕಣ್ಣು ದೃಷ್ಟಿಯನಿತ್ತು ರಕ್ಷಿಸು ನಮ್ಮನನವರತ ॥ ೯೩ ॥

ಬೀಯವಾಗುವ ತನುವಿನಲಿ ನಿ-
ರ್ದಾಯಕನು ನೀನಿರ್ದು ಅತಿಹಿರಿ-
ದಾಯಸಂ ಬಡಿಸುವರೆ ನೀನನುಕೂಲವಾಗಿರ್ದು ।
ತಾಯನಗಲಿದ ಶಿಶುವಿನಂದದಿ
ಬಾಯ ಬಿಡುವಂತಾಯ್ತಲೇ [೨]ಚಿಂ-
ತಾಯಕನೆ ಬಿಡಬೇಡ ರಕ್ಷಿಸು ನಮ್ಮನನವರತ ॥ ೯೪ ॥

ಮೊದಲು ಜನನವನರಿಯೆ ಮರಣದ
ಹದನ ಕಡೆಯಲಿ ತಿಳಿಯೆ ನಾ ಮ-
ಧ್ಯದಲಿ ನೆರೆ ನಾ ನಿಪುಣನೆಂಬುದು ಬಳಿಕ ನಗೆಗೇಡು ।
ಮೊದಲು ಕಡೆ ಮಧ್ಯಗಳ ಬಲ್ಲವ
ಮದನಜನಕನು ನೀನು ನಿನ್ನಯ
ಪದಯುಗವ ಬಯಸುವೆನು ರಕ್ಷಿಸು ನಮ್ಮನನವರತ ॥ ೯೫ ॥

ಸಾರವಿಲ್ಲದ ದೇಹವಿದು ನಿ-
ಸ್ಸಾರವಾಗಿಹ ತನುವಿನಲಿ ಸಂ-
ಚಾರಿಯಹ ನೀನಿರ್ದು ಕಡೆಯಲಿ ತೊಲಗಿ ಹೋಗುತಲಿ ।
ದೂರ ತಪ್ಪಿಸಿಕೊಂಡು ಬರಿಯಪ-
ದೂರ ಹೊರಿಸಿದೆ ಜೀವನಲಿ ಇದ-
ನಾರು ಮೆಚ್ಚುವರಕಟ ರಕ್ಷಿಸು ನಮ್ಮನನವರತ ॥ ೯೬ ॥

---

೧. ಜ್ಞಾನದ ಕಣ್ಣು ದೃಷ್ಟಿಯನಿಟ್ಟು (ಪಾ.)
೨. ಚಿಂತಾದಾಯಕನೆ (ಪಾ.)

ಅಂಡವೆರಡುದ್ಭವಿಸಿದವು ಬ್ರ-
ಹ್ಮಾಂಡವದರೋಪಾದಿಯಲಿ ಪಿಂ-
ಡಾಂಡವೆಸೆದುದು ಸ್ಥೂಲಕಾರಣ ಸೂಕ್ಷ್ಮತನುವಿನಲಿ ।
ಅಂಡ ನಿನ್ನಯ ರೋಮಕೂಪದೊ-
ಳಂಡಲಿದವಖಿಲಾಂಡವಿದು ಬ್ರ-
ಹ್ಮಾಂಡನಾಯಕ ನೀನು ರಕ್ಷಿಸು ನಮ್ಮನನವರತ ॥ ೯೭ ॥

ಒಂದುದಿನ ತನುವಿನಲಿ ನಡೆವುವು
ಇಂದುಭಾಸ್ಕರ ಸ್ವರಗಳಿಪ್ಪ -
ತ್ತೊಂದು ಸಾವಿರದಾರನೂರನು ಏಳುಭಾಗದಲಿ ।
ಬಂದದನು ಉಡುಚಕ್ರದಲ್ಲಿಗೆ
ತಂದು ಧಾರೆಯನೆರೆದ ಮುನಿಕುಲ-
ವೃಂದಹೃದಯನು ನೀನು ರಕ್ಷಿಸು ನಮ್ಮನನವರತ ॥ ೯೮ ॥

ತೊಲಗುವರು ಕಡೆಕಡೆಗೆ ತಾ ಹೊಲೆ-
ಹೊಲೆಯನುತ ಕಳವಳಿಸಿ ಮೂತ್ರದ
ಬಿಲದೊಳಗೆ ಬಂದಿಹುದ ಕಾಣದೆ ಬರಿದೆ ಮನನೊಂದು ।
ಜಲದೊಳಗೆ ಮುಳುಗಿದರೆ ತೊಲಗದು
ಹೊಲೆಗೆಲಸವೀದೇಹದೊಳು ನೀ-
ನೆಲೆಸಿರಲು ಹೊಲೆಯುಂಟೆ ರಕ್ಷಿಸು ನಮ್ಮನನವರತ ॥ ೯೯ ॥

ಬರಿದಹಂಕಾರದಲಿ ತತ್ತ್ವದ
ಕುರುಹ ಕಾಣದೆ ನಿನ್ನ ದಾಸರ
ಜರೆದು ವೇದಪುರಾಣಶಾಸ್ತ್ರಗಳೋದಿ ಫಲವೇನು ।
ನರರು ದುಷ್ಕರ್ಮದಲಿ ಮಾಡಿದ
ದುರಿತವಡಗಲು ನಿನ್ನ ನಾಮ-
ಸ್ಮರಣೆಯೊಂದೇ ಸಾಕು ರಕ್ಷಿಸು ನಮ್ಮನನವರತ ॥ ೧೦೦ ॥

ಎಂಜಲೆಂಜಲು ಎಂಬರಾನುಡಿ
ಎಂಜಲಲ್ಲವೆ ವಾರಿ ಜಲಚರ-
ದೆಂಜಲಲ್ಲವೆ ಹಾಲು ಕರುವಿನ ಎಂಜಲೆನ್ನಿಸದೆ ।
ಎಂಜಲೆಲ್ಲಿಯದೆಲ್ಲಿಯುಂ ಪರ-
ರೆಂಜಲಲ್ಲವೆ ಬೇರೆ ಭಾವಿಸ-
ಲೆಂಜಲುಂಟೇ ದೇವ ರಕ್ಷಿಸು ನಮ್ಮನನವರತ ॥ ೧೦೧ ॥

ಕೇಳುವುದು ಹರಿಕಥೆಯ ಕೇಳಲು
ಹೇಳುವುದು ಹರಿಭಕ್ತಿ ಮನದಲಿ
ತಾಳುವುದು ಹಿರಿದಾಗಿ ನಿನ್ನಯ ಚರಣಸೇವೆಯಲಿ ।
ಊಳಿಗವ ಮಾಡುವುದು ವಿಷಯವ
ಹೂಳುವುದು ನಿಜಮುಕ್ತಿಕಾಂತೆಯ-
ನಾಳುವುದು ಕೃಪೆಮಾಡಿ ರಕ್ಷಿಸು ನಮ್ಮನನವರತ ॥ ೧೦೨ ॥

ಈ ತೆರದೊಳಚ್ಯುತನ ನಾಮವ
ನೂತನದಿ ವಸುಧಾತಲದಿ ವಿ-
ಖ್ಯಾತಿಯಲಿ ಬಣ್ಣಿಸಿದೆ ಭಾಮಿನಿಯ ವೃತ್ತದಲಿ[೧] ।
ನೀತಿಕೋವಿದರಾಲಿಸುವುದತಿ-
ಪ್ರೀತಿಯಲಿ ಕೇಳ್ದರಿಗೆ ಅಸುರಾ-
ರಾತಿ ಚೆನ್ನಿಗರಾಯ ಸುಖಗಳ ನೀವನನವರತ ॥ ೧೦೩ ॥

ಬಾದರಾಯಣ ಪೇಳ್ದ ಭಾರತ-
ಕಾದಿಕರ್ತನುದಾರ ಶ್ರೀಪುರ-
ದಾದಿಕೇಶವಮೂರ್ತಿಗಂಕಿತವಾದ ಚರಿತೆಯನು ।
ಮೇದಿನಿಯೊಳಿದನಾರು ಹೃದಯದೊ-
ಳಾದರಿಸಿ ಕೇಳ್ದಪರೊ ಮುದದಲಿ
ಆದಿಮೂರುತಿ ಸುರವರಾಧಿಪನೊಲಿವನನವರತ ॥ ೧೦೪ ॥

೧. ಕನ್ನಡ ಕುಸುಮಷಟ್ಪದಿಯ (ಪಾ.)

ಕುಲಗಿರಿಗಳನ್ವಯವು ಧಾರಿಣಿ
ಜಲಧಿ ಪಾವಕ ಮರುತ ಜಲ ನಭ
ಜಲಜಸಖ ಶೀತಾಂಶು ತಾರೆಗಳುಳ್ಳ ಪರಿಯಂತ ।
ಚಲನೆಯಿಲ್ಲದೆ ನಿನ್ನ ಚರಿತೆಯು
ಬಲಿದು ಧರೆಯೊಳಗೊಪ್ಪುವಂದದಿ
ಚೆಲುವ ಚೆನ್ನಿಗರಾಯ ರಕ್ಷಿಸು ನಮ್ಮನನವರತ ॥ ೧೦೫ ॥

ನೂರುಕನ್ಯಾದಾನವನು ಭಾ-
ಗೀರಥೀಸ್ನಾನವನು ಮಿಗೆ ಕೈ-
ಯಾರೆ ಗೋವ್ಗಳ ಪ್ರೇಮದಿಂದಲಿ ಭೂಸುರರಿಗೊಲಿದು ।
ಊರುಗಳ ನೂರಗ್ರಹಾರವ
ಧಾರೆಯೆರೆದಿತ್ತಂತೆ ಫಲ ಕೈ-
ಸೇರುವುದು ಹರಿಭಕ್ತಿಸಾರದ ಕಥೆಯ ಕೇಳ್ದರಿಗೆ ॥ ೧೦೬ ॥

ಮೇರುಮಂದರನಿಭಸುವರ್ಣವ
ವಾರಿಮಧ್ಯದೊಳಿರುವ ಅವನಿಯ
ನಾರಿಯರ ಗಾಯತ್ರಿ ಪಶುಗಳನಿತ್ತ ಫಲಬಹುದು ।
ಧಾರಿಣಿಯೊಳೀ ಭಕ್ತಿಸಾರವ-
ನಾರು ಓದುವರವರಿಗನುದಿನ
ಚಾರುವರಗಳನಿತ್ತು ರಕ್ಷಿಪನಾದಿಕೇಶವನು ॥ ೧೦೭ ॥

ಲೋಕದೊಳಗತ್ಯಧಿಕವೆನಿಸುವ
ಕಾಗಿನೆಲೆ ಸಿರಿಯಾದಿಕೇಶವ
ತಾ ಕೃಪೆಯೊಳಗೆ ನುಡಿಸಿದನು ಈ ಭಕ್ತಿಸಾರವನು ।
ಜೋಕೆಯಲಿ ಬರಿದೋದಿ ಕೇಳ್ದರ-
ನಾಕುಲದಿ ಮಾಧವನು ಕರುಣಿಪ
ಶ್ರೀಕಮಲವಲ್ಲಭನು ಮಿಗೆ ಬಡದಾದಿಕೇಶವನು ॥ ೧೦೮ ॥

ಮಂಗಳಂ ಸರ್ವಾದಿಭೂತಗೆ
ಮಂಗಳಂ ಸರ್ವವನು ಪೊರೆವಗೆ
ಮಂಗಳಂ ತನ್ನೊಳಗೆ ಲೋಕವ ಲಯಿಸಿಕೊಂಬವಗೆ।
ಮಂಗಳಂ ಸರ್ವಸ್ವತಂತ್ರಗೆ
ಮಂಗಳಂ ಸತ್ಯಸ್ವರೂಪಗೆ
ಮಂಗಳಂ [೧]ಸಿರಿಯೊಡೆಯ ಚೆನ್ನಿಗರಾಯ ಕೇಶವಗೆ ॥ ೧೦೯ ॥

ಮಂಗಳಂ ಜಗದಾದಿಮೂರ್ತಿಗೆ
ಮಂಗಳಂ [೨]ಜಯಪುಣ್ಯಕೀರ್ತಿಗೆ
ಮಂಗಳಂ ಕರಕಲಿತಚಕ್ರವಿದಳಿತನಕ್ರನಿಗೆ।
ಮಂಗಳಂ ದ್ರೌಪದಿಯ ಪೊರೆದಗೆ
ಮಂಗಳಂ ಧ್ರುವರಾಜಗೊಲಿದಗೆ
ಮಂಗಳಂ ಬೇಲೂರುಚೆನ್ನಿಗರಾಯ ಕೇಶವಗೆ ॥ ೧೧೦ ॥

ಜಯ ಸುರೇಂದ್ರವರಾರ್ಚಿತಾಂಘ್ರಿಯೆ
ಜಯ ಪುರಾಧಿಪಸಂಸ್ತುತಾತ್ಮನೆ
ಜಯ ಮಹಾಮುನಿಯೋಗಗಮ್ಯನೆ ಮೇಘಮೇಚಕನೆ।
ಜಯ ಜನಕಜಾಮುಖಾಬ್ಜಮಿತ್ರನೆ
ಜಯ ಕಲಾಧಿಪಸೂರ್ಯನೇತ್ರನೆ
ಜಯ ಜಯ ಜಗನ್ನಾಥದೇವನೆ ಚೆನ್ನಕೇಶವನೆ ॥ ೧೧೧ ॥

*****

॥ ಶ್ರೀಕೃಷ್ಣಾರ್ಪಣಮಸ್ತು ॥

*****

೧. ಸಿರಿಗೊಡೆಯ (ಪಾ.)
೨. ಶ್ರಿತಪುಣ್ಯಕೀರ್ತಿಗೆ (ಪಾ.)

॥ ಶ್ರೀಃ ॥

ಶ್ರೀಕನಕದಾಸವಿರಚಿತ

# ಹರಿಭಕ್ತಿಸಾರ

## ೧. ಮಂಗಲಾಚರಣ

ಶ್ರೀಯರಸ ಗಾಂಗೇಯನುತ ಕೌಂ-
ತೇಯವಂದಿತಚರಣ ಕಮಲದ-
ಳಾಯತಾಂಬಕ ರೂಪ ಚಿನ್ಮಯ ದೇವಕೀತನಯ ।
ರಾಯ ರಘುಕುಲವರ್ಯ ಭೂಸುರ-
ಪ್ರೀಯ ಸುರಪುರನಿಲಯ ಚನ್ನಿಗ-
ರಾಯ ಚತುರೋಪಾಯ ರಕ್ಷಿಸು ನಮ್ಮನನವರತ ॥ ೧ ॥

ಅನುವಾದ: ಮಹಾಲಕ್ಷ್ಮಿಯ ಅರಸನೆ, ಗಂಗಾಪುತ್ರನಾದ ಭೀಷ್ಮರಿಂದ ಸ್ತುತನಾದವನೆ, ಕುಂತೀಪುತ್ರರಾದ ಪಾಂಡವರಿಂದ ವಂದಿತವಾದ ಚರಣಕಮಲವನ್ನು ಹೊಂದಿದವನೆ, ಕಮಲದ ದಳದಂತೆ ವಿಶಾಲವಾದ ಕಣ್ಣುಗಳನ್ನು ಹೊಂದಿದವನೆ, ಜ್ಞಾನಮಯನೆ, ದೇವಕೀಪುತ್ರನೆ, ಅಗಾಧ ಐಶ್ವರ್ಯವಂತನೆ, ರಘುಕುಲಶ್ರೇಷ್ಠನೆ, ವಿಪ್ರರಿಗೆ ಪ್ರಿಯನಾದವನೆ, ದೇವತೆಗಳ ಪಟ್ಟಣದಲ್ಲಿ ನೆಲೆಸಿರುವವನೆ, ನಾಲ್ಕು ಪುರುಷಾರ್ಥಗಳಿಗೆ ಸಾಧನನಾದವನೆ, ಚೆನ್ನಿಗನಾದ ಕೇಶವನೆ, ನಮ್ಮನ್ನು ಸದಾಕಾಲ ಪಾಲಿಸು.

ವಿ: ೧. ಶ್ರೀ ಎಂದರೆ ಮಹಾಲಕ್ಷ್ಮೀ, ಸದಾ ಮಹಾವಿಷ್ಣುವನ್ನೇ ಆಶ್ರಯಿಸಿರುವುದರಿಂದ ಶ್ರೀ ಎಂದು ಹೆಸರು. ಅಂತ ಮಹಾಲಕ್ಷ್ಮೀಗೆ ಪತಿಯಾದವನು ಶ್ರೀಹರಿ. ಮಹಾಲಕ್ಷ್ಮಿಯು ಬ್ರಹ್ಮರುದ್ರಾದಿಗಳಿಂದ ವಂದಿತಳು; ಶ್ರೀಯರಸನಾದ ಶ್ರೀಹರಿ ಸರ್ವವಂದಿತ ಎಂದರ್ಥ.

೨. [೧]ಗಾಂಗೇಯನುತ-ಗಾಂಗೇಯ ಎಂದರೆ ಗಂಗಾಪುತ್ರರಾದ ಭೀಷ್ಮ. ಗಂಗೆಯ ಪುತ್ರ ಎಂಬ ಮಾತಿನಲ್ಲಿ ಅವರ ಪಾವಿತ್ರ್ಯ ಸೂಚಿತವಾಗಿದೆ. ಅವರು ರಾಜಸೂಯಯಾಗದ ಸಭಾ ಮಂಟಪದಲ್ಲಿ ಯುಧಿಷ್ಠಿರ ಕೇಳಿಕೊಂಡಾಗ ಅಗ್ರಪೂಜೆಗೆ ಶ್ರೀಕೃಷ್ಣನೇ ಅರ್ಹನೆಂದು ಸೂಚಿಸಿದ ಭಾಗ್ಯಶಾಲಿಗಳು. ಅಂತ್ಯಕಾಲದಲ್ಲಿ ಶ್ರೀಕೃಷ್ಣ ದರ್ಶನ ನೀಡಿದಾಗ ಭೀಷ್ಮಸ್ತವರಾಜ ಎಂದು ಸುಪ್ರಸಿದ್ಧವಾಗಿರುವ ಸ್ತೋತ್ರರತ್ನದಿಂದ ಶ್ರೀಕೃಷ್ಣನನ್ನು ಸ್ತುತಿಸಿದವರು. ಭೀಷ್ಮರು ಮಾಡಿದ ಶ್ರೀಕೃಷ್ಣಸ್ತುತಿ ಶ್ರೀಮದ್ಭಾಗವತದ ಪ್ರಥಮಸ್ಕಂದದಲ್ಲೂ ವಿವರವಾಗಿಯೇ ಬಂದಿದೆ. ಈ ಹಿನ್ನೆಲೆಯಲ್ಲಿ ಗಾಂಗೇಯನುತ ಎಂಬ ಮಾತು ಅತ್ಯಂತ ಸ್ವರಸವಾದುದು.

---

೧. ಘನಮಹಿಮ ಗಾಂಗೇಯನುತ..... । - ಶ್ರೀಹರಿಕಥಾಮೃತಸಾರ (೨/೪)

೩. **ಕೌಂತೇಯವಂದಿತಚರಣ**–ಕೌಂತೇಯರು ಎಂದರೆ ಕುಂತೀಪುತ್ರರಾದ ಯುಧಿಷ್ಠಿರಾದಿ ಪಂಚ ಪಾಂಡವರು. ವಿಶೇಷವಾಗಿ ಕುಂತೀಪುತ್ರರಲ್ಲಿ ಶ್ರೇಷ್ಠರೆನಿಸಿದ ಭೀಮಸೇನ ಹಾಗು ಅನಂತರ ಅರ್ಜುನ ವಿಶೇಷವಾಗಿ ಇಲ್ಲಿ ವಿವಕ್ಷಿತರು. ಅರ್ಜುನ ಮಾಡಿದ ವಿಶ್ವರೂಪದ ಸ್ತುತಿ ಭಗವದ್ಗೀತೆಯ ಹನ್ನೊಂದನೆಯ ಅಧ್ಯಾಯದಲ್ಲಿ ವಿವರವಾಗಿ ಬಂದಿದೆ. ಭೀಮಸೇನ ಇತರ ಪ್ರಸಂಗಗಳಲ್ಲಿರಲಿ, ದುಃಶಾಸನನ ಎದೆ ಬಗೆದು ರಕ್ತಪಾನ ಮಾಡಿದಂತೆ ನಟಿಸುತ್ತ ಮನ್ಯುಸೂಕ್ತದಿಂದಲೂ, ದುರ್ಯೋಧನನನ್ನು ತೊಡೆಮುರಿದು ಬೀಳಿಸಿದ ಮೇಲೆ ಅವನ ತಲೆಯನ್ನು ತುಳಿಯುತ್ತ ಋಷಭಸೂಕ್ತದಿಂದಲೂ ಶ್ರೀಕೃಷ್ಣನನ್ನು ಸ್ತುತಿಸಿದ ವಿವರ ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಬಂದಿದೆ; ಇದರಿಂದ ಅವೆಲ್ಲವನ್ನೂ ಶ್ರೀದಾಸರು ಸೂಚಿಸಿರುವರು ಎಂದು ತಿಳಿಯಬಹುದು.

೪. **ಕಮಲದಳಾಯತಾಂಬಕ**– ಅಂಬಕ ಎಂದರೆ ಕಣ್ಣು. ಕಮಲದಳಾಯತಾಂಬಕ ಎಂದರೆ ಕಮಲದ ದಳಗಳಂತೆ ವಿಶಾಲವಾದ ಕಣ್ಣುಗಳುಳ್ಳವನು ಎಂದರ್ಥ. ಪುಂಡರೀಕಾಕ್ಷ ಎಂಬುವುದು ಶ್ರೀಹರಿಯ ವಿಶೇಷವಾದ ನಾಮವೇ ಆಗಿದೆ: ಶ್ರೀಧರಃ **ಪುಂಡರೀಕಾಕ್ಷಃ** (ವಿಷ್ಣುಸಹಸ್ರನಾಮ); **ಅಂಬಕ** – ಕಣ್ಣು

೫. **ಚಿನ್ಮಯ**– ಚಿತ್ ಎಂದರೆ ಜ್ಞಾನ. ಚಿನ್ಮಯ ಎಂದರೆ ಜ್ಞಾನಮಯ ಎಂದರ್ಥ. ಶ್ರೀಹರಿಯು ಅವತಾರರೂಪಗಳಲ್ಲೂ ಕೂಡ ಜ್ಞಾನಾನಂದಮಯ ಶರೀರ ಎಂಬ ವಿಶೇಷ ಅಂಶ ಶಾಸ್ತ್ರಪ್ರಸಿದ್ಧ; ಅದು ಇದರಿಂದ ಸೂಚಿತ; **ಚಿತ್** – ಜ್ಞಾನ; **ಚಿನ್ಮಯ** – ಜ್ಞಾನಮಯ.

೬. **ದೇವಕೀತನಯ**– ದೇವಕೀ-ವಸುದೇವರು ಶ್ರೀಹರಿಯು ತಮ್ಮ ಪುತ್ರನಾಗಿ ಅವತರಿಸಬೇಕೆಂದು ಒಂದು ಮಹಾಯುಗ (೪೩,೨೦,೦೦೦ವರ್ಷ) ಪರ್ಯಂತ ತಪಸ್ಸು ಮಾಡಿದ್ದರಿಂದ ಶ್ರೀಕೃಷ್ಣರೂಪದಿಂದ ಶ್ರೀಹರಿ ಅವತರಿಸಿದ ಎಂಬುದು ಶ್ರೀಮದ್ಭಾಗವತದ ನಿರೂಪಣೆ; ಈ ಮಾತಿನಿಂದ ದೇವಕಿಯ ಸುಕೃತ ವರ್ಣಿತವಾಗಿದೆ ಎಂದು ತಿಳಿಯಬೇಕು.

೭. **ರಾಯ**– ಸಂಸ್ಕೃತದಲ್ಲಿ ಇದು ರಾಟ್ ಎಂಬ ಶಬ್ದದ ಬಹುವಚನ. ಇದರ ಅರ್ಥ ಒಡೆಯ ಅರಸ ಎಂದು ಆಗುವುದು. ಶ್ರೀಹರಿಯು ಅನಂತಕೋಟಿಬ್ರಹ್ಮಾಂಡನಾಯಕ ಎಂಬ ಪ್ರಮೇಯ ಇದರಿಂದ ಸೂಚಿತ.

೮. **ರಘುಕುಲವರ್ಯ**– ರಘುಕುಲದಲ್ಲಿ ಶ್ರೀ ರಾಮರೂಪದಿಂದ ಶ್ರೀಹರಿ ಅವತರಿಸಿದ. ಅದರಿಂದ ರಘುಕುಲಕ್ಕೆ ವಿಶೇಷ ಮಾನ್ಯತೆ ಲಭಿಸಿತು. ರಘುಕುಲದಲ್ಲಿ ಅವನಂತಹವರು ಬೇರೆ ಯಾರೂ ಆಗಿಲ್ಲ; ಅವನು ಸರ್ವೋತ್ತಮ ಎಂಬುದು ಇದರ ಭಾವ; **ವರ್ಯ**– ಶ್ರೇಷ್ಠ

೯. **ಭೂಸುರಪ್ರಿಯ**–ಭೂಸುರರು ಎಂದರೆ ಭೂಮಿಯ ದೇವತೆಗಳು ಎಂದರೆ ವಿಪ್ರರು ಎಂದರ್ಥ. ಭೂಲೋಕದಲ್ಲಿ ಸಕಲ ಭೋಗಭಾಗ್ಯಗಳನ್ನು ತೊರೆದು ವ್ರತ-ಉಪವಾಸಗಳ ಆಚರಣೆಗಳ ಮೂಲಕ ಕೇವಲ ವೇದಾದಿ ಶಾಸ್ತ್ರಗಳ ಅಧ್ಯಯನ ಅಧ್ಯಾಪನಗಳ ಮೂಲಕ

ವಿಶೇಷವಾಗಿ ತತ್ತ್ವಜ್ಞಾನ ಪರಂಪರೆಯನ್ನು ಸಂರಕ್ಷಿಸುವ ಮೂಲಕ ಲೋಕಕಲ್ಯಾಣ ಬಯಸುವ ತ್ಯಾಗಜೀವನದಿಂದಾಗಿ ಬ್ರಾಹ್ಮಣರಿಗೆ ಭೂಸುರರು ಎಂಬ ಹೆಸರು ಪರಂಪರೆಯಲ್ಲಿ ಬಂದಿದೆ. ಶ್ರೀಹರಿಯು ಸರ್ವ ಭಕ್ತರಿಗೂ ಪ್ರಿಯನಾದರೂ ಜ್ಞಾನಕಾರ್ಯದಲ್ಲಿ ಸದಾ ತೊಡಗುವ ಮೂಲಕ ವಿಪ್ರರು ಅವನಿಗೆ ವಿಶೇಷವಾಗಿ ಪ್ರಿಯರು ಎಂಬುದು ಇದರ ಭಾವ; **ಭೂಸುರ** – ವಿಪ್ರ.

೧೦. **ಸುರಪುರನಿಲಯ** – ಸುರಪುರ ಎಂದರೆ ದೇವತೆಗಳ ಪಟ್ಟಣ ಅಮರಾವತಿ ಎಂದಾಗುವುದು. ಇಲ್ಲಿ ಶ್ರೀಕನಕದಾಸರು ಚೆನ್ನಿಗರಾಯ ಎಂದು ಬೇಲೂರಿನ ಶ್ರೀಚೆನ್ನಕೇಶವನನ್ನು ಸ್ತುತಿಸುತ್ತಿರುವುದರಿಂದ ಇಲ್ಲಿ ಸುರಪುರ ಎಂಬುದಕ್ಕೆ ಬೇಲೂರು ಎಂದರ್ಥ. ಶ್ರೀಕೇಶವನಿಂದಾಗಿ ಬೇಲೂರು ದೇವನಗರಿಯಾದ ಅಮರಾವತಿಯ ಸೊಬಗನ್ನು ಪಡೆದಿದೆ ಎಂಬ ಇಲ್ಲಿಯ ಧ್ವನಿ ಅತ್ಯಂತ ರೋಚಕ.

೧೧. **ಚತುರೋಪಾಯ** – ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಎಂಬುವು ನಾಲ್ಕು ಪುರುಷಾರ್ಥಗಳು. ಶ್ರೀಹರಿಯ ಆರಾಧನೆಯಿಂದ ಈ ನಾಲ್ಕೂ ಪುರುಷಾರ್ಥಗಳು ಲಭಿಸುವವು ಎಂಬುವುದು ಈ ಪದದಿಂದ ಸೂಚಿತ[೧].

೧೨. **ಅನವರತ** ಎಂದರೆ ಸದಾ ಕಾಲ ಎಂದರ್ಥ. ಶ್ರೀಹರಿಯು ಸರ್ವತ್ರ ವ್ಯಾಪ್ತ, ಸರ್ವಶಕ್ತ ಹಾಗೂ ಸರ್ವಜ್ಞನಾಗಿರುವುದರಿಂದ ಅವನು ಸಕಲರನ್ನು ಸರ್ವಕಾಲದಲ್ಲೂ ಸರ್ವವಿಧದಲ್ಲೂ ಸಂರಕ್ಷಿಸುವನು ಎಂಬ ವಿಶೇಷಾರ್ಥವು ಇದರಿಂದ ಸೂಚಿತ. ಆದರಿಂದಾಗಿಯೇ ಅವನಲ್ಲಿ ಈ ಪ್ರಾರ್ಥನೆ ಎಂಬ ಭಾವವೂ ಇಲ್ಲಿದೆ.

೧೩. **ರಕ್ಷಿಸು** ಎಂಬುದು ಇಲ್ಲಿ ಬಹಳ ವಿಶಾಲವಾದ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. ಒಂದೊಂದು ಬಗೆಯ ರಕ್ಷಣೆಯನ್ನು ಲೋಕದಲ್ಲಿ ಹಲವರು ಕೊಡಬಹುದಾದರೂ ಸಕಲಬಗೆಯ ರಕ್ಷಣೆಯನ್ನು ಕೊಡುವುದು ಭಗವಂತ ಮಾತ್ರ. ರಕ್ಷಿಸು ಎಂಬ ಪದಕ್ಕೆ ಮೇಲೆ ತಿಳಿಸಿದಂತೆ ಸರ್ವ ಜನ್ಮಗಳಲ್ಲೂ ರಕ್ಷಣೆ, ಸರ್ವ ಪಾಪಗಳಿಂದ ರಕ್ಷಣೆ, ಸಕಲ ದುಷ್ಟಜನರಿಂದ ರಕ್ಷಣೆ, ಸಕಲ ಆಪತ್ತುಗಳಿಂದ ರಕ್ಷಣೆ ಎಂಬ ಸಕಲ ಬಗೆಯ ಅರ್ಥಗಳೂ ಉಚಿತ.

೧೪. **ನಮ್ಮನ್ನು** ಎಂದರೆ ನಮ್ಮನ್ನು ಸಕಲ ಭಗವದ್ಭಕ್ತರನ್ನು ಎಂದರ್ಥ. ಶ್ರೀಕನಕದಾಸರು ನನ್ನನ್ನು ಎಂದು ತಮಗೆ ಮಾತ್ರ ರಕ್ಷಣೆ ಬೇಡಿಕೊಳ್ಳದೆ ಸಕಲ ಭಕ್ತಜನರಿಗೂ ರಕ್ಷಣೆ ಎಂದು ಬೇಡಿಕೊಳ್ಳುವುದರಿಂದ ತಮ್ಮ ವಿಶಾಲವಾದ ಮನೋಭಾವವನ್ನು ಮೆರೆದಿರುವರು: ''**ಪಾಂತ್ವಸ್ಮಾನ್...**'' ಎಂಬಲ್ಲಿ ಹೇಗೋ ಹಾಗೆ. ಇಂತಹ ಹೃದಯವೈಶಾಲ್ಯದಿಂದಾಗಿಯೇ ಭಗವದ್ಭಕ್ತರು, ಸಂತರು ಲೋಕಮಾನ್ಯರಾಗಿರುವರು.

---

೧. ಧರ್ಮಾರ್ಥಕಾಮಮೋಕ್ಷಾಣಾಂ ನಾನ್ಯೋಪಾಯಸ್ತು ವಿದ್ಯತೇ।
ಸತ್ಯಂ ಬ್ರವೀಮಿ ದೇವೇಶ ಹೃಷೀಕೇಶಾರ್ಚನಾದೃತೇ॥ –ಕೃಷ್ಣಾಮೃತಮಹಾರ್ಣವ.

೧೫. ಶ್ರೀಕನಕದಾಸರು ಶ್ರೀ ಹರಿಭಕ್ತಿಸಾರದ ಈ ಮೊದಲ ಪದ್ಯದಲ್ಲಿ ಶ್ರೀಹರಿಯ ರಾಮ ಹಾಗು ಕೃಷ್ಣರೂಪಗಳನ್ನು ಸ್ತುತಿಸಿರುವರು. ಗಾಂಗೇಯನುತ ಮೊದಲಾದ ಮಾತುಗಳು ಕೃಷ್ಣರೂಪಕ್ಕೆ ಅನ್ವಯಿಸಿದರೆ, ರಘುಕುಲವರ್ಯ ಎಂಬ ಮಾತು ಶ್ರೀರಾಮರೂಪಕ್ಕೆ ಅನ್ವಯಿಸುವುದು.

೧೬. ಶ್ರೀರಾಮ ಮತ್ತು ಶ್ರೀಕೃಷ್ಣ ಈ ಎರಡೂ ರೂಪಗಳೂ ಸಹ ಭೂಲೋಕದಲ್ಲಿ ವಿಶೇಷಬಗೆಯಲ್ಲಿ ಜನರನ್ನು ಸಂರಕ್ಷಿಸಿದ, ದುರ್ಜನರನ್ನು ಸದೆಬಡೆದ ರೂಪಗಳು. ಶ್ರೀರಾಮರೂಪವು ಶ್ರೀರಾಮಾಯಣದ ಮಹಾನಾಯಕ ರೂಪವಾದರೆ, ಶ್ರೀಕೃಷ್ಣರೂಪವು ಶ್ರೀ ಮಹಾಭಾರತದ ನಾಯಕಮಣಿಯೆನಿಸಿದ ರೂಪ.

೧೭. ರಾಮಾಯಣ-ಮಹಾಭಾರತಗಳು ಭಾರತೀಯ ಸಂಸ್ಕೃತಿಯ ವಿಶ್ವದರ್ಶನವನ್ನು ಮಾಡಿಸುವ ದಿವ್ಯ ನೇತ್ರಗಳು ಎಂದೇ ಪ್ರಸಿದ್ಧ. ಆ ಎರಡು ರೂಪಗಳನ್ನು ಇಲ್ಲಿ ಸ್ತುತಿಸುವ ಮೂಲಕ ಶ್ರೀದಾಸರು ರಾಮಾಯಣ-ಮಹಾಭಾರತಗಳ ಮುಖ್ಯ ತಾತ್ಪರ್ಯ ಶ್ರೀರಾಮ ಹಾಗು ಶ್ರೀಕೃಷ್ಣರೂಪದ ಶ್ರೀಹರಿಯ ಸರ್ವಪಾರಮ್ಯವೇ ಆಗಿದೆ ಎಂಬ ವಿಶೇಷ ಅಂಶವನ್ನು ಸೂಚಿಸಿರುವರು. ಇದರಂತೆ ಮುಂದೆ ೧೩ನೇಯ ಪದ್ಯದ ವರೆಗೂ ಈ ಎರಡು ರೂಪಗಳನ್ನೇ ಶ್ರೀದಾಸರಾಯರು ಸ್ತುತಿಸುತ್ತಿರುವರು ಎಂಬುದನ್ನು ಗಮನಿಸಬೇಕು.

೧೮. ಸಕಲ ದೇವತೆಗಳ ಮುಖ್ಯ ಸಾಧನವೂ ಸಹ ಶ್ರೀಹರಿಯ ಎರಡು ರೂಪಗಳ ಕಾಲದಲ್ಲೇ ನಡೆದಿದೆ, ಆದ್ದರಿಂದಾಗಿ ಈ ಎರಡು ರೂಪಗಳಿಗೇ ವಿಶೇಷ ಮಹತ್ವ ಎಂಬ ಪ್ರಮೇಯ ವಿಶೇಷವನ್ನು ಶ್ರೀಮಧ್ವಾಚಾರ್ಯರು ತಮ್ಮ ಮಹಾಭಾರತತಾತ್ಪರ್ಯ-ನಿರ್ಣಯದಲ್ಲಿ ಪ್ರತಿಪಾದಿಸಿರುವರು. ಶ್ರೀದಾಸರಾಯರ ಈ ಮಾತು ಅದರ ವಿವರಣೆ-ಯಂತಿದೆ ಎಂದು ಗಮನಿಸಬೇಕು:

೧೯. ರಕ್ಷಿಸು ನಮ್ಮನನವರತ ಇದು ಮುಖ್ಯ ಕೃತಿಯ ಪ್ರತಿ ಪದದ ಕೊನೆಯ ಕೊರಿಕೆಯಾಗಿದೆ. ಕೀರ್ತನೆಗಳಲ್ಲಿ ಆದಿಯಲ್ಲಿ ಬರುವ ಪಲ್ಲವಿಯು ಹೇಗೋ ಹಾಗೆ. ಪ್ರತಿಪದದ ಕೊನೆಯಲ್ಲಿ ಬರುವ ಈ ಮಾತು ಅತ್ಯಂತ ಆರ್ತನಾಗಿ ಭಕ್ತ ಸ್ವಾಮಿಯಾದ ಶ್ರೀಹರಿಯನ್ನು ಪ್ರಾರ್ಥಿಸಬೇಕಾದ ರೀತಿಯನ್ನು ಅತ್ಯಂತ ಸಮರ್ಥವಾಗಿ ತಿಳಿಸಿಕೊಡುತ್ತದೆ.

****

## ೨. ಶ್ರೀರಾಮ-ಶ್ರೀಕೃಷ್ಣರು ನಮ್ಮನ್ನು ರಕ್ಷಿಸಲಿ

**ದೇವದೇವ ಜಗದ್ಭರಿತ ವಸು-**
**ದೇವಸುತ ಜಗದೇಕನಾಥ ರ-**
**ಮಾವಿನೋದಿತ ಸಕಲಸಜ್ಜನವಿನುತ ಗುಣಭರಿತ ।**

**ಭಾವಜಾರಿಪ್ರಿಯ ನಿರಾಮಯ**
**ರಾವಣಾಂತಕ ರಘುಕುಲಾನ್ವಯ**
**ದೇವ ಅಸುರವಿರೋಧಿ ರಕ್ಷಿಸು ನಮ್ಮನನವರತ || ೨ ||**

**ಅನುವಾದ: ದೇವದೇವನೇ, ಜಗತ್ತಿನಲ್ಲೆಲ್ಲ ವ್ಯಾಪಿಸಿರುವವನೇ, ವಸುದೇವನ ಪುತ್ರನೇ, ಜಗತ್ತಿನ ಮುಖ್ಯ ಸ್ವಾಮಿಯೇ, ಶ್ರೀರಮಾದೇವಿಗೆ ಆನಂದ ನೀಡುವವನೇ, ಸಕಲಸಜ್ಜನರಿಂದ ವಿಶೇಷವಾಗಿ ಸ್ತುತಿಸಲ್ಪಡುವವನೇ, ಗುಣಪೂರ್ಣನೇ, ಮನ್ಮಥನನ್ನು ಸಂಹರಿಸಿದ ಶಿವನಿಗೆ ಪ್ರಿಯನಾದವನೇ, ನಿರ್ದೋಷನೇ, ರಾವಣನನ್ನು ಸಂಹರಿಸಿದವನೇ, ರಘುಕುಲದಲ್ಲಿ ಅವತರಿಸಿದವನೇ, ಅಸುರರನ್ನು ತರಿದವನೇ, ದೇವನಾದ ಶ್ರೀಕೇಶವನೇ, ನೀನು ನಮ್ಮನ್ನು ಸದಾ ಕಾಲ ಪಾಲಿಸು.**

ವಿ: ೧. **ದೇವದೇವ** ಎಂದರೆ ದೇವತೆಗಳಿಗೂ ದೇವನಾದವನೆ ಎಂದರ್ಥ. ಅಥವಾ, ಎಲೈ ದೇವನೇ! ದೇವನೇ! ಎಂಬ ಸಂಭ್ರಮಸೂಚಕವಾದ ದ್ವಿರುಕ್ತಿಯೂ ಆಗಬಹುದು.

೨. **ಜಗದ್ಭರಿತ** – ಜಗತ್ತುಗಳನ್ನೆಲ್ಲ ವ್ಯಾಪಿಸಿದವನು ಎಂಬುದು ಮುಖ್ಯಾರ್ಥ. ಶ್ರೀಹರಿಯು ಸಕಲಜಗತ್ತುಗಳನ್ನು ಕೂರ್ಮರೂಪದಿಂದ ಧರಿಸಿರುವುದು ಉಪನಿಷತ್ತುಗಳಲ್ಲಿ ಪ್ರಸಿದ್ಧ. ಅದರಂತೆ ಅವನು ಜಗತ್ತಿನ ಒಳಹೊರಗೆ ನೆಲೆಸಿದ್ದೂ ಸಹ ಇಡೀ ವಿಶ್ವವನ್ನು ಧರಿಸಿರುವವನು ಎಂಬ ವಿಶೇಷಾಂಶ ಇದರಿಂದ ಸೂಚಿತ. ಇದನ್ನು ಸೂಚಿಸಲೆಂದು ಬ್ರಹ್ಮಾಂಡದ ಹೊರಗೆ ಒಂದು, ಬ್ರಹ್ಮಾಂಡದ ಒಳಗೆ ಮತ್ತೊಂದು ಎಂಬುದಾಗಿ ಎರಡು ಕೂರ್ಮರೂಪಗಳಿಂದ ಶ್ರೀಹರಿ ಜಗತ್ತನ್ನು ಧರಿಸಿರುವ ವಿವರವನ್ನು ಶ್ರೀಮಧ್ವಾಚಾರ್ಯರು ತಿಳಿಸಿರುವರು: **ಈಶಾವಾಸ್ಯಮಿದಂ** ಸರ್ವಂ ಎಂಬ ಈಶಾವಾಸ್ಯ ಉಪನಿಷತ್ತಿನ ಮಾತೂ ಕೂಡ ಈ ವಿಷಯವನ್ನೇ ಸೂಚಿಸುತ್ತದೆ. ಆ ಉಪನಿಷತ್ತಿಗೆ ಯಜ್ಞರೂಪದ ಶ್ರೀಹರಿ ಪ್ರತಿಪಾದ್ಯದೇವತೆ ಎಂಬ ವಿಷಯ ಈಶಾವಾಸ್ಯೋಪನಿಷದ್ಭಾಷ್ಯದಲ್ಲಿ ಬಂದಿದೆ.

೩. **ವಸುದೇವಸುತ** – ದೇವಕೀತನಯ ಎಂಬ ಹಿಂದಿನ ಪದ್ಯದ ವಿವರಣೆಯಲ್ಲಿ ತಿಳಿಸಿರುವಂತೆ ಶ್ರೀಕೃಷ್ಣರೂಪದಿಂದ ಶ್ರೀಹರಿ ವಸುದೇವನ ಪುತ್ರ ಎನ್ನಿಸಿದ. ಇಲ್ಲಿ ಸುತ ಎಂಬುದಕ್ಕೆ ಪುನ್ನಾಮ ನರಕದಿಂದ ಪಿತೃಗಳನ್ನು ಉದ್ಧರಿಸುವವನು ಎಂಬುದು ಶಾಸ್ತ್ರ ನೀಡಿರುವ ವಿವರಣೆ; ಶ್ರೀಕೃಷ್ಣನು ವಸುದೇವನನ್ನು ಸಕಲವಿಧ ಕ್ಲೇಶಗಳಿಂದ ಪಾರುಮಾಡಿ ಸದ್ಗತಿ ನೀಡುವುದರಿಂದ ಅವನಿಗೆ ಒಂದರ್ಥದಲ್ಲಿ ಪುತ್ರನಾಗಿರುವುದು ಉಚಿತವೇ ಆಗಿದೆ ಎಂಬ ವಿಶೇಷ ವಿವರಣೆ ಶ್ರೀವಾದಿರಾಜರ ರುಗ್ಮಿಣೀಶವಿಜಯ ಮಹಾಕಾವ್ಯದಲ್ಲಿ ಬಂದಿದೆ[೧]. ಶ್ರೀವಾದಿರಾಜರಲ್ಲಿ ಗುರುಭಾವನೆ ಹೊಂದಿದ್ದ ಶ್ರೀಕನಕದಾಸರು ಅವರ ಭಾವವನ್ನು ಹೀಗೆ ಸೂಚಿಸಿರುವರು ಎಂದು ತಿಳಿಯಬಹುದು.

---

೧. ಕಥಂ ಸ ಪುತ್ರಃ ಶತಪತ್ರನೇತ್ರಃ (೧/೪೭)

೧೫. ಶ್ರೀಕನಕದಾಸರು ಶ್ರೀ ಹರಿಭಕ್ತಿಸಾರದ ಈ ಮೊದಲ ಪದ್ಯದಲ್ಲಿ ಶ್ರೀಹರಿಯ ರಾಮ ಹಾಗು ಕೃಷ್ಣರೂಪಗಳನ್ನು ಸ್ತುತಿಸಿರುವರು. ಗಾಂಗೇಯನುತ ಮೊದಲಾದ ಮಾತುಗಳು ಕೃಷ್ಣರೂಪಕ್ಕೆ ಅನ್ವಯಿಸಿದರೆ, ರಘುಕುಲವರ್ಯ ಎಂಬ ಮಾತು ಶ್ರೀರಾಮರೂಪಕ್ಕೆ ಅನ್ವಯಿಸುವುದು.

೧೬. ಶ್ರೀರಾಮ ಮತ್ತು ಶ್ರೀಕೃಷ್ಣ ಈ ಎರಡೂ ರೂಪಗಳೂ ಸಹ ಭೂಲೋಕದಲ್ಲಿ ವಿಶೇಷಬಗೆಯಲ್ಲಿ ಜನರನ್ನು ಸಂರಕ್ಷಿಸಿದ, ದುರ್ಜನರನ್ನು ಸದೆಬಡೆದ ರೂಪಗಳು. ಶ್ರೀರಾಮರೂಪವು ಶ್ರೀರಾಮಾಯಣದ ಮಹಾನಾಯಕ ರೂಪವಾದರೆ, ಶ್ರೀಕೃಷ್ಣರೂಪವು ಶ್ರೀ ಮಹಾಭಾರತದ ನಾಯಕಮಣಿಯೆನಿಸಿದ ರೂಪ.

೧೭. ರಾಮಾಯಣ-ಮಹಾಭಾರತಗಳು ಭಾರತೀಯ ಸಂಸ್ಕೃತಿಯ ವಿಶ್ವದರ್ಶನವನ್ನು ಮಾಡಿಸುವ ದಿವ್ಯ ನೇತ್ರಗಳು ಎಂದೇ ಪ್ರಸಿದ್ಧ. ಆ ಎರಡು ರೂಪಗಳನ್ನು ಇಲ್ಲಿ ಸ್ತುತಿಸುವ ಮೂಲಕ ಶ್ರೀದಾಸರು ರಾಮಾಯಣ-ಮಹಾಭಾರತಗಳ ಮುಖ್ಯ ತಾತ್ಪರ್ಯ ಶ್ರೀರಾಮ ಹಾಗು ಶ್ರೀಕೃಷ್ಣರೂಪದ ಶ್ರೀಹರಿಯ ಸರ್ವಪಾರಮ್ಯವೇ ಆಗಿದೆ ಎಂಬ ವಿಶೇಷ ಅಂಶವನ್ನು ಸೂಚಿಸಿರುವರು. ಇದರಂತೆ ಮುಂದೆ ೧೩ನೇಯ ಪದ್ಯದ ವರೆಗೂ ಈ ಎರಡು ರೂಪಗಳನ್ನೇ ಶ್ರೀದಾಸರಾಯರು ಸ್ತುತಿಸುತ್ತಿರುವರು ಎಂಬುದನ್ನು ಗಮನಿಸಬೇಕು.

೧೮. ಸಕಲ ದೇವತೆಗಳ ಮುಖ್ಯ ಸಾಧನವೂ ಸಹ ಶ್ರೀಹರಿಯ ಎರಡು ರೂಪಗಳ ಕಾಲದಲ್ಲೇ ನಡೆದಿದೆ, ಆದ್ದರಿಂದಾಗಿ ಈ ಎರಡು ರೂಪಗಳಿಗೇ ವಿಶೇಷ ಮಹತ್ವ ಎಂಬ ಪ್ರಮೇಯ ವಿಶೇಷವನ್ನು ಶ್ರೀಮಧ್ವಾಚಾರ್ಯರು ತಮ್ಮ ಮಹಾಭಾರತತಾತ್ಪರ್ಯ-ನಿರ್ಣಯದಲ್ಲಿ ಪ್ರತಿಪಾದಿಸಿರುವರು. ಶ್ರೀದಾಸರಾಯರ ಈ ಮಾತು ಅದರ ವಿವರಣೆ-ಯಂತಿದೆ ಎಂದು ಗಮನಿಸಬೇಕು:

೧೯. **ರಕ್ಷಿಸು ನಮ್ಮನನವರತ** ಇದು ಮುಖ್ಯ ಕೃತಿಯ ಪ್ರತಿ ಪದದ ಕೊನೆಯ ಕೊರಿಕೆಯಾಗಿದೆ. ಕೀರ್ತನೆಗಳಲ್ಲಿ ಆದಿಯಲ್ಲಿ ಬರುವ ಪಲ್ಲವಿಯು ಹೇಗೋ ಹಾಗೆ. ಪ್ರತಿಪದದ ಕೊನೆಯಲ್ಲಿ ಬರುವ ಈ ಮಾತು ಅತ್ಯಂತ ಆರ್ತನಾಗಿ ಭಕ್ತ ಸ್ವಾಮಿಯಾದ ಶ್ರೀಹರಿಯನ್ನು ಪ್ರಾರ್ಥಿಸಬೇಕಾದ ರೀತಿಯನ್ನು ಅತ್ಯಂತ ಸಮರ್ಥವಾಗಿ ತಿಳಿಸಿಕೊಡುತ್ತದೆ.

****

## ೨. ಶ್ರೀರಾಮ-ಶ್ರೀಕೃಷ್ಣರು ನಮ್ಮನ್ನು ರಕ್ಷಿಸಲಿ

**ದೇವದೇವ ಜಗದ್ಭರಿತ ವಸು-**
**ದೇವಸುತ ಜಗದೇಕನಾಥ ರ-**
**ಮಾವಿನೋದಿತ ಸಕಲಸಜ್ಜನವಿನುತ ಗುಣಭರಿತ ।**

ಭಾವಜಾರಿಪ್ರಿಯ ನಿರಾಮಯ
ರಾವಣಾಂತಕ ರಘುಕುಲಾನ್ವಯ
ದೇವ ಅಸುರವಿರೋಧಿ ರಕ್ಷಿಸು ನಮ್ಮನನವರತ ॥ ೨ ॥

**ಅನುವಾದ: ದೇವದೇವನೇ, ಜಗತ್ತಿನಲ್ಲೆಲ್ಲ ವ್ಯಾಪಿಸಿರುವವನೇ, ವಸುದೇವನ ಪುತ್ರನೇ, ಜಗತ್ತಿನ ಮುಖ್ಯ ಸ್ವಾಮಿಯೇ, ಶ್ರೀರಮಾದೇವಿಗೆ ಆನಂದ ನೀಡುವವನೇ, ಸಕಲಸಜ್ಜನರಿಂದ ವಿಶೇಷವಾಗಿ ಸ್ತುತಿಸಲ್ಪಡುವವನೇ, ಗುಣಪೂರ್ಣನೇ, ಮನ್ಮಥನನ್ನು ಸಂಹರಿಸಿದ ಶಿವನಿಗೆ ಪ್ರಿಯನಾದವನೇ, ನಿರ್ದೋಷನೇ, ರಾವಣನನ್ನು ಸಂಹರಿಸಿದವನೇ, ರಘುಕುಲದಲ್ಲಿ ಅವತರಿಸಿದವನೇ, ಅಸುರರನ್ನು ತರಿದವನೇ, ದೇವನಾದ ಶ್ರೀಕೇಶವನೇ, ನೀನು ನಮ್ಮನ್ನು ಸದಾ ಕಾಲ ಪಾಲಿಸು.**

ವಿ: ೧. **ದೇವದೇವ** ಎಂದರೆ ದೇವತೆಗಳಿಗೂ ದೇವನಾದವನೆ ಎಂದರ್ಥ. ಅಥವಾ, ಎಲೈ ದೇವನೇ! ದೇವನೇ! ಎಂಬ ಸಂಭ್ರಮಸೂಚಕವಾದ ದ್ವಿರುಕ್ತಿಯೂ ಆಗಬಹುದು.

೨. **ಜಗದ್ಭರಿತ** – ಜಗತ್ತುಗಳನ್ನೆಲ್ಲ ವ್ಯಾಪಿಸಿದವನು ಎಂಬುದು ಮುಖ್ಯಾರ್ಥ. ಶ್ರೀಹರಿಯು ಸಕಲಜಗತ್ತುಗಳನ್ನು ಕೂರ್ಮರೂಪದಿಂದ ಧರಿಸಿರುವುದು ಉಪನಿಷತ್ತುಗಳಲ್ಲಿ ಪ್ರಸಿದ್ಧ. ಅದರಂತೆ ಅವನು ಜಗತ್ತಿನ ಒಳಹೊರಗೆ ನೆಲೆಸಿದ್ದೂ ಸಹ ಇಡೀ ವಿಶ್ವವನ್ನು ಧರಿಸಿರುವನು ಎಂಬ ವಿಶೇಷಾಂಶ ಇದರಿಂದ ಸೂಚಿತ. ಇದನ್ನು ಸೂಚಿಸಲೆಂದು ಬ್ರಹ್ಮಾಂಡದ ಹೊರಗೆ ಒಂದು, ಬ್ರಹ್ಮಾಂಡದ ಒಳಗೆ ಮತ್ತೊಂದು ಎಂಬುದಾಗಿ ಎರಡು ಕೂರ್ಮರೂಪಗಳಿಂದ ಶ್ರೀಹರಿ ಜಗತ್ತನ್ನು ಧರಿಸಿರುವ ವಿವರವನ್ನು ಶ್ರೀಮಧ್ವಾಚಾರ್ಯರು ತಿಳಿಸಿರುವರು: **ಈಶಾವಾಸ್ಯಮಿದಂ ಸರ್ವಂ** ಎಂಬ ಈಶಾವಾಸ್ಯ ಉಪನಿಷತ್ತಿನ ಮಾತೂ ಕೂಡ ಈ ವಿಷಯವನ್ನೇ ಸೂಚಿಸುತ್ತದೆ. ಆ ಉಪನಿಷತ್ತಿಗೆ ಯಜ್ಞರೂಪದ ಶ್ರೀಹರಿ ಪ್ರತಿಪಾದ್ಯದೇವತೆ ಎಂಬ ವಿಷಯ ಈಶಾವಾಸ್ಯೋಪನಿಷದ್ಭಾಷ್ಯದಲ್ಲಿ ಬಂದಿದೆ.

೩. **ವಸುದೇವಸುತ** – ದೇವಕೀತನಯ ಎಂಬ ಹಿಂದಿನ ಪದ್ಯದ ವಿವರಣೆಯಲ್ಲಿ ತಿಳಿಸಿರುವಂತೆ ಶ್ರೀಕೃಷ್ಣರೂಪದಿಂದ ಶ್ರೀಹರಿ ವಸುದೇವನ ಪುತ್ರ ಎನ್ನಿಸಿದ. ಇಲ್ಲಿ ಸುತ ಎಂಬುದಕ್ಕೆ ಪುನ್ನಾಮ ನರಕದಿಂದ ಪಿತೃಗಳನ್ನು ಉದ್ಧರಿಸುವವನು ಎಂಬುದು ಶಾಸ್ತ್ರನೀಡಿರುವ ವಿವರಣೆ; ಶ್ರೀಕೃಷ್ಣನು ವಸುದೇವನನ್ನು ಸಕಲವಿಧ ಕ್ಲೇಶಗಳಿಂದ ಪಾರುಮಾಡಿ ಸದ್ಗತಿ ನೀಡುವುದರಿಂದ ಅವನಿಗೆ ಒಂದರ್ಥದಲ್ಲಿ ಪುತ್ರನಾಗಿರುವುದು ಉಚಿತವೇ ಆಗಿದೆ ಎಂಬ ವಿಶೇಷ ವಿವರಣೆ ಶ್ರೀವಾದಿರಾಜರ ರುಗ್ಮಿಣೀಶವಿಜಯ ಮಹಾಕಾವ್ಯದಲ್ಲಿ ಬಂದಿದೆ[೧]. ಶ್ರೀವಾದಿರಾಜರಲ್ಲಿ ಗುರುಭಾವನೆ ಹೊಂದಿದ್ದ ಶ್ರೀಕನಕದಾಸರು ಅವರ ಭಾವವನ್ನು ಹೀಗೆ ಸೂಚಿಸಿರುವರು ಎಂದು ತಿಳಿಯಬಹುದು.

---

೧. ಕಥಂ ಸ ಪುತ್ರಃ ಶತಪತ್ರನೇತ್ರಃ (೧/೪೭)

೪. **ಜಗದೇಕನಾಥ** – ಜಗತ್ತಿಗೆ ಮುಖ್ಯಸ್ವಾಮಿ ಎಂದರ್ಥ. ಸಕಲದೇವತೆಗಳು ಜಗತ್ತಿನ ಮೇಲೆ ಒಡೆತನ ಹೊಂದಿದ್ದರೂ ಹಿಂದೆ ತಿಳಿಸಿದಂತೆ ಶ್ರೀಹರಿಯು ದೇವದೇವನಾದ್ದರಿಂದ ಅವನು ಜಗತ್ತಿಗೆ ಮುಖ್ಯನಾಥ ಎಂಬುದು ಸ್ಫುಟಪಡುವುದು: **ನಾರಾಯಣಂ ಸುರಗುರುಂ ಜಗದೇಕನಾಥಂ** ಎಂಬ ಮಹಾಭಾರತದ ಮಂಗಲಪದ್ಯದಲ್ಲಿ ಜಗದೇಕನಾಥಂ ಎಂಬ ಪದ ಬಂದಿರುವುದು ಗಮನಾರ್ಹ. ಮಹಾಭಾರತದ ಶ್ರೀಕೃಷ್ಣನನ್ನು ಸ್ತುತಿಸುವ ಈ ಪದ್ಯದಲ್ಲಿ ಅದರ ಮೊದಲ ಶ್ಲೋಕದಲ್ಲಿ ಬಂದಿರುವ ಪದವನ್ನೇ ಉಪಯೋಗಿಸಿರುವುದು ಗಮನಾರ್ಹ.

೫. **ರಮಾವಿನೋದಿತ** – ಮಹಾಲಕ್ಷ್ಮಿಗೆ ವಿನೋದ ನೀಡುವವನು ಎಂಬುದು ಇದಕ್ಕೆ ಮುಖ್ಯಭಾವ. ಶ್ರೀಹರಿಯು ಸ್ವತಂತ್ರನಾಗಿದ್ದು ಸ್ವರತ ಎನ್ನಿಸಿರುವನು. ಆದ್ದರಿಂದ, ಅವನು ರಮಾಪತಿ ಎನ್ನಿಸಿರುವುದು ರಮಾದೇವಿಗೆ ವಿನೋದ ನೀಡಲೆಂದೇ ಹೊರತು ಅವಳಿಂದ ತಾನು ವಿನೋದ ಪಡೆಯಲು ಸರ್ವಥಾ ಅಲ್ಲ ಎಂಬುದು ಶಾಸ್ತ್ರಗಳ ನಿಲುವು. ರಮಾವಿನೋದಿತ ಎಂಬುದಕ್ಕೆ ರಮಾದೇವಿಯಿಂದ ನಲಿಯುವವನು ಎಂಬ ಅರ್ಥವೂ ವಿವಕ್ಷಿತ. ಅದಕ್ಕೆ, ರಮಾದೇವಿಯು ಪರಮಭಕ್ತಿಯಿಂದ ಮಾಡುವ ಆರಾಧನೆಯನ್ನು ಮೆಚ್ಚಿ ಅನುಗ್ರಹಿಸುವನು ಎಂದಷ್ಟೆ ತಿಳಿಯಬೇಕು. "**ಏನು ಧನ್ಯಳೋ ಲಕುಮಿ ಎಂಥ ಮಾನ್ಯಳೋ**" ಎಂಬ ಶ್ರೀಪುರಂದರದಾಸರ ಪದದಲ್ಲಿ ಮಹಾಲಕ್ಷ್ಮೀ ಮಾಡುವ ಶ್ರೀಹರಿಯ ಬಗೆಬಗೆಯ ಸೇವಾವೈಭವ ನಿರೂಪಿತವಾಗಿವೆ.

೬. **ಸಕಲಸಜ್ಜನವಿನುತ** – ಜಗತ್ತಿನಲ್ಲಿ ಸಜ್ಜನರೆಂದು ಪ್ರಸಿದ್ಧರಾದ ಸಕಲರೂ ಶ್ರೀಹರಿಯನ್ನು ಸರ್ವೋತ್ತಮ ಎಂದೇ ಕೊಂಡಾಡಿರುವರು ಎಂದರ್ಥ. ಮಹಾಭಾರತ, ರಾಮಾಯಣಗಳು ಹಾಗೂ ಸಕಲಪುರಾಣಗಳು ಇದಕ್ಕೆ ನಿದರ್ಶನ. ಘಂಟಾಕರ್ಣ ಎಂಬ ಪಿಶಾಚಿಗಳೂ ಸಹ ಶ್ರೀಹರಿಯನ್ನು ಸ್ತುತಿಸಿದ ವಿವರ ಹರಿವಂಶದಲ್ಲಿ ಬಂದಿದೆ. ರಾಕ್ಷಸ ವಂಶದ ವಿಭೀಷಣ, ಬೇಡತಿಯಾದ ಶಬರಿ, ಹದ್ದಿನರೂಪದ ಜಟಾಯು, ಅಸುರರಾದ ವಿರಾಧಾ–ಕಬಂಧರು, ಶೂದ್ರನಾದ ವಿದುರ, ಸ್ತ್ರೀಯರಾದ ಅಹಲ್ಯೆ ಮೊದಲಾದವರು, ಗೋಪಿಕಾಸ್ತ್ರೀಯರು, ಧ್ರುವ, ಪ್ರಹ್ಲಾದ ಮೊದಲಾದ ಬಾಲಕರು ಮೊದಲಾಗಿ ಬಗೆಬಗೆಯ ಸಜ್ಜನರು ಶ್ರೀಹರಿಯನ್ನು ಸ್ತುತಿಸಿರುವುದು ಸುಪ್ರಸಿದ್ಧ; **ವಿನುತ** – ವಿಶೇಷವಾಗಿ ಸ್ತುತನಾದ.

೭. **ಗುಣಭರಿತ** – ಗುಣಭರಿತ ಎಂದರೆ ಗುಣಪೂರ್ಣ ಎಂದರ್ಥ. ಗುಣಪೂರ್ಣ ಎಂಬುದಕ್ಕೆ ಸಕಲಗುಣಪೂರ್ಣ, ಅನಂತಾನಂತಕಲ್ಯಾಣಗುಣಪರಿಪೂರ್ಣನಾದವನು ಎಂದರ್ಥ. ಸಕಲ ಶಾಸ್ತ್ರಗಳೂ ಸಾರಿರುವ ಭಗವಂತನ ಮುಖ್ಯ ಲಕ್ಷಣವೆಂದರೆ ಈ ಗುಣಪೂರ್ಣತ್ವವೇ ಆಗಿದೆ ಎಂಬುದು ಗಮನಾರ್ಹ; **ಭರಿತ** – ಪೂರ್ಣ.

೮. **ಭಾವಜಾರಿಪ್ರಿಯ** – ಭಾವ ಎಂದರೆ ಮನಸ್ಸು, ಭಾವಜ ಎಂದರೆ ಮನಸ್ಸಿನಿಂದ ಹುಟ್ಟಿದ 'ಮನ್ಮಥ'. ಮನೋಜ ಎಂಬುದೇ ಮನ್ಮಥನ ಹೆಸರುಗಳಲ್ಲಿ ಒಂದು. ಭಾವಜಾರಿ ಎಂದರೆ ಮನಸ್ಸಿನಿಂದ ಜನಿಸಿದ ಮನ್ಮಥನನ್ನು ತನ್ನ ಮೂರನೇ ಕಣ್ಣಿನಿಂದ ದಹಿಸಿದ ಶಿವ ಎಂದರ್ಥ.

ಅಂತಹ ಶಿವನಿಗೆ ಪ್ರಿಯನಾದವನು ಎಂಬುದು ಹರಿಯ ವಿಶೇಷ, ಎಂಬುದು ಇದರ ಭಾವ; **ಭಾವಜ** – ಮನ್ಮಥ.

೯. **ನಿರಾಮಯ** – ಆಮಯ ಎಂದರೆ ದೋಷ, ರೋಗ; ನಿರಾಮಯ ಎಂದರೆ ನಿರ್ದೋಷ ಹಾಗೂ ಸದಾಭವರೋಗರಹಿತನಾದ ನಿತ್ಯಮುಕ್ತ ಎಂದರ್ಥ. ಕೆಲವು ದೋಷಗಳಿಲ್ಲದವರು ಅನೇಕರಿದ್ದರೂ ಸಕಲದೋಷಗಳಿಂದ ರಹಿತನಾದವನು ಶ್ರೀಹರಿ ಎಂದರ್ಥ. ಗುಣಪೂರ್ಣತ್ವದಂತೆ ದೋಷದೂರತ್ವ ಭಗವಂತನ ಮತ್ತೊಂದು ಲಕ್ಷಣ: **ನಾರಾಯಣಂ ಗುಣೈಃ ಸರ್ವೈರುದೀರ್ಣಂ ದೋಷವರ್ಜಿತಂ;** ನಿರಾಮಯ – ನಿರ್ದೋಷ.

೧೦. **ರಾವಣಾಂತಕ** – ರಾವಣ ರಾಮಾಯಣದ ಮಹಾ ಖಳನಾಯಕ. ಯಮನನ್ನು ಅಂಜಿಸುತ್ತಿದ್ದ ಅವನಿಗೆ ನಿಜಕ್ಕೂ ಮೃತ್ಯು ಉಂಟುಮಾಡಿದ ಯಮ ಸಾಕ್ಷಾತ್ ಶ್ರೀರಾಮ ಎಂಬುದು ಇದರಿಂದ ಸೂಚಿತ; **ಅಂತಕ** – ಮೃತ್ಯು

೧೧. **ರಘುಕುಲಾನ್ವಯ** – ಹಿಂದೆ ಹೇಳಿದಂತೆ ರಘುಕುಲದಲ್ಲಿ ಅವತರಿಸಿ ಅದಕ್ಕೆ ಮಾನ್ಯತೆ ತಂದುಕೊಟ್ಟವನು ಎಂದು ಭಾವ; **ಅನ್ವಯ** – ವಂಶ

೧೨. **ದೇವ** – ದೇವ ಶಬ್ದಕ್ಕೆ ಕೋಶಗಳಲ್ಲಿ ಈ ಅನೇಕ ಬಗೆಯ ಅರ್ಥ ಇದೆ. ಅದರಂತೆ ಶ್ರೀಹರಿಯು ಸಕಲ ರೀತಿಯಲ್ಲೂ ದೇವನಾಗಿರುವನು ಎಂದರ್ಥ. ಋಗ್ಭಾಷ್ಯದಲ್ಲಿ ಶ್ರೀಮದಾಚಾರ್ಯರು ತಿಳಿಸಿರುವ ದೇವ ಶಬ್ದದ ಅರ್ಥ ಹೀಗಿದೆ[೧].

೧೩. **ಅಸುರವಿರೋಧಿ** – ಸುರರಿಗೆ ವಿರೋಧಿಗಳಾದವರು ಅಸುರರು. ಅವರಿಗೆ ವಿರೋಧಿಯಾದವನು ಶ್ರೀಹರಿ. ಅಸುರಾರಿ ಎಂಬುದೇ ಅವನ ಪ್ರಖ್ಯಾತಿ. ಸುರರು ಒಳಿತಿನ ಸಂಕೇತವಾದರೆ ಅಸುರರು ಕೆಡುಕಿನ ಸಂಕೇತ. ಶ್ರೀಹರಿಯು ಅಸುರವಿರೋಧಿಯೆಂದರೆ ಕೆಡುಕನ್ನು ಪರಿಹರಿಸುವವನು ಎಂದು ತಾತ್ಪರ್ಯ.

*****

## ೩. ತ್ರೈಜಗತ್ಪಾವನ ರಕ್ಷಿಸು

**ಅನುಪಮಿತಚಾರಿತ್ರ ಕರುಣಾ-**
**ವನಧಿ ಭಕ್ತಕುಟುಂಬಿ ಯೋಗೀ -**
**ಜನಹೃದಯಪರಿಪೂರ್ಣ ನಿತ್ಯಾನಂದ ನಿಗಮನುತ ।**

---

೧. ದ್ಯೋತನಾತ್ ವಿಜಯಾತ್ ಕಾಂತ್ಯಾ ಸ್ತುತ್ಯಾ ವ್ಯವಹೃತೇರಪಿ।
ಗತ್ಯಾ ರತ್ಯಾ ಚ ದೇವಾಖ್ಯಂ ................................... ॥ ಋಗ್ಭಾಷ್ಯ (೧/೧೧)

**ವನಜನಾಭ ಮುಕುಂದ ಮುರಮ-**
**ರ್ದನ ಜನಾರ್ದನ ತ್ರೈಜಗತ್ಪಾ-**
**ವನ ಸುರಾರ್ಚಿತ ದೇವ ರಕ್ಷಿಸು ನಮ್ಮನನವರತ ॥ ೩ ॥**

**ಅನುವಾದ: ಸಾಟಿಯಿಲ್ಲದ ಮಹಿಮಾವಂತನೆ, ಕರುಣಾಸಮುದ್ರನೆ, ಭಕ್ತ ಕುಟುಂಬಿಯೆ, ಯೋಗಿಜನರ ಹೃದಯದಲ್ಲಿ ಪೂರ್ಣವಾಗಿ ನೆಲೆಸಿರುವವನೆ, ಸದಾ ಆನಂದ ಪೂರ್ಣನೇ, ವೇದಗಳಿಂದ ಸ್ತುತಿಸಲ್ಪಡುವವನೇ, ಪದ್ಮನಾಭನೇ, ಮುಕ್ತಿನೀಡುವವನೇ, ಮುರಾಸುರನನ್ನು ಸಂಹರಿಸಿದವನೇ, ಭಕ್ತರ ಸಂಸಾರವನ್ನು ಪರಿಹರಿಸುವವನೇ, ಮೂರು ಜಗತ್ತುಗಳನ್ನು ಪವಿತ್ರಗೊಳಿಸುವವನೇ, ದೇವತೆಗಳಿಂದ ಪೂಜಿತನಾದವನೇ, ದೇವನೇ, ನಮ್ಮನ್ನು ಸದಾ ಪಾಲಿಸು.**

ವಿ: ೧. ಶ್ರೀರಾಮ ಹಾಗೂ ಶ್ರೀಕೃಷ್ಣ ಎಂಬ ಎರಡೂ ಅವತಾರಗಳಿಗೆ ಅನ್ವಯಿಸುವ ವಿಶೇಷ ಹಿರಿಮೆಗಳು ಈ ಪದ್ಯದಲ್ಲಿ ನಿರೂಪಿತವಾಗಿವೆ.

೨. **ಅನುಪಮಿತಚಾರಿತ್ರ** – ಚಾರಿತ್ರ ಎಂದರೆ ಹಿರಿಮೆ ಎಂದರ್ಥ. ಶ್ರೀಹರಿಯ ಹಿರಿಮೆ ಹೋಲಿಸಲಾಗದಷ್ಟು ಉನ್ನತವಾದುದು ಎಂದರ್ಥ.

೩. **ಕರುಣಾವನಧಿ** – ವನಧಿ ಎಂದರೆ ಸಮುದ್ರ (ವನ=ನೀರು; ವನಧಿ=ಜಲಧಿ). ಕರುಣಾವನಧಿ ಎಂದರೆ ಕರುಣಾಸಮುದ್ರ.

೪. **ಭಕ್ತಕುಟುಂಬಿ** – ಭಕ್ತರನ್ನು ಕುಟುಂಬದ ಸದಸ್ಯರೆಂಬಂತೆ ನೋಡುವ ಕರುಣಾಳು ಎಂದರ್ಥ.

೫. **ಯೋಗಿಜನಹೃದಯಪರಿಪೂರ್ಣ** – ಶ್ರೀಹರಿಯು ಸರ್ವರ ಹೃದಯದಲ್ಲೂ ಪೂರ್ಣವಾಗಿಯೇ ನೆಲೆಸಿರುವವನಾದರೂ ಅವನು ಹಾಗೆ ಗೋಚರಿಸುವುದು ಯೋಗಿ-ಗಳಿಗೆ ಎಂಬ ಅರ್ಥದಲ್ಲಿ ಈ ಮಾತು ಬಂದಿದೆ. ಜ್ಞಾನಯೋಗಿಗಳು, ಕರ್ಮಯೋಗಿಗಳು ಹಾಗು ಭಕ್ತಿಯೋಗಿಗಳು ಎಂಬುದಾಗಿ ಯೋಗಿಗಳಲ್ಲಿ ಮೂರು ವಿಧ. ಮತ್ತೊಂದು ಕ್ರಮದಲ್ಲಿ ಜ್ಞಾನಯೋಗಿಗಳು ಹಾಗೂ ಕರ್ಮಯೋಗಿಗಳು ಎಂದು ಎರಡು ವಿಧ. ಭಕ್ತಿಯೋಗವು ಈ ಉಭಯರಿಗೂ ಸಮಾನ ಎಂಬ ಅರ್ಥದಲ್ಲಿ ಎರಡು ವಿಧ ಎಂಬುದು ಸಹ ಯುಕ್ತವೇ ಆಗಿದೆ. ಈ ಅರ್ಥದಲ್ಲಿ ಯೋಗಿಗಳು ಎರಡು ವಿಧ ಎಂದು ಭಗವದ್ಗೀತೆಯಲ್ಲಿ ನಿರೂಪಿತವಾಗಿದ್ದರೆ, ಭಕ್ತಿಗೆ ಒತ್ತುಕೊಡಲೆಂದು ಶ್ರೀಮದ್ಭಾಗವತದಲ್ಲಿ ಯೋಗಿಗಳು ಮೂರು ವಿಧ ಎಂದು ನಿರೂಪಿತವಾಗಿದೆ. ಜ್ಞಾನಪ್ರಧಾನವಾಗಿದ್ದು ಕರ್ಮ ಗೌಣವಾಗಿದ್ದಲ್ಲಿ ಅವರು ಜ್ಞಾನಯೋಗಿಗಳು. ಸಾಂಖ್ಯಯೋಗಿಗಳು ಎಂದರೂ ಇವರೇ. ಕರ್ಮಪ್ರಧಾನವಾದ ಯೋಗಿಗಳಿಗೆ ಕರ್ಮಯೋಗಿಗಳು ಎನ್ನುವರು. ಈ ಎರಡು ವಿಭಾಗವೂ ಸಹ ಮುಖ್ಯವಾಗಿ ಜ್ಞಾನೋತ್ತರಕಾಲದಲ್ಲಿ ಮಾಡುವ ಸಾಧನೆಗೆ ಅನುಗುಣವಾದುದು ಎಂಬುದನ್ನು

ಗಮನಿಸಬೇಕು. ಸನಕಾದಿಗಳು ಜ್ಞಾನಯೋಗಿಗಳು ಎನ್ನಿಸಿದ್ದರೆ, ಜನಕಾದಿಗಳು ಕರ್ಮಯೋಗಿಗಳು ಎನ್ನಿಸಿರುವರು. ಬ್ರಹ್ಮ-ವಾಯು ಮೊದಲಾದ ಋಜು ಯೋಗಿಗಳು ಈ ಎರಡಕ್ಕೂ ಮಿಗಿಲಾದ ಮಹಾಭಕ್ತಿಯೋಗಿಗಳು ಎಂಬುದು ಇನ್ನೊಂದು ವಿಶೇಷಾಂಶ.

೬. **ನಿತ್ಯಾನಂದ** – ಸದಾ ಕಾಲ ಪೂರ್ಣಾನಂದದಿಂದ ಇರುವವನು ಎಂದರ್ಥ. ಇದು ಶ್ರೀಹರಿಯ ವಿಶಿಷ್ಟ ಲಕ್ಷಣ. **ಆನಂದೋ ನಂದನೋ ನಂದಃ, ಆದಿದೇವಸ್ಸದಾನಂದಃ** ಎಂಬ ವಿಷ್ಣುಸಹಸ್ರನಾಮದ ಮಾತುಗಳು, **ಆನಂದಮಯೋಽಭ್ಯಾಸಾತ್** ಎಂಬ ಬ್ರಹ್ಮಸೂತ್ರ, "**ಆನಂದಂ ಬ್ರಹ್ಮೇತಿ ವ್ಯಜಾನಾತ್**" ಎಂಬ ಉಪನಿಷದ್ವಾಣಿ ಇದಕ್ಕೆ ಆಧಾರ.

೭. **ನಿಗಮನುತ** – ನಿಗಮ ಎಂದರೆ ವೇದ. ಭಗವಂತನನ್ನು ಮುಖ್ಯವಾಗಿ ಪ್ರತಿಪಾದಿಸುವುದರಿಂದ ವೇದಗಳಿಗೆ ನಿಗಮ ಎಂದು ಹೆಸರು. ಅಪೌರುಷೇಯವಾಣಿ ಎಂಬುದು ಅವುಗಳ ಹಿರಿಮೆ. ರಾಮಾಯಣ ಮಹಾಭಾರತ ಪುರಾಣಗಳು ಸಹ ಭಗವಂತನನ್ನು ತಿಳಿಸಿಕೊಡುವುದರಿಂದ ಅವುಗಳೂ ಸಹ ನಿಗಮವೆಂಬುದಾಗಿ ಮಾನ್ಯವಾಗಿವೆ-**ಇತಿಹಾಸಪುರಾಣಃ ಪಂಚಮೋ ವೇದಾನಾಂ ವೇದಃ**. ಶ್ರೀಹರಿಯು ವೇದಪ್ರತಿಪಾದ್ಯ, ಆದ್ದರಿಂದಲೇ ಅವನು ಎಲ್ಲರಿಗಿಂತಲೂ ಮಿಗಿಲು ಎಂಬುದು ಇದರ ಭಾವ: **ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ । ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ ॥**

೮. **ವನಜನಾಭ** – ವನಜ ಎಂದರೆ ಜಲಜ, ಕಮಲ ಎಂದರ್ಥ. ವನಜನಾಭ ಎಂದರೆ ಪದ್ಮನಾಭ. ನಾಭಿಯಲ್ಲಿ ಕಮಲ ಹೊಂದಿರುವ ವಿಶಿಷ್ಟ ಹಿರಿಮೆ ಶ್ರೀಹರಿಯದು. ಆದಕ್ಕೆ ಅವನಿಗೆ ಪದ್ಮನಾಭ ಎಂದು ಹೆಸರು. ಶ್ರೀಹರಿಯ ಚತುರ್ವಿಂಶತಿ ರೂಪಗಳಲ್ಲಿ ಪದ್ಮನಾಭ ಎಂಬುದು ಒಂದು. ಹರಿದಿನವನ್ನು ಪದ್ಮನಾಭದಿನ ಎಂದು ಕರೆಯುವುದು ಗಮನಾರ್ಹ. ಅನಂತಪದ್ಮನಾಭ ಎಂಬ ಶ್ರೀಹರಿಯ ಹೆಸರಂತೂ ಅತ್ಯಂತ ಸುಪ್ರಸಿದ್ಧ.

೯. **ಮುಕುಂದ** – ಮುಕುಂದ ಎಂದರೆ ಮೋಕ್ಷ ನೀಡುವವನು ಎಂದರ್ಥ. ಶ್ರೀಹರಿಯು ಮೋಕ್ಷನೀಡುವ ವಿಶಿಷ್ಟದೇವತೆ ಎಂಬುದು ಇದರ ಭಾವ. ಇತರ ಫಲಗಳನ್ನು ಇತರ ದೇವತೆಗಳು ಸ್ವಲ್ಪ ಮಟ್ಟಿಗೆ ನೀಡಬಲ್ಲರಾದರೂ ಮೋಕ್ಷವನ್ನು ಮಾತ್ರ ಶ್ರೀಹರಿಯೇ ನೀಡುವವನು ಎಂಬುದು ವಿಶೇಷ. ಹರಿವಂಶದಲ್ಲಿ ರುದ್ರದೇವರು ಮೋಕ್ಷಬಯಸಿ ತನ್ನನ್ನು ಆರಾಧಿಸಿದ ಘಂಟಾಕರ್ಣ ಮತ್ತು ಕರ್ಣ ಎಂಬ ಪಿಶಾಚಿಗಳಿಗೆ ಹಾಗೆ ಹೇಳಿದ ವಿವರ ಹರಿವಂಶದಲ್ಲಿದೆ: "ಮುಕ್ತಿಪ್ರದಾತಾ ಸರ್ವೇಷಾಂ ವಿಷ್ಣುರೇವ ನ ಸಂಶಯಃ"(೩/೮೦/೩೦).

೧೦. **ಮುರಮರ್ದನ** – ಮುರ ಎಂಬುವವನು ನರಕಾಸುರನ ಒಬ್ಬ ಮಂತ್ರಿ. ಅವನಿಗೆ ವಿಶೇಷವಾದ ವರಬಲದಿಂದಾಗಿ ಇತರರು ಪಾರಾಗಲಾರದಂತಹ ಪಾಶಗಳು ಲಭಿಸಿದ್ದವು. ಐದು ತಲೆಯ ರಾಕ್ಷಸ ಎಂಬುದಾಗಿ ಅವನ ಬಗ್ಗೆ ಶ್ರೀಮದ್ಭಾಗವತದಲ್ಲಿ ಉಲ್ಲೇಖವಿದೆ. ಅವನ

ಪಾಶಗಳನ್ನು ಹಾಗೂ ಅವನನ್ನು ಸಹ ಶ್ರೀಹರಿಯು ನಾಶಮಾಡಿದ್ದರಿಂದ ಅವನಿಗೆ ಮುರಾರಿ ಎಂದು ಹೆಸರಾಯಿತು ಎಂಬ ವಿವರ ಶ್ರೀಮದ್ಭಾಗವತದಲ್ಲಿದೆ.

೧೧. **ಜನಾರ್ದನ** - ಜನ ಎಂದರೆ ಹುಟ್ಟಿಲ್ಲದವನು ಎಂದು, ಅರ್ದನ ಎಂದರೆ ಭಕ್ತರ ಸಂಸಾರವನ್ನು ಪರಿಹರಿಸುವವನು ಎಂದರ್ಥ. ಹೀಗೆ ಜನಾರ್ದನ ಎಂಬುದು ಶ್ರೀಹರಿಯ ಹೆಸರು.

೧೨. **ತ್ರೈಜಗತ್ಪಾವನ** - ಮೂರುಲೋಕಗಳಲ್ಲೂ ಅತ್ಯಂತ ಪವಿತ್ರನಾದವನು ಎಂದೂ (**ಪವಿತ್ರಾಣಾಂ ಪವಿತ್ರಂ ಯೋ ಮಂಗಲಾನಾಂ ಚ ಮಂಗಲಂ**), ಮೂರುಲೋಕಗಳನ್ನೂ ಪಾವನಗೊಳಿಸುವವನೂ ಎಂದು ಇದಕ್ಕೆ ಅರ್ಥ. ವಿಷ್ಣುಪಾದೋದ್ಭವೆಯಾದ ಗಂಗೆಯೇ ತ್ರೈಲೋಕ್ಯಪಾವನಳು ಎನ್ನಿಸಿರುವಾಗ ಗಂಗಾಜನಕನಾದ ಶ್ರೀಹರಿ ತ್ರೈಲೋಕ್ಯಪಾವನ ಎಂದು ಕೈಮುತ್ಯ ಸಿದ್ಧ.

*****

## ೪. ಕಂಜಜನಯ್ಯ ರಕ್ಷಿಸು

**ಕಮಲಸಂಭವವಿನುತ ವಾಸವ-**
**ನಮಿತ ಮಂಗಳಚರಿತ ದುರಿತ-**
**ಕ್ಷಮಿತ ರಾಘವ ವಿಶ್ವಪೂಜಿತ ವಿಶ್ವ ವಿಶ್ವಮಯ ।**
**ಅಮಿತವಿಕ್ರಮ ಭೀಮ ಸೀತಾ-**
**ರಮಣ ವಾಸುಕಿಶಯನ [೧]ಖಗಪತಿ-**
**ಗಮನ ಕಂಜಜನಯ್ಯ ರಕ್ಷಿಸು ನಮ್ಮನನವರತ ॥ ೪ ॥**

ಅನುವಾದ: ಕಮಲಸಂಭವರಾದ ಬ್ರಹ್ಮದೇವರಿಂದ ವಿಶೇಷವಾಗಿ ಸ್ತುತನಾದವನೇ, ಇಂದ್ರದೇವರಿಂದ ನಮಸ್ಕರಿಸಲ್ಪಟ್ಟವನೇ, ಮಂಗಳಮಹಿಮನೇ, ದುರಿತಗಳನ್ನು ಪರಿಹರಿಸುವವನೇ, ಶ್ರೀರಾಮನೇ, ವಿಶ್ವದಿಂದ ಪೂಜಿತನಾದವನೇ, ಪೂರ್ಣನೇ, ಜಗತ್ತಿನಲ್ಲೆಲ್ಲಾ ವ್ಯಾಪಿಸಿರುವವನೇ, ಅಪರಿಮಿತ ವಿಕ್ರಮನೇ, ಶತ್ರುಭಯಂಕರನೇ, ಸೀತಾಪತಿಯೇ, ವಾಸುಕಿಶಯನನೇ, ಪಕ್ಷಿರಾಜನಾದ ಗರುಡನ ಮೇಲೆ ಕೂತು ಸಂಚರಿಸುವವನೇ, ಬ್ರಹ್ಮದೇವರ ಜನಕನೇ, ಶ್ರೀಹರಿಯೇ ನಮ್ಮನ್ನು ಸದಾ ಪಾಲಿಸು.

ವಿ: ೧. **ಕಮಲಸಂಭವವಿನುತ** - ಕಮಲಸಂಭವ ಎಂದರೆ ಶ್ರೀಹರಿಯ ನಾಭಿಕಮಲದಿಂದ ಜನಿಸಿದ ಬ್ರಹ್ಮದೇವರು; ಅವರಿಂದ ವಿಶೇಷವಾಗಿ ಪೂಜಿತ ಶ್ರೀಹರಿ ಎಂದರ್ಥ. ನಿತ್ಯ

೧. ಸತತಗಸಮುಜವಖಗಪತಿನಿರತಃ। - ಶ್ರೀಮನ್ಮಧ್ವಾಚಾರ್ಯರ ಕಂದುಕಸ್ತುತಿ

ದೇವಪೂಜೆಯಲ್ಲಿ ಅಭಿಷೇಕಕ್ಕೆ ವಿಹಿತವಾದ ಮಂತ್ರಗಳಲ್ಲಿ ಪ್ರಧಾನವೆನ್ನಿಸಿರುವ ಜಿತಂತೇ-ಸ್ತೋತ್ರವು ಬ್ರಹ್ಮದೇವರಿಂದ ಮಾಡಲ್ಪಟ್ಟ ಸ್ತೋತ್ರ ಎಂಬ ವಿವರ ಪಂಚರಾತ್ರದಲ್ಲಿದೆ.

೨. **ವಾಸವನಮಿತ** – ವಾಸವ ಎಂದರೆ ಇಂದ್ರ. ಅವನಿಂದ ನಮಸ್ಕರಿಸಲ್ಪಟ್ಟ ಎಂದರ್ಥ. ಇಂದ್ರನು ರಾಮ–ರಾವಣರ ಯುದ್ಧಪ್ರಸಂಗದಲ್ಲಿ ಶ್ರೀರಾಮದೇವರಿಗೆ ತನ್ನ ರಥವನ್ನು ನೀಡಿ ಪೂಜಿಸಿದ್ದು, ಕೃಷ್ಣಾವತಾರದಲ್ಲಿ ಗೋವರ್ಧನೋದ್ಧಾರ ಇತ್ಯಾದಿ ಅನೇಕ ಪ್ರಸಂಗಗಳಲ್ಲಿ ಶ್ರೀಕೃಷ್ಣನಿಗೆ ನಮಸ್ಕರಿಸಿದ್ದು ಸುಪ್ರಸಿದ್ಧ.

೩. **ಮಂಗಳಚರಿತ** – ಮಂಗಳಕರವಾದ ಮಹಿಮೆ ಹೊಂದಿದವನು ಎಂದರೆ ಕೂರು-ವುದು, ನಿಲ್ಲುವುದು ಮೊದಲಾದ ತನ್ನ ಪ್ರತಿಕಾರ್ಯವನ್ನೂ ಸಹ ಮಂಗಳಮಯವನ್ನಾಗಿಯೂ, ಲೋಕಕ್ಕೆ ಮಂಗಳಕರವನ್ನಾಗಿಯೂ ಹೊಂದಿದವನು ಎಂದರ್ಥ.

೪. **ದುರಿತಕ್ಷಮಿತ** – ದುರಿತಗಳನ್ನು ನಾಶಪಡಿಸುವವನು, ಕ್ಷಮಿಸುವವನು ಎಂದರ್ಥ.

೫. **ವಿಶ್ವಪೂಜಿತ** – ಎಂದರೆ ಲೋಕದಿಂದ ಪೂಜಿತ ಎಂದೂ, ವಿಶ್ವ ಶಬ್ದವಾಚ್ಯರಾದ ವಾಯುದೇವರಿಂದ ಪೂಜಿತ ಎಂದೂ ಅರ್ಥ (**ವಿಶ್ವೋ ವಾಯುಃ ಸಮುದ್ದಿಷ್ಟಃ**).

೬. **ವಿಶ್ವ** – ವಿಶ್ವ ಎಂಬುದು ವಿಷ್ಣುಸಹಸ್ರನಾಮದ ಮೊದಲ ಪದ. ಆ ಹೆಸರಿನ ರೂಪವೂ ಇದೆ ಎಂಬುದು ವಿಶೇಷ. ವಿಶ್ವ ಎಂದರೆ ಪೂರ್ಣ ಎಂದರ್ಥ. ವಿಶ್ವಂಭರ ಎಂಬ ಅರ್ಥವೂ ಇದಕ್ಕೆ ವಿವಕ್ಷಿತ. ಆ ರೂಪದಲ್ಲಿ ಶ್ರೀಹರಿ ಹತ್ತೊಂಭತ್ತು ಮುಖಗಳನ್ನು ಹೊಂದಿದ್ದು ಅವುಗಳಲ್ಲಿ ಮಧ್ಯದಮುಖ ಗಜಾಮುಖದ್ದು, ಉಳಿದವುಗಳು ಮನುಷ್ಯಾಕಾರದವುಗಳು. ಶ್ರೀಹರಿಯು ಈ ರೂಪದಿಂದ ಜಾಗ್ರದವಸ್ಥಾ ಪ್ರೇರಕನಾಗಿರುವನು ಎಂಬ ವಿಶೇಷ ಮಾಂಡೂಕೋಪನಿಷತ್ತು ಮತ್ತು ಅದರ ಭಾಷ್ಯಗಳಲ್ಲಿ ಬಂದಿದೆ. ಇದು ಗಣಪತಿಯಿಂದ ಉಪಾಸ್ಯವಾದ ರೂಪ ಎಂಬುದು ವಿಶೇಷ. ಅವನು ಗಜಮುಖನಾದದ್ದು ಅದಕ್ಕೆ ಎಂಬ ವಿವರಣೆಯು ಆ ಉಪನಿಷತ್ತಿನ ಭಾಷ್ಯದಲ್ಲೇ ಬಂದಿದೆ. ಶ್ರೀ ಮಧ್ವಾಚಾರ್ಯರು ಈ ಶಬ್ದಕ್ಕೆ ಐವತ್ತಕ್ಕಿಂತ ಹೆಚ್ಚು ಅರ್ಥಗಳನ್ನು ಹೇಳಿದ ವಿವರ ಸುಮಧ್ವವಿಜಯ ಹಾಗು ಅದರ ಭಾವಪ್ರಕಾಶಿಕೆಯಲ್ಲಿ ನಿರೂಪಿತವಾಗಿದೆ[1].

---

೧. ಪ್ರತ್ಯಯಪ್ರಕೃತಿಸಂಗಮಭಂಗೀಂ ಶಬ್ದಶಾಸ್ತ್ರವಿಹಿತಾಂ ಪ್ರತಿದರ್ಶ್ಯ।
ಶುದ್ಧಧೀಃ ಶ್ರುತಿಶಿರಃಶತಸಿದ್ಧಾನಭ್ಯಧಾತ್ ಸಪದಿ ವಿಶ್ವಪದಾರ್ಥಾನ್॥ – ಸುಮಧ್ವವಿಜಯ (೬/೭)

ವಿಶ ಪ್ರವೇಶನೇ ಇತಿಧಾತೋರ್ವಿಷ್ಟಂ ಜ್ಞಾನರೂಪಂ ಚ ವಿಶ್ವಂ। ಟು ಓಶ್ವಿಗತಿ ವೃದ್ಧ್ಯೋರಿತಿ ಚ। ವಿನಾ ಪಕ್ಷಿಣಾ ಶ್ವಯತೀತಿ ವಿಶ್ವಮ್। 'ತೃತೀಯೋಽತಿಶಯೇ' ಇತಿ ವಿಶ್ವಮ್। ವಿಶೇಷೇಣ ವ್ಯಾಪ್ತತ್ವಾಚ್ಚ ವಿಶೇಷೇಣ ಜ್ಞಾನರೂಪತ್ವಾಚ್ಚ, ವಿಶೇಷೇಣ ನಿತ್ಯವೃದ್ಧತ್ವಾಚ್ಚ। 'ವಿಶ್ವಮೇವ ಹಿ ಸರ್ವಂ', 'ಸರ್ವಂ ಪೂರ್ಣಮಿಹೋಚ್ಯತೇ' ಇತಿ ನ್ಯಾಯೇನ ಪೂರ್ಣತ್ವಾಚ್ಚ ವಿಶ್ವಮ್। ಏವಂ 'ವಿಶ್ವೋ ಹಿರಣ್ಯಗರ್ಭೋಽಗ್ನಿರ್ಯಮಃ' ಇತ್ಯಾದೇರ್ವಿಶ್ವಸ್ಯ ವಾಯೋರಂತರ್ಯಾಮಿತ್ವಾಚ್ಚ। ಜಗತ್ಪ್ರವರ್ತಕಸ್ಯ ವಿಶ್ವನಾಮ– ಕತ್ವಾದಿತ್ಯಾದಿನಾ ರೂಪೇಣ ಪಂಚಾಶದಧಿಕಾರ್ಥಾನ್ ಅಭ್ಯಧಾತ್। (ಭಾ.ಪ್ರ.).

೭. **ವಿಶ್ವಮಯ** - ವಿಶ್ವದಲ್ಲೆಲ್ಲ ವ್ಯಾಪಿಸಿರುವವನು ಎಂದರ್ಥ. ವಿಶ್ವದಲ್ಲೇ ಶ್ರೇಷ್ಠನು ಎಂಬ ಅರ್ಥವೂ ಇದಕ್ಕೆ ವಿವಕ್ಷಿತ; ಮಯ ಎಂಬುದಕ್ಕೆ ಪ್ರಚುರ ಎಂಬ ಅರ್ಥವೂ ಉಂಟು: **ತಾದಾತ್ಮ್ಯಾರ್ಥೇ ವಿಕಾರಾರ್ಥೇ ಪ್ರಾಚುರ್ಯಾರ್ಥೇ ಮಯಟ್ ತ್ರಿಧಾ**[೧]. ಇದರಿಂದ ವಿಶ್ವದಲ್ಲಿ ಶ್ರೇಷ್ಠನಾದವನು ಸರ್ವೋತ್ತಮ ಎಂದೂ ಅರ್ಥವಾಗುವುದು.

೮. **ಅಮಿತವಿಕ್ರಮ**- ಮಿತವಲ್ಲದ ಅಂದರೆ ಅಪರಿಮಿತವಾದ ವಿಕ್ರಮಶಾಲಿ ಎಂದರ್ಥ. ಪ್ರದ್ಯುಮ್ನೋऽ**ಮಿತವಿಕ್ರಮಃ** ಎಂಬುದಾಗಿ ವಿಷ್ಣುಸಹಸ್ರನಾಮದಲ್ಲಿ ಇದರ ಉಲ್ಲೇಖವಿದೆ.

೯. **ಭೀಮ** – ಭೀಮ ಎಂಬುದಕ್ಕೆ ಶತ್ರುಭಯಂಕರ ಎಂದರ್ಥ. ಇನ್ನೊಂದು ರೀತಿಯಲ್ಲಿ ಭೃತಮಃ ಸಕಲವಿದ್ಯೆಗಳ ನೆಲೆ ಎಂದೂ ಆಗುವುದು (**ಭೃತಮೋ ಭೀಮ ಇತ್ಯುಕ್ತಃ; ಭೃತಾ ಹಿ ಮಾಃ ಸಕಲಾಃ ಹಿ ಯಸ್ಮಿನ್** ಎಂಬುದಾಗಿ ಭೀಮಸೇನನಿಗೆ ಹೇಳಿದ ವಿಶೇಷವನ್ನು ಶ್ರೀಹರಿಗೂ ಇನ್ನೂ ಹೆಚ್ಚಾಗಿ ಅನ್ವಯಿಸಿಕೊಳ್ಳಬೇಕು). ಭಕ್ತರಿಗೆ **ಭೀಃ ಮಾ** - ಭಯ ಬೇಡ ಎಂದು ಅಭಯ ನೀಡುವುದರಿಂದಲೂ ಶ್ರೀಹರಿಗೆ ಭೀಮ ಎಂದು ಹೆಸರು. ಇದೂ ಸಹ **ಭೀಮೋ** ಭೀಮಪರಾಕ್ರಮಃ ಎಂಬುದಾಗಿ ವಿಷ್ಣುಸಹಸ್ರನಾಮದಲ್ಲಿ ಬಂದಿರುವ ಹೆಸರು.

೧೦. **ಖಗಪತಿಗಮನ** – ಖಗ ಎಂದರೆ ಪಕ್ಷಿ. ಖಗಪತಿ ಗರುಡ. ಖಗಪತಿಗಮನ ಎಂದರೆ ಗರುಡಗಮನ ಎಂದರ್ಥ. '**ಗಗನದಲಿ ಸಂಚರಿಪ ಗರುಡದೇವನೆ ತುರಗ**' ಎಂಬ ಈ ಪುರಂದರದಾಸರ ಮಾತಿನಿಂದ ಗರುಡಗಮನ ಎಂಬುದು ಶ್ರೀಹರಿಯ ಸರ್ವೋತ್ತಮತ್ತ್ವಕ್ಕೆ ದ್ಯೋತಕ ಎಂದು ತಿಳಿಯಬೇಕು.

೧೧. **ಕಂಜಜನಯ್ಯ** – ಕಂಜಜ, ಕ ಎಂದರೆ ನೀರು. ಕಂಜ ಎಂದರೆ ಜಲಜ. ಕಮಲದಲ್ಲಿ ಹುಟ್ಟಿದ ಬ್ರಹ್ಮದೇವರು ಕಂಜಜ; ಅಯ್ಯ ಎಂದರೆ ತಂದೆ, ಬ್ರಹ್ಮಜನಕ ಎಂದರ್ಥ.

*****

## ೫. ಕ್ಷೀರವಾರಿಧಿಶಯನ ರಕ್ಷಿಸು

**ಕ್ಷೀರವಾರಿಧಿಶಯನ [೨]ಶಾಂತಾ-**
**ಕಾರ ವಿವಿಧವಿಚಾರ ಗೋಪೀ-**
**ಜಾರ ನವನೀತಚೋರ ಚಕ್ರಾಧಾರ ಭವದೂರ ।**

---

೧. ಗೀತಾಭಾಷ್ಯ (೭/೧೩)

೨. **ಶಾಂತಾಕಾರಂ** ಭುಜಗಶಯನಂ ಪದ್ಮನಾಭಂ ಸುರೇಶಮ್
ವಿಶ್ವಾಧಾರಂ ಗಗನಸದೃಶಂ ಮೇಘವರ್ಣಂ ಶುಭಾಂಗಮ್ ।
ಲಕ್ಷ್ಮೀಕಾಂತಂ ಕಮಲನಯನಂ ಯೋಗಿಹೃದ್ಧ್ಯಾನಗಮ್ಯಂ
ವಂದೇ ವಿಷ್ಣುಂ ಭವಭಯಹರಂ ಸರ್ವಲೋಕೈಕ ನಾಥಮ್ ॥
– ಎಂಬ ಸ್ಕಂದಪುರಾಣದ ವಚನದಲ್ಲಿ ಶಾಂತಾಕಾರ ಎಂಬ ಪದ ಬಂದಿದೆ.

**ಮಾರಪಿತ ಗುಣಹಾರ ಸರಸಾ-**
**ಕಾರ ರಿಪುಸಂಹಾರ ತುಂಬುರು-**
**ನಾರದಪ್ರಿಯ ವರದ ರಕ್ಷಿಸು ನಮ್ಮನನವರತ ॥ ೫ ॥**

**ಅನುವಾದ: ಎಲೈ ಕ್ಷೀರಾಬ್ಧಿಶಯನನೇ! ಶಾಂತರೂಪನೇ! ಬಗೆಬಗೆಯ ವಿಶಿಷ್ಟವಾದ ನಡೆಯುಳ್ಳವನೇ! ಗೋಪೀಜಾರನೇ! ನವನೀತಚೋರನೇ! ಚಕ್ರಕ್ಕೆ ಆಧಾರನಾಗಿರುವವನೇ! ನಿತ್ಯಮುಕ್ತನೇ! ಮನ್ಮಥಜನಕನೇ! ಗುಣಗಳನ್ನೇ ಹಾರವನ್ನಾಗಿ ಉಳ್ಳವನೇ! ಸರಸವಾದ ರೂಪನೇ! ಶತ್ರುಸಂಹಾರಕನೇ! ತುಂಬುರುನಾರದರಿಗೆ ಪ್ರಿಯನಾದವನೇ! ವರ ನೀಡುವವನೇ! ನೀನು ನಮ್ಮನ್ನು ಸದಾ ರಕ್ಷಿಸು.**

ವಿ: ೧. ಇದರಲ್ಲಿ ಶ್ರೀಹರಿಯ ಸ್ತೋತ್ರವನ್ನು ಮುಂದುವರಿಸಿರುವರು.

೨. '**ಕ್ಷೀರಸಾಗರಶಯನ**' ಎನ್ನುವ ಮೂಲಕ ಅವನು ಮುಕ್ತರಿಗೆ ಆಶ್ರಯ ನೀಡುವವನು ಎಂಬ ಪ್ರಮೇಯ ನಿರೂಪಿತ. ಶ್ವೇತದ್ವೀಪವಿರುವುದು ಕ್ಷೀರಸಾಗರದ ಮಧ್ಯೆ; ಅದು ಶ್ರೀಹರಿಯ ಮೂರುಧಾಮಗಳಲ್ಲಿ ಒಂದು ಎಂಬುದು ಸುಪ್ರಸಿದ್ಧ. ಕ್ಷೀರಸಾಗರ ಎಂಬಲ್ಲಿ ಕ್ಷೀರ ಎಂಬುದು ಶಾಸ್ತ್ರದ ಸಂಕೇತ; ಕ್ಷೀರಸಾಗರದಲ್ಲಿ ಎಂದರೆ ಶಾಸ್ತ್ರಸಮುದ್ರದಲ್ಲಿ ಪವಡಿಸಿದವನು, ಎಂದರೆ, ಸಕಲಶಾಸ್ತ್ರಗಳಿಂದಲೂ ಸರ್ವೋತ್ತಮ ಎಂದೇ ಪ್ರತಿಪಾದಿತನಾದವನು ಎಂಬುದು ವಿಶೇಷಾರ್ಥ[೧].

೩. '**ಶಾಂತಾಕಾರ**' ಎನ್ನುವ ಮೂಲಕ ಬ್ರಹ್ಮನು ನಿರ್ಗುಣ ಎಂಬ ವಾದವನ್ನು ನಿರಾಕರಿಸಿರುವರು. ಶ್ರೀಹರಿಗೆ ನಮ್ಮಂತಹ ಪ್ರಾಕೃತದೇಹವಿಲ್ಲ ಎಂಬುದಷ್ಟೇ ಅವನು ನಿರ್ಗುಣ ಎಂಬ ಶಾಸ್ತ್ರವಾಕ್ಯಗಳ ಭಾವವೇ ಹೊರತು, ಅವನು ಸರ್ವಥಾ ದೇಹರಹಿತ ಎಂದಲ್ಲ ಎಂಬುದು ಶಾಸ್ತ್ರಗಳಿಂದ ಸ್ಫುಟವಾಗಿರುವ ವಿವರ. ಅದನ್ನು ಶಾಂತಾಕಾರ ಎಂಬ ಇಲ್ಲಿಯ ಪದದಿಂದ ಸೂಚಿಸಿರುವರು. '**ಶಾಂತಾಕಾರಂ ಭುಜಗಶಯನಂ**' ಎಂಬ ಪುರಾಣಶ್ಲೋಕದಲ್ಲಿನ ಪದವೂ ಇದಾಗಿದೆ.

೪. '**ವಿವಿಧವಿಚಾರ**' ಎಂಬುದಕ್ಕೆ ಬಗೆಬಗೆಯ ವಿಚಾರ ಹಾಗೂ ಬಗೆಬಗೆಯ ಸಂಚಾರ ಎಂಬ ಎರಡು ಅರ್ಥಗಳೂ ವಿವಕ್ಷಿತ. ಶ್ರೀಹರಿಯು ವೇದವ್ಯಾಸರೂಪದಿಂದ ವಿಚಾರಶಾಸ್ತ್ರ ಎನ್ನಿಸಿರುವ ಬ್ರಹ್ಮಸೂತ್ರಗಳನ್ನು ರಚಿಸಿ, ಅದು ವಿವಿಧಬಗೆಯ ಸಕಲಶಾಸ್ತ್ರಗಳಿಗೂ ನಿರ್ಣಾಯಕ ಎನ್ನಿಸಿದೆ ಎಂಬ ಅಂಶ ಇದರಿಂದ ಸೂಚಿತ. ಅದರಂತೆ ವಾಸುದೇವಾದಿ ಬಗೆಬಗೆಯ ರೂಪಗಳಿಂದ ಶ್ರೀಹರಿ ವಿಹರಿಸುವುದು, ಮತ್ಸ್ಯಕೂರ್ಮಾದಿರೂಪಗಳಿಂದ ಲೋಕಕಲ್ಯಾಣ

---

೧. ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ।
ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ॥ - ಹರಿವಂಶ (೩/೧೩೨/೯೫)

ಮಾಡುವುದು ಮೊದಲಾದ ವಿಶಿಷ್ಟಬಗೆಯ ವಿವರವೂ ಸಹ ಸೂಚಿತ ಎಂದು ತಿಳಿಯಬಹುದು. ಇದಕ್ಕೆ ವಿವಿಧ – ವಿ-ಚಾರ ಎಂಬ ವಿಭಾಗ ಮಾಡಿ ಓದಿಕೊಂಡಾಗ ವಿವಿಧಬಗೆಯಲ್ಲಿ 'ವಿ' ಎಂದರೆ ಪಕ್ಷಿರಾಜನಾದ ಗರುಡನನ್ನು ವಾಹನವನ್ನಾಗಿ ಮಾಡಿಕೊಂಡು ಸಂಚರಿಸುವವನು ಎಂಬ ಅರ್ಥವೂ ಸೂಚಿತ ಎಂದು ತಿಳಿಯಬಹುದು. ಜೀವನದ ಪರಿಪೂರ್ಣತೆಗೆ ಅಗತ್ಯವೆನ್ನಿಸುವ ಬಗೆಬಗೆಯ ವಿಚಾರಗಳನ್ನೆಲ್ಲ ತಿಳಿಸಿಕೊಡುವವನು ಎಂಬ ಅರ್ಥವೂ ಇದಕ್ಕೆ ವಿಹಿತ. 'ಚರ್ ಭಕ್ಷಣೇ' ಎಂಬ ಧಾತುಕೋಶದಿಂದ ಬಗೆಬಗೆಯ ಹಾಲು, ಮೊಸರು, ಬೆಣ್ಣೆ ಮೊದಲಾದವುಗಳನ್ನು ವಿಲಕ್ಷಣರೀತಿಯಲ್ಲಿ ಭಕ್ಷಿಸಿದವನು ಎಂಬ ಮತ್ತೊಂದು ಅರ್ಥವೂ ಇದಕ್ಕೆ ಸಾಧ್ಯ.

೫. '**ಗೋಪೀಜಾರ**' ಎಂಬುದು ಶ್ರೀಕೃಷ್ಣನ ವಿಶಿಷ್ಟವಾದ ಹಿರಿಮೆಗಳಲ್ಲೊಂದು. ಮೇಲ್ನೋಟಕ್ಕೆ ಜಾರ ಎಂಬ ಪದ ದೋಷಸೂಚಕವಾದುದು. ಆದರೆ ಶ್ರೀಕೃಷ್ಣನಿಗೆ ಮಾತ್ರ ಅದು ಅಗಾಧ ಹಿರಿಮೆಯನ್ನೇ ವರ್ಣಿಸುವ ಪದ. ಗೋಪಿಯರು ಮೂಲತಃ ದೇವಲೋಕದ ಅಪ್ಸರೆಯರು. ವಿಶೇಷ ತಪಸ್ಸನ್ನಾಚರಿಸಿ ರಮಾವೇಶವನ್ನು ಹೊಂದುವ ಮೂಲಕ ಶ್ರೀಕೃಷ್ಣನ ಪರಿಗ್ರಹಕ್ಕೆ ಅರ್ಹತೆ ಪಡೆದವರು. ಆ ಮೂಲಕ ವಿಶೇಷವಾದ ಸಿದ್ಧಿಪಡೆದವರು[೧]. ಶ್ರೀಕೃಷ್ಣನಿಗಂತೂ ಅದರಿಂದ ಯಾವ ಪ್ರಯೋಜನವೂ ಇಲ್ಲ. ಆದರೂ ಅವರ ಕಲ್ಯಾಣಕ್ಕಾಗಿ ಹಾಗೆ ಅವರನ್ನು ಸ್ವೀಕರಿಸಿ ಅವರ ಲಿಂಗದೇಹಭಂಗವಾಗುವಂತಹ ಪರಮಾನುಗ್ರಹವನ್ನು ಮಾಡಿದ ಎಂಬುದು ನಿರ್ಣಯ. '**ಅಹಲ್ಯಾಯೈಜಾರ**' ಎಂಬ ವೇದವಚನದಲ್ಲಿ ಇಂದ್ರದೇವರನ್ನು ಜಾರ ಎಂಬುದಾಗಿ ಸ್ತುತಿಗೈಯುವ ಮೂಲಕ ಇಂದ್ರದೇವರಿಗೂ ಸಹ ಜಾರತ್ವವು ದೋಷವೆನ್ನಿಸದೆ ಗುಣವೇ ಆಯಿತು ಎಂಬ ವಿವರ ಬಂದಿದೆ. ಇನ್ನು ಸಕಲದೋಷದೂರನಾದ ಶ್ರೀಕೃಷ್ಣನಿಗಂತೂ ಇದು ಇನ್ನೂ ವಿಶೇಷವಾಗಿ ಗುಣವಾಚಕ ಎಂಬುದು ಕೈಮುತ್ಯಸಿದ್ಧ ಎಂದು ತಿಳಿಯಬೇಕು.

೬. '**ನವನೀತಚೋರ**' ಎಂಬ ಇನ್ನೊಂದು ಹಿರಿಮೆಯೂ ಸಹ ಶ್ರೀಕೃಷ್ಣನ ಅಪಾರ-ಮಹಿಮೆಗೆ ದ್ಯೋತಕ. ಶ್ರೀಕೃಷ್ಣನು ಹಾಗೆ ಬೆಣ್ಣೆ ಕದ್ದದ್ದು ಗೋಪ-ಗೋಪಿಯರ ಕಲ್ಯಾಣ-ಕ್ಕಾಗಿಯೇ ಹೊರತು ತನ್ನ ಸ್ವಂತ ಪ್ರಯೋಜನಕ್ಕಾಗಿ ಅಲ್ಲ. ಸ್ವತಃ ಕ್ಷೀರಸಾಗರಶಾಯಿ-ಯಾದ ಅವನಿಗೆ ಈ ನವನೀತದ ಅಗತ್ಯವಾದರೂ ಎಲ್ಲಿದೆ? ಅಲ್ಲದೇ ನವನೀತ ಎಂಬುದಕ್ಕೆ ಬಹಳ ಮುಖ್ಯವಾಗಿ ಮನಸ್ಸು ಎಂದು ಅರ್ಥ. ಇದರಿಂದ ನವನೀತಚೋರ ಎಂಬುದಕ್ಕೆ ಚಿತ್ತಚೋರ ಎಂದರ್ಥ. ತನ್ನ ವಿಶಿಷ್ಟಮಾಹಾತ್ಮ್ಯದಿಂದ ಅವರ ಮನಸ್ಸನ್ನು ಮೆಚ್ಚಿಸಿದವನು ಎಂಬುದೇ ಮುಖ್ಯವಾದ ಅರ್ಥ. ಅದಕ್ಕಿಂತ ಮಿಗಿಲಾಗಿ ನವನೀತ ಎಂಬುದಕ್ಕೆ ಅದರ ಅಭಿಮಾನಿದೇವತೆಯಾದ ವಾಯುದೇವರು ವಿವಕ್ಷಿತ; ಎಂದರೆ ಬೆಣ್ಣೆಗೆ ಅಭಿಮಾನಿ-

೧. 'ಜಾರತ್ವದಲಿ ಮಾಡಿದ ಪಾಪಗಳಿಗೆಲ್ಲ ಹೇ ಗೋಪೀಜನಜಾರ ಎಂದರೆ ಸಾಲದೆ' ಎಂಬ ಶ್ರೀಕನಕದಾಸರ ಗುರುಗಳಾದ ಶ್ರೀವ್ಯಾಸರಾಜರ ಮಾತಿನ ಹಿನ್ನೆಲೆಯಲ್ಲಿ ಈ ಪದದ ವಿಶೇಷಾರ್ಥವನ್ನು ತಿಳಿಯಬಹುದು.

ದೇವತೆಯಾದ ವಾಯುದೇವರ ಮೇಲೆ ತನಗಿರುವ ಅಪಾರಪ್ರೀತಿಯನ್ನು ಶ್ರೀಕೃಷ್ಣ ಹಾಗೆ ಬೆಣ್ಣೆ ಕದಿಯುವ ಮೂಲಕ ತೋರಿಸಿಕೊಟ್ಟ ಎಂದೂ ತಿಳಿಯಬಹುದು. ಶ್ರೀಕೃಷ್ಣ ಬೆಣ್ಣೆಯನ್ನು ತಿಂದದ್ದಲ್ಲದೇ ಅದನ್ನು ಮೈಗೂ ಸಹ ಹಚ್ಚಿಕೊಳ್ಳುತ್ತಿದ್ದ ವಿವರ ಶ್ರೀಮದ್ಭಾಗವತದಲ್ಲಿದೆ. ಇದು ಇನ್ನೂ ಹೆಚ್ಚಾಗಿ ಅವನಿಗೆ ಶ್ರೀವಾಯುದೇವರ ಮೇಲಿರುವ ಪ್ರೀತಿಗೆ ದ್ಯೋತಕ ಎಂದು ಸೂಚಿಸುವುದು[೧]; **ನವನೀತ** – ಬೆಣ್ಣೆ

೭. '**ಚಕ್ರಾಧಾರ**' ಎಂಬುದಕ್ಕೆ ಚಕ್ರಪಾಣಿ – ಕೈಯಲ್ಲಿ ಚಕ್ರ ಹಿಡಿದವನು ಎಂದರ್ಥ. ಚಕ್ರಪಾಣಿಯಾದ ಕೃಷ್ಣ ಅದರ ಸಹಾಯವನ್ನು ಪಡೆಯುವನು ಎಂಬ ಅಪಾರ್ಥಕ್ಕೆ ಎಡೆಕೊಡುವ ಸಂಭವ ಉಂಟು. ಆದರೆ ವಸ್ತುಸ್ಥಿತಿ ಹಾಗಲ್ಲ. ಅವನು ಹಾಗೆ ಚಕ್ರವನ್ನು ಹಿಡಿದಿರುವುದು ಚಕ್ರಕ್ಕೆ ಆಸರೆನೀಡಿ ಅದನ್ನು ಅನುಗ್ರಹಿಸಲೆಂದೇ ಹೊರತು ತಾನು ಅದರಿಂದ ಪ್ರಯೋಜನಪಡೆಯಬೇಕೆಂದಲ್ಲ. ಇದನ್ನು 'ಚಕ್ರಾಧಾರ' ಎಂಬ ಪದದಿಂದ ಸೂಚಿಸಿರುವರು. ಚಕ್ರಕ್ಕೆ ಮುಖ್ಯಾಭಿಮಾನಿದೇವತೆ ಸಾಕ್ಷಾತ್ ದುರ್ಗಾರೂಪದ ಮಹಾಲಕ್ಷ್ಮಿ[೨]. ಚಕ್ರಾಧಾರ ಎನ್ನುವ ಮೂಲಕ ಶ್ರೀಹರಿಯು ದುರ್ಗೆಗೆ ಆಶ್ರಯನಾಗಿರುವವನು ಎಂಬ ಅರ್ಥವೂ ಸೂಚಿತ.

೮. '**ಭವದೂರ**' – ಭವ ಎಂದರೆ ಸಂಸಾರ; ಅದಕ್ಕೆ ದೂರ ಎಂದರೆ ಯಾವಕಾಲಕ್ಕೂ ಅದರ ಸಂಬಂಧವನ್ನು ಸರ್ವಥಾ ಹೊಂದದವನು ಎಂದರ್ಥ. ಇದರಿಂದ ಶ್ರೀಹರಿಯು ನಿತ್ಯಮುಕ್ತ ಎಂಬ ಅರ್ಥ ಸೂಚಿತ. ಮಹಾಲಕ್ಷ್ಮಿಯೂ ಸಹ ನಿತ್ಯಮುಕ್ತಳೇ ಆದರೂ ಶ್ರೀಹರಿಯಂತೆ ಸ್ವತಂತ್ರಳಲ್ಲ. ಆದ್ದರಿಂದ ಶ್ರೀಹರಿಯ ನಿತ್ಯಮುಕ್ತತ್ವವು ಇನ್ನೂ ವಿಶೇಷವಾದುದು ಎಂದು ತಿಳಿಯಬೇಕು. ಚಿಂತೆ, ಸಂತಾಪ ಮೊದಲಾದವುಗಳು ಸಂಸಾರಕ್ಕೆ ಅಂಟಿದ ದೋಷಗಳು. ಭವದೂರ ಎಂಬ ಪದದಿಂದ ಚಿಂತಾಸಂತಾಪಾದಿ ಸಕಲದೋಷದೂರ ಎಂಬ ಅರ್ಥವೂ ಸೂಚಿತ: '**ಚಿಂತಾ-ಸಂತಾಪಲೇಪೋದ್ಭವಮೃತಿಮುಖರಾತಿದೋಷಾತಿದೂರಂ**'(ತತ್ತ್ವಪ್ರಕಾಶಿಕಾ ). ಭವ ಎಂಬುದಕ್ಕೆ ಶಿವ ಎಂದರ್ಥ. ಭವದೂರ ಎಂದರೆ ಶಿವಾದಿದೇವತೆಗಳ ಚಿಂತನೆಗೂ ಎಟುಕದವನು ಎಂದೂ ಅರ್ಥವಾಗುವುದು.

೯. '**ಮಾರಪಿತ**' – ಮಾರ ಎಂದರೆ ಮನ್ಮಥ; ಮಾರಪಿತ ಎಂದರೆ ಮನ್ಮಥಜನಕ ಎಂದರ್ಥ. ಮನ್ಮಥನು ತ್ರಿಲೋಕಸುಂದರ ಎಂಬುದು ಸುಪ್ರಸಿದ್ಧ. ಶ್ರೀಹರಿಯು ಮಾರಪಿತ ಎಂದರೆ ಅವನಿಗಿಂತಲೂ ಅನಂತಪಟ್ಟು ಮಿಗಿಲಾದ ಸೌಂದರ್ಯೋಪೇತನಾದವನು ಎಂಬುದು

---

೧. ಇದೂ ಸಹ ಶ್ರೀವ್ಯಾಸರಾಜರ 'ಚೋರತ್ವದಲಿ ಮಾಡಿದ ಪಾಪಗಳಿಗೆಲ್ಲ ಹೇ ನವನೀತಚೋರಾ ಎಂದರೆ ಸಾಲದೇ' ಎಂಬ ಮಾತಿನ ಹಿನ್ನೆಲೆಯಲ್ಲಿ ಇದಕ್ಕೆ ವಿಶೇಷಾರ್ಥ ಗೋಚರಿಸುವುದು.

೨. ಪೂರ್ವಂ ಹರೇಶ್ಚಕ್ರಮಭೂದ್ಧಿ ದುರ್ಗಾ। – ಮ.ಭಾ.ತಾ.ನಿ (೩/೭೩)
ದುರ್ಗಾ ಚಕ್ರಾಧಿದೇವೀ ಸ್ಯಾತ್ – ಶ್ರೀಜಯತೀರ್ಥರ ಪದ್ಯಮಾಲಾ

ಮುಖ್ಯಾರ್ಥ: '**ಸಾಕ್ಷಾನ್ಮನ್ಮಥಮನ್ಮಥಃ**'(ಭಾಗವತ); '**ಲಾವಣ್ಯದಲಿ ನೋಡೆ ಲೋಕ-ಮೋಹಕನಯ್ಯ**'(ಶ್ರೀಪುರಂದರದಾಸರು). ಮತ್ತೊಂದು ರೀತಿಯಲ್ಲಿ ಮಾರಪಿತ ಎಂಬುದು ಮುಖ್ಯವಾಗಿ ಶ್ರೀಹರಿಯ ಪ್ರದ್ಯುಮ್ನರೂಪಕ್ಕೆ ಅನ್ವಯಿಸುವಂತಹುದು. ಕಾಮದೇವನು ಶ್ರೀಹರಿಯ ಪ್ರದ್ಯುಮ್ನರೂಪವನ್ನು ವಿಶೇಷವಾಗಿ ಆರಾಧಿಸುವ ದೇವತೆ ಎಂಬ ವಿಶೇಷಾಂಶ ಶ್ರೀಮದ್ಭಾಗವತದ ಪಂಚಮಸ್ಕಂಧದಲ್ಲಿ ಬಂದಿದೆ. ಆ ರೂಪದ ಉಪಾಸನೆಯಿಂದಾಗಿಯೇ ಮನ್ಮಥನಿಗೆ ಅಂತಹ ಅಪಾರ ಸೌಂದರ್ಯ ಲಭಿಸಿದೆ ಎಂಬ ಅರ್ಥವೂ ಇದರಿಂದ ಸೂಚಿತ ಎಂದು ತಿಳಿಯಬಹುದು.

೧೦. '**ಗುಣಹಾರ**' - ಗುಣಗಳನ್ನೇ ಮಾಲೆಗಳನ್ನಾಗಿ ಹೊಂದಿದವನು ಎಂದರ್ಥ. ಗುಣಪೂರ್ಣ ಎಂಬುದು ಇದರ ಮುಖ್ಯ ಅರ್ಥ; '**ಗುಣಮಾಣಿಕ್ಯಮಂಡನಂ**' ಎಂಬ ಶ್ರೀಜಯತೀರ್ಥರ ಉಪಾಧಿಖಂಡನಟೀಕೆಯ ಭಾವವನ್ನು ಇದರಲ್ಲಿ ಕಾಣಬಹುದು. ಗುಣಗಳನ್ನು ಎಂದರೆ ಸಂಸಾರಜನ್ಯವಾದ, ದೋಷರೂಪವಾದ ಗುಣಗಳನ್ನು ಭಕ್ತರಿಗೆ ದೂರಮಾಡುವವನು ಎಂಬ ಮತ್ತೊಂದು ಅರ್ಥವೂ ಈ ಪದದಿಂದ ಸೂಚಿತ. ಅದರಂತೆ ತಾಮಸಜೀವರಲ್ಲಿನ ಪುಣ್ಯಸಾಧನೆರೂಪಗುಣವನ್ನೂ ಸಹ ನಾಶಪಡಿಸುವವನು, ಭಕ್ತಜನರ ಅಧಿಕಪುಣ್ಯರೂಪಗುಣವನ್ನು ನಾಶಪಡಿಸುವವನು[೧] ಎಂಬ ಅರ್ಥಗಳೂ ವಿವಕ್ಷಿತ.

೧೧. '**ಸರಸಾಕಾರ**' - ಶ್ರೀಹರಿಯದು ಅಪ್ರಾಕೃತಾಕಾರ ಎಂಬ ಮಾತು ಈ ಮುಂಚೆ ಶಾಂತಾಕಾರ ಎಂಬ ಪದದಿಂದ ಸೂಚಿತವಾದರೆ, ಈ ಪದದಲ್ಲಿ ಅವನ ಆಕಾರ ಭಕ್ತಿ-ಹುಟ್ಟಿಸುವಂತಹ ಅದ್ಭುತಸ್ವರೂಪದ್ದು ಎಂಬ ಅರ್ಥಕ್ಕೆ ಸೂಚಕ. ರಸ ಎಂಬುದಕ್ಕೆ ಭಕ್ತಿ ಎಂಬ ಅರ್ಥವೂ ಇದೆ.

೧೨. '**ರಿಪುಸಂಹಾರ**' - ಶತ್ರುಗಳನ್ನು ಸಂಹರಿಸುವವನು; ಬ್ರಹ್ಮರುದ್ರಾದಿದೇವತೆಗಳೂ ಸಹ ಶತ್ರುಗಳನ್ನು ಸಂಹರಿಸುವವರೇ ಆದರೂ, ಅವರ ವರಗಳಿಂದ ಕೂಡಿದ ಶತ್ರುಗಳನ್ನು ಸಂಹರಿಸುವವ ಶ್ರೀಹರಿ. ಅದರಿಂದಾಗಿ ರಿಪುಸಂಹಾರ ಎಂಬುದು ಅವನ ವಿಶೇಷ ಹಿರಿಮೆ. ಅಲ್ಲದೇ ಸ್ವಾತಂತ್ರ್ಯೇಣ ಸಕಲಸಂಹಾರಕನೂ ಎಂಬುದು ಬ್ರಹ್ಮರುದ್ರಾದಿಗಳಲ್ಲಿ ನೆಲೆಸಿದ್ದು ಮುಖ್ಯವಾಗಿ ರಿಪುಸಂಹಾರಕನು ಎಂಬುದು ಇದರಿಂದ ಸೂಚಿತವಾಗುವ ಇನ್ನೂ ಕೆಲವು ಅರ್ಥಗಳು. ಭಸ್ಮಾಸುರಪ್ರಸಂಗದಲ್ಲಿ ರುದ್ರದೇವರಿಗೆ ಒದಗಿದ ಆಪತ್ತನ್ನು ಪರಿಹರಿಸುವ ಮೂಲಕ ವಿಶೇಷರೀತಿಯಲ್ಲಿ ರಿಪುಸಂಹಾರಕ ಎನ್ನಿಸಿದ ಪ್ರಸಂಗವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು: '**ಮೋಚಿತಃ ಸಂಕಟಾತ್ ಶಿವಃ**' (ಭಾಗವತ).

೧೩. '**ತುಂಬುರುನಾರದಪ್ರಿಯ**' - ತುಂಬುರುವು ಗಂಧರ್ವರಾಜ. ನಾರದರಂತೂ ದೇವರ್ಷಿಗಳು. ಇಬ್ಬರೂ ತಮ್ಮ ಅಸಾಧಾರಣ ಗಾನಕೌಶಲಕ್ಕೆ ಪ್ರಸಿದ್ಧರಾದವರು. ಗಾಯಕರಿಗೆ

---

೧. ಏಧಮಾನದ್ವಿಡಿತ್ಯೇವ ಹರೇರ್ನಾಮ ಹಿ ವೈದಿಕಮ್ । - ಮ.ಭಾ.ತಾ.ನಿ.(೨೨/೩೪)

ಪ್ರಿಯವಾದುದು ಗುಣಗಳು. ಅಂತಹ ಗುಣಗಳ ಗಣಿಯಾದ್ದರಿಂದಲೇ ಶ್ರೀಹರಿಯ ಗುಣಗಾನ ಅವರಿಗೆ ಅತ್ಯಂತ ಪ್ರಿಯವಾದುದು ಎಂದು ಭಾವ. ಶ್ರೀಹರಿಯು ಸಕಲಗುಣಪೂರ್ಣ ಎಂಬುದು ಇಲ್ಲಿಯ ಧ್ವನಿತಾರ್ಥ.

*****

## ೬. ರವಿಕುಲಸೋಮ ರಕ್ಷಿಸು

ತಾಮರಸದಳನಯನ ಭಾರ್ಗವ-
ರಾಮ ಹಲಧರರಾಮ ದಶರಥ-
ರಾಮ ಮೇಘಶ್ಯಾಮ ಸದ್ಗುಣಧಾಮ ನಿಸ್ಸೀಮ ।
ಸಾಮಗಾನಪ್ರೇಮ ಕಾಂಚನ-
ದಾಮಧರ ಸುತ್ರಾಮವಿರಚಿತ-
ಕಾಮ ರವಿಕುಲಸೋಮ ರಕ್ಷಿಸು ನಮ್ಮನನವರತ ॥ ೬ ॥

ಅನುವಾದ: ಕಮಲದ ದಳದಂತೆ ವಿಶಾಲವಾದ ನೇತ್ರ ಉಳ್ಳ ಭಾರ್ಗವರಾಮನೇ! ಹಲವನ್ನು ಧರಿಸಿದ ಬಲರಾಮನೇ! ದಶರಥನ ಪುತ್ರತ್ವೇನ ಅವತರಿಸಿದ ಶ್ರೀರಾಮನೇ! ಮೇಘಶ್ಯಾಮನೇ! ಸದ್ಗುಣಗಳಿಗೆ ನೆಲೆಯಾದವನೇ! ಎಲ್ಲೆ ಇಲ್ಲದವನೇ! ಸಾಮಗಾನವನ್ನು ಮೆಚ್ಚುವವನೇ! ಚಿನ್ನದ ಉಡಿದಾರವನ್ನು ಧರಿಸಿದವನೇ! ಸುತ್ರಾಮನೆನ್ನಿಸಿದ ಇಂದ್ರನ ಬಯಕೆಗಳನ್ನು ಈಡೇರಿಸಿದವನೇ! ಸೂರ್ಯವಂಶಕ್ಕೆ ಚಂದ್ರನಂತಹವನೇ, ಶ್ರೀಹರಿಯೇ! ನಮ್ಮನ್ನು ಸದಾ ರಕ್ಷಿಸು.

ವಿ: ೧. ತಾಮರಸ ಎಂದರೆ ಕಮಲ; ಕಮಲದ ದಳಗಳಂತೆ ವಿಶಾಲವಾದ ನೇತ್ರ ಉಳ್ಳವನೇ ಎಂದರೆ ಪುಂಡರೀಕಾಕ್ಷ ಎಂದರ್ಥ. ಇದು ಶ್ರೀಹರಿಯ ವಿಶೇಷ ಲಕ್ಷಣಗಳಲ್ಲೊಂದು. ವಿರೂಪಾಕ್ಷ ಎಂಬುದು ಶಿವನ ವಿಶೇಷ ನಾಮವೆನ್ನಿಸಿರುವಂತೆ ಪುಂಡರೀಕಾಕ್ಷ ಎಂಬುದು ಶ್ರೀಹರಿಯ ವಿಶೇಷ ನಾಮವೆನಿಸಿದೆ[೧]. ವಿಶಾಲನೇತ್ರ ಸದಾ ಎಚ್ಚರದ ಸಂಕೇತ; ಎಚ್ಚರವು ಜ್ಞಾನದ ಸಂಕೇತ. ಶ್ರೀಹರಿಯು ಯಾವುದೇ ಬಗೆಯ ಅಜ್ಞಾನ ಮಿಥ್ಯಾಜ್ಞಾನವನ್ನು ಸಹ ಸರ್ವಥಾ ಹೊಂದದ ಸರ್ವಜ್ಞ ಎಂಬುದು ಇದರ ಭಾವ.

೨. ಭಾರ್ಗವರಾಮ ಎಂದರೆ ಪರಶುರಾಮ; ಭೃಗುವಂಶದ ಜಮದಗ್ನಿಯ ಪುತ್ರತ್ವೇನ ಅವತರಿಸಿದ್ದರಿಂದ ಆ ಹೆಸರು. ಮುಖ್ಯಾರ್ಥದಲ್ಲಿ ಭೃಗು ಎಂದರೆ ಭರ್ಜನ ಮಾಡುವವನು;

---

೧. ವಸುರ್ವಸುಮನಾಃ ಸತ್ಯಃ ಸಮಾತ್ಮ ಸಮ್ಮಿತಃ ಸಮಃ ।
ಅಮೋಘಃ ಪುಂಡರೀಕಾಕ್ಷೋ ವೃಷಕರ್ಮಾ ವೃಷಾಕೃತಿಃ ॥ — ವಿಷ್ಣುಸಹಸ್ರನಾಮ

ಭಾರ್ಗವ ಎಂದರೂ ಅವನೇ. ಸಂಸಾರವನ್ನು ಪರಿಹರಿಸಿ ಮೋಕ್ಷನೀಡುವವನು ಎಂಬುದು ಮುಖ್ಯಾರ್ಥ. ಈ ಪರಶುರಾಮ ರೂಪವು ವಿಷ್ಣುವಿನ ದಶಾವತಾರಗಳಲ್ಲಿ ಆರನೆಯದು.

೩. **ಹಲಧರರಾಮ**; ಹಲ ಎಂದರೆ ನೇಗಿಲು; ನೇಗಿಲನ್ನು ಆಯುಧವನ್ನಾಗಿ ಧರಿಸಿದ ರಾಮ ಎಂದರೆ ಬಲರಾಮ. ಬಲರಾಮ ವಿಷ್ಣುವಿನ ಸಾಕ್ಷಾತ್ ರೂಪವಲ್ಲ. ಶುಕ್ಲಕೇಶ ಎಂಬ ಶ್ರೀಹರಿಯ ರೂಪದ ಆವೇಶ ಹೊಂದಿದ ರೂಪ ಇದು. ಮುಖ್ಯವಾಗಿ ಆದಿಶೇಷನ ಅವತಾರ. ಶ್ರೀಹರಿಯ ಆವೇಶದಿಂದಾಗಿ ವಿಶೇಷ ಸಾಧನೆಗಳನ್ನು ಮಾಡಿದ್ದು ಇದರ ಹಿರಿಮೆ. ಅದನ್ನು ಸೂಚಿಸಲೆಂದು '**ಹಲಧರರಾಮ**' ಎಂಬುದಾಗಿ ಇಲ್ಲಿ ಉಲ್ಲೇಖಿಸಿರುವರು ಎಂದು ತಿಳಿಯಬೇಕು. '**ಧೇನುಕಾಸುರಭಂಜನ**' ಎಂಬುದೂ ಸಹ ಇದೇ ರೀತಿಯಾಗಿ ಕೃಷ್ಣಾಷ್ಟೋತ್ತರಶತನಾಮಸ್ತೋತ್ರದಲ್ಲಿ ಶ್ರೀಕೃಷ್ಣನ ಒಂದು ನಾಮವಾಗಿ ಪರಿಗಣಿತವಾಗಿರು–ವುದನ್ನು ಗಮನಿಸಬೇಕು; ಕೆಲವು ಪುರಾಣಗಳಲ್ಲಿ ಬಲರಾಮನನ್ನು ದಶಾವತಾರದಲ್ಲಿ ಪರಿಗಣಿಸಿರುವುದು ಈ ಅರ್ಥದಲ್ಲಿ ಎಂದು ತಿಳಿಯಬೇಕು.

೪. **ದಶರಥರಾಮ**; ದಶರಥಪುತ್ರತ್ವೇನ ಅವತರಿಸಿದ ರೂಪ ಇದು. ಸಾಮಾನ್ಯವಾಗಿ ರಾಮ ಎಂದ ಕೂಡಲೇ ಈ ರೂಪದ ಸ್ಮರಣೆಯೇ ಮುಖ್ಯವಾಗಿ ಒದಗುವುದು. ಇತರ ಎರಡು ರಾಮ ರೂಪಗಳಲ್ಲಿ ಪರಶುರಾಮ ರೂಪವು ಇದರಂತೆಯೇ ಸಾಕ್ಷಾತ್ ರೂಪ. ರಾಮಾಯಣ ಮುಖ್ಯವಾಗಿ ಈ ರೂಪದ ಚರಿತ್ರೆಯನ್ನು ನಿರೂಪಿಸುವ ಕೃತಿ. ಮೂಲರಾಮಾಯಣ ಎಂಬ ಶತಕೋಟಿಶ್ಲೋಕಗಳ ಮಹಾರಾಮಾಯಣ ಮುಖ್ಯವಾದ ರಾಮಕಥೆಯ ಆಕರ. ಇತರ ಪುರಾಣಗಳಲ್ಲೂ ಮಹಾಭಾರತದಲ್ಲೂ ರಾಮಾವತಾರದ ಹಿರಿಮೆ ನಿರೂಪಿತವಾಗಿದೆ.

೫. **ಮೇಘಶ್ಯಾಮ** ಎಂದರೆ ಮೇಘದಂತೆ ಶ್ಯಾಮಲವರ್ಣದವನು ಎಂದರ್ಥ. ಶ್ರೀರಾಮ ಹಾಗೂ ಶ್ರೀಕೃಷ್ಣ ಎರಡೂ ರೂಪಗಳೂ ಶ್ಯಾಮಲವರ್ಣದ ರೂಪಗಳು ಎಂಬುದು ವಿಶೇಷ. ಶ್ಯಾಮಲವರ್ಣ ಗಾಂಭೀರ್ಯದ ಸಂಕೇತ. ಸಮುದ್ರದ ನೀಲವರ್ಣ, ಗಗನದ ನೀಲವರ್ಣಗಳು ಅವುಗಳ ಅಪಾರತೆಗೆ ದ್ಯೋತಕವಾಗಿರುವುದು ಈ ಅರ್ಥದಲ್ಲೇ. ಆದ್ದರಿಂದ ಇಲ್ಲಿ ಈ ರೂಪಗಳ ಬಣ್ಣ ಕಪ್ಪು ಎಂಬುದು ಮುಖ್ಯವಲ್ಲ. ಶ್ರೀಹರಿಯ ಮಹಿಮೆ ಯಾರ ತಿಳಿವಿಗೂ ಪೂರ್ಣ ನಿಲುಕದ್ದು ಎಂಬುದು ಮುಖ್ಯಾರ್ಥ. ಸಾಮಾನ್ಯವಾಗಿ ನಿರೂಪಣೆಗೆ ಉಪಯೋಗಿಸುವ ಅಕ್ಷರಗಳು ಕಪ್ಪುವರ್ಣದವುಗಳು ಎಂಬುದು ಶಬ್ದದ ಗಾಂಭೀರ್ಯಕ್ಕೆ ನಿದರ್ಶನವಾಗಿರುವುದು ಇದೇ ಅರ್ಥದಲ್ಲಿ.

೬. **ಸದ್ಗುಣಧಾಮ** – ಸತ್ ಎಂದರೆ ಉತ್ತಮ ಎಂದರ್ಥ. ಗುಣಗಳು ಎಂದರೆ ಜ್ಞಾನಾನಂದಾದಿಗಳು; ಧಾಮ ಎಂದರೆ ನೆಲೆ. ಉತ್ತಮವಾದ ಗುಣಗಳಿಗೆ ನೆಲೆಯಾದವನು ಎಂಬುದು ಇದರ ಅರ್ಥ. ಪರಮಾತ್ಮನು ಗುಣಪೂರ್ಣ ಎಂಬುದು ಶಾಸ್ತ್ರಗಳ ನಿರೂಪಣೆ. ಅವನ ಸಕಲಗುಣಗಳೂ ಪರಿಪೂರ್ಣವಾದ ಉತ್ತಮಗುಣಗಳೇ ಎಂಬುದು ಇದರಲ್ಲಿ ಧ್ವನಿತವಾಗಿರುವ ಮುಖ್ಯಾರ್ಥ. ಸತ್ ಎಂದರೆ ಪ್ರಾಣ ಎಂಬ ಅರ್ಥವೂ ಉಪನಿಷತ್ತುಗಳಲ್ಲಿದೆ.

ಉತ್ತಮಗುಣಗಳಿಗೆ ನೆಲೆಯೆನ್ನಿಸಿರುವುದು ಪ್ರಾಣನ ಹಿರಿಮೆಯೂ ಆಗಿದೆ. ಅಂತಹ ಮುಖ್ಯಪ್ರಾಣನನ್ನೇ ತನ್ನ ಮುಖ್ಯವಾದ ನೆಲೆಯನ್ನಾಗಿಸಿಕೊಂಡಿರುವ ಶ್ರೀಹರಿಗೆ ಸದ್ಗುಣಧಾಮ ಎಂಬ ಹೆಸರು ಸಾರ್ಥಕ ಎಂಬುದು ಇಲ್ಲಿ ವಿವಕ್ಷಿತ[1].

೭. **ನಿಸ್ಸೀಮ** – ಸೀಮೆ ಎಂದರೆ ಮಿತಿ, ಎಲ್ಲೆ ಎಂದರ್ಥ. ಅಂತಹ ಎಲ್ಲೆಯು ದೇಶತಃ, ಕಾಲತಃ ಹಾಗೂ ಗುಣತಃ ಎಂಬುದಾಗಿ ಮೂರು ಬಗೆ. ಈ ಮೂರು ಬಗೆಯ ಮಿತಿಗಳಿಗೂ ಅತೀತನಾದವನು ಶ್ರೀಹರಿ. ಅನಂತ ಎಂಬುದರ ಅರ್ಥವೂ ಇದೇ. ಇತರರಾರೂ ಶ್ರೀಹರಿಯಂತೆ ನಿಸ್ಸೀಮರಲ್ಲ ಎಂಬುದು ಶಾಸ್ತ್ರಗಳ ಘೋಷಣೆ. ಶ್ರೀಹರಿಯು ಅನಂತ ಎಂದು ತಾತ್ಪರ್ಯ.

೮. **ಸಾಮಗಾನಪ್ರೇಮ** – ನಾಲ್ಕುವೇದಗಳಲ್ಲಿ ಸಾಮವೇದವು ಮೂರನೆಯದು. ಮುಖ್ಯವಾಗಿ ಗಾನರೂಪದ ವೇದ ಎಂಬುದು ಇದರ ಹಿರಿಮೆ. ಸಂಗೀತಕ್ಕೆ ಮೂಲನೆಲೆ ಎನ್ನಿಸಿರುವುದು ಇದರ ಹಿರಿಮೆ. ಅಂತಹ ಸಾಮಗಾನವು ಶ್ರೀಹರಿಗೆ ಪರಮಪ್ರಿಯ ಎಂಬುದು ಇಲ್ಲಿಯ ಭಾವ. ಮತ್ತೊಂದು ಅರ್ಥದಲ್ಲಿ ಸಾಮ ಎಂದರೆ ಅದಕ್ಕೆ ಅಭಿಮಾನಿದೇವತೆಯಾದ ಮುಖ್ಯಪ್ರಾಣ ಎಂದರ್ಥ; ಮುಖ್ಯಪ್ರಾಣನ ಗಾನಕ್ಕೆ ಬಹಳವಾಗಿ ಮೆಚ್ಚುವವನು ಎಂಬುದು ಇದರ ಅರ್ಥ. ಶ್ರೀಮಧ್ವರೂಪದಿಂದ ಮುಖ್ಯಪ್ರಾಣ ರಚಿಸಿದ ದ್ವಾದಶಸ್ತೋತ್ರ ಮುಂತಾದ ಕೃತಿಗಳು ಶ್ರೀಹರಿಗೆ ವಿಶೇಷವಾಗಿ ಪ್ರಿಯ ಎಂಬ ಭಾವ ಇದರಿಂದ ಸೂಚಿತ. ಹನುಮದ್ರೂಪದಿಂದಲೂ ವಾಯುದೇವರು ವೇದಗಳೊಂದಿಗೆ ರಾಮಾಯಣಾದಿಗಳನ್ನು ಹಾಡುವ ಉಲ್ಲೇಖ ನಿರ್ಣಯದಲ್ಲಿ ಬಂದಿದೆ: ಇತ್ಥಂ ಸ ಗಾಯನ್ ಶತಕೋಟಿವಿಸ್ತರಂ ರಾಮಾಯಣಂ ಸಹಿತಭಾರತಪಂಚರಾತ್ರಂ.

೯. **ಕಾಂಚನದಾಮಧರ** – ದಾಮ ಎಂದರೆ ಹಗ್ಗ ಎಂದರ್ಥ. ಇಲ್ಲಿ ಉಡುದಾರ ಎಂಬುದು ಪ್ರಸಕ್ತವಾದ ಅರ್ಥ. ಚಿನ್ನದ ಉಡಿದಾರವನ್ನು ಧರಿಸಿದವನು ಎಂದು ಇದರ ತಾತ್ಪರ್ಯ: **ಸ್ವರ್ಣಮಂಜೀರಸಂವೀತಂ** ಎಂಬ ದ್ವಾದಶಸ್ತೋತ್ರದ ಭಾವ ಇದಾಗಿದೆ. ಸುವರ್ಣ ಎಂದರೆ ಶಾಸ್ತ್ರ. ಶಾಸ್ತ್ರಗಳು ಕೊಂಡಾಡುವ ದಾಮವನ್ನು ಧರಿಸಿದವನು ಎಂದರ್ಥ. ದಾಮವೆಂದರೆ ಹಗ್ಗ, ಸೂತ್ರ, ಎಂದರೆ, ಮುಖ್ಯಪ್ರಾಣ. ಮುಖ್ಯಪ್ರಾಣನಿಂದ ವಿಶೇಷವಾಗಿ ಪೂಜಿತನಾದವನು ಎಂದು ಭಾವ.

೧೦. **ಸುತ್ರಾಮವಿರಚಿತಕಾಮ** – ಸುತ್ರಾಮ ಎಂದರೆ ಇಂದ್ರ; ಇಂದ್ರನ ಬಯಕೆ ಎಂದರೆ ಅಸುರರ ನಿಗ್ರಹ; ಸುರರ ಪಾಲನೆ. ಇದು ಸಕಲದೇವತೆಗಳ ಹಾಗೂ ಸಜ್ಜನರ ಬಯಕೆಯೂ ಆಗಿದೆ. ಅವರ ಬಯಕೆಯನ್ನು ಸಂಪೂರ್ಣವಾಗಿ ಈಡೇರಿಸುವ ಹಿರಿಮೆ ಶ್ರೀಹರಿಯದು

---

೧. ಪ್ರಧಾನಂ ಧಾಮ ವಿಷ್ಣೋಸ್ತು ಪ್ರಾಣ ಏವ ಪ್ರಕೀರ್ತಿತಃ।
ಉಪಾಸ್ಯೈರ್ಯೋ ವಿಜಾನೀಯಾತ್ ಪ್ರಾಣಸ್ಥಂ ಪರಮೇಶ್ವರಮ್ ।
ತಸ್ಯ ಪ್ರಾಣೇ ಹರಿರ್ನಿತ್ಯಮಾವಿಷ್ಟೋ ಭವತಿ ಧ್ರುವಮ್ ॥ – ಆಥರ್ವಣಭಾಷ್ಯ

ಎಂದು ಇದರ ಭಾವ. ಇಂದ್ರ ಮೊದಲಾದ ಸಕಲದೇವತೆಗಳ ಅಭೀಷ್ಟವನ್ನು ಈಡೇರಿಸುವವನು ಎಂಬುದು ಮುಖ್ಯಭಾವ.

೧೧. **ರವಿಕುಲಸೋಮ** – ರವಿಕುಲ ಎಂದರೆ ಸೂರ್ಯವಂಶ; ಸೋಮ ಎಂದರೆ ಚಂದ್ರ. ಸೂರ್ಯವಂಶಕ್ಕೆ ಚಂದ್ರ ಎಂದರೆ ಸೂರ್ಯವಂಶಕ್ಕೆ ಆಹ್ಲಾದ ನೀಡುವವನು ಎಂದರ್ಥ. ಸೂರ್ಯವಂಶಕ್ಕೆ ಚಂದ್ರ ಎಂಬ ಇಲ್ಲಿಯ ಕಾವ್ಯಸೌಂದರ್ಯವೂ ಸಹ ಅನುಪಮವಾದುದು. ಸಾಮಾನ್ಯವಾಗಿ ಸೂರ್ಯನ ಬೆಳಕು ಚಂದ್ರನಿಗಿಂತಾ ತುಂಬಾ ಮಿಗಿಲಾದುದು. ಸೂರ್ಯವಂಶಕ್ಕೆ ಚಂದ್ರ ಎಂದಾಗ ಸೂರ್ಯನ ಬೆಳಕನ್ನು ಕುಗ್ಗಿಸಿದಂತೆ ಮೇಲ್ನೋಟಕ್ಕೆ ಕಾಣುವುದು. ವಾಸ್ತವವಾಗಿ ಇಲ್ಲಿ ವಿವಕ್ಷಿತವಾಗಿರುವುದು ಆಹ್ಲಾದಕತ್ವವೇ ಹೊರತು ಪ್ರಕಾಶವಲ್ಲ. ಸೂರ್ಯನ ಬೆಳಕು ಚಂದ್ರನಿಗಿಂತ ಮಿಗಿಲಾದರೂ ಅದರದು ಆಹ್ಲಾದಕತ್ವವಲ್ಲ. ಆಹ್ಲಾದಕತ್ವ ಚಂದ್ರನ ವಿಶಿಷ್ಟವಾದ ಗುಣ. ಬೋಧಕ ಶಾಸ್ತ್ರಗಳು ಚಂದ್ರನಂತೆ ಆಹ್ಲಾದಕರ, ದುರ್ಮತ ಬಾಧಕ ಶಾಸ್ತ್ರಗಳು ಸೂರ್ಯನಂತೆ ಪ್ರಖರ ಎಂಬ ಇಲ್ಲಿಯ ಧ್ವನಿ ಗಮನಾರ್ಹವಾಗಿದ್ದು ಈ ಹಿನ್ನೆಲೆಯಲ್ಲಿ ಸೂರ್ಯವಂಶಕ್ಕೆ ಚಂದ್ರ ಎಂಬ ಇಲ್ಲಿಯ ಮಾತು ಅತ್ಯಂತ ಸೊಗಸಾದುದು. ಈ ಹಿನ್ನೆಲೆಯಲ್ಲಿ ಶ್ರೀಹರಿಭಕ್ತಿಸಾರಕೃತಿಯು ಉತ್ತಮ ಶಾಸ್ತ್ರಕಾವ್ಯ ಎಂಬುದಕ್ಕೆ ಇದೊಂದು ಅಪೂರ್ವನಿದರ್ಶನ.

*****

## ೭. ವೇದಗೋಚರ ರಕ್ಷಿಸು

ವೇದಗೋಚರ ವೇಣುನಾದವಿ-
ನೋದ ಮಂದರಶೈಲಧರ ಮಧು-
ಸೂದನಾಚ್ಯುತ ಕಂಸದಾನವರಿಪು ಮಹಾಮಹಿಮ ।
ಯಾದವೇಂದ್ರ ಯಶೋದೆನಂದನ
ನಾದಬಿಂದುಕಳಾತಿಶಯ ಪ್ರ-
ಹ್ಲಾದರಕ್ಷಕ ವರದ ರಕ್ಷಿಸು ನಮ್ಮನನವರತ ॥ ೭ ॥

ಅ: ವೇದಗಳಿಂದ ತಿಳಿಯಲ್ಪಡುವವನೇ! ವೇಣುನಾದಪ್ರಿಯನೇ! ಮಂದರ-ಪರ್ವತವನ್ನು ಧರಿಸಿದವನೇ! ಮಧುಸೂದನನೇ! ಅಚ್ಯುತನೇ! ಕಂಸ ಮೊದಲಾದ ರಕ್ಕಸರ ವೈರಿಯೇ! ಮಹಾಮಹಿಮನೇ! ಯಾದವಶ್ರೇಷ್ಠನೇ! ಯಶೋದೆಯ ಕುಮಾರನೇ! ನಾದ, ಬಿಂದು, ಕಲಾಗಳಿಂದ ಅತಿಶಯನೆಂಬುದಾಗಿ ಸ್ತುತಿಸಲ್ಪಡುವವನೇ, ಪ್ರಹ್ಲಾದನನ್ನು ರಕ್ಷಿಸಿದವನೇ, ವರವನ್ನು ನೀಡುವವನೇ, ನಮ್ಮನ್ನು ಸದಾ ರಕ್ಷಿಸು.

ವಿ: ೧. [೧]**ವೇದಗೋಚರ:** ವೇದಗಳಿಂದ ತಿಳಿಯಲ್ಪಡುವವನು ಎಂದರೆ ಸದಾಗಮೈಕವೇದ್ಯ (ಸಚ್ಛಾಸ್ತ್ರಗಳಿಂದ ಮಾತ್ರವೇ ತಿಳಿಯಲ್ಪಡುವವನು) ಎಂದರ್ಥ. ಇದು **'ಶಾಸ್ತ್ರಯೋನಿತ್ವಾತ್'** (೧/೧/೩) ಎಂಬ ಬ್ರಹ್ಮಸೂತ್ರದ ಅರ್ಥವೂ ಆಗಿದೆ. ವೇದಗಳಿಂದ ತಿಳಿಯಲ್ಪಡುವವನು ಎಂಬುದಕ್ಕೆ ಸಕಲವೇದಪ್ರತಿಪಾದ್ಯ ಎಂಬ ಅರ್ಥವೂ ವಿವಕ್ಷಿತ. ಆದರೆ ಸಕಲವೇದಗಳಿಂದಲೂ ಸಮಗ್ರವಾಗಿ ತಿಳಿಯಲ್ಪಡದವನು ಎಂಬ ವಿಶೇಷವನ್ನು ಗಮನಿಸಬೇಕು. ವೇದಾಭಿಮಾನಿ ದೇವತೆಗಳಿಗೆ ಸಾಕ್ಷಾತ್ತಾಗಿ ಗೋಚರಿಸುವವನು ಎಂದೂ ಅರ್ಥವಾಗುವುದು. ವೇದಗಳಿಗೂ ಮೀರಿದ ಪರಿಜ್ಞಾನ ಮಹಾಲಕ್ಷ್ಮಿಯದು. ಆದ್ದರಿಂದಲೇ ಶ್ರೀಹರಿಗೆ ಮಹಾಲಕ್ಷ್ಮೀ ಅತ್ಯಂತ ಪ್ರಿಯಳು. ಅದರಂತೆ ಸಕಲವೇದಗಳನ್ನು ಪೂರ್ಣವಾಗಿ ತಿಳಿದು ಶ್ರೀಹರಿಯನ್ನು ಆರಾಧಿಸುವ ವಿಶೇಷ ಹಿರಿಮೆ ಬ್ರಹ್ಮ-ವಾಯು ಮೊದಲಾದ ಋಜುಗಳದು. ಆದ್ದರಿಂದ ವೇದಗೋಚರ ಎಂಬುದಕ್ಕೆ ಋಜುಗಳಿಗೆ ವಿಶೇಷವಾಗಿ ದರ್ಶನ ನೀಡುವವನು ಎಂಬ ಅರ್ಥವೂ ವಿವಕ್ಷಿತ.

೨. **ವೇಣುನಾದವಿನೋದ:** ವೇಣುವಿನ ಧ್ವನಿಯಿಂದ ಗೋಗೋಪರನ್ನು, ಗೋಪಿಯರನ್ನು ಆನಂದ ಪಡಿಸಿದವನು ಎಂದರ್ಥ. ವೇಣು ಮೊದಲಾದ ವಾದ್ಯಗಳ ಧ್ವನಿಗಳಿಗೆ ಒಲಿಯುವವನು ಎಂಬರ್ಥವೂ ವಿವಕ್ಷಿತ. ಇದು ಕೃಷ್ಣಾವತಾರಕ್ಕೆ ಅನ್ವಯಿಸುವ ವರ್ಣನೆ. ವೇಣು ಎಂದರೆ, ವೇಣುವಿನೊಳಗೆ ನೆಲೆಸಿದ ಮಹಾಲಕ್ಷ್ಮೀ ಎಂದರ್ಥ. ಅವರು ಮಾಡುವ ಶ್ರುತಿ ಗೀತಾದಿ ರೂಪಸ್ತೋತ್ರಗಳನ್ನು ಬಹಳವಾಗಿ ಮೆಚ್ಚುವವನು ಎಂದರ್ಥ.

೩. **ಮಂದರಶೈಲಧರ:** ಮಂದರವೆಂಬ ಪರ್ವತವನ್ನು ಧರಿಸಿದವನು; ಮಂದರವೆಂಬುದು ಸಪ್ತಕುಲಪರ್ವತಗಳಲ್ಲಿ ಒಂದು; ಚಿನ್ನದ ಪರ್ವತ ಎಂಬುದು ಇದರ ವಿಶೇಷ. ಶಿವನ ವರದಿಂದಾಗಿ ಇತರರಿಂದ ಧರಿಸಲಾಗದ್ದು ಎಂಬ ವಿಶೇಷ ಉಲ್ಲೇಖ ಇದರ ಬಗ್ಗೆ ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಬಂದಿದೆ. ಕ್ಷೀರಸಮುದ್ರದ ಮಥನಕ್ಕೆ ಕಡಗೋಲಾಗಿ ಇದು ಉಪಯೋಗಿಸಲ್ಪಟ್ಟಿತು. ಅದನ್ನು ಲೀಲಾಜಾಲವಾಗಿ ಕೂರ್ಮರೂಪದಿಂದ ಧರಿಸಿದ ಹಿರಿಮೆ ಶ್ರೀಹರಿಯದು. ಇದರಿಂದಾಗಿ ಅಮೃತಮಥನಕಾರ್ಯ ಸಾಧ್ಯವಾಗಿ, ದೇವತೆಗಳು ಅಮೃತವನ್ನು ಪಡೆಯಲು ಕಾರಣವಾಯಿತು. ಅಮೃತಪ್ರಾಪ್ತಿಯ ಪ್ರಸಂಗದಲ್ಲಿ ಶ್ರೀಹರಿಯು ಅಜಿತ ರೂಪದಿಂದ ಮಾಡಿದ ಮಥನವೇ ಪ್ರಧಾನ ಎಂಬುದು ಸಹ ಇದರಿಂದ ಸೂಚಿತ.

೪. **ಮಧುಸೂದನ:** ಮಧು ಎಂಬ ಅಸುರನನ್ನು ಸಂಹರಿಸಿದವನು; ಮಧು ಎಂಬುವನು ಮಧುಕೈಟಭರಲ್ಲಿ ಒಬ್ಬನು. ಇವನ ಸಂಹಾರದ ಬಳಿಕ ಇವನ ರೇತಸ್ಸಿನಿಂದಲೇ ಭೂಮಿಯು ನಿರ್ಮಾಣವಾಗಿ ಮೇದಿನೀ ಎಂದು ಹೆಸರಾಯಿತು. ಬ್ರಹ್ಮವರದಿಂದಾಗಿ ಅವಧ್ಯನಾಗಿದ್ದ ಇವನನ್ನು ಶ್ರೀಹರಿಯು ಸಂಹರಿಸಿದ ಉಲ್ಲೇಖ ಪುರಾಣಗಳಲ್ಲಿದೆ. ಇದು ಕೇಶವಾದಿ ಚತುರ್ವಿಂಶತಿ ರೂಪಗಳಲ್ಲಿ ಹಾಗೂ ವಿಶ್ವಾದಿ ಸಾವಿರರೂಪಗಳಲ್ಲೂ ಮಧುಸೂದನ ರೂಪಗಳು ಬಂದಿವೆ.

---

೧. ನೇಂದ್ರಿಯಾಣಿ ನಾನುಮಾನಂ ವೇದಾ ಹ್ಯೇವೈನಂ ವೇದಯಂತಿ। - ವಿಷ್ಣುತತ್ತ್ವವಿನಿರ್ಣಯ

೫. **ಅಚ್ಯುತ**: ಯಾವುದೇ ಬಗೆಯ ನಾಶವನ್ನೂ ಹೊಂದದವನು; ಈ ಬಗ್ಗೆ ಈಗಾಗಲೇ ವಿವರಗಳನ್ನು ನೀಡಲಾಗಿದೆ. ಇದೂ ಸಹ ಕೇಶವಾದಿ ಚತುರ್ವಿಂಶತಿ ರೂಪಗಳಲ್ಲೂ ಹಾಗೂ ವಿಶ್ವಾದಿ ಸಾವಿರರೂಪಗಳಲ್ಲೂ ಬಂದಿರುವ ರೂಪ.

೬. **ಕಂಸದಾನವರಿಪು**: ಕಂಸ ಎಂಬ ದಾನವನಿಗೆ ಶತ್ರುವಾದವನು; ಕಂಸ ಶ್ರೀಕೃಷ್ಣನಿಗೆ ಸೋದರಮಾವ. ಅವನು ಸಂಬಂಧದಲ್ಲಿ ಮಾನ್ಯನೆನಿಸಿದರೂ ಯೋಗ್ಯತೆಯಲ್ಲಿ ಅಸುರನಾಗಿದ್ದವನು ಆದರಿಂದಾಗಿಯೇ ಶ್ರೀಕೃಷ್ಣ ಅವನನ್ನು ಸಂಹರಿಸಿದ ಎಂಬ ವಿಶೇಷಾಂಶವನ್ನು ಸೂಚಿಸಲೆಂದು ಕಂಸರಿಪು ಎಂದು ಮಾತ್ರ ಕರೆಯದೆ ಕಂಸದಾನವರಿಪು ಎಂದಿರುವರು ಎಂದು ತಿಳಿಯಬೇಕು. ಕಂಸನು ಮೂಲತಃ ಸಾವಿರ ತಲೆಗಳ ಕಾಲನೇಮೀ ಎಂಬ ದೈತ್ಯ. ಅವನು ಕಾಮಕ್ಕೆ ಅಭಿಮಾನಿಯಾದವನು. ಅವನ ಸಂಹಾರ ದುಷ್ಕಾಮದ ವಿನಾಶಕ್ಕೆ ಸೂಚಕ ಎಂಬ ಭಾವವು ಇದರಿಂದ ಸೂಚಿತ.

೭. **ಮಹಾಮಹಿಮ**: ಮಹಿಮೆ ಎಂದರೆ ಹಿರಿತನ ಎಂದರ್ಥ; ಇದು ಅಷ್ಟಸಿದ್ಧಿಗಳಲ್ಲಿ ಒಂದು; ಅಣಿಮಾ ಎಂಬುದು ಚಿಕ್ಕದಾಗುವಿಕೆಯಾದರೆ ಮಹಿಮೆ ಎಂಬುದು ದೊಡ್ಡದಾಗುವಿಕೆ ಎಂದರ್ಥ. ಶ್ರೀಹರಿಯು ತ್ರಿವಿಕ್ರಮರೂಪದಲ್ಲಿ ವಿಶ್ವವನ್ನೇ ವ್ಯಾಪಿಸಿದ್ದು ಸುಪ್ರಸಿದ್ಧ. ಆದ್ದರಿಂದಲೇ ಅವನದು ಕೇವಲ ಮಹಿಮೆಯಷ್ಟೇ ಆಗಿರದೆ ಮಹಾಮಹಿಮೆಯಾಗಿದೆ ಎಂದು ತಿಳಿಯಬೇಕು. ಇದು '**ಮಹತೋಮಹೀಯಾನ್**' ಎಂಬ ಉಪನಿಷದ್ವಾಕ್ಯದ ವಿವರಣೆಯೂ ಆಗಿದೆ. '**ನಿರವಧಿಕಮಹಿಮಾಸಂಪನ್ನ**' ಎಂಬುದು ಇದರ ಒಟ್ಟು ಭಾವ.

೮. **ಯಾದವೇಂದ್ರ**: ಯಾದವರಲ್ಲಿ ಶ್ರೇಷ್ಠನಾದವ; ಶ್ರೀರಾಮರೂಪದಿಂದ '**ರಾಘವೇಂದ್ರ**' ಎನ್ನಿಸಿದಂತೆ ಶ್ರೀಕೃಷ್ಣರೂಪದಿಂದ '**ಯಾದವೇಂದ್ರ**' ಎನ್ನಿಸಿದ್ದು ಶ್ರೀಹರಿಯ ಮತ್ತೊಂದು ಹಿರಿಮೆ; ಯಾದವನೂ ಇಂದ್ರನೂ ಆದವನು ಎಂದೂ ಅರ್ಥ ಮಾಡಿಕೊಳ್ಳಬಹುದು, ಆಗ ಯಾದವಕೃಷ್ಣನಾಗಿ ಅವತರಿಸಿದ ಶ್ರೀಹರಿ ಯಜ್ಞನಾಮಕನಾಗಿ ಇಂದ್ರಪದವಿಯಲ್ಲೂ ಇದ್ದ ಎಂಬ ವಿಶೇಷಾರ್ಥ ಲಭಿಸುವುದು. ಸರ್ವಶ್ರೇಷ್ಠ ಎಂಬುದು ಇದರ ಒಟ್ಟು ಭಾವ.

೯. **ಯಶೋದೆನಂದನ**: ಯಶೋದೆಯ ಮಗ ಎಂಬುದು ಮೇಲ್ನೋಟದ ಅರ್ಥ. ವಾಸ್ತವವಾಗಿ ಅವನು ಯಶೋದಾನಂದನನಲ್ಲ ಎಂಬುದು ತಿಳಿದೇ ಇರುವ ವಿಚಾರ. ನಿಜವಾದ ಅರ್ಥದಲ್ಲಿ ಅವನು ದೇವಕೀನಂದನನೂ ಅಲ್ಲ. ಆದ್ದರಿಂದ ಯಶೋದೆಗೆ ಆನಂದ ನೀಡಿದವನು ಎಂದಷ್ಟೇ ಇದರ ಭಾವ. '**ಏನು ಸುಕೃತವ ಮಾಡಿದಳೋ ಯಶೋದೆ**' ಎಂಬ ಹಿರಿಮೆಯನ್ನು ಯಶೋದೆ ಪಡೆಯುವಂತಾದದ್ದು ಶ್ರೀಕೃಷ್ಣನಿಂದಲೇ ಅಲ್ಲವೇ! ಮತ್ತೊಂದು ಅರ್ಥದಲ್ಲಿ ತನ್ನ ಯಶಸ್ಸನ್ನು ಜನತೆಗೆ ತಿಳಿಯಪಡಿಸುವವರಿಗೆ ಆನಂದನೀಡುವವನು ಎಂದಾಗುವುದು.

೧೦. **ನಾದಬಿಂದುಕಳಾತಿಶಯ**: ನಾದ, ಬಿಂದುಗಳನ್ನು ಕಲೆಗಳನ್ನಾಗಿ ಹೊಂದಿದ ಓಂಕಾರದಿಂದ ಸರ್ವೋತ್ತಮನು ಎಂಬುದಾಗಿ ಪ್ರತಿಪಾದಿತನಾದವನು ಎಂದರ್ಥ. ನಾದ, ಬಿಂದು ಎಂಬವು ಓಂಕಾರದ ಅಕ್ಷರಗಳಲ್ಲಿ ಎರಡು: ಅ, ಉ, ಮ, ನಾದ, ಬಿಂದು,

ಘೋಷ, ಶಾಂತ ಹಾಗೂ ಅತಿಶಾಂತ ಎಂಬವು ಓಂಕಾರದಲ್ಲಿನ ಒಟ್ಟು ಎಂಟು ಅಕ್ಷರಗಳು ತಂತ್ರಸಾರಸಂಗ್ರಹ ಮೊದಲಾದ ಗ್ರಂಥಗಳಲ್ಲಿ ಬಂದಿದೆ.

೧೧. **ಪ್ರಹ್ಲಾದರಕ್ಷಕ:** ಪ್ರಹ್ಲಾದನನ್ನು ರಕ್ಷಿಸಿದವನು; ಪ್ರಹ್ಲಾದನು ಧ್ರುವನಂತೆ ಬಾಲ್ಯದಲ್ಲೇ ಶ್ರೀಹರಿಯನ್ನು ಸಾಕ್ಷಾತ್ಕರಿಸಿಕೊಂಡ ಭಕ್ತಾಗ್ರೇಸರ. ವಾಯುದೇವರ ಆವೇಶವನ್ನು ಹೊಂದಿದ್ದುದು ಅವನ ವಿಶೇಷ. ಇದರಿಂದ ವಾಯುದೇವರ ಅನುಗ್ರಹಪಾತ್ರರಾದವರಿಗೆ ರಕ್ಷಣೆ ನೀಡುವವನು ಶ್ರೀಹರಿ ಎಂಬ ವಿಶೇಷಾರ್ಥ ಲಭಿಸುತ್ತದೆ. ಪ್ರಹ್ಲಾದರಕ್ಷಕವರದ ಎಂಬುದಾಗಿ ಒಂದೇ ಪದವನ್ನಾಗಿಯೂ ಇದನ್ನು ಓದಿಕೊಳ್ಳಬಹುದು; ಆಗ ಪ್ರಹ್ಲಾದನಿಗೆ ರಕ್ಷಣೆ ನೀಡಿದವನು, ವರನೀಡಿದವನು ಎಂಬ ಅರ್ಥ ಲಭಿಸುವುದು.

೧೨. ವರದ: ವರ ನೀಡುವವನು ಎಂದರ್ಥ. ವರಂ ದ್ಯತಿ (ದೋ ಅವಖಂಡನೆ) ಎಂಬ ಮತ್ತೊಂದು ಅರ್ಥವೂ ಇದಕ್ಕೆ ಉಂಟು. ಇದರಿಂದ ವರನೀಡುವವನು ಮಾತ್ರವಲ್ಲದೆ ಬ್ರಹ್ಮರುದ್ರಾದಿ ಇತರರು ನೀಡಿದ ವರಗಳನ್ನು ಉಲ್ಲಂಘಿಸುವವನು ಎಂದು ಅರ್ಥವಾಗುವುದು. ಇದು '**ವರದೇಶವರಪ್ರದಂ**' ಎಂಬ ದ್ವಾದಶಸ್ತೋತ್ರದ ವಿವರಣೆ ಎಂದು ತಿಳಿಯಬಹುದು.

೧೩. ಕೂರ್ಮ, ಕೃಷ್ಣ, ನರಸಿಂಹ, ಮಧುಸೂದನ ಮೊದಲಾದ ಇತರ ರೂಪಗಳನ್ನು ಇಲ್ಲಿ ಉಲ್ಲೇಖಿಸುವ ಮೂಲಕ ಒಂದರ್ಥದಲ್ಲಿ ಶ್ರೀಹರಿಯ ರೂಪರೂಪಗಳಿಗೆ ಭೇದವಿರದು ಎಂಬ ವಿಶೇಷಾಂಶವು ಸಹ ಸೂಚಿತ ಎಂದೂ ತಿಳಿಯಬಹುದು.

*****

## ೮. ಮೋಕ್ಷದಾಯಕ ರಕ್ಷಿಸು

**ಅಕ್ಷಯಾಶ್ರಿತ ಸುಜನಜನಸಂ-**
**ರಕ್ಷಣ ಶ್ರೀವತ್ಸಕೌಸ್ತುಭ**
**ಮೋಕ್ಷದಾಯಕ ಕುಟಿಲದಾನವಶಿಕ್ಷ ಕುಮುದಾಕ್ಷ ।**
**ಪಕ್ಷಿವಾಹನ ದೇವಸಂಕುಲ-**
**ಪಕ್ಷ ಜಗದಧ್ಯಕ್ಷ ವರ ನಿಟಿ-**
**ಲಾಕ್ಷಸಖ ಸರ್ವೇಶ ರಕ್ಷಿಸು ನಮ್ಮನನವರತ ॥ ೮ ॥**

**ಅ: ಕ್ಷಯವಿಲ್ಲದ ಮುಕ್ತರಿಂದ ಆಶ್ರಯಿಸಲ್ಪಟ್ಟವನೇ ! ಹುಟ್ಟು ಮೊದಲಾದವುಗಳು ಇಲ್ಲದ ಮಂಗಳಸ್ವರೂಪನೇ! ಸಜ್ಜನರನ್ನು ಸಂರಕ್ಷಿಸುವವನೇ! ಶ್ರೀವತ್ಸ ಹಾಗೂ ಕೌಸ್ತುಭಗಳನ್ನು ಧರಿಸಿದವನೇ! ಮೋಕ್ಷ ನೀಡುವವನೇ ! ವಕ್ರಸ್ವಭಾವದ ದಾನವರನ್ನು ಶಿಕ್ಷಿಸುವವನೇ! ಕಮಲನೇತ್ರನೇ! ಗರುಡವಾಹನನೇ! ದೇವತೆಗಳ ಗುಂಪಿನವರ ಪಕ್ಷವನ್ನು**

**ವಹಿಸುವವನೇ! ಜಗತ್ತಿಗೆ ಅಧ್ಯಕ್ಷನಾದವನೇ! ಶ್ರೇಷ್ಠನಾದವನೇ! ವಿರೂಪಾಕ್ಷನಾದ ಶ್ರೀರುದ್ರದೇವರಿಗೆ ಹಿತಕಾರಕನೇ! ಸರ್ವರಿಗೂ ಸ್ವಾಮಿಯಾದವನೇ ಶ್ರೀಹರಿಯೇ! ನೀನು ನಮ್ಮನ್ನು ಸದಾ ರಕ್ಷಿಸು.**

ವಿ: ೧. ಶ್ರೀಹರಿಯ ಬಗೆಬಗೆಯ ಮಹಿಮೆಗಳ ವರ್ಣನೆಯನ್ನು ಈ ಪದ್ಯದಲ್ಲಿ ಮುಂದುವರೆಸಿರುವರು.

೨. **ಅಕ್ಷಯಾಶ್ರಿತ** – ಅಕ್ಷಯರು ಎಂದರೆ ಕ್ಷಯವಿಲ್ಲದವರು; ಮತ್ತೊಮ್ಮೆ ಹುಟ್ಟಿಸಾಯುವ ಭಯವಿಲ್ಲದವರು – ಎಂದರೆ ಮುಕ್ತರು ಎಂದರ್ಥ; ಅವರಿಂದ ಆಶ್ರಯಿಸಲ್ಪಡುವವನು ಎಂದರೆ ಮುಕ್ತರಿಗೆ ಸ್ವಾಮಿ ಎಂದರ್ಥ: ಮುಕ್ತಾನಾಂ ಪರಮಾಗತಿಃ (ವಿಷ್ಣುಸಹಸ್ರನಾಮ). ನಿತ್ಯಲೋಕವಾದ ವೈಕುಂಠವೇ ಅಕ್ಷಯಲೋಕ[1]. ಅಲ್ಲಿ ನೆಲೆಸಿರುವವರು ಎಂದರೆ, ಮುಕ್ತರು ಎಂದರ್ಥ.

೩. **ಸುಜನ** – ಜನ ಎಂದರೆ ಹುಟ್ಟಿಲ್ಲದವನು (ನ ಜಾಯತೇ ಇತಿ ಜನಃ). ಮಹಾಲಕ್ಷ್ಮಿಯೂ ಸಹ ಹುಟ್ಟಿಲ್ಲದವರೇ ಆದರೂ ಶ್ರೀಹರಿಯು ಸ್ವಾತಂತ್ರ್ಯೇಣ ಆ ಗುಣ ಹೊಂದಿದವನು ಎಂಬುದನ್ನು ಸೂಚಿಸಲು ಸುಜನ ಎಂದಿರುವರು ಎಂದು ತಿಳಿಯಬೇಕು. ಜೀವರೂ ಸಹ ಹುಟ್ಟಿಲ್ಲದವರೇ ಆದರೂ ಹುಟ್ಟಿ ಸಾಯುವ ದೇಹವನ್ನು ಹೊಂದಿದವರು ಎಂಬ ಕಾರಣದಿಂದ ಅವರು ಈ ಗುಂಪಿಗೆ ಸೇರಲಾರರು.

೪. **ಜನಸಂರಕ್ಷಣ** – ಜನ – ಇಲ್ಲಿ ಜನ ಎಂದರೆ '**ಮತ್ತೆ ಹುಟ್ಟಿ ಬರದವರು**' ಎಂದರ್ಥ – ಎಂದರೆ ಮುಕ್ತರು ಎಂದು ತಾತ್ಪರ್ಯ. ಅವರಿಗೆ ರಕ್ಷಣೆ ನೀಡುವವನು ಎಂದು ಭಾವ. ಇದರಿಂದ ಮುಕ್ತರೂ ಸಹ ಭಗವದಧೀನರಾಗಿ ಅವನ ರಕ್ಷಣೆಯನ್ನು ಪಡೆಯುವವರು ಎಂಬ ವಿಶೇಷಾರ್ಥ ಸೂಚಿತವಾಗಿ ಮುಕ್ತಿ ಎಂದರೆ ಬ್ರಹ್ಮೈಕ್ಯ ಎಂಬ ಮಾಯಾವಾದವು ಬ್ರಹ್ಮಾನಂದಕ್ಕೆ ಸಮನಾದ ಆನಂದಾನುಭವ ಎಂಬ ವಿಶಿಷ್ಟಾದ್ವೈತದ ನಿಲುವೂ ಶಾಸ್ತ್ರಕ್ಕೆ ಸಮ್ಮತವಲ್ಲ ಎಂಬ ಅರ್ಥ ಸೂಚಿತ. ಸಕಲ ಲೋಕಗಳ ಸಜ್ಜನರನ್ನು ಸಹ ಸಂರಕ್ಷಿಸುವವನು ಎಂಬ ಅರ್ಥವೂ ಇಲ್ಲಿ ವಿವಕ್ಷಿತ.

೫. **ಶ್ರೀವತ್ಸಕೌಸ್ತುಭ** – ಶ್ರೀವತ್ಸ ಎಂಬುದು ಶ್ರೀಹರಿಯ ವಕ್ಷಸ್ಥಳದಲ್ಲಿ ಶೋಭಿಸುವ ಚಿಹ್ನೆ ಇದಕ್ಕೆ ಮಹಾಲಕ್ಷ್ಮಿಯೇ ಅಧಿದೇವತೆ (ಮ.ಭಾ.ತಾ.ನಿ.). ಕೌಸ್ತುಭ ಎಂಬುದು ಶ್ರೀಹರಿಯ ಕಂಠಮಣಿ. ಇದಕ್ಕೆ ಬ್ರಹ್ಮದೇವರು ಅಭಿಮಾನಿದೇವತೆ (**ಕೌಸ್ತುಭಂ ಬ್ರಹ್ಮಣೋ ರೂಪಮ್** – ಭಾ.ತಾ – ೩/೧೬/೩೯ ಇತ್ಯಾದಿ); ಇದರಿಂದ ಶ್ರೀಹರಿಯು ಲಕ್ಷ್ಮೀ ಹಾಗೂ ಬ್ರಹ್ಮಾದಿಗಳಿಗಿಂತ ಮಿಗಿಲಾದವನು – ಪುರುಷೋತ್ತಮ ಎಂಬ ಭಾವ ಸೂಚಿತ.

---

೧. ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ। – ಗೀತಾ (೮/೧೬)
ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ। – ಗೀತಾ (೧೫/೬)

೬. **ಮೋಕ್ಷದಾಯಕ** – ಮೋಕ್ಷವನ್ನು ನೀಡುವವನು; ಶ್ರೀಹರಿಯ ಕೃಪಾವಿಶೇಷದಿಂದ ಸೃಷ್ಟ್ಯಾದಿ ಇತರ ಕಾರ್ಯಗಳನ್ನು ಒಂದು ಹಂತದವರೆಗಾದರೂ ಮಾಡುವ ಸಾಮರ್ಥ್ಯ ಇತರ ದೇವತೆಗಳಿಗೆ ಇರುವುದುಂಟು. ಆದರೆ ಮೋಕ್ಷ ನೀಡುವವನು ಮಾತ್ರ ಸಾಕ್ಷಾತ್ ಶ್ರೀಹರಿಯೇ ಆಗಿರುವನು ಎಂಬುದು ಶಾಸ್ತ್ರಗಳ ಘೋಷಣೆ: '**ವಿಷ್ಣುರ್ಹಿ ದಾತಾ ಮೋಕ್ಷಸ್ಯ**' (ಮ.ಭಾ.ತಾ.ನಿ.); '**ಸರ್ವೇಷಾಂ ಮುಕ್ತಿದಾತಾ ಹಿ ವಿಷ್ಣುರೇವ ನ ಸಂಶಯಃ**' (ಹರಿವಂಶ); '**ಅಹಂ ಭೋಗಪ್ರದೋ ವತ್ಸ ಮೋಕ್ಷದಸ್ತು ಜನಾರ್ದನಃ**' (ಪದ್ಮಪುರಾಣ). ಮೋಕ್ಷವು ಪರಮಪುರುಷಾರ್ಥ; ಅದನ್ನು ನೀಡುವ ಶ್ರೀಹರಿಯು ಸರ್ವೋತ್ತಮ ಎಂಬ ತತ್ತ್ವವೂ ಇದರಿಂದ ಸೂಚಿತ.

೭. **ಕುಟಿಲದಾನವಶಿಕ್ಷ** – ಕುಟಿಲರು ಎಂದರೆ ವಕ್ರಸ್ವಭಾವದವರು; ಮನಸ್ಸು ಮಾತು ಹಾಗೂ ವರ್ತನೆಯಲ್ಲಿ ಕಪಟಹೊಂದಿದವರು (**ಮನಸ್ಯನ್ಯತ್ ವಚಸ್ಯನ್ಯತ್ ಕರ್ಮಣ್ಯನ್ಯತ್ ದುರಾತ್ಮನಾಂ**) ಎಂದರ್ಥ. ದಾನವರು ಎಂದರೆ ಕುಟಿಲರೇ; ಆದರೆ ಬಲಿಚಕ್ರವರ್ತಿ ಮೊದಲಾದವರ ಅನುಯಾಯಿಗಳಲ್ಲಿ ಸೇರಿದವರ ಕೆಲವು ದಾನವರು ದಾನವಯೋನಿಯಲ್ಲಿ ಜನಿಸಿದ್ದರೂ ಸ್ವರೂಪತಃ ವಕ್ರಸ್ವಭಾವದವರಲ್ಲ; ಪ್ರಹ್ಲಾದನು ದೈತ್ಯನಾಗಿದ್ದರೂ ದೈತ್ಯಸ್ವಭಾವದವನಾಗಿರದೇ ದೇವಸ್ವಭಾವದವನಾಗಿದ್ದಂತೆ ಎಂಬುದನ್ನು ಸೂಚಿಸಲು ಕುಟಿಲದಾನವಶಿಕ್ಷ ಎಂದಿರುವರು ಎಂದು ತಿಳಿಯಬೇಕು[೧].

೮. **ಕುಮುದಾಕ್ಷ** – ಕುಮುದ ಎಂದರೆ ಕನ್ನೈದಿಲೆ; ಇಲ್ಲಿ ಕಮಲ ಎಂಬ ಅರ್ಥವಷ್ಟೇ ವಿವಕ್ಷಿತ ಎಂದು ತಿಳಿಯಬೇಕು. ಶ್ರೀಹರಿಯು ಪುಂಡರೀಕಾಕ್ಷ ಎಂದು ಒಟ್ಟು ಭಾವ. ಅರಳಿ ಆಹ್ಲಾದಕರವಾಗಿರುವುದು ಕಮಲಕುಮುದಗಳಲ್ಲಿನ ಸಾಮ್ಯಾಂಶ; ಈ ಹಿನ್ನೆಲೆಯಲ್ಲಿ ಪುಂಡರೀಕಾಕ್ಷ, ಕಮಲಾಕ್ಷ ಎಂಬ ಪದಗಳು ಸಮಾನಾರ್ಥಕವೆನ್ನಿಸುವವು.

೯. **ಪಕ್ಷಿವಾಹನ** – ಪಕ್ಷಿ ಎಂದರೆ ಗರುಡಪಕ್ಷಿ; ಪಕ್ಷಿವಾಹನ ಎಂದರೆ ಪಕ್ಷಿಗಳ ರಾಜನಾದ ಗರುಡನನ್ನು ವಾಹನವನ್ನಾಗಿ ಹೊಂದಿದವನು ಎಂದರ್ಥ. ಇದೂ ಸಹ ಶ್ರೀಹರಿಯ ಸರ್ವೋತ್ತಮತ್ವಕ್ಕೆ ಕಾರಣ. ಇತರ ದೇವತೆಗಳಾರೂ ಹೀಗೆ ಗಗನದಲ್ಲಿ ಸಂಚರಿಸುವ ಅದ್ಭುತ ವಾಹನವನ್ನು ಹೊಂದಿಲ್ಲ ಎಂಬುದು ಗಮನಾರ್ಹ. ಗರುಡ ಸಾಮಾನ್ಯನಾಗಿರದೆ ಶೇಷರುದ್ರರಿಗೆ ಸಮಾನರಾದ ಮಹಾದೇವತೆಯಾಗಿರುವನು ಹಾಗೂ ಕಾಲಕ್ಕೆ ಅಭಿಮಾನಿದೇವತೆಯೂ ಆಗಿರುವನು. ಗರುಡವಾಹನ ಎಂಬುದಕ್ಕೆ ಗರುಡನ ಮೇಲೆ ಕುಳಿತವನು ಎಂಬ ಅರ್ಥದಿಂದಾಗಿ ಶ್ರೀಹರಿಯು ಕಾಲನಿಯಾಮಕ; ಕಾಲದ ಯಾವುದೇ ಪರಿಣಾಮಕ್ಕೂ ಒಳಗಾಗದ ಅಕ್ಷರಪುರುಷ ಎಂಬ ವಿಶೇಷಾಂಶ ತಿಳಿಯುವುದು. ಮಹಾಲಕ್ಷ್ಮಿಯೂ ಹೀಗೆ ವಿಷ್ಣುವಿನೊಂದಿಗೆ ಗರುಡನ ಮೇಲೆ ಕುಳಿತಿರುವುದರಿಂದ ಅವರೂ ಸಹ ಕಾಲಕ್ಕೆ ನಿಯಾಮಕರಾದ ಅಧಿದೇವತೆ ಎಂಬುದು ಸಿದ್ಧವಾಗುವುದು.

---

೧. ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಮ್ । – ಗೀತಾ (೧೦/೩೦)

ದೇವಾಃ ಶಾಪಬಲಾದೇವ ಪ್ರಹ್ಲಾದಾದಿತ್ವಮಾಗತಾಃ । – ಗೀತಾಭಾಷ್ಯ (೨/೭೨)

೧೦. **ದೇವಸಂಕುಲಪಕ್ಷ** – ದೇವಸಂಕುಲ ಎಂದರೆ ದೇವತೆಗಳ ಸಮುದಾಯ; ಅದನ್ನು ಅನುಗ್ರಹಿಸುವವನು ಎಂದರ್ಥ. ಸಕಲದೇವತೆಗಳಿಗೂ ಆಸರೆ ನೀಡಿ ಉದ್ಧರಿಸುವವನು ಎಂದು ಭಾವ. ಇಲ್ಲಿ ದೇವಸಂಕುಲ ಎಂಬುದಕ್ಕೆ ಬ್ರಹ್ಮದೇವರನ್ನೂ ಒಳಗೊಂಡಂತೆ ಸಕಲ ದೇವತಾಸಮುದಾಯವೂ ವಿವಕ್ಷಿತ ಎಂದು ತಿಳಿಯಬೇಕು.

೧೧. **ಜಗದಧ್ಯಕ್ಷ** – ಜಗತ್ತಿಗೆ ಅಧ್ಯಕ್ಷನಾದವನು; ಸಕಲಜಗತ್ತಿನ ಸಕಲವ್ಯಾಪಾರವನ್ನೂ ಸಾಕ್ಷಾತ್ತಾಗಿ ನೋಡುವವನು ಎಂದರ್ಥ: **ಲೋಕಾಧ್ಯಕ್ಷಃ ಸುರಾಧ್ಯಕ್ಷಃ** (ವಿಷ್ಣುಸಹಸ್ರನಾಮ); **ಮಯಾಽಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್** (ಗೀತಾ). ಜಗತ್ ಎಂದರೆ ವಾಯು ಎಂಬ ಅರ್ಥವೂ ಇದೆ. ವಾಯುದೇವರನ್ನೂ ಸಹ ಸಾಕ್ಷಾತ್ತಾಗಿ ಸರ್ವಾತ್ಮನಾ ಈಕ್ಷಿಸಿ ನಿಯಂತ್ರಿಸುವವನು ಎಂಬ ಅರ್ಥ ಇದರಿಂದ ತೆರೆದುಕೊಳ್ಳುವುದು.

೧೨. **ವರ** – ವರ ಎಂದರೆ ಶ್ರೇಷ್ಠ ಎಂದರ್ಥ; ಮಹಾಲಕ್ಷ್ಮಿಗೂ ವರನಾದ ಶ್ರೀಹರಿ ಸರ್ವಶ್ರೇಷ್ಠ ಎಂಬುದು ತಾತ್ಪರ್ಯ: **ವ್ರಿಯತೇ ಇತಿ ವರಃ** ಎಂಬ ನಿರ್ವಚನದಿಂದ ರಮಾಬ್ರಹ್ಮಾದಿ ಸಕಲದೇವತೆಗಳ ಪರಮಭಕ್ತಿಗೆ ಪಾತ್ರನಾದವನು ಎಂಬ ಅರ್ಥ ಸೂಚಿತ.

೧೩. **ನಿಟಲಾಕ್ಷಸಖ** – ನಿಟಲಾಕ್ಷ ಎಂದರೆ ಹಣೆಯಲ್ಲಿ ಕಣ್ಣುಳ್ಳ ಶ್ರೀರುದ್ರದೇವರು ಎಂದರ್ಥ; ವಿರೂಪಾಕ್ಷ ಎಂದು ತಾತ್ಪರ್ಯ; ಸಖ ಎಂಬುದಕ್ಕೆ ಮಿತ್ರ, ಸ್ನೇಹಿತ ಎಂಬುದು ಸಾಮಾನ್ಯ ಅರ್ಥ. ಆದರೆ ಅನಾದಿ ಕಾಲದಿಂದ ಅನಂತಕಾಲದವರೆಗೆ ಎಡಬಿಡದೆ ರಕ್ಷಿಸುವವನು ಎಂಬುದು ಮುಖ್ಯಾರ್ಥ. ಈ ಅರ್ಥದಲ್ಲಿ ಶ್ರೀಹರಿಯೊಬ್ಬನೇ ಸರ್ವರಿಗೂ ಸಖ. ರುದ್ರದೇವರಿಗೂ ಸಂರಕ್ಷಕ ಶ್ರೀಹರಿ ಎಂಬುದು ಭಾವ: **ನನು ಸಖಾ ಮಮ ಕಾನನಗೋ ವಿಭುಃ** (ಸುಮಧ್ವವಿಜಯ).

೧೪. **ಸರ್ವೇಶ** – ಸರ್ವರಿಗೂ ಒಡೆಯ; ಇದನ್ನು ಸರ್ವ ಹಾಗೂ ಈಶ ಎಂಬುದಾಗಿ ಎರಡು ಪ್ರತ್ಯೇಕ ಪದಗಳನ್ನಾಗಿಯೂ ಓದಿಕೊಳ್ಳಬಹುದು. ಸರ್ವ ಎಂದರೆ ಸರ್ವಸ್ವಾಮಿ ಎಂದರ್ಥ: **ಸರ್ವಃ ಶರ್ವಃ ಶಿವಃ ಸ್ಥಾಣುಃ** (ವಿಷ್ಣುಸಹಸ್ರನಾಮ): **ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ** (ಗೀತಾ); **ಸರ್ವಂ ಖಲ್ವಿದಂ ಬ್ರಹ್ಮ** (ಉಪನಿಷತ್); **ಸರ್ವಂ ಸಮಾಪ್ನೋಷಿ ತತೋಽಸಿ ಸರ್ವ** (ಗೀತಾ).

*****

## ೯. ಶಶಿರವಿನೇತ್ರ ರಕ್ಷಿಸು

**ಚಿತ್ರಕೂಟನಿವಾಸ ವಿಶ್ವಾ-**
**ಮಿತ್ರಕ್ರತುಸಂರಕ್ಷ ಶಶಿರವಿ-**
**ನೇತ್ರ ಭವ್ಯಚರಿತ್ರ ಸದ್ಗುಣಗಾತ್ರ ಸತ್ಪಾತ್ರ ।**

ಧಾತ್ರಿಜಾಂತಕ ಕಪಟನಾಟಕ-
ಸೂತ್ರ ಪರಮಪವಿತ್ರ ಫಲ್ಗುಣ-
ಮಿತ್ರ ವಾಕ್ಯವಿಚಿತ್ರ ರಕ್ಷಿಸು ನಮ್ಮನನವರತ ॥ ೯ ॥

ಅ: ಚಿತ್ರಕೂಟದಲ್ಲಿ ನೆಲೆಸಿದ, ವಿಶ್ವಾಮಿತ್ರಮುನಿಗಳ ಯಜ್ಞವನ್ನು ಸಂರಕ್ಷಣೆ ಮಾಡಿದ, ಸೂರ್ಯಚಂದ್ರರು ನೆಲೆಸಿದ ಕಣ್ಣುಗಳ, ಮಂಗಳಕರವಾದ ಜೀವನದ, ಸದ್ಗುಣಗಳನ್ನೇ ಆಕೃತಿಯನ್ನಾಗಿ ಉಳ್ಳ, ಉತ್ತಮವಾದ ಅರ್ಹತೆಯನ್ನು ಹೊಂದಿದ, ಭೂಮಿಪುತ್ರನಾದ ನರಕಾಸುರನನ್ನು ಸಂಹರಿಸಿದ, ಕಪಟನಾಟಕಸೂತ್ರಧಾರಿಯಾದ, ಪರಮಪವಿತ್ರನಾದ, ಅರ್ಜುನನಿಗೆ ಹಿತೈಷಿಯಾದ. ಚಿತ್ರವಿಚಿತ್ರ ಮಾತುಗಳನ್ನಾಡುವ ಶ್ರೀಹರಿಯೇ! ನೀನು ನಮ್ಮನ್ನು ಸದಾ ರಕ್ಷಿಸು.

ವಿ.: ೧. ಶ್ರೀಹರಿಯ ಶ್ರೀಕೃಷ್ಣ ರಾಮರೂಪದ ಸ್ತೋತ್ರ ಇದರಲ್ಲೂ ಮುಂದುವರೆದಿದೆ.

೨. **ಚಿತ್ರಕೂಟನಿವಾಸ**: ಶ್ರೀರಾಮನು ಸೀತಾ ಲಕ್ಷ್ಮಣ ಸಮೇತನಾಗಿ ವನವಾಸಕ್ಕೆ ದಂಡಕಾರಣ್ಯಕ್ಕೆ ತೆರಳುತ್ತಾ ಮಾರ್ಗಮಧ್ಯದಲ್ಲಿ ಕೆಲವು ದಿನಗಳ ಕಾಲ ಚಿತ್ರಕೂಟದಲ್ಲಿ ನೆಲೆಸಿದ್ದನು. ಭರತನು ಶ್ರೀರಾಮನನ್ನು ಅಯೋಧ್ಯಗೆ ಮರಳಿ ಕರೆತರಲೆಂದು ಸಂದರ್ಶಸಿದ್ದು ಶ್ರೀರಾಮನ ಪಾದುಕೆಗಳನ್ನು ಪಡೆದದ್ದು ಈ ಸ್ಥಳದಲ್ಲಿಯೇ. ಶ್ರೀರಾಮನ ಆದೇಶದಂತೆ ಲಕ್ಷ್ಮಣನು ಪರ್ಣಕುಟಿಯೊಂದನ್ನು ಇಲ್ಲಿ ನಿರ್ಮಿಸಿದ ವಿವರವು ವಾಲ್ಮೀಕಿ ರಾಮಾಯಣದಲ್ಲಿದೆ. ಶ್ರೀರಾಮನು ಸ್ವತಃ ಸದಾನಂದ ಭರಿತನಾದ ಸಾಕ್ಷಾತ್ ಶ್ರೀಹರಿಯೇ ಆದ್ದರಿಂದ ಇಲ್ಲಿಯೂ ಅಂತೆಯೆ ಪರಮಾನಂದದಿಂದಲೇ ನೆಲೆಸಿದ್ದನು ಎಂಬ ವಿಶೇಷ ವಿವರ ಮಹಾಭಾರತತಾತ್ಪರ್ಯನಿರ್ಣಯದಲ್ಲಿದೆ: **ಕತಿಪಯದಿವಸಾನ್ಯತ್ರ ಮೋದನ್ನುವಾಸ**(೫/೪).

೩. ಚಿತ್ರಕೂಟ ಎಂಬುದಕ್ಕೆ ಚಿತ್ರವಿಚಿತ್ರವಾದ ಭಗವಂತನ ಮಹಿಮೆಯನ್ನು ಪ್ರತಿಪಾದಿಸುವ ಸಚ್ಛಾಸ್ತ್ರಗಳ ಸಮುದಾಯ[೧] ಎಂದೂ ಅರ್ಥವಾಗುವುದು. ಅಂತಹ ಶಾಸ್ತ್ರಪ್ರಪಂಚದಲ್ಲಿ ಸದಾ ಪ್ರತಿಪಾದತ್ವೇನ ನೆಲೆಸಿದವನು ಎಂಬುದು ಇದರ ಅಂತರಾರ್ಥ. ಯಮಕಭಾರತ ಮೊದಲಾದ ಸತ್ಕಾವ್ಯ ರೂಪವಾದ ಶಾಸ್ತ್ರಕೃತಿಗಳಲ್ಲೂ ಮುಖ್ಯತಃ ಪ್ರತಿಪಾದ್ಯನಾದವನು ಎಂಬ ಅರ್ಥವೂ ವಿವಕ್ಷಿತ.

೪. **ವಿಶ್ವಾಮಿತ್ರಕ್ರತುಸಂರಕ್ಷ**: ವಿಶ್ವಾಮಿತ್ರ ಮುನಿಗಳು ಲೋಕಕಲ್ಯಾಣಕ್ಕೆಂದು ಸಿದ್ಧಾಶ್ರಮ ಎಂಬಲ್ಲಿ ಹಮ್ಮಿಕೊಂಡಿದ್ದ ಯಜ್ಞವನ್ನು ಮಾರೀಚ, ಸುಬಾಹುಗಳ ನೇತೃತ್ವದಲ್ಲಿ ಅಸುರರು

---

೧. ಕ್ವಚಿದ್ಧಂಸಂ ಚಿತ್ರಕಥಮ್ ॥ - ಶ್ರೀಮದ್ಭಾಗವತ (೬/೫/೮)
ಐಶ್ವರಂ ಶಾಸ್ತ್ರಮುತ್ಸೃಜ್ಯ ಬಂಧಮೋಕ್ಷಾನುದರ್ಶನಮ್ ।
ವಿವಿಕ್ತಪದಮಜ್ಞಾತ್ವಾ ಕಿಮಸತ್ಕರ್ಮಭಿರ್ಭವೇತ್ ॥ - ಶ್ರೀಮದ್ಭಾಗವತ (೬/೫/೧೮)

ಹಾಳು ಮಾಡುತ್ತಿದ್ದಾಗ, ಅದರ ರಕ್ಷಣೆಗಾಗಿ ವಿಶ್ವಾಮಿತ್ರರು ಶ್ರೀರಾಮನನ್ನು ಕರೆತಂದು, ಆ ಅಸುರರ ವಿಘ್ನವನ್ನು ತಪ್ಪಿಸಿ, ಯಜ್ಞವನ್ನು ಪೂರೈಸಿದರು. ಮಾರೀಚನಿಗೆ ಬ್ರಹ್ಮದೇವರ ವರ, ಸುಬಾಹುವಿಗೆ ಶಿವನ ವರ; ಹೀಗೆ ಬ್ರಹ್ಮರುದ್ರರ ವರದಿಂದಾಗಿ ಇತರರಿಂದ ಅವಧ್ಯರಾಗಿದ್ದ ಅವರಿಂದ ಒದಗಿದ್ದ ವಿಘ್ನವನ್ನು ಪರಿಹರಿಸಿದ ಶ್ರೀರಾಮ ಸಾಕ್ಷಾತ್ ಸರ್ವೋತ್ತಮನಾದ ಶ್ರೀಹರಿ ಎಂದು ಸ್ಫುಟಪಡುವುದು; **ಕ್ರತು** – ಯಜ್ಞ.

೫. **ಶಶಿರವಿನೇತ್ರ**: ಶ್ರೀಹರಿಯ ಕಣ್ಣುಗಳನ್ನು ಆಶ್ರಯಿಸಿ, ಸೂರ್ಯಚಂದ್ರರು ನೆಲೆಸಿದ್ದು ಅದರಿಂದಾಗಿಯೇ ಅವರಿಗೆ ಬೆಳಕು ಕೊಡುವ ಸಾಮರ್ಥ್ಯ ಲಭಿಸಿರುವುದು ಶಾಸ್ತ್ರದಲ್ಲಿ ಪ್ರಸಿದ್ಧ:

**ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ ।**
**ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್॥**
– (ಭಗವದ್ಗೀತೆ ೧೫/೧೨)

**ಶಶಿ** – ಚಂದ್ರ.

೬. ವಿಶ್ವರೂಪದರ್ಶನಕಾಲದಲ್ಲಿ ಅರ್ಜುನನು ಇದನ್ನು ಸಾಕ್ಷಾತ್ಕರಿಸಿಕೊಂಡ ವಿವರ ಗೀತೆಯಲ್ಲಿದೆ: **ಶಶಿಸೂರ್ಯನೇತ್ರಮ್** (೧೧/೧೯). ಹೀಗೆ ಲೋಕವನ್ನೇ ಬೆಳಗುವ ಸೂರ್ಯಚಂದ್ರರಿಗೆ ಅವರಲ್ಲಿದ್ದು ಆ ಸಾಮರ್ಥ್ಯ ನೀಡುವ ಶ್ರೀಹರಿ ಸರ್ವೋತ್ತಮ ಎಂಬುದು ಇದರ ಭಾವ.

೭. ಸೂರ್ಯವಂಶ, ಚಂದ್ರವಂಶಗಳ ರಾಜರು ಬಹುಕಾಲ ಭೂಮಿಯನ್ನು ಪಾಲಿಸಿದ ವಿವರ ಶ್ರೀಮದ್ಭಾಗವತ, ಹರಿವಂಶಾದಿಗಳಲ್ಲಿ ವಿವರವಾಗಿ ನಿರೂಪಿತವಾಗಿದೆ. ಸೂರ್ಯ–ಚಂದ್ರರಂತೆ ಪ್ರಜೆಗಳ ಜೀವನಕ್ಕೆ ಬೆಳಕಾಗಿ ಬಾಳಿದ ಹಿರಿಮೆ ಆ ವಂಶದ ರಾಜರದು. ಆ ವಂಶದ ಪ್ರವರ್ತಕರಾದ ಸೂರ್ಯಚಂದ್ರರು ಶ್ರೀಹರಿಯ ಕಣ್ಣುಗಳಲ್ಲಿ ನೆಲೆಸಿದ್ದ ಆ ಮೂಲಕ ಅಂತಹ ಸಾಮರ್ಥ್ಯಾತಿಶಯವನ್ನು ಪಡೆದುಕೊಂಡರು ಎಂಬ ಧ್ವನಿಯೂ ಇದರಲ್ಲಿ ಇದೆ.

೮. **ಭವ್ಯಚರಿತ್ರ**: ಭವ್ಯ ಎಂದರೆ ಮಂಗಳ; ಭವ್ಯಚರಿತ್ರ ಎಂದರೆ ಮಂಗಳಕವಾದ ಚರಿತ್ರೆ ಹೊಂದಿದವನು ಎಂದರ್ಥ. ಶ್ರೀರಾಘವೇಂದ್ರಸ್ವಾಮಿಗಳ ಶ್ರೀರಾಮಚಾರಿತ್ರಮಂಜರೀ, ಶ್ರೀಕೃಷ್ಣಚಾರಿತ್ರಮಂಜರೀ ಕೃತಿಗಳ ಹೆಸರಿನಲ್ಲಿ ಈ ವಿಷಯ ಸೂಚಿತವಾಗಿರುವುದನ್ನು ಗಮನಿಸಬಹುದು. ಶ್ರೀಹರಿಯ ಅವತಾರಗಳೂ ಸಹ ಮೂಲರೂಪದಂತೆ ಪರಿಪೂರ್ಣವಾಗಿ ಮಂಗಲಸ್ವರೂಪವುಳ್ಳವುಗಳು ಎಂಬುದು ಈ ಪದದ ಭಾವ. ಇದರಿಂದ ಮೇಲ್ನೋಟಕ್ಕೆ ಸಂದೇಹಾಸ್ಪದವೆಂದು ತೋರುವ ವಾಲಿವಧೆ, ಸೀತಾಪರಿತ್ಯಾಗ, ಶಂಬೂಕವಧೆ ಮೊದಲಾದ ಪ್ರಸಂಗಗಳು ಸಹ ಶ್ರೀರಾಮನ ಪಾವಿತ್ರ್ಯವನ್ನು ಚಿತ್ರಿಸುವ ಪ್ರಸಂಗಗಳೇ ಆಗಿವೆ ಎಂಬ ವಿಶೇಷಾಂಶ ದೃಢಪಡುವುದು.

೯. **ಸದ್ಗುಣಗಾತ್ರ**: ಶ್ರೀಹರಿಯ ಮೂಲರೂಪದಂತೆ ಅವತಾರರೂಪಗಳೂ ಸಹ ಜ್ಞಾನಾನಂದಮಯವಾದ ಸದ್ಗುಣಸ್ವರೂಪದ ಆಕೃತಿಯನ್ನು ಹೊಂದಿವೆ ಎಂಬ ವಿಶೇಷಾಂಶ ಇದರಿಂದ ಸೂಚಿತ. ಇದು ಸಹ ಶ್ರೀಹರಿಗೆ ಸರ್ವಥಾ ಪ್ರಾಕೃತದೇಹವಿಲ್ಲ ಎಂಬ ಪ್ರಮೇಯವನ್ನು ತಿಳಿಸುವ ಅಪೂರ್ವವಾದ ಪದ; **ಗಾತ್ರ** – ಶರೀರ.

೧೦. **ಸತ್ಪಾತ್ರ**: ಸತ್ ಎಂದರೆ ಉತ್ತಮ ಎಂದರ್ಥ(**ಸಚ್ಛಬ್ದಃ ಉತ್ತಮಂ ಬ್ರೂಯಾತ್**). ಶ್ರೀಹರಿಯಂತೆ ಉತ್ತಮವಾದ ಅರ್ಹತೆಯನ್ನು ಸರ್ವರೀತಿಯಲ್ಲೂ ಪಡೆದ ಮತ್ತೊಬ್ಬ ದೇವತೆ ಇಲ್ಲ ಎಂದು ಇದರ ಭಾವ. ಪಾತ್ರರಿಗೆ ದಾನಾದಿಗಳನ್ನು ಸಮರ್ಪಿಸುವುದು ವಿಹಿತ. ಶ್ರೀಹರಿಯು ಹೀಗೆ ಸತ್ಪಾತ್ರನಾದ್ದರಿಂದ ಅವನಿಗೆ ಸಕಲ ಪದಾರ್ಥಗಳು ಸರ್ವಾತ್ಮನಾ ಸಮರ್ಪಿತವಾಗಲೇಬೇಕು ಎಂಬ ತತ್ವವೂ ಸೂಚಿತ: **ಕಾಯೇನ ವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾತ್ಮನಾ ವಾಽನುಸೃತಸ್ವಭಾವಃ। ಕರೋತಿ ಯದ್ಯತ್ ಸಕಲಂ ಪರಸ್ಮೈ ನಾರಾಯಣೇತಿ ಸಮರ್ಪಯೇತ್ ತತ್**. ಸತ್ ಎಂದರೆ ವಾಯು ಎಂಬುದು ಮತ್ತೊಂದು ಅರ್ಥ: ಸದಿತಿ ಪ್ರಾಣಃ. ಮುಖ್ಯಪ್ರಾಣನಿಗೆ ಪಾತ್ರೆಯಂತೆ ಆಧಾರನಾದವನು ಶ್ರೀಹರಿ ಎಂಬುದು ಇದರ ಅರ್ಥ. ಶ್ರೀಕೃಷ್ಣರಾಮರೂಪಗಳು ಹನುಮಂತ ಹಾಗೂ ಭೀಮಸೇನ ಎಂಬ ಮುಖ್ಯಪ್ರಾಣನ ರೂಪಗಳಿಂದ ವಿಶೇಷವಾಗಿ ಆರಾಧಿತ ಎಂಬುದು ಸುಪ್ರಸಿದ್ಧವಾದ ವಿವರ. ಜೀವೋತ್ತಮರಾದ ಮುಖ್ಯಪ್ರಾಣನಿಗೆ ಆಸರೆಯಾದ ಶ್ರೀಹರಿ ಸರ್ವೋತ್ತಮ ಎಂದರ್ಥ: **ಪ್ರಾಣಸ್ಯ ಪ್ರಾಣಃ**.

೧೧. **ಧಾತ್ರಿಜಾಂತಕ**: ಧಾತ್ರಿ ಎಂದರೆ ಭೂಮಿ; ಧಾತ್ರಿಜ ಎಂದರೆ ಭೂಮಿಪುತ್ರನಾದ ನರಕಾಸುರ. ಬ್ರಹ್ಮವರದಿಂದ ಅವಧ್ಯನಾಗಿದ್ದ ಅವನನ್ನು ಶ್ರೀಕೃಷ್ಣ ಅನಾಯಾಸದಿಂದ ಸಂಹರಿಸಿದ ವಿವರ ಶ್ರೀಮದ್ಭಾಗವತಾದಿಗಳಲ್ಲಿ ಬಂದಿದೆ.

೧೨. **ಕಪಟನಾಟಕಸೂತ್ರ**: ಕಪಟ ಎಂದು ತೋರುವ ವರ್ತನೆಯಿಂದ ಅಸುರರನ್ನು ಸದೆಬಡಿಯುವವನು ಶ್ರೀಹರಿ ಎಂದರ್ಥ. ಶ್ರೀಹರಿಯ ವರ್ತನೆ ಕಪಟ ಎಂಬುದು ಇದರ ಭಾವ. ಕಪಟಿಗಳಿಗಾಗಿ ಕಪಟವನ್ನು ತೋರುವುದು ಶಾಸ್ತ್ರವಿಹಿತವಾದ ಮಾರ್ಗ: **ನಿಕೃತ್ಯಾ ನಿಕೃತಿಂ ಹನ್ಯಾತ್**. ಮತ್ತೊಂದು ರೀತಿಯಲ್ಲಿ ತಾನು ಅಸುರರಿಗೆ ತೋರುವುದು ಕಪಟ ಮಾತ್ರ, ವಸ್ತುಸ್ಥಿತಿಯನ್ನಲ್ಲ ಎಂಬ ಅರ್ಥವೂ ಇದಕ್ಕೆ ಉಂಟು. ಮಹಾಭಾರತವು ಒಂದು ಕಪಟನಾಟಕವಿದ್ದಂತೆ. ಅದಕ್ಕೆ ಸೂತ್ರಧಾರ ಶ್ರೀಕೃಷ್ಣ ಎಂದರ್ಥ. ಶ್ರೀಕನಕದಾಸರು ತಮ್ಮ ಕೃತಿಯೊಂದರಲ್ಲಿ ಶ್ರೀಕೃಷ್ಣನು ಮಹಾಭಾರತವನ್ನು ಬೊಂಬೆಯಾಟದಂತೆ ಮಾಡಿದ ಅಪೂರ್ವ ವಿವರಗಳನ್ನು ನೀಡಿರುವರು[೧].

---

೧. ಬೊಂಬೆಯಾಟವನಾಡಿಸಿದೆ ಮಹಾಭಾರತವ ॥ ಪ ॥
ಅಂಬುಜಭವಾದಿ ಯಾದವರು ಈಕ್ಷಿಸಲು ॥ ಅಪ ॥
ಕುರುಭೂಮಿಯೆಂಬ ಪರಭೂಮಿಯಲಿ ರಂಜಿಸಲು

೧೩. **ಪರಮಪವಿತ್ರ** : ಶ್ರೀಹರಿಯು ಪವಿತ್ರವಸ್ತುಗಳಲ್ಲಿಯೂ ಅತ್ಯಂತ ಪವಿತ್ರನಾದವನು ಮಾತ್ರವಲ್ಲದೆ, ಪ್ರತಿಯೊಂದು ಪವಿತ್ರ ವಸ್ತುವಿಗೂ ಸಹ ಪಾವಿತ್ರ್ಯವನ್ನು ನೀಡುವವನು ಎಂದರ್ಥ: **ಪವಿತ್ರಾಣಾಂ ಪವಿತ್ರಂ ಯೋ ಮಂಗಲಾನಾಂ ಚ ಮಂಗಲಮ್.** ಪವಿತ್ರ ಎಂಬುದಕ್ಕೆ **ಪವಿಮ್ ತ್ರಾತಿ** ಎಂಬ ವ್ಯುತ್ಪತ್ತಿಯಿಂದ ವಜ್ರಾಯುಧದಂತೆ ರಕ್ಷಣೆ ನೀಡುವವನು ಎಂಬ ಅರ್ಥ ಲಭಿಸುವುದು. ತನ್ನ ಭಕ್ತರನ್ನು ಶ್ರೀಹರಿ ವಜ್ರಕವಚದಂತೆ ಸಂರಕ್ಷಿಸುವನು ಎಂಬ ಭಾವ ಇದರಿಂದ ಸೂಚಿತ.

೧೪. **ಫಲ್ಗುಣಮಿತ್ರ**: ಫಲ್ಗುಣ ಎಂದರೆ ಅರ್ಜುನ; ಶ್ರೀಕೃಷ್ಣ ಅವತರಿಸಿದ ವರ್ಷದ ಫಾಲ್ಗುಣಮಾಸದಲ್ಲಿ ಜನಿಸಿದ್ದರಿಂದ ಅರ್ಜುನನಿಗೆ ಫಲ್ಗುಣ ಎಂದು ಹೆಸರು. ಮಿತ್ರ ಎಂದರೆ ಸ್ನೇಹಿತ ಎಂಬುದು ಲೋಕರೂಢಿಯ ಅರ್ಥ. ಆಪತ್ತುಗಳನ್ನು ಅರಿತು ಸಂರಕ್ಷಿಸುವ ಹಿತೈಷಿ ಎಂಬುದು ಶಾಸ್ತ್ರಗಳಲ್ಲಿ ಬಂದಿರುವ ಅರ್ಥ: **ಮಿನೋತಿ ತ್ರಾಯತೇ ಚೇತಿ ಮಿತ್ರಮಿತ್ಯಭಿಧೀಯತೇ.** ಶ್ರೀಹರಿಯು ಸಕಲಭಕ್ತರಿಗೂ ಸಹ ಅನಾದಿಕಾಲದಿಂದಲೂ ಮಿತ್ರನೇ ಆಗಿರುವನು. ಮುಖ್ಯಪ್ರಾಣನಿಗೆ ಮಾತ್ರ ವಿಶೇಷ ಮಿತ್ರ: **ಮಮಾಭ್ಯಧಿಕಮಿತ್ರಾಯ ನಮೋ ನಾರಾಯಣಾಯ ತೇ** – (ಈಶಾವಾಸ್ಯಭಾಷ್ಯ). ಅರ್ಜುನನಲ್ಲಿ ವೀರನಾಮಕ ವಾಯುದೇವರ

---

ಮರೆಯ ಮಾಯಾಮಯದ ತೆರೆಯ ಹಿಡಿದು
ಧರಣೀಶರೆಂಬ ನರಪ್ರತಿಮೆಗಳನಳವಡಿಸಿ
ನರನ ಹಯರಥದ ವಾಘೆಯ ಸೂತ್ರವಿಡಿದು ॥ ೧ ॥

ಓದುವನು ನಾರದನು ವಾದ್ಯಕಾರನು ಶಂಭು
ಬಾದರಾಯಣನೇ ಕಥಾಪ್ರಸಂಗಿ
ಮೇದಿನಿಯ ಹೊರೆಗಳೆವ ಮೃತ್ಯುವಿನ ಹಾಸ್ಯರಸ
ವೇದನಿಕರಗಳು ಕೈವಾರಿಸುತಲಿರಲು ॥ ೨ ॥

ಹದಿನೆಂಟಕ್ಷೋಹಿಣಿ ಮಾರ್ಬಲವ ಹದಿನೆಂಟು ದಿನ
ಕದನನಾಟ್ಯದ ಕೇಳಿಕೆಯನಾಡಿಸಿ
ಅದರೊಳೈವರನುಳುಹಿ ಅವನಿಭಾರವನಿಳುಹಿ
ಮುದದಿ ಬ್ರಹ್ಮನ ಕಪಾಲವ ಸಿದ್ಧಗೊಳಿಸಿ ॥ ೩ ॥

ಲೋಕದೊಳು ಐದನೆಯ ವೇದವೀ ಕಥೆಯೆನಿಸಿ
ಪಾಕಶಾಸನನ ಸಭೆಯನು ಮೆಚ್ಚಿಸಿ
ಈ ಕಥೆಯ ಕೇಳ್ದ ಜನಮೇಜಯನ ಪತಿಕರಿಸಿ
ತಾ ಕಪಟನಾಟಕದ ಸೂತ್ರಧಾರನೆನಿಸಿ ॥ ೪ ॥

ಇಂತೆಸೆವ ಲೀಲಾವಿನೋದ ರಚನೆಯಲಿ ಲೋ-
ಕಾಂತರಗಳೆಲ್ಲವನು ಸಂತೈಸುವ
ಸಂತತ ಭಕ್ತಸಂಸಾರವನು ಪೊರೆವ ವೇ-
ದಾಂತನುತ ಕಾಗಿನೆಲೆಯಾದಿಕೇಶವರಾಯ ॥ ೫ ॥

ಆವೇಶ ಇದ್ದದ್ದರಿಂದಾಗಿ ಅವನಿಗೆ ಶ್ರೀಕೃಷ್ಣ ಸಾರಥಿ ಮೊದಲಾದ ಅನೇಕ ಬಗೆಯಲ್ಲಿ ವಿಶೇಷ ರಕ್ಷಣೆ ನೀಡಿದ್ದ ಎಂಬುದು ಇದರ ಭಾವ. ಫಲ್ಗುಣಮಿತ್ರವಾಕ್ಯ ಎಂಬುದಾಗಿಯೂ ಇದನ್ನು ಅನ್ವಯಿಸಿಕೊಳ್ಳಬಹುದು. ಆದರಿಂದ ಫಲ್ಗುಣನಿಗೆ ಮಿತ್ರನಂತೆ ಉಪಕಾರಕವಾದ ಭಗವದ್ಗೀತೆಯನ್ನು ಉಪದೇಶಿಸಿ ಸಂರಕ್ಷಿಸಿದವನು ಎಂಬ ಅರ್ಥ ತಿಳಿಯುವುದು.

೧೫. ವಾಕ್ಯವಿಚಿತ್ರ: ಶ್ರೀರಾಮನ ಪ್ರತಿಯೊಂದು ಮಾತೂ ಸಹ ವಿಚಿತ್ರ ಬಗೆಯಲ್ಲಿ ಅರ್ಥವನ್ನು ತೆರೆದುಕೊಳ್ಳುವುದು ಎಂಬುದು ಇದರ ಭಾವ. ಶ್ರೀರಾಮ ಸಾಕ್ಷಾತ್ ಭಗವಂತನಾದ್ದರಿಂದ ಅವನ ಮಾತುಗಳಿಗೆ ವೇದಕ್ಕೂ ಮಿಗಿಲಾದ ಅರ್ಥಗಳು ಸಮುಚಿತ ಎಂಬ ಸೂಚನೆ ಇದರಲ್ಲಿದೆ. ವ್ಯಾಸರೂಪದಿಂದಂತೂ ಶ್ರೀಹರಿ ಮಾಡಿರುವ ಜ್ಞಾನಕಾರ್ಯ ''ವ್ಯಾಸೋಚ್ಛಿಷ್ಟಂ ಜಗತ್ಸರ್ವಂ'' ಎಂಬ ಮಾತಿನಲ್ಲಿ ಸುಪ್ರಸಿದ್ಧ. ಶ್ರೀವ್ಯಾಸರೂಪವು ಸಹ ವಾಸಿಷ್ಠಕೃಷ್ಣ ಎನ್ನಿಸಿದ್ದ ರೂಪವಾದ್ದರಿಂದ ಶ್ರೀಕೃಷ್ಣನ ಸ್ತೋತ್ರಪ್ರಸಂಗದಲ್ಲಿ ಆ ರೂಪದ ಪ್ರಸಕ್ತಿಯೂ ಸಹ ಉಚಿತವೇ ಆಗಿದೆ.

*****

## ೧೦. ಶ್ರೀನರಸಿಂಗ ರಕ್ಷಿಸು

**ಮಂಗಳಾತ್ಮಕ ದುರಿತತಿಮಿರಪ-**
**ತಂಗ ಗರುಡತುರಂಗ ರಿಪುಮದ-**
**ಭಂಗ ಕೀರ್ತಿತರಂಗ ಪುರಹರಸಂಗ ನೀಲಾಂಗ ।**
**ಅಂಗದಪ್ರಿಯನಂಗಪಿತ ಕಾ-**
**ಳಿಂಗಮರ್ದನ ಅಮಿತ ಕರುಣಾ-**
**ಪಾಂಗ ಶ್ರೀನರಸಿಂಗ ರಕ್ಷಿಸು ನಮ್ಮನನವರತ ॥ ೧೦ ॥**

**ಅ: ಮಂಗಳಸ್ವರೂಪನೇ! ದುರಿತವೆಂಬ ಕತ್ತಲೆಗೆ ಸೂರ್ಯನಂಥವನೇ! ಗರುಡವಾಹನನೇ! ಶತ್ರುಗಳ ಸೊಕ್ಕಡಗಿಸುವವನೇ! ಕೀರ್ತಿಯ ತರಂಗಗಳಿಂದ ಕೂಡಿದವನೇ! ಮುರಹರನಾದ ಶಿವನಿಗೆ ಹಿತೈಷಿಯೇ! ನೀಲಮೇಘದಂತಹ ಶರೀರನೇ! ಅಂಗದನಿಗೆ ಪ್ರಿಯನಾದವನೇ! ಅನಂಗನಾದ ಮನ್ಮಥನ ಜನಕನೇ! ಕಾಳಿಂಗನನ್ನು ನಿಗ್ರಹಿಸಿದವನೇ! ಮಿತಿಯಿರದ ಕರುಣೆ ತೋರುವ ಕುಡಿನೋಟದವನೇ! ಲಕ್ಷ್ಮೀನರಸಿಂಹನೇ! ಶ್ರೀಹರಿಯೇ! ನಮ್ಮನ್ನು ಅನವರತ ರಕ್ಷಿಸು.**

ವಿ: ೧. **ಮಂಗಳಾತ್ಮಕ** – ಮಂಗಳಸ್ವರೂಪ – ಎಂದರೆ ಅನಂತಕಲ್ಯಾಣಗುಣಗಳ ಸ್ವರೂಪನಾದವನು ಎಂದರ್ಥ. ಆತ್ಮಕ ಎಂಬ ಪದದಿಂದ ಶ್ರೀಹರಿಗೂ ಅವನ ಗುಣಗಳಿಗೂ ಯಾವುದೇ ವಿಧದ ಬೇಧವಿಲ್ಲ ಎಂಬ ವಿಶೇಷಾಂಶ ಸೂಚಿತ. ಇದು **ಪರಾSಸ್ಯ ಶಕ್ತಿರ್ವಿವಿಧೈವ ಶ್ರೂಯತೇ**

**ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ॥** ಎಂಬ ಶ್ರುತಿಯ ಅರ್ಥವೂ ಆಗಿದೆ. ಮಂಗಲಾ+ಆತ್ಮ+ಕ = ಮಂಗಲದೇವತೆಯಾದ ಮಹಾಲಕ್ಷ್ಮಿಯು ಸ್ವರೂಪಭೂತವಾದ ಆನಂದವನ್ನು ಅಭಿವ್ಯಕ್ತಿಪಡಿಸುವವನೇ ಎಂಬ ಅರ್ಥವನ್ನು ಇಲ್ಲಿ ಕಾಣಬಹುದು.

೨. **ದುರಿತತಿಮಿರಪತಂಗ** – ದುರಿತ ಎಂದರೆ ಅನಿಷ್ಟ ತಿಮಿರ ಎಂದರೆ ಕತ್ತಲೆ; ಪತಂಗ ಎಂದರೆ ಸೂರ್ಯ. ಕತ್ತಲೆಯು ಸೂರ್ಯನಿಂದ ನಾಶವಾಗುವಂತೆ ಸಕಲ-ದುರಿತಗಳು ಶ್ರೀಹರಿಯ ಅನುಗ್ರಹದಿಂದ ದೂರಾಗುವುವು ಎಂದರ್ಥ. ಇದು **ನರಸಿಂಹೋಽಖಿಲಾಜ್ಞಾನಮತಧ್ವಾಂತದಿವಾಕರಃ** ಎಂಬ ಶ್ರೀಮದಾಚಾರ್ಯರ ಮಾಯಾ-ವಾದಖಂಡನಕೃತಿಯ ಮಂಗಲಪದ್ಯದಲ್ಲಿನ ವಿಶೇಷಣದ ವಿವರಣೆಯಂತಿದೆ. ದುರಿತಕ್ಕೆ ಕಾರಣವಾಗುವ ಕತ್ತಲೆಯಂತಹ ಅಜ್ಞಾನಮಿಥ್ಯಾಜ್ಞಾನಗಳನ್ನು ಪರಿಹರಿಸುವ ಕಾರ್ಯದಲ್ಲಿ ಸೂರ್ಯನಂತಿರುವವನು ಎಂದೂ ಅರ್ಥ.

೩. **ಗರುಡತುರಂಗ** – ತುರಂಗ ಎಂದರೆ ಕುದುರೆ. ವೇಗವಾಗಿ ಸಂಚರಿಸುವುದರಿಂದ ಅದಕ್ಕೆ ಆ ಹೆಸರು. ಇಲ್ಲಿ ವಾಹನ ಎಂಬ ಅರ್ಥದಲ್ಲಿ ಇದು ಪ್ರಯೋಗಿಸಲ್ಪಟ್ಟಿದೆ. ಶ್ರೀಹರಿಗೆ ಗರುಡನೇ ವಾಹನ ಎಂಬುದರಿಂದ ಗಗನಗಾಮಿಯಾದ ವಾಹನವುಳ್ಳ ವಿಶಿಷ್ಟದೇವತೆ ಶ್ರೀಹರಿ. ಆದ್ದರಿಂದ ಅವನು ಸರ್ವೋತ್ತಮ ಎಂಬ ಭಾವ ಸೂಚಿತ. ಬೇರಾವ ದೇವತೆಗಳಿಗೂ ಗರುಡನಂತಹ ಗಗನಗಾಮಿಯಾದ ವಾಹನ ಪ್ರತೀತವಾಗಿಲ್ಲ ಎಂಬುದು ಗಮನಾರ್ಹ. ಇದು '**ಗಗನದಲಿ ಸಂಚರಿಪ ಗರುಡದೇವನೆ ತುರಗ**' (ಈ ಪರಿಯ ಸೊಬಗಾವ ದೇವರಲಿ ನಾ ಕಾಣೆ) ಎಂಬ ಶ್ರೀಪುರಂದರದಾಸರ ವಚನದ ರೂಪಾಂತರದಂತಿದೆ.

೪. **ರಿಪುಮದಭಂಗ** – ಶತ್ರುಗಳ ಸೊಕ್ಕನ್ನು ಅಡಗಿಸುವವನು ಎಂದರ್ಥ. ಕಂಸ, ಜರಾಸಂಧ, ಪೌಂಡ್ರಕವಾಸುದೇವ ಮೊದಲಾದ ಬ್ರಹ್ಮಶಿವಾದಿದೇವತೆಗಳ ವರದಿಂದ ಸೊಕ್ಕಿದ್ದ ದೈತ್ಯರನ್ನು ಶ್ರೀಕೃಷ್ಣ ಲೀಲಾಜಾಲವಾಗಿ ಸದೆಬಡೆದ ಮಹತ್ವಕ್ಕೆ ಸೂಚಕ. ಅರಿಗಳೆನ್ನಿಸಿದ ಕಾಮಾದಿ ದೋಷಗಳ ಅಭಿಮಾನಿದೈತ್ಯರ ಸೊಕ್ಕನ್ನು ಸಹ ಅಡಗಿಸುವವನು ಎಂದೂ ಅರ್ಥ; ರಿಪು – ಶತ್ರು.

೫. **ಕೀರ್ತಿತರಂಗ** – ತರಂಗ ಎಂದರೆ ಅಲೆ; ಸಮುದ್ರದ ಅಲೆಗಳಂತೆ ನಿರಂತರವಾದ ವಿವಿಧ ಬಗೆಯ ಕೀರ್ತಿಯನ್ನು ಸಾರುವ ಶಾಸ್ತ್ರಸಮುದ್ರದಿಂದ ಪ್ರತಿಪಾದ್ಯ ಎಂದರ್ಥ. ಕೀರ್ತಿತ ರಂಗ = ಪುರಾಣಪ್ರಸಿದ್ಧವಾದ ಶ್ರೀರಂಗ ಮೊದಲಾದ ಪುಣ್ಯಧಾಮಗಳನ್ನು ಹೊಂದಿದವನು ಎಂದೂ ತಿಳಿಯಬಹುದು. ಇದಕ್ಕೆ ಕೀರ್ತಿತುರಂಗ ಎಂಬ ಪಾಠಾಂತರವಿದೆ. ಹಿಂದೆ ತಿಳಿಸಿದಂತೆ ತುರಂಗ ಎಂದರೆ ಕುದುರೆ ಎಂದರ್ಥ. ಶ್ರೀಹರಿಯು ಭಕ್ತರ ಬಳಿಗೆ ಧಾವಿಸಲು ಅವನ ಕೀರ್ತಿಯು ವಾಹಕವಾಗಿರುವುದರಿಂದ ಅವನಿಗೆ ಆ ಹೆಸರು; ಎಂದರೆ ಶ್ರೀಹರಿಯ ಮಹಿಮೆಯನ್ನು ಅವನ ಕೀರ್ತಿಯಿಂದಲೇ ತಿಳಿಯಲು ಸಾಧ್ಯ ಎಂದರ್ಥ.

೬. **ಪುರಹರಸಂಗ** – ಪುರಹರ ಎಂದರೆ ತ್ರಿಪುರಾಸುರನನ್ನು ಸಂಹಾರಮಾಡಿದ ಶಿವ ಎಂದರ್ಥ. ಅವನಿಗೆ ಮಿತ್ರನಂತೆ ಸದಾ ರಕ್ಷಕನಾಗಿರುವವನು ಶ್ರೀಹರಿ ಎಂಬ ಭಾವ ಇದರಿಂದ ಸೂಚಿತ.

೭. **ನೀಲಾಂಗ** – ಇಲ್ಲಿ ನೀಲ ಎಂದರೆ ನೀಲಮೇಘ ಎಂದರ್ಥ. ನೀಲಮೇಘ-ಶ್ಯಾಮನಾದವನು ಶ್ರೀಹರಿ ಎಂದರ್ಥ. ಶ್ರೀಹರಿಯು ನೀಲವರ್ಣದವನು ಎಂಬ ಮಾತಿನಲ್ಲಿ ಅವನು ಸಾಕಲ್ಯೇನ ಅರಿಯಲಾಗದ ಮಹಿಮೆ ಉಳ್ಳವನು ಎಂಬ ಭಾವ ಸೂಚಿತ. ಗಗನ ಹಾಗೂ ಸಮುದ್ರಗಳು ನೀಲವರ್ಣದಿಂದ ಕಂಗೊಳಿಸಲು ಅವುಗಳ ವೈಶಾಲ್ಯ ಒಂದು ಬಗೆಯ ಕಾರಣ. ಅದರಂತೆ ಇಲ್ಲೂ ಸಹ ಎಂದು ತಿಳಿಯಬೇಕು.

೮. **ಅಂಗದಪ್ರಿಯ** – ಅಂಗದ ಎಂದರೆ ವಾಲಿಪುತ್ರ. ಅವನು ಚಂದ್ರನ ಅವತಾರ. ಅವನಲ್ಲಿ ಇಂದ್ರನ ಆವೇಶ. ಇದರಿಂದಾಗಿ ಅವನಿಗೆ ವಿಶೇಷ ಹಿರಿಮೆ ಬರುವಂತಾಗಿತ್ತು. ವಾಲಿಯ ಸಂಹಾರದ ಬಳಿಕ ಅಂಗದನಿಗೆ ಯುವರಾಜಪದವಿ ಲಭಿಸಿ ಅವನು ಶ್ರೀರಾಮನ ಅಂತರಂಗಭಕ್ತರಲ್ಲಿ ಒಬ್ಬನು ಎನಿಸಿದ ವಿವರ ರಾಮಾಯಣದಲ್ಲಿದೆ. ಅದು ಈ ಪದದಿಂದ ಸೂಚಿತ. ಸೇತುವೆಯನ್ನು ಕಟ್ಟಿ ಸಮುದ್ರವನ್ನು ದಾಟಿದ ಬಳಿಕ ಶ್ರೀರಾಮ ರಾವಣನಿಗೆ ಎಚ್ಚರಿಕೆ ನೀಡಲೆಂದು ಅಂಗದನನ್ನು ದೂತನಾಗಿ ಕಳುಹಿಸಿದ ರಾಮಾಯಣದ ಪ್ರಸಂಗ ಅವನ ಮೇಲೆ ಇರುವ ಶ್ರೀರಾಮನ ಪ್ರೀತಿಗೆ ಸೂಚಕ. ಅಂಗದನು ಚಂದ್ರನ ಅವತಾರ. ಚಂದ್ರನಲ್ಲಿ ಬ್ರಹ್ಮದೇವರ ಸನ್ನಿಧಾನ. ಆದರಿಂದಾಗಿ ಚಂದ್ರಾವತಾರನಾದ ಅಂಗದನಲ್ಲಿ ಶ್ರೀರಾಮನು ವಿಶೇಷ ಪ್ರೀತಿ ಎಂಬ ಅರ್ಥವನ್ನೂ ಗುರುತಿಸಬಹುದು.

೯. **ಅನಂಗಪಿತ** – ಅನಂಗ ಎಂದರೆ ಮನ್ಮಥ. ಶಿವನ ಹಣೆಗಣ್ಣಿಗೆ ಮನ್ಮಥನ ದೇಹ ನಾಶವಾಗಿ ಅಂದಿನಿಂದ ಅವನು ಅನಂಗ ಎನ್ನಿಸಿದ್ದು ಪುರಾಣಗಳಲ್ಲಿ ಪ್ರಸಿದ್ಧ. ಹೀಗೆ ಅನಂಗನೆನಿಸಿದ ಮನ್ಮಥನಿಗೆ ಜನಕ ಎಂಬುದು ಶ್ರೀಹರಿಯ ಹಿರಿಮೆಗಳಲ್ಲೊಂದು. ಅನಂತ ಎಂದರೆ ಸಾಧನಶರೀರರಹಿತರಾದ ಸುಜ್ಜೀವಿಗಳು. ಅವರಿಗೆ ಸಾಧನೆಗೆ ಅನುಕೂಲವಾಗುವ ದೇಹವನ್ನು ನೀಡುವ ಮೂಲಕ ತಂದೆ ಎನ್ನಿಸುವವನು ಎಂದೂ ಅರ್ಥಮಾಡಿಕೊಳ್ಳಬಹುದು.

೧೦. **ಕಾಳಿಂಗಮರ್ದನ** – ಕಾಳಿಂಗನು ಯಮುನಾನದಿಯ ಮಡುವೊಂದರಲ್ಲಿ ಆಶ್ರಯ ಪಡೆದು ಅದರ ಜಲವನ್ನು ಕಲುಷಿತಗೊಳಿಸಿ ಗೋ-ಗೋಪರಿಗೆ ಪೀಡಕನಾಗಿದ್ದ ಮಹಾಸರ್ಪ. ಶ್ರೀಕೃಷ್ಣ ಆ ಮಡುವಿನಲ್ಲಿ ಧುಮುಕಿ ಅದನ್ನು ನಿಗ್ರಹಿಸಿ ಯಮುನೆಯ ಜಲವನ್ನು ಪುನಃ ನಿರ್ಮಲಗೊಳಿಸಿದ ವಿವರ ಶ್ರೀಮದ್ಭಾಗವತದಲ್ಲಿದೆ. ಕಾಳಿಂಗನಂತಹ ಮಹಾವಿಷಸರ್ಪವನ್ನು ನಿಗ್ರಹಿಸುವ ಮೂಲಕ ತಾನು ಅಮೃತಸ್ವರೂಪನಾದವನು ಎಂಬ ವಿಶೇಷ ಪ್ರಮೇಯವನ್ನು ಲೋಕಕ್ಕೆ ಸಾರಿದ ಎಂಬುದು ಇಲ್ಲಿಯ ಭಾವ. ಕಾಳಿಂಗ ಮೃತ್ಯುವಿನ ಸಂಕೇತ. ಕಾಳಿಂಗನನ್ನು ಮರ್ದಿಸಿದ ಶ್ರೀಕೃಷ್ಣನ ಹಿರಿಮೆ ಅವನು ಮೃತ್ಯುಪರಿಹಾರಕ ಎಂಬುದಕ್ಕೂ ಸೂಚಕ. ಕಾಲೀಯ ಒಂದು ಸರ್ಪ; ಸರ್ಪಕ್ಕೆ ಅಹಿ ಎಂಬ ಹೆಸರೂ ಇದೆ. ಅಹಿ ಎಂಬುದಕ್ಕೆ ಸಂಶಯ,

ವಿಪರ್ಯಯ ಎಂಬ ಅರ್ಥಗಳೂ ಉಂಟು. ಇದರಿಂದಾಗಿ ಕಾಳಿಂಗಮರ್ದನ ಎಂಬುದಕ್ಕೆ ವಾಸಿಷ್ಠಕೃಷ್ಣರೂಪದಿಂದ ಮಹಾಭಾರತಾದಿಗ್ರಂಥಗಳ ರಚನೆಯ ಮೂಲಕ ಸಜ್ಜನರ ಸಂಶಯವಿಪರ್ಯಯಗಳನ್ನು ಪರಿಹರಿಸಿ ಉದ್ಧರಿಸಿದವನು ಎಂಬ ವ್ಯಾಸಪರವಾದ ವಿಶೇಷಾರ್ಥವೂ ಸಂಗತವಾಗುವುದು.

೧೧. **ಅಮಿತ** – ಮಿತಿಯುಳ್ಳವನು ಮಿತ; ಶ್ರೀಹರಿಗೆ ದೇಶತಃ ಕಾಲತಃ ಹಾಗೂ ಗುಣತಃ ಮಿತಿಯಿಲ್ಲದಿರುವುದರಿಂದ ಅವನು ಅಮಿತ ಎನಿಸಿಕೊಳ್ಳುವನು. ಅನಂತ ಎಂಬುದು ಇಲ್ಲಿಯ ವಿಶೇಷ ಭಾವ.

೧೨. **ಕರುಣಾಪಾಂಗ** – ಅಪಾಂಗ ಎಂದರೆ ಕುಡಿನೋಟ; ಶ್ರೀಹರಿಯು ತನ್ನ ಭಕ್ತರನ್ನು ತನ್ನ ಕರುಣೆತುಂಬಿದ ಕುಡಿನೋಟದಿಂದ ನೋಡಿ ಅನುಗ್ರಹಿಸುವನು ಎಂದರ್ಥ. ಕೇವಲ ಕುಡಿನೋಟದಿಂದಲೇ ಸೃಷ್ಟಿಸಂಹಾರಾದಿ ಸಕಲಕಾರ್ಯಗಳನ್ನು ಮಾಡುವ ಶ್ರೀಹರಿಯು ಸರ್ವೋತ್ತಮ ಎಂಬುದು ಮತಿತಾರ್ಥ. ತನ್ನ ಕುಡಿನೋಟದಿಂದಲೇ ರಮಾಬ್ರಹ್ಮಾದಿಗಳಿಗೆ ವಿಶೇಷವಾದ ಅನುಗ್ರಹವನ್ನು ಮಾಡುವವನು ಎಂದು ತಿಳಿಸುವ ದ್ವಾದಶಸ್ತೋತ್ರದ ಶ್ರೀಸ್ತುತಿ ಎಂಬ ಏಳನೇ ಅಧ್ಯಾಯದ ನಿರೂಪಣೆ ಸೂಚಿತ:

೧೩. **ಶ್ರೀನರಸಿಂಗ** – ಶ್ರೀ ಎಂದರೆ ಮಹಾಲಕ್ಷ್ಮಿ; ನರಸಿಂಗ ಎಂದರೆ ನರಸಿಂಹ. ಇದರಿಂದ ಶ್ರೀನರಸಿಂಗ ಎಂಬುದಕ್ಕೆ ಲಕ್ಷ್ಮೀನರಸಿಂಹ ಎಂದರ್ಥವಾಗುವುದು. ನರ ಎಂದರೆ ಪುರುಷ; ಸಿಂಹ ಎಂದರೆ ಶ್ರೇಷ್ಠ; ಪುರುಷೋತ್ತಮ ಎಂದರ್ಥ. ಇದು ಭಗವದ್ಗೀತೆ ಕೊನೆಯ ೫ ಶ್ಲೋಕಗಳಲ್ಲಿ ನಿರೂಪಿತವಾದ ಕ್ಷರಾಕ್ಷರ ಪುರುಷೋತ್ತಮತ್ವರೂಪವಾದ ಹಿರಿಮೆಯನ್ನು ಸಾರುವ ವಿಶೇಷಣ:

೧೪. ಹೀಗೆ ಒಟ್ಟು ಹನ್ನೆರಡು ವಿಶೇಷಣಗಳಿಂದ ಶ್ರೀಹರಿಯ ಬಗೆಬಗೆಯ ಹಿರಿಮೆಯನ್ನು ಈ ಪದ್ಯದಲ್ಲಿ ತಿಳಿಸಿರುವರು.

*****

## ೧೧. ವೈಕುಂಠನಗರನಿವಾಸ ರಕ್ಷಿಸು

**ದಾಶರಥಿ ವೈಕುಂಠನಗರನಿ-**
**ವಾಸ ತ್ರೈಜಗದೀಶ ಪಾಪವಿ-**
**ನಾಶ ಪರಮವಿಲಾಸ ಹರಿ ಸರ್ವೇಶ ದೇವೇಶ ।**
**ವಾಸುದೇವ ದಿನೇಶಶತಸಂ-**
**ಕಾಶ ಯದುಕುಲವಂಶತಿಲಕ ಪ-**
**ರಾಶರಾನತ ದೇವ ರಕ್ಷಿಸು ನಮ್ಮನನವರತ ॥ ೧೧ ॥**

**ಅ: ದಶರಥಪುತ್ರನಾಗಿ ಅವತರಿಸಿದ ಶ್ರೀರಾಮನೇ ! ವೈಕುಂಠವೆಂಬ ನಗರದಲ್ಲಿ ನೆಲೆಸಿದವನೇ, ಮೂರುಲೋಕಗಳಿಗೆ ಒಡೆಯನೇ, ಸಕಲ ಪಾಪಗಳನ್ನು ಸಂಪೂರ್ಣ- ವಾಗಿ ಪರಿಹರಿಸುವವನೇ, ಅತ್ಯಂತ ಶ್ರೇಷ್ಠವಾದ ಲೀಲೆಯಿಂದ ಕೂಡಿದವನೇ, ಶ್ರೀಹರಿಯೇ, ಸಕಲರಿಗೂ ಒಡೆಯನೇ, ದೇವತೆಗಳ ಸ್ವಾಮಿಯೇ, ವಾಸುದೇವನೇ, ನೂರಾರು ಸೂರ್ಯರ ಕಾಂತಿ ಉಳ್ಳವನೇ, ಯದುಕುಲಕ್ಕೆ ಹಾಗೂ ಆ ವಂಶಕ್ಕೆ ತಿಲಕಪ್ರಾಯನಾದವನೇ, ಪರಾಶರಮುನಿಯಿಂದ ವಂದಿತನಾದವನೇ, ದೇವನೇ ನಮ್ಮನ್ನು ಅನವರತ ರಕ್ಷಿಸು.**

ವಿ: ೧. ಈ ಪದ್ಯದಲ್ಲೂ ಶ್ರೀರಾಮ ಹಾಗೂ ಶ್ರೀಕೃಷ್ಣರೂಪಗಳ ವರ್ಣನೆ ಮುಂದುವರೆದಿದೆ.

೨. **ದಾಶರಥಿ:** ದಶರಥನ ಪುತ್ರನಾಗಿ ಅವತರಿಸಿದ ಶ್ರೀಹರಿಯ ಶ್ರೀರಾಮರೂಪ ಎಂದರ್ಥ. ಲಕ್ಷ್ಮಣ, ಭರತ, ಶತ್ರುಘ್ನರೂ ಸಹ ದಶರಥನ ಪುತ್ರರೇ ಆದರೂ '**ಅಸಾಧಾರಣ್ಯೇನ ವ್ಯಪದೇಶಾ ಭವಂತಿ**' ಎಂಬ ನ್ಯಾಯದಿಂದ ಪ್ರಧಾನ ಎಂಬ ಕಾರಣದಿಂದ ದಾಶರಥಿ ಎಂದರೆ ಶ್ರೀರಾಮ ಎಂದೇ ಅರ್ಥ. ದಶರಥನು ಸ್ವರೂಪತಃ ಸ್ವಾಯಂಭುವಮನು. ಅವನ ವಿಶೇಷ ತಪಸ್ಸಿಗೆ ಮೆಚ್ಚಿ ಶ್ರೀಹರಿ ಅವನ ಪುತ್ರತ್ವೇನ ಅವತರಿಸಿ, ದಾಶರಥಿ ಎನಿಸಿದ; ಇದರಿಂದಾಗಿ ದಶರಥನ ಕೀರ್ತಿ ಅಜರಾಮರವಾಯಿತು.

೩. **ವೈಕುಂಠನಗರನಿವಾಸ:** ವೈಕುಂಠವು ಶ್ರೀಹರಿಯ ಪ್ರಧಾನವಾದ ಮೂರು ನೆಲೆಗಳಲ್ಲಿ ಒಂದು. ಶ್ವೇತದ್ವೀಪ ಹಾಗೂ ಅನಂತಾಸನ ಇವು ಇತರ ಎರಡು ನೆಲೆಗಳು. ವೈಕುಂಠವು ಪ್ರಳಯಕಾಲದಲ್ಲೂ ಸಹ ನಾಶವಾಗದ ನಿತ್ಯಲೋಕ. ಬ್ರಹ್ಮ-ಶಿವ ಮೊದಲಾದವರ ಲೋಕಗಳು ಪ್ರಳಯಕಾಲದಲ್ಲಿ ಉಳಿಯುವಂತಹವುಗಳಲ್ಲ; **ಆಬ್ರಹ್ಮಭುವನಾಲ್ಲೋಕಾ ಪುನರಾವರ್ತಿನೋಽರ್ಜುನ** ಗೀತಾ(೮/೧೬). ವೈಕುಂಠಲೋಕವು ನಿತ್ಯಲೋಕವಾದ್ದರಿಂದಲೇ ಅಲ್ಲಿಗೆ ಹೋದವರೂ ಸಹ ಸದಾ ಅಲ್ಲಿಯೇ ಉಳಿಯುವಂತಾಗುವರು ಎಂಬುದು ವಿಶೇಷ; **ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ** -(ಗೀತಾ ೧೫/೬) ಈ ವಿಶೇಷವನ್ನು ಸೂಚಿಸಲೆಂದು ವೈಕುಂಠನಗರನಿವಾಸ ಎಂಬ ವಿಶೇಷಣದಿಂದ ಸ್ತುತಿಸಿರುವರು. ಶ್ರೀರಾಮನ ರಾಜಧಾನಿ ಅಯೋಧ್ಯಾನಗರ. ಅದು ಶ್ರೀರಾಮನ ಸನ್ನಿಧಾನದಿಂದಾಗಿ ವೈಕುಂಠದಂತೆ ಕಂಗೊಳಿಸುತ್ತಿತ್ತು: **ತಸ್ಯೈವಮಬ್ಜಭವಲೋಕ ಸಮಾಮಿಮಾಂ ಕ್ಷ್ಮಾಂ ಕೃತ್ವಾಽನುಶಾಸತ ಉದೀಕ್ಷ್ಯ ಗುಣಾನ್ ಧರಾಯಾಃ** – ಮ.ಬಾ.ತಾ.ನಿ. ೯/೪೪. ಇದರಿಂದ ವೈಕುಂಠದಂತೆ ಶೋಭಿಸುವ ಅಯೋಧ್ಯಾನಗರ ನಿವಾಸಿ ಎಂಬ ಅರ್ಥ ತಿಳಿಯುವುದು. ತನ್ನ ನಿವಾಸದಿಂದಾಗಿ ಅಯೋಧ್ಯೆಯಂತಹ ಭೂಲೋಕದ ನಗರಕ್ಕೂ ವೈಕುಂಠದ ಶೋಭೆ ಕೊಟ್ಟ ಹಿರಿಮೆ ಶ್ರೀರಾಮನದು ಎಂಬುದು ಈ ಮಾತಿನ ವಿಶೇಷಾಂಶ. ಕೃಷ್ಣರೂಪದಲ್ಲೂ ಹೀಗೆಯೇ ದ್ವಾರಕೆಯಂತಹ ಅದ್ಭುತ ನಗರವನ್ನು ನಿರ್ಮಿಸಿ ವೈಕುಂಠವನ್ನೇ ಧರೆಗಿಳಿಸಿ ನೆಲೆಸಿದ ಹಿರಿಮೆ ಶ್ರೀಹರಿಯದು.

**೪. ತ್ರೈಜಗದೀಶ:** ಮೂರು ಲೋಕಗಳಿಗೆ ಒಡೆಯ. ಸ್ವರ್ಗ, ಮರ್ತ್ಯ ಹಾಗೂ ಪಾತಾಳ ಎಂಬ ಇವು ೩ ಲೋಕಗಳು. ಸ್ವರ್ಗ ಎಂಬುದರಿಂದ ಮೇಲಿನ ಭುವಃ ಮೊದಲಾದ ಇತರ ೬ ಲೋಕಗಳು. ಪಾತಾಳಶಬ್ದದಿಂದ ಅತಳ, ವಿತಳ ಮೊದಲಾದ ಸಕಲ ಕೆಳಗಿನ ಲೋಕಗಳೂ ವಿವಕ್ಷಿತ. ಇದರಿಂದ ಶ್ರೀರಾಮನು ಕೇವಲ ಕೋಸಲದೇಶದ ಅಥವಾ ಭೂಲೋಕದ ರಾಜನಾಗದೆ, ಸಮಸ್ತ ವಿಶ್ವಕ್ಕೇ ಒಡೆಯನಾದವನು ಎಂಬ ವಿಶೇಷಾರ್ಥ ತಿಳಿಯುವುದು. ಶ್ರೀರಾಮನು ರಾಜ್ಯಭಾರ ನಡೆಸಿದ್ದಾಗ ಬ್ರಹ್ಮಾದಿ ದೇವತೆಗಳೆಲ್ಲಾ ತಮ್ಮ ಮೂಲರೂಪಗಳಿಂದಲೇ ಶ್ರೀರಾಮನ ಬಳಿಗೆ ಆಗಮಿಸಿ, ಪರಮಭಕ್ತಿಯಿಂದ ನಮಸ್ಕರಿಸುತ್ತಿದ್ದ ವಿವರ ಇದನ್ನು ದೃಢಪಡಿಸುವುದು: **ಸಬ್ರಹ್ಮರುದ್ರ-ಮರುದರ್ಕದಿವಾಕರಾದಿಮೂರ್ಧನ್ಯರತ್ನಪರಿಘಟ್ಟಿತ ಪಾದಪೀಠಃ** – ಮ.ಭಾ.ತಾ.ನಿ.(೯/೧೨); ಜಗತ್ತೆಂಬುದಕ್ಕೆ ವಾಯು ಎಂದೂ ಹೆಸರು. ತ್ರೈಜಗತ್ತು ಎಂದರೆ ವಾಯುದೇವರ ಹನುಮ, ಭೀಮ, ಮಧ್ವ ಎಂಬ ರೂಪಗಳಿಗೂ ಒಡೆಯ; ಎಂದರೆ ಶ್ರೀರಾಮರೂಪದಿಂದ ಹನುಮದ್ರೂಪಕ್ಕೂ ಶ್ರೀಕೃಷ್ಣರೂಪದಿಂದ ಭೀಮರೂಪಕ್ಕೂ , ಶ್ರೀವ್ಯಾಸರೂಪದಿಂದ ಮಧ್ವರೂಪಕ್ಕೂ ಒಡೆಯ ಎಂದರ್ಥ.

**೫. ಪಾಪವಿನಾಶ:** ಪಾಪಗಳಿಗೆ ಸಂಪೂರ್ಣವಾದ ನಾಶವನ್ನುಂಟುಮಾಡುವವನು ಎಂದರ್ಥ. ಇತರ ದೇವತೆಗಳು ಸಹ ಪಾಪವನ್ನು ನಾಶಪಡಿಸುವವರಾದರೂ ಅನಾದಿ ಕಾಲದಿಂದ ಸಂಚಿತವಾದ ಸಕಲ ಪಾಪಗಳೂ ಸಹ ನಾಶವಾಗುವುದು ಶ್ರೀಹರಿಯ ಸಾಕ್ಷಾತ್ ದರ್ಶನ- ವಾದಾಗಲೇ ಎಂಬ ವಿಶೇಷ ಬ್ರಹ್ಮಸೂತ್ರದಲ್ಲಿದೆ. ಇದನ್ನು ಸೂಚಿಸಲು, ಪಾಪನಾಶ ಎಂದಷ್ಟೇ ಹೇಳದೆ, ಪಾಪವಿನಾಶ ಎಂಬುದಾಗಿ ತಿಳಿಸಿರುವರು. ಸಂಸ್ಕೃತದಲ್ಲಿ ಪಾಪ ಎಂಬುದಕ್ಕೆ ಪಾಪಿ ಎಂಬ ಅರ್ಥವೂ ಉಂಟು. ಇದರಿಂದ ಪಾಪವಿನಾಶ ಎಂಬುದಕ್ಕೆ ಸಕಲ ಪಾಪಿಗಳಿಗೆ ಸಂಪೂರ್ಣವಾಗಿ ವಿನಾಶವುಂಟುಮಾಡುವವನು ಎಂದರೆ, ಅಧೋಗತಿಯನ್ನೇ ನೀಡುವವನು ಎಂದರ್ಥ. ಇದು ಭಗವದ್ಗೀತೆಯ **ವಿನಾಶಾಯ ಚ ದುಷ್ಕೃತಾಮ್**(೪/೮) ಎಂಬ ಮಾತಿನ ಭಾವ. ಅದರಂತೆ ೧೬ನೆಯ ಅಧ್ಯಾಯದಲ್ಲಿನ ಈ ಕೆಳಗಿನ ಶ್ಲೋಕದ ಭಾವವೂ ಆಗಿದೆ:

**ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।**
**ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥**
**ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮಸು ಜನ್ಮಸು ।**
**ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಮ್ ॥**-(೨೦)

**೬. ಪರಮವಿಲಾಸ:** ವಿಲಾಸ ಎಂದರೆ ಕ್ರೀಡೆ. ಶ್ರೀಹರಿಯ ಜಗತ್ತಿನ ಸೃಷ್ಟಿ ಸ್ಥಿತಿ ಲಯ ಮೊದಲಾದ ಸಕಲ ಕಾರ್ಯಗಳೂ ಸಹ ತನ್ನ ಸ್ವಂತ ಪ್ರಯೋಜನಕ್ಕಾಗಿ ಅಲ್ಲದೆ, ಕೇವಲ ಲೋಕಹಿತಕ್ಕಾಗಿ ಮಾತ್ರ. ಅವನಿಗೆ ಮಾತ್ರ ಅದು ಕೇವಲ ಕ್ರೀಡೆಯಷ್ಟೆ ಎಂಬುದು ಶಾಸ್ತ್ರಗಳ ನಿರೂಪಣೆ. ಅವನ ಪ್ರತಿಯೊಂದು ಕಾರ್ಯವೂ ಸಹ ಅದರಂತೆ ಕೇವಲ ಕ್ರೀಡೆಯೇ ಆಗಿರುವುದರಿಂದ, ಆ ಕ್ರೀಡೆಯೂ ಸಹ ಸ್ವಾಭಾವಿಕವೇ ಆಗಿರುವುದರಿಂದ ಅವನ ವಿಲಾಸವು

ಪರಮವಿಲಾಸ ಎನ್ನಿಸುವುದು. ಇತರರಿಗೆ ಆಗದ ಎಂತಹ ಮಹತ್ಕಾರ್ಯಗಳನ್ನು ಸಹ ಕೇವಲ[೧] ತನ್ನ ಭ್ರೂವಿಲಾಸದಿಂದಲೇ ಲೀಲಾಜಾಲವಾಗಿ ಮಾಡುವವನು ಎಂಬ ಧ್ವನಿಯೂ ಇಲ್ಲಿದೆ.

**೭. ಹರಿ:** ಹರಿ ಎಂದರೆ ಪಾಪಗಳನ್ನು ಪರಿಹರಿಸುವವನು, ಸಂಸಾರದ ನೋವನ್ನು ಕಳೆಯುವವನು, ತನ್ನ ಭಕ್ತರಿಗೆ ಪುಣ್ಯದ ರಾಶಿಯನ್ನು ಭರಿಸಿ ಕೊಡುವವನು, ಮೊದಲಾದ ಅನೇಕ ಅರ್ಥಗಳು ಉಂಟು. ಮುಖ್ಯವಾಗಿ ಭಗವಂತನ ಸಕಲರಿಂದ ಉಪಾಸ್ಯವಾದ ಬಿಂಬರೂಪಕ್ಕೂ ಹರಿ ಎಂಬ ವಿಶೇಷ ಹೆಸರು ಶಾಸ್ತ್ರಗಳಲ್ಲಿ ಉಕ್ತವಾಗಿದೆ. ಹರಿಭಕ್ತಿಸಾರ ಎಂಬ ಹೆಸರನ್ನು ತಮ್ಮ ಕೃತಿಗೆ ಶ್ರೀಕನಕದಾಸರು ಇರಿಸಲು ಸಹ ಈ ಪದದ ವ್ಯಾಪ್ತಿ ಇಷ್ಟು ವಿಶಾಲವಾಗಿರುವುದೇ ಕಾರಣ. ಶ್ರೀಜಗನ್ನಾಥದಾಸರ ಶ್ರೀಹರಿಕಥಾಮೃತಸಾರ ಎಂಬ ಕೃತಿಯಲ್ಲಿನ ಹರಿ ಶಬ್ದವು ಸಹ ಇಂತಹ ವಿಶೇಷಾರ್ಥವನ್ನೇ ಹೊಂದಿದೆ.

**೮. ಸರ್ವೇಶ:** ಸರ್ವರಿಗೂ ಒಡೆಯನಾದವನು. ಸರ್ವರಿಗೂ ಎಂದರೆ, ಜಗತ್ತಿನ ಸಕಲ ದೇವತೆಗಳಿಗೂ, ಜೀವಿಗಳಿಗೂ ಸರ್ವಸ್ವಾಮಿಯಾದವನು:

**ಯೇ ಚೈವ ಸಾತ್ವಿಕಾ ಭಾವಾ ರಾಜಸಾಸ್ತಾಮಸಾಶ್ಚ ಯೇ ।**
**ಮತ್ತ ಏವೇತಿ ತಾನ್ ವಿದ್ಧಿ ನ ತ್ವಹಂ ತೇಷು ತೇ ಮಯಿ ॥** -ಗೀತಾ (೭/೧೨)

– ಇದಕ್ಕೆ ಸರ್ವವಿಧದಲ್ಲೂ ಸ್ವಾಮಿ ಎಂಬ ಮತ್ತೊಂದು ಅರ್ಥವೂ ವಿವಕ್ಷಿತ. ತಂದೆ, ತಾಯಿ, ಗುರು, ರಾಜ ಮೊದಲಾದವರಿಗೆ ಒಡೆತನ ಇರುವುದು ತಮ್ಮ ಮಕ್ಕಳು, ತಮ್ಮ ಶಿಷ್ಯರು ಹಾಗೂ ತಮ್ಮ ಪ್ರಜೆಗಳ ಮೇಲೆ ಮಾತ್ರ; ಅದೂ ಸೀಮಿತ ಅವಧಿಯವರೆಗೆ ಮಾತ್ರ. ಶ್ರೀಹರಿಯ ಒಡೆತನ ಅಂತಹುದಲ್ಲ, ಅವನು ಸಕಲ ಬಗೆಯಲ್ಲೂ ಸರ್ವರಿಗೂ ಸ್ವಾಮಿ ಎಂಬುದು ವಿಶೇಷ ಪ್ರಮೇಯ. ಸರ್ವೇಶ ಎಂಬುದನ್ನು ಸರ್ವ ಈಶ ಎಂದು ಬಿಡಿಸಿಯೂ ಓದಿಕೊಳ್ಳಬಹುದು; ಆಗ ಎಲ್ಲೆ ಸರ್ವನೇ, ಎಲ್ಲೆ ಈಶನೇ ಎಂದು ಅರ್ಥವಾಗುವುದು. ಸರ್ವ ಎಂಬುದು ವಿಷ್ಣುಸಹಸ್ರನಾಮದಲ್ಲಿ ಬಂದಿರುವ ಪದ: **ಸರ್ವಃ ಶರ್ವಃ ಶಿವಃ ಸ್ಥಾಣುಃ.** ಸರ್ವ ಎಂಬುದು ಸರ್ವಂ ಖಲ್ವಿದಂ ಬ್ರಹ್ಮ ಇತ್ಯಾದಿ ಉಪನಿಷತ್ತುಗಳಲ್ಲಿಯೂ ಬಂದಿದೆ. ಇದಕ್ಕೆ ಸರ್ವಸ್ವಾಮಿ, ಸರ್ವರ ಅಂತರ್ಯಾಮಿ, ಸರ್ವರ ನಿಯಾಮಕ ಮೊದಲಾದ ಅನೇಕ ಅರ್ಥಗಳು ಉಂಟು. ಇಂತಹ ಉಪಾಸನೆ ಮಾಡುವುದು ತನಗೆ ತುಂಬಾ ಪ್ರಿಯ ಎಂದು ಶ್ರೀಕೃಷ್ಣರೂಪದಿಂದ ಶ್ರೀಹರಿಯು ಸ್ಪಷ್ಟಪಡಿಸಿರುವನು: **ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ** -(ಗೀತೆ ೭/೧೯). ಈಶ ಎಂದರೆ ಒಡೆಯ ಎಂದರ್ಥ. ಈ ಒಡೆತನವು ಸಹ ಕೇವಲ ಇತರರ ಒಡೆತನದಂತೆ ಸೀಮಿತವಾಗಿರದೆ, ಅಪರಿಮಿತ ಎಂದು ತಿಳಿಯಬೇಕು.

---

೧. ಸ್ರಕ್ಷ್ಯೇ ಹಿ ಚೇತನಗಣಾನ್ ಸುಖದುಃಖಮಧ್ಯ-
ಸಂಪ್ರಾಪ್ತಯೇ ತನುಭೃತಾಂ ವಿಹೃತಿಂ ಮಮೇಚ್ಛನ್ ।
ಸೋಽಯಂ ವಿಹಾರ ಇಹ ಮೇ ತನುಭೃತ್ಸ್ವಭಾವ-
ಸಂಭೂತಯೇ ಭವತಿ ಭೂತಿಕೃದೇವ ಭೂತ್ಯಾಃ - ಮ.ಭಾ.ತಾ.ನಿ (೧/೫)

೯. **ದೇವೇಶ:** ಇದು ಸಕಲದೇವತೆಗಳಿಗೂ ಶ್ರೀಹರಿ ಒಡೆಯ ಎಂಬ ಅರ್ಥವನ್ನು ತಿಳಿಸುವುದು. ಸೂರ್ಯ ಚಂದ್ರಾದಿಗಳೆಲ್ಲಾ ಶ್ರೀಹರಿಯ ವಶವರ್ತಿಗಳಾಗಿದ್ದು ಅವನ ಆಜ್ಞಾಧಾರಕರಾಗಿರುವರು ಎಂಬ ಉಪನಿಷತ್ತುಗಳ ಮಾತು ಇದಕ್ಕೆ ಆಧಾರ: **ಯದ್ಭೀಷಾ ಉದೇತಿ ಸೂರ್ಯಃ ... ಮೃತ್ಯುರ್ಧಾವತಿ ಪಂಚಮಃ।**(ಕಠೋಪನಿಷತ್)

೧೦. **ವಾಸುದೇವ:** ವಸುದೇವನ ಮಗ ಎಂಬ ಕಾರಣದಿಂದ ವಾಸುದೇವ ಎಂಬುದು ಶ್ರೀಕೃಷ್ಣರೂಪದ ಹೆಸರು. ಆದರೆ ಮುಖ್ಯವಾಗಿ ಎಲ್ಲೆಡೆ ಸರ್ವಸ್ವಾಮಿಯಾಗಿ ನೆಲೆಸಿದವನು ಎಂಬುದು ಅದರ ಮುಖ್ಯವಾದ ಅರ್ಥ:

**ವಾಸನಾದ್ವಾಸುದೇವೋಽಸಿ ವಾಸಿತಂ ತೇ ಜಗತ್ತ್ರಯಮ್ ।**
**ಸರ್ವಭೂತನಿವಾಸೋಽಸಿ ವಾಸುದೇವ ನಮೋಽಸ್ತು ತೇ ॥**

ಶ್ರೀಹರಿಯು ಸೃಷ್ಟಿಯ ಪ್ರಾರಂಭದಲ್ಲಿ ಸ್ವೀಕರಿಸಿದ ೪ ರೂಪಗಳಲ್ಲಿ ವಾಸುದೇವ ರೂಪವು ಮೊದಲನೆಯದು. ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬುವು ಇತರ ಮೂರು ರೂಪಗಳು. ಮೋಕ್ಷ ಕೊಡುವ ರೂಪ ಎಂಬುದು ವಾಸುದೇವ ರೂಪದ ವಿಶೇಷ. ಶ್ರೀಮದಾಚಾರ್ಯರ ದ್ವಾದಶಸ್ತೋತ್ರವು **ಪ್ರೀಣಯಾಮೋ ವಾಸುದೇವಂ** ಎಂಬುದಾಗಿ ಶ್ರೀಹರಿಯ ವಾಸುದೇವರೂಪದ ವಿಶೇಷ ಹಿರಿಮೆಯನ್ನು ತಿಳಿಸಿಕೊಡುವುದು.

೧೧. **ದಿನೇಶಶತಸಂಕಾಶ:** ದಿನೇಶ ಎಂದರೆ ಸೂರ್ಯ, ಶತ ಶಬ್ದವು ಸಾಮಾನ್ಯವಾಗಿ ನೂರು ಎಂಬ ಅರ್ಥವನ್ನು ಕೊಟ್ಟರೂ ಮುಖ್ಯವಾಗಿ ಬಹಳ ಅರ್ಥವನ್ನೇ ತಿಳಿಸುವುದು: **ಶಬ್ದೋ ಬಹುತ್ವವಚನಃ ಶತಮ್** – ಮ.ಭಾ.ತಾ.ನಿ (೧/೧೬). ಲೋಕದಲ್ಲೂ ನೂರು ಎಂಬ ಪದವನ್ನು ಬಹಳ ಎಂಬ ಅರ್ಥದಲ್ಲಿ ಉಪಯೋಗಿಸುವ ರೂಢಿ ಇದೆ. ಶ್ರೀಹರಿಯ ಕಾಂತಿ ಅನಂತಸೂರ್ಯರ ಕಾಂತಿ. ಆದ್ದರಿಂದಲೇ ಸೂರ್ಯ ಮೊದಲಾದ ಯಾವ ದೇವತೆಗಳೂ ಸಹ ಅವನಿಗೆ ಸರಿಸಾಟಿ ಎನ್ನಿಸರು ಎಂದು ಭಾವ. ಇದರಿಂದ ಸೂರ್ಯಮಂಡಲಮಧ್ಯವರ್ತಿಯಾದ ರೂಪ ಶ್ರೀಹರಿಯ ನಾರಾಯಣರೂಪವೇ ಹೊರತು ಅನೇಕರು ತಿಳಿದಿರುವಂತೆ ಕೇವಲ ಸೂರ್ಯದೇವತೆಯಲ್ಲ ಎಂಬ ಭಾವವು ಸೂಚಿತ. ಭಗವದ್ಗೀತೆಯಲ್ಲಿ ಶ್ರೀಕೃಷ್ಣನ ವಿಶ್ವರೂಪವನ್ನು ವರ್ಣಿಸಿರುವ ಶ್ಲೋಕ ಇಲ್ಲಿ ಸ್ಮರಣೀಯ:

**ದಿವಿಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ ।**
**ಯದಿ ಭಾಃ ಸದೃಶೀ ಸಾ ಸ್ಯಾತ್ ಭಾಸಸ್ತಸ್ಯ ಮಹಾತ್ಮನಃ ॥** (೧೧/೧೨)

೧೨. **ದಿನೇಶ**–ಸೂರ್ಯ ಎಂಬುದಕ್ಕೆ ಷಟ್ಪ್ರಶ್ನೋಪನಿಷತ್ತಿನಲ್ಲಿ ವಾಯು ಎಂಬ ಅರ್ಥ ಬಂದಿದೆ. ಇದರಿಂದ ಅನಂತ ವಾಯುದೇವರಿಗಿಂತ ಮಿಗಿಲಾದ ಕಾಂತಿ ಶ್ರೀಹರಿಯದು ಎಂಬ ವಿಶೇಷಾರ್ಥ ಸೂಚಿತವಾಗುವುದು. ದಿನ ಎಂದರೆ ಜ್ಞಾನ; ದಿನೇಶ ಎಂಬುದಕ್ಕೆ ಜ್ಞಾನಾಧಿ

ಪತಿಯಾದ ವಾಯುದೇವರು ಎಂದರ್ಥ; ಶ್ರೀಹರಿಯು ಜ್ಞಾನ ಹಾಗು ಜ್ಞಾನದೇವತೆಯಾದ ವಾಯುದೇವರು ಇಬ್ಬರಿಗೂ ಈಶ ಎಂಬುದು ವಿಶೇಷಾರ್ಥ.

೧೩. **ಯದುಕುಲವಂಶತಿಲಕ:** ಯದುಕುಲ ಎಂಬುದು ಯಯಾತಿ ಪುತ್ರನಾದ ಯದುವಿನಿಂದ ಬೆಳೆದು ಬಂದ ಚಂದ್ರವಂಶದ ಒಂದು ಕವಲು. ಅದಕ್ಕೆ ಭೋಜ, ವೃಷ್ಣಿ, ಅಂಧಕ ಎಂಬುದು ಉಪಪಂಗಡಗಳು. ಅದನ್ನು ಸೂಚಿಸಲು ಯದುಕುಲ ಹಾಗೂ ವಂಶ ಎಂಬ ಪದಗಳನ್ನು ಸೂಚಿಸಿರುವರು. ಶ್ರೀರಾಮರೂಪವು ರಘುಕುಲತಿಲಕ ರೂಪವೆನ್ನಿಸಿದರೆ, ಶ್ರೀಕೃಷ್ಣರೂಪವು ಯದುಕುಲತಿಲಕವೆನ್ನಿಸಿದ ರೂಪ. ಒಟ್ಟಾಗಿ ಸರ್ವೋತ್ತಮ ಎಂಬುದು ಅದರ ಭಾವ.

೧೪. **ಪರಾಶರಾನತ:** ಪರಾಶರ ಮುನಿಯಿಂದ ವಂದಿತ ಎಂದರ್ಥ. ಶ್ರೀಹರಿಯ ವೇದವ್ಯಾಸರೂಪ ಪರಾಶರ-ಸತ್ಯವತಿಯರಿಂದ ಅವತರಿಸಿದ ರೂಪ. ಹಾಗೆ ಅವತರಿಸಿದ್ದು ಅವರಿಬ್ಬರ ಪ್ರಾರ್ಥನೆಯಂತೆ. ಆದ್ದರಿಂದ ಆತನು ಅವರ ಪುತ್ರನಾದರೂ ಅವರಿಂದ ಪೂಜಿತನಾದವನೇ ಆಗಿರುವನು. ಇದರಿಂದ ವಸುದೇವಪುತ್ರ, ದಶರಥಪುತ್ರ ಎಂಬ ಪದಗಳಂತೆ ಪರಾಶರಪುತ್ರ ಎಂಬುದು ಸಹ ಪರಾಶರರಿಗೆ ಅನುಗ್ರಹ ಮಾಡಿದ ರೂಪ ಎಂಬ ಅರ್ಥವನ್ನು ನೀಡುವುದು. ವೇದವ್ಯಾಸರೂಪವು ಮೇಲ್ನೋಟಕ್ಕೆ ಪರಾಶರರ ಪುತ್ರ ಎಂದು ಕಾಣುವ ರೂಪವಾದರೂ ವಾಸ್ತವವಾಗಿ ಶ್ರೀರಾಮ, ಶ್ರೀಕೃಷ್ಣರೂಪಗಳಂತೆ ಶ್ರೀಹರಿಯ ಸಾಕ್ಷಾದ್ರೂಪವಾಗಿದೆಯೇ ಹೊರತು ಕೇವಲ ಒಂದು ಋಷಿರೂಪವಲ್ಲ ಎಂಬ ವಿಶೇಷಾರ್ಥ ಸೂಚಿತವಾಗುವುದು.

ಪರಾಶರರಿಗೆ ಆ ಹೆಸರು ಬರಲು ತಮ್ಮ ವಂಶ ನಿಂತುಹೋಗುವುದು ಎಂಬ ಆತಂಕದಲ್ಲಿದ್ದ ವಸಿಷ್ಠಮುನಿಗಳಿಗೆ ಇವರು ಮೊಮ್ಮಗನಾಗಿ ಜನಿಸುವ ಮೂಲಕ ಪರಿಹಾರವಾಗುವುದು. ಎಂದರೆ ವಂಶವನ್ನು ಬೆಳಗಿದ ಕೀರ್ತಿ[೧] ಪರಾಶರಮುನಿಯದು. ಅದರಂತೆ ಪರೀಕ್ಷಿದ್ರಾಜನು ಪಾಂಡವರ ಮೊಮ್ಮಗನಾಗಿ ಜನಿಸಿ, ನಿಮಿತ್ತ ಎನ್ನಿಸಿದ. ಇದರಿಂದ ಪರಾಶರ ಎಂಬುದಕ್ಕೆ ಪರೀಕ್ಷಿದ್ರಾಜ ಎಂಬ ಅರ್ಥವೂ ಹೊಂದುವುದು. ಆ ಪರೀಕ್ಷಿದ್ರಾಜನನ್ನು ಅಶ್ವತ್ಥಾಮನ ಅಸ್ತ್ರದಿಂದ ಗರ್ಭದಲ್ಲಿ ಸಂರಕ್ಷಿಸಿ ಅವನು ಜನಿಸಿದ ಕೂಡಲೇ ಮೃತನಾದಾಗ, ಮರಳಿ ಬದುಕಿಸಿದ ಹಿರಿಮೆ ಶ್ರೀಕೃಷ್ಣರೂಪದ್ದು. ಇದರಿಂದ ಇದು ಕೃಷ್ಣರೂಪಕ್ಕೂ ಅನ್ವಯಿಸುವ ಪದವಾಗುವುದು. ಎಂದರೆ ಒಂದರ್ಥದಲ್ಲಿ ಇದು ಕೃಷ್ಣರೂಪದ ಸ್ತುತಿಯಾಗಿದ್ದರೆ, ಮತ್ತೊಂದು ಅರ್ಥದಲ್ಲಿ ಶ್ರೀವ್ಯಾಸರೂಪದ ಸ್ತುತಿಯಾಗಿದೆ. ಈ ಮೂಲಕ ಶ್ರೀಕನಕದಾಸರು ರೂಪತ್ರಯಗಳನ್ನು ಈ ಪದ್ಯದಲ್ಲಿ ಸ್ತುತಿಸಿದಂತಾಗಿದೆ ಎಂದು ತಿಳಿಯಬೇಕು.

---

೧. ಪರಾಸುಃ ಸ ಯತಸ್ತೇನ ವಸಿಷ್ಠ ಸ್ಥಾಪಿತೋ ಮುನಿಃ।
ಗರ್ಭಸ್ಥೇನ ತತೋ ಲೋಕೇ ಪರಾಶರ ಇತಿ ಸ್ಮೃತಃ॥ – ಮಹಾಭಾರತ ೧/೧೯೫/೩

೧೫. ದೇವ: ದೇವ ಎಂಬುದಕ್ಕೆ ದಿವು ಕ್ರೀಡಾಯಾಮ್[1] ಎಂಬುದಾಗಿ ೭ ಬಗೆಯ ಅರ್ಥವಿದ್ದು ಎಲ್ಲ ಅರ್ಥಗಳು ಸಹ ಶ್ರೀಹರಿಗೆ ಅನ್ವಯಿಸುವವು. ಎಂದರೆ ಅವನು ಅತ್ಯಂತ ಮುಖ್ಯವಾದ ಅರ್ಥದಲ್ಲಿ ದೇವ ಎನ್ನಿಸುವ ಹಿರಿಮೆ ಹೊಂದಿದವನು. ದೇವನೆಂದರೆ ಹರಿಯೇ ಎಂಬುದು ಇದರ ಒಟ್ಟು ಭಾವ. ದೇವ ಎಂಬುದಕ್ಕೆ ಬ್ರಹ್ಮದೇವ, ರುದ್ರದೇವ, ಇಂದ್ರದೇವ, ಇತ್ಯಾದಿ ವಿಶೇಷಣಗಳನ್ನು ಸೇರಿಸಿದಾಗ ಆ ದೇವತೆಗಳಿಗೆ ಅನ್ವಯಿಸುವುದು. ಆದರೆ ಯಾವ ವಿಶೇಷಣವೂ ಇಲ್ಲದೆ ದೇವ ಎಂದರೆ ಶ್ರೀಹರಿಯೇ ಎಂದರ್ಥ; ಸೂತ್ರ ಎಂದರೆ ಬ್ರಹ್ಮಸೂತ್ರ, ಗೀತೆ ಎಂದರೆ ಭಗವದ್ಗೀತೆ, ವ್ರತ ಎಂದರೆ ಏಕಾದಶೀ ಹೇಗೋ ಹಾಗೆ ದೇವ ಎಂದರೆ ಶ್ರೀಹರಿಯೇ ಎಂಬುದು ಶಾಸ್ತ್ರಗಳ ಭಾವ.

*****

## ೧೨. ಮುಕುಂದ ರಕ್ಷಿಸು

ಕುಂದಕುಡ್ಮಲರದನ ಪರಮಾ -
ನಂದ ಹರಿ ಗೋವಿಂದ ಸನಕಸ-
ನಂದವಂದಿತ ಸಿಂಧುಬಂಧನ ಮಂದರಾದ್ರಿಧರ ।
ಇಂದಿರಾಪತಿ ವಿಜಯಸಖ ಅರ-
ವಿಂದನಾಭ ಪುರಂದರಾರ್ಚಿತ
ನಂದಕಂದ ಮುಕುಂದ ರಕ್ಷಿಸು ನಮ್ಮನನವರತ ॥ ೧೨ ॥

ಅ: ಜಾಜಿಯ ಮೊಗ್ಗುಗಳಂತಹ ದಂತಪಂಕ್ತಿಯವನೇ, ಪರಮಾನಂದಪೂರ್ಣನೇ, ಶ್ರೀಹರಿಯೇ, ಗೋವಿಂದನೇ, ಸನಕಸನಂದನರಿಂದ ಸ್ತುತನಾದವನೇ, ಸಮುದ್ರಕ್ಕೆ ಸೇತುವೆ ಕಟ್ಟಿದವನೇ, ಮಂದರಪರ್ವತವನ್ನು ಹೊತ್ತವನೇ, ಇಂದಿರಾರಮಣನೇ, ಅರ್ಜುನನಿಗೆ ಸಖನಾಗಿ ಸಂರಕ್ಷಿಸಿದವನೇ, ಪದ್ಮನಾಭನೇ, ಇಂದ್ರನಿಂದ ಪೂಜಿತನಾದವನೇ, ನಂದನ ಕಂದನೇ, ಮುಕುಂದನೇ! ನೀನು ನಮ್ಮನ್ನು ಸದಾ ರಕ್ಷಿಸು.

೧. **ಕುಂದಕುಡ್ಮಲರದನ** - ಕುಂದ ಎಂದರೆ ಜಾಜಿ, ಕುಡ್ಮಲ ಎಂದರೆ ಮೊಗ್ಗು; ರದನ ಎಂದರೆ ದಂತ. ಜಾಜಿ ಮೊಗ್ಗುಗಳಂತಹ ಬಿಳಿ ಹಾಗೂ ಒತ್ತಾದ ಸುಂದರ ದಂತಪಂಕ್ತಿಯನ್ನು ಹೊಂದಿದವನು ಶ್ರೀಹರಿ; ದಂತದ ವರ್ಣನೆಯು ದೇಹದ ಇತರ ಸಕಲ ಲಕ್ಷಣಗಳಿಗೂ ಉಪಲಕ್ಷಣ ಎಂದು ತಿಳಿಯಬೇಕು.

೨. **ಪರಮಾನಂದ** -ಪರಮ ಎಂದರೆ ಉತ್ತಮ, ಸರ್ವಶ್ರೇಷ್ಠ ಎಂದರ್ಥ. ಶ್ರೀಹರಿಯ ಆನಂದವು ರಮಾ ಬ್ರಹ್ಮಾದಿ ಸಕಲರ ಆನಂದಕ್ಕಿಂತ ಅತ್ಯಂತ ಭಿನ್ನವಾದುದು. ಅದು ಪರಿಪೂರ್ಣ

---

೧. ದಿವುಕ್ರೀಡಾವಿಜಿಗೀಷಾವ್ಯವಹಾರದ್ಯುತಿಸ್ತುತಿಮೋದಮದಸ್ವಪ್ನಕಾಂತಿಗತಿಷು । - ಧಾತುಪಾಠಃ ।

ಹಾಗೂ ನಿರವಧಿಕ. ಅದರಂತೆ ಇತರ ಸಕಲಗುಣಗಳಿಗೂ ಸೂಚಕ. ಸದಾ ವ್ಯಕ್ತ ಎಂಬುದು ಅದರ ಮತ್ತೊಂದು ವಿಶೇಷ. ಇದನ್ನೆಲ್ಲವನ್ನೂ ಪರಮ ಎಂಬ ಪದವು ಸೂಚಿಸುವುದು. ಇದರಿಂದಾಗಿ ಶ್ರೀಹರಿಯು ಸರ್ವೋತ್ತಮ ಎಂಬ ತಾತ್ಪರ್ಯಾರ್ಥ ಲಭಿಸುವುದು.

೩. **ಹರಿ** - ಹರಿ ಎಂಬುದರ ಅರ್ಥ ಈಗಾಗಲೇ ಬಂದಿದೆ. (೧೧ನೇ ಪದ್ಯ) ಹರಿ ಎಂಬುದು ಶ್ರೀಹರಿಯ ನಾಮಮಾತ್ರವಲ್ಲದೆ ಒಂದು ರೂಪವೂ ಆಗಿದೆ ಎಂಬ ವಿಶೇಷಾಂಶವನ್ನು ಗಮನಿಸಬೇಕು. ಇದು ಕೇಶವಾದಿ ದ್ವಾದಶರೂಪಗಳಲ್ಲಿ ೨೩ನೆಯದು. ಸಂಕರ್ಷಣಾದಿ ದ್ವಾದಶರೂಪದಲ್ಲಿ ೧೧ನೆಯದು. ಅದರೊಂದಿಗೆ ಯಮದೇವರ ಪುತ್ರರಾಗಿ ಜನಿಸಿದ ಹರಿ ಎಂಬ ಮತ್ತೊಂದು ರೂಪವು ಇದೆ ಎಂಬುದಾಗಿ ಶ್ರೀಮದ್ಭಾಗವತ ಹಾಗೂ ಅದರ ತಾತ್ಪರ್ಯನಿರ್ಣಯದಿಂದ ತಿಳಿಯುವುದು[೧].

೪. **ಗೋವಿಂದ** - ಗೋವಿಂದ ಎಂಬುದು ಶ್ರೀಹರಿಯ ಒಂದು ರೂಪವಾಗಿರುವಂತೆ ವಿಶೇಷವಾದ ನಾಮವೂ ಆಗಿದೆ. ವೇದಗಳಿಂದ ತಿಳಿಯಲ್ಪಡುವವನು, ಸರ್ವವೇದ-ಪ್ರತಿಪಾದ್ಯ ಎಂಬ ಅನೇಕ ಬಗೆಯ ಅರ್ಥಗಳು ಇದಕ್ಕೆ ಇವೆ. ವಿಷ್ಣುಸಹಸ್ರನಾಮದಲ್ಲಿಯೂ ಈ ಪದ ಬಂದಿದೆ. ಗೋವರ್ಧನಪರ್ವತವನ್ನು ಎತ್ತಿ ಶ್ರೀಕೃಷ್ಣ ತನ್ನ ಪಾರಮ್ಯವನ್ನು ಸಾರಿದಾಗ ತಾನು ಮಾಡಿದ ಅಪಚಾರಕ್ಕಾಗಿ ಪಶ್ಚಾತ್ತಾಪಪಟ್ಟ ಇಂದ್ರ ಶ್ರೀಕೃಷ್ಣನನ್ನು ಗೋವಿಂದ ಎಂಬುದಾಗಿ ವಿಶೇಷವಾಗಿ ಸ್ತುತಿಸಿದ ವಿವರ ಶ್ರೀಮದ್ಭಾಗವತದಲ್ಲಿದೆ. ಇದು ಪಾಪಪರಿಹಾರಕವಾದ ವಿಶೇಷ ನಾಮ. ಅಚ್ಯುತ,ಅನಂತ ಹಾಗೂ ಗೋವಿಂದ ಎಂಬ ಈ ಮೂರು ನಾಮಗಳ ಉಚ್ಚಾರಣೆ, ಜಪ ಮೊದಲಾದ ಕಾರ್ಯಗಳಲ್ಲಿನ ಲೋಪದೋಷಗಳನ್ನು ಪರಿಹರಿಸುವ ಶ್ರೇಷ್ಠ ಸಾಧನ[೨].

೫. **ಸನಕಸನಂದವಂದಿತ** - ಸನಕ, ಸನಂದನ, ಸನತ್ಕುಮಾರ ಹಾಗೂ ಸನತ್ಸುಜಾತ ಎಂಬುವವರು ಬ್ರಹ್ಮದೇವರ ಮಾನಸಪುತ್ರರು. ಬ್ರಹ್ಮಚರ್ಯದಿಂದಲೇ ಪರಮಹಂಸಾಶ್ರಮ ಸ್ವೀಕರಿಸಿದ ದಾಖಲೆ ಇವರದು. ಇಲ್ಲಿಯ ಸನಂದ ಎಂಬುದಕ್ಕೆ ಸನಂದನ ಎಂದರ್ಥ. ಸನಕಾದಿ ನಾಲ್ವರು ಪರಮಹಂಸರಿಂದಲೂ ವಂದಿತನಾದವನು ಶ್ರೀಹರಿ. ಈ ನಾಲ್ವರಲ್ಲಿ ಸನತ್ಕುಮಾರ ಕಾಮನ ಅವತಾರ. ಇದು ಶ್ರೀಮದಾಚಾರ್ಯರ ದ್ವಾದಶಸ್ತೋತ್ರದಲ್ಲಿನ **ಸ್ಕಂದಸನಂದನವಂದಿತಪಾದ** (೫/೪) ಎಂಬ ಮಾತಿನ ಛಾಯೆಯನ್ನು ಹೊಂದಿದೆ.

---

೧. ನರೋ ನಾರಾಯಣಶ್ಚೈವ ಹರಿಃ ಕೃಷ್ಣಸ್ತಥೈವ ಚ ।
ಚತ್ವಾರೋ ಧರ್ಮತನಯಾ ಹರಿರೇವ ತ್ರಯೋ ಮತಃ ।
ಅನಂತೋ ನರನಾಮಾऽತ್ರ ತಸ್ಮಿಂಸ್ತು ನರನಾಮವಾನ್ ।
ವಿಶೇಷೇಣ ಸ್ವಯಂ ವಿಷ್ಣುರ್ನಿವಸತ್ಯಂಬುಜೇಕ್ಷಣಃ ।
ತಸ್ಮಾಚ್ಚತುರ್ಧಾ ಧರ್ಮಸ್ಯ ಜಾತೋ ವಿಷ್ಣುರಿತೀರಿತಃ ಇತಿ ಷಾಡ್ಗುಣ್ಯೇ ॥ - ಭಾ. ತಾ. (೨/೭/೬)

೨. ಅಚ್ಯುತಾನಂತಗೋವಿಂದನಾಮೋಚ್ಚಾರಣಭೇಷಜಾತ್ ।
ನಶ್ಯಂತಿ ಸಕಲಾ ರೋಗಾಃ ಸತ್ಯಂ ಸತ್ಯಂ ವದಾಮ್ಯಹಮ್ ॥ -ಕೃಷ್ಣಾಮೃತಮಹಾರ್ಣವ

೬. **ಸಿಂಧುಬಂಧನ** – ಶ್ರೀರಾಮಾವತಾರದಲ್ಲಿ ಲಂಕೆಯನ್ನು ಆಕ್ರಮಿಸಿದ ಶ್ರೀರಾಮ ದಕ್ಷಿಣಸಮುದ್ರವನ್ನು ಸೇತುವಿನಿಂದ ಬಂಧಿಸಿದ ವಿವರ ರಾಮಾಯಣದಲ್ಲಿ ಸುಪ್ರಸಿದ್ಧವಾದುದು. ಸಾಗರಕ್ಕೆ ಸೇತುವೆ ಕಟ್ಟಿದ ವಿಶಿಷ್ಟ ದಾಖಲೆ ಶ್ರೀರಾಮಾವತಾರದ್ದು. ಇದು ಐತಿಹಾಸಿಕ ಎಂಬುದು Satellite ಚಿತ್ರಗಳಿಂದ ದೃಢಪಟ್ಟಿದೆ. ಶ್ರೀರಾಮನು ಸಾಕ್ಷಾತ್ ಶ್ರೀಹರಿ ಎಂದು ಸ್ಫುಟಪಡಿಸುವ ಕಾರ್ಯ ಇದಾಗಿದೆ. ಇದರಿಂದ ಭವಸಿಂಧುಬಂಧನ, ಸಂಸಾರಸಮುದ್ರದಿಂದ ಪಾರು ಮಾಡುವವನು ಎಂಬ ಅರ್ಥವೂ ಸೂಚಿತ.

೭. **ಮಂದರಾದ್ರಿಧರ** – ಮಂದರ ಎಂಬುದು ಸಪ್ತಕುಲಪರ್ವತಗಳಲ್ಲಿ ಒಂದು. ಇದು ಚಿನ್ನದ ಪರ್ವತ ಎಂಬುದು ಮತ್ತೊಂದು ವಿಶೇಷ. ಶಿವನ ವರದಿಂದಾಗಿ ಬೇರಾರಿಂದಲೂ ಅಧಾರ್ಯವೆನ್ನಿಸಿದ್ದ ಇದನ್ನು ಶ್ರೀಹರಿಯು ಒಂದೇ ಕೈಯಿಂದ ಎತ್ತಿ ಗರುಡನ ಮೇಲಿರಿಸಿದ ವಿವರ ಶ್ರೀಮದ್ಭಾಗವತದಲ್ಲಿದೆ. ಅದರೊಂದಿಗೆ ಸಮುದ್ರಮಥನಕಾಲದಲ್ಲಿ ಇದನ್ನು ಕೂರ್ಮರೂಪದಿಂದ ತನ್ನ ಬೆನ್ನಮೇಲೆ ಧರಿಸಿದ್ದು ಮತ್ತೊಂದು ಮಹಿಮೆ. ಹೀಗೆ ಮಂದರಪರ್ವತವನ್ನು ಎತ್ತಿದ ಹಾಗೂ ಹೊತ್ತ ಹಿರಿಮೆಗಳು ಶ್ರೀಹರಿಯವು ಎಂಬುದು ಇಲ್ಲಿಯ ಭಾವ. ಅದರಂತೆ ಶ್ರೀಕೃಷ್ಣಾವತಾರದಲ್ಲಿ ಗೋವರ್ಧನಪರ್ವತವನ್ನು ಎತ್ತಿದ ಪ್ರಸಂಗವೂ ಇದರಿಂದ ಸೂಚಿತ ಎಂದು ತಿಳಿಯಬಹುದು. ಶ್ರೀಹರಿಯು ತನ್ನ ಎರಡು ಕೂರ್ಮರೂಪಗಳಿಂದ ಬ್ರಹ್ಮಾಂಡವನ್ನೇ ಹೊತ್ತಿರುವ ವಿವರ ಇದರಿಂದ ಉಪಲಕ್ಷಿತ ಎಂದು ತಿಳಿಯಬೇಕು.

೮. **ಇಂದಿರಾಪತಿ** – ಇಂದಿರೆ ಎಂದರೆ ಮಹಾಲಕ್ಷ್ಮಿ. ಬ್ರಹ್ಮಾದಿ ಇತರ ಸಕಲ ದೇವತೆಗಳೂ ಲಕ್ಷ್ಮೀಕಟಾಕ್ಷಕ್ಕೆ ಹಾತೊರೆಯುತ್ತಿದ್ದರೆ ಮಹಾಲಕ್ಷ್ಮಿಯು ಶ್ರೀಹರಿಯ ಕಟಾಕ್ಷಕ್ಕೆ ಹಂಬಲಿಸುವರು ಎಂಬುದು ವಿಶೇಷ. ಇಂದಿರಾದೇವಿಗೆ ಹೀಗೆ ಪತಿಯಾಗಿರುವ ಶ್ರೀಹರಿಯು ಸರ್ವೋತ್ತಮ ಎಂದರ್ಥ. ಇಂದಿರಾದೇವಿಯು ಅಕ್ಷರಪುರುಷಳು. ಅವಳಿಗೆ ಪತಿಯಾದ ಶ್ರೀಹರಿ ಪುರುಷೋತ್ತಮ ಎಂಬ ಮತ್ತೊಂದು ಅರ್ಥವು ಇದರಿಂದ ಸೂಚಿತ. ಇಂದಿರಾದೇವಿಯು ಬ್ರಹ್ಮರುದ್ರಾದಿ ಸಮಸ್ತ ದೇವತೆಗಳನ್ನು ಸರ್ವಾತ್ಮನಾ ನಿಯಂತ್ರಿಸುವ ಅಕ್ಷರಪುರುಷಳು ಎಂಬ ವಿವರ ಅಂಭೃಣೀಸೂಕ್ತದಲ್ಲಿ ಪ್ರತಿಪಾದಿತವಾಗಿದೆ. ದ್ವಾದಶಸ್ತೋತ್ರದ 'ಇಂದಿರಾಪತಿಮಾದ್ಯಾದಿವರದೇಶವರಪ್ರದಂ' (೧/೧) ಎಂಬಲ್ಲಿನ ಇಂದಿರಾಪತಿ ಎಂಬ ಪದವು ಇದಾಗಿದೆ ಎಂಬುದು ವಿಶೇಷ. ಪತಿ ಎಂಬುದಕ್ಕೆ ಅಂತರ್ನಿಯಾಮಕ ಎಂದರ್ಥ. ಮಹಾಲಕ್ಷ್ಮಿಗೆ ಕೇವಲ ಪತಿಮಾತ್ರವಾಗಿರದೇ, ಅಂತರ್ನಿಯಾಮಕನಾಗಿ ಅವರ ಒಳಗೂ ನೆಲೆಸಿರುವನು ಎಂಬ ವಿಶೇಷಾರ್ಥವು ಇದಕ್ಕಿದೆ.

೯. **ವಿಜಯಸಖ** – ವಿಜಯ[೧] ಎಂಬುದು ಅರ್ಜುನನ ದಶನಾಮಗಳಲ್ಲಿ ಒಂದು. ಅರ್ಜುನನಿಗೆ ಶ್ರೀಕೃಷ್ಣನು ಸಾರಥಿಯ ರೂಪದಲ್ಲಿ ಎಲ್ಲ ರೀತಿಯಲ್ಲೂ ನೆರವಾಗಿ

---

೧. ಅರ್ಜುನಃ ಫಾಲ್ಗುನೋ ಜಿಷ್ಣುಃ ಕಿರೀಟೀ ಶ್ವೇತವಾಹನಃ।
ಭೀಭತ್ಸುರ್ವಿಜಯಃ ಕೃಷ್ಣಃ ಸವ್ಯಸಾಚೀ ಧನಂಜಯಃ॥ – ಮ.ಭಾ.(ವಿರಾಟಪರ್ವ /೪೪/೯)

ಕುರುಕ್ಷೇತ್ರ ಯುದ್ಧದಲ್ಲಿ ವಿಜಯ ತಂದಿತ್ತದ್ದು ಇತಿಹಾಸ. ಅರ್ಜುನನು ಭೀಮಾನುಜನಾಗಿ ಮುಖ್ಯಪ್ರಾಣನನ್ನು ನೆರೆನಂಬಿದ ಮಹಾಸಾಧಕ. ವಾಯುಭಕ್ತರಿಗೆ ಶ್ರೀಹರಿಯು ಸರ್ವಾತ್ಮನಾ ರಕ್ಷಣೆ ನೀಡುವನು ಎಂಬ ತತ್ತ್ವ ಇದರಿಂದ ಸೂಚಿತ. ವಿಜಯ ಎಂಬುದಕ್ಕೆ ವಾಯುದೇವರು ಎಂಬುದು ಮುಖ್ಯಾರ್ಥ. ವಿಶಿಷ್ಟವಾದ ಜಯ ಸದಾಕಾಲ ಅವರದೇ ಎಂಬುದು ಅದಕ್ಕೆ ಕಾರಣ. ಅಂತಹ ವಾಯುದೇವರಿಗೆ ಶ್ರೀಹರಿಯು ಸದಾ ಸಖ ಎಂದರ್ಥ:

**ನನು ಸಖಾ ಮಮ ಕಾನನಗೋ ವಿಭುಃ। - ಮಧ್ವವಿಜಯ (೩/೧೨)**

೧೦. **ಅರವಿಂದನಾಭ** – ಅರವಿಂದ ಎಂದರೆ ಕಮಲ, ಅರವಿಂದನಾಭ ಎಂದರೆ ಪದ್ಮನಾಭ ಎಂದರ್ಥ. ಶ್ರೀಹರಿಯು ಸೃಷ್ಟಿಯ ಪ್ರಾರಂಭದಲ್ಲಿ ತನ್ನ ನಾಭಿಕಮಲದಿಂದ ಕಮಲರೂಪದಲ್ಲಿ ಸಕಲ ಲೋಕಗಳನ್ನು ಸೃಷ್ಟಿಸಿ, ಅದರ ಮೇಲೆ ಬ್ರಹ್ಮದೇವರನ್ನು ಸೃಷ್ಟಿಸಿದ ವಿವರ ಶ್ರೀಮದ್ಭಾಗವತಾದಿಗಳಲ್ಲಿ ನಿರೂಪಿತವಾಗಿದೆ. ಶ್ರೀಹರಿಯ ನಾಭಿಯಲ್ಲಿ ಕಾಣಿಸಿಕೊಂಡ ಪದ್ಮ ಹೀಗೆ ಸಕಲಲೋಕಗಳ ಸಂಕೇತವಾಗಿದ್ದು ಅವನ ಪಾರಮ್ಯವನ್ನು ನಿರೂಪಿಸುವ ವಿಶಿಷ್ಟಪ್ರಸಂಗವಾಗಿದೆ. ಅದರಂತೆ ಪದ್ಮಕ್ಕೆ ಸಾಕ್ಷಾತ್ ಮಹಾಲಕ್ಷ್ಮಿಯು ಅಭಿಮಾನಿದೇವತೆಯಾಗಿದ್ದು ಅವರಿಗೂ ಶ್ರೀಹರಿಯು ಕಾರಣ ಎಂಬ ವಿಶೇಷಾಂಶ ಈ ಪದದಿಂದ ಸೂಚಿತ. ಬ್ರಹ್ಮಸೂತ್ರಭಾಷ್ಯದಲ್ಲಿ ಪದ್ಮನಾಭತ್ವ ಎಂಬುದು ಮಹಾವಿಷ್ಣುವಿಗೆ ಮಾತ್ರ ಅನ್ವಯಿಸುವ ವಿಶೇಷವಾದ ಲಕ್ಷಣ ಎಂಬ ಪ್ರಮೇಯ ವಿಶದವಾಗಿ ನಿರೂಪಿತವಾಗಿದೆ[೧].

೧೧. **ಪುರಂದರಾರ್ಚಿತ** – ಪುರಂದರ ಎಂದರೆ ಇಂದ್ರ. ೬ ಹಾಗೂ ೭ನೆಯ ಮನ್ವಂತರ-ಗಳಲ್ಲಿ ಇಂದ್ರಪದವಿಯಲ್ಲಿ ವಿರಾಜನಾಗಿದ್ದುದು ಪುರಂದರನ ವಿಶೇಷ. ಗೋವರ್ಧನ ಪ್ರಸಂಗ, ಪಾರಿಜಾತಹರಣ ಪ್ರಸಂಗ, ಖಾಂಡವವನದಹನ ಪ್ರಸಂಗ ಮೊದಲಾದ ಅನೇಕ ಪ್ರಸಂಗಗಳಲ್ಲಿ ಇಂದ್ರನು ಶ್ರೀಕೃಷ್ಣನಿಗೆ ಶರಣಾಗಿ ಸ್ತುತಿಸಿದ್ದು ಶ್ರೀಮದ್ಭಾಗವತ, ಹರಿವಂಶ, ಮೊದಲಾದವುಗಳಲ್ಲಿ ಸುಪ್ರಸಿದ್ಧ. ಮೂರು ಲೋಕಗಳಿಗೆ ಅರಸನಾದ ಇಂದ್ರನಿಂದ ವಂದಿತನಾದ ಶ್ರೀಹರಿಯು ಸರ್ವೋತ್ತಮ ಎಂಬುದು ಇದರ ಭಾವ.

೧೨. **ನಂದಕಂದ** – ನಂದ ಎಂದರೆ ನಂದಗೋಪ; ನಂದಗೋಪನಿಗೆ ಶ್ರೀಹರಿಯು ಕೃಷ್ಣರೂಪದಿಂದ ಕಂದ ಎನ್ನಿಸಿದ ವಿವರ ಶ್ರೀಮದ್ಭಾಗವತದಲ್ಲಿದೆ. ನಂದಗೋಪನ ತಪಸ್ಸಿಗೆ ಮೆಚ್ಚಿ, ಶ್ರೀಹರಿ ಹಾಗೆ ಅವನ ಪುತ್ರತ್ವೇನ ವರ್ಧಿಸಿ, ವಿಶೇಷ ಆನಂದ ನೀಡಿದ. ವಾಸ್ತವವಾಗಿ ಅವನು ಯಾರ ಪುತ್ರನೂ ಆಗಿರದೆ, ಸರ್ವಸೃಷ್ಟಿಕರ್ತನಾಗಿರುವವನು. ಆದರೂ ಭಕ್ತರಮೇಲಿನ ವಾತ್ಸಲ್ಯದಿಂದ ಹೀಗೆ ಅವತಾರಾದಿಗಳಿಂದ ಅವರಿಗೆ ವಿಶೇಷ ಆನಂದ ನೀಡುವನು ಎಂದರ್ಥ.

---

೧. ಅಜಸ್ಯ ನಾಭಾವಧ್ಯೇಕಮರ್ಪಿತಂ ಯಸ್ಮಿನ್ ವಿಶ್ವಾನಿ ಭುವನಾನಿ ತಸ್ಥುಃ।
ಇತಿ ಇವಿಷ್ಣೋರ್ಹಿ ಲಿಂಗಮ್ ............ ॥
ಅಜಸ್ಯ ನಾಭಾವಿತಿ ಯಸ್ಯ ನಾಭೇರಭೂಚ್ಚುತ್ರೇಃ ಪುಷ್ಕರಂ ಲೋಕಸಾರಮ್।
ತಸ್ಮೈ ನಮೋ ವ್ಯಸ್ತಸಮಸ್ತವಿಶ್ವವಿಭೂತಯೇ ವಿಷ್ಣವೇ ಲೋಕಕರ್ತ್ರೇ। ಇತಿ ಸ್ಕಾಂದೇ॥
- ಬ್ರಹ್ಮಸೂತ್ರಭಾಷ್ಯ (೧/೧/೧)

೧೩. **ಮುಕುಂದ** – ಮುಕುಂದ ಎಂದರೆ ಮೋಕ್ಷನೀಡುವವನು ಎಂದರ್ಥ. ಶ್ರೀಹರಿಯ ಅನುಗ್ರಹ ವಿಶೇಷದಿಂದಾಗಿ ಇತರ ದೇವತೆಗಳು ಒಂದೊಂದುಬಗೆಯ ವಿಶಿಷ್ಟಕಾರ್ಯ-ಗಳನ್ನು ಮಾಡುವ ಸಾಮರ್ಥ್ಯವನ್ನು ಯಥಾಯೋಗ್ಯವಾಗಿ ಹೊಂದಿದ್ದರೂ, ಮೋಕ್ಷವನ್ನು ಮಾತ್ರ ಶ್ರೀಹರಿಯೇ ನೀಡುವನು. ಇತರರಾರೂ ಮುಕ್ತಿದಾಯಕರಲ್ಲ. ಎಂದರೆ ಮೋಕ್ಷದಾತೃತ್ವ ಶ್ರೀಹರಿಯ ವಿಶಿಷ್ಟಲಕ್ಷಣಗಳಲ್ಲೊಂದು ಎಂಬುದು ಇಲ್ಲಿಯ ಭಾವ.

*****

## ೧೩. ಪುರಾಣಪುರೋಷತ್ತಮ ರಕ್ಷಿಸು

ಬಾಣಬಾಹುಚ್ಛೇದ ರಾವಣ-
ಪ್ರಾಣನಾಶನ ಪುಣ್ಯನಾಮ ಪು-
ರಾಣಪುರುಷೋತ್ತಮ ನಿಪುಣ ಅಣುರೇಣುಪರಿಪೂರ್ಣ ।
ಕ್ಷೋಣಿಪತಿ ಸುಲಲಿತ ಸುದರ್ಶನ-
ಪಾಣಿ ಪಾಂಡವರಾಜಕಾರ್ಯಧು-
ರೀಣ ಜಗನಿರ್ಮಾಣ ರಕ್ಷಿಸು ನಮ್ಮನನವರತ ॥ ೧೩ ॥

ಅ: ಬಾಣಾಸುರನ ತೋಳುಗಳನ್ನು ಕತ್ತರಿಸಿದವನೇ, ರಾವಣನ ಪ್ರಾಣವನ್ನು ತೆಗೆದವನೇ, ಪುಣ್ಯಕರವಾದ ಹೆಸರುಳ್ಳವನೇ, ಪುರಾಣಪುರುಷೋತ್ತಮನೇ, ಅತ್ಯಂತನಿಪುಣನೇ, ಅಣುರೇಣುಗಳಲ್ಲಿ ಪರಿಪೂರ್ಣವಾಗಿ ನೆಲೆಸಿರುವವನೇ, ಭೂಮಿಗೆ ಒಡೆಯನಾದವನೇ, ಅತ್ಯಂತ ಮನೋಹರನಾದವನೇ, ಸುದರ್ಶನವನ್ನು ಕೈಯಲ್ಲಿ ಹಿಡಿದವನೇ, ಪಾಂಡವರ ರಾಜಕಾರ್ಯವನ್ನು ಸಾಧಿಸಿಕೊಟ್ಟವನೇ, ಜಗತ್ತನ್ನು ನಿರ್ಮಿಸಿದವನೇ, ಶ್ರೀಹರಿಯೇ! ನೀನು ಸದಾ ನಮ್ಮನ್ನು ರಕ್ಷಿಸು.

ವಿ: ೧. ಈ ಪದ್ಯದಲ್ಲೂ ಶ್ರೀರಾಮ ಹಾಗೂ ಶ್ರೀಕೃಷ್ಣರೂಪಗಳ ಸ್ತೋತ್ರವು ಒಟ್ಟಾಗಿಯೇ ಬಂದಿದೆ.

೨. ಬಾಣಬಾಹುಚ್ಛೇದ: ಬಾಣಾಸುರ ಸಾವಿರಕೈಗಳನ್ನು ಹೊಂದಿದ್ದ ಒಬ್ಬ ಅಸುರ. ಬಲಿಚಕ್ರವರ್ತಿಯ ಮಗ. ಕಾರ್ತವೀರ್ಯಾರ್ಜುನ ಎಂಬ ಚಂದ್ರವಂಶದ ರಾಜನೂ ಸಹ ಸಾವಿರಕೈಗಳನ್ನು ಹೊಂದಿದ್ದನು ಎಂಬುದು ಪ್ರಸಿದ್ಧ. ಮುಂಚಿತವಾಗಿ ಶಿವಭಕ್ತನಾಗಿದ್ದ ಬಾಣಾಸುರ ಶ್ರೀಕೃಷ್ಣನ ಅನುಗ್ರಹದಿಂದ ಪರಮವೈಷ್ಣವನಾದ. ಇವನ ಮಗಳಾದ ಉಷೆಯನ್ನು ಶ್ರೀಕೃಷ್ಣನ ಮೊಮ್ಮಗ ಅನಿರುದ್ಧ ವಿವಾಹವಾದ. ಬಾಣಾಸುರ ಎಂಬ ಹೆಸರಿನ ಅಸುರಸ್ವಭಾವದ ಒಬ್ಬ ರಾಕ್ಷಸನೂ ಇರುವನು. ಅವನು ಕೀಚಕನಾಗಿ ಹುಟ್ಟಿ ಭೀಮನಿಂದ ಹತನಾದ, ಈ ಬಾಣಾಸುರ ಸ್ವರೂಪದಲ್ಲಿ ಸಾತ್ತ್ವಿಕನಾದವನು. ಆ ಬಾಣಾಸುರ ದೈತ್ಯನ ಆವೇಶದಿಂದಾಗಿ

ಶ್ರೀಕೃಷ್ಣನಿಗೆ ವಿರೋಧವೆಸಗಿದ. ಅವನ ಸಾವಿರ ಕೈಗಳಲ್ಲಿ ೨ನ್ನು ಮಾತ್ರ ಉಳಿಸಿ ಉಳಿದ ೯೯೮ ಕೈಗಳನ್ನು ಶ್ರೀಕೃಷ್ಣ ಕತ್ತರಿಸಿಹಾಕಿದ. ಆಗ ಅವನಲ್ಲಿ ಅಸುರಾವೇಶ ಅಳಿದು ಶ್ರೀಹರಿಭಕ್ತನಾದ[1]. ಈ ಪ್ರಸಂಗವನ್ನು ಈ ಪದದಿಂದ ಇಲ್ಲಿ ಸೂಚಿಸಲಾಗಿದೆ ಎಂದು ತಿಳಿಯಬೇಕು.

೩. **ರಾವಣಪ್ರಾಣನಾಶನ:** ರಾವಣ ೨೦ ಕೈಗಳು ಹಾಗೂ ೧೦ ಮುಖಗಳ ವಿಚಿತ್ರ ರಾಕ್ಷಸ. ತಂದೆ ವಿಶ್ವವಸ್ ಮುನಿ; ಆದರೆ ತಾಯಿ ಕೈಕಸಿ ಎಂಬ ರಾಕ್ಷಸಿ. ಇದರಿಂದಾಗಿ ರಾಕ್ಷಸ ಯೋನಿಗೆ ಸೇರಿದ ರಾವಣ ಲೋಕಕಂಟಕನಾದ. ಹಿಂದಿನ ಜನ್ಮದಲ್ಲಿ ಹಿರಣ್ಯಕಶ್ಯಪುವಾಗಿದ್ದ ಇವನಲ್ಲಿ ಅಲ್ಲಿದ್ದಂತೆ ಜಯ ಎಂಬ ವಿಷ್ಣುಪಾರ್ಷದನ ಆವೇಶವೂ ಇದ್ದಿತು. ಬ್ರಹ್ಮವರದಿಂದಾಗಿ ಅವಧ್ಯನೆನ್ನಿಸಿದ ಇವನನ್ನು ಶ್ರೀರಾಮರೂಪದಿಂದ ಶ್ರೀಹರಿ ಸಂಹರಿಸಿದ. ರಾವಣನ ಪ್ರಾಣಗಳನ್ನು ತೆಗೆದವನು ಎಂಬುದು ಇದರ ಒಂದು ಬಗೆಯ ಅರ್ಥವಾದರೆ, ರಾವಣನಿಗೆ ಪ್ರಾಣದಂತಿದ್ದ ಇಂದ್ರಜಿತ್, ಕುಂಭಕರ್ಣ ಮೊದಲಾದವರನ್ನು ನಾಶಪಡಿಸಿದವನು ಎಂಬುದು ಇನ್ನೊಂದು ಬಗೆಯ ಅರ್ಥ. ಒಟ್ಟಾಗಿ ರಾವಣನನ್ನು ಅವನ ಆಪ್ತೇಷ್ಟರ ಸಮೇತವಾಗಿ ಸಂಹರಿಸಿದ ಹಿರಿಮೆ ಶ್ರೀರಾಮನದು.

೪. **ಪುಣ್ಯನಾಮ:** ಪುಣ್ಯನಾಮ ಎಂದರೆ ಪುಣ್ಯನೀಡುವಂತಹ ನಾಮವುಳ್ಳವನು ಎಂದರ್ಥ. ಶ್ರೀಹರಿಯ ನಾಮೋಚ್ಚಾರಣೆಯಿಂದಲೇ ಅಪಾರವಾದ ಪುಣ್ಯ ಲಭಿಸುವುದರಿಂದ ಅವನಿಗೆ ಆ ಹೆಸರು. ಶ್ರೀಹರಿಯ ಸಕಲ ನಾಮಗಳೂ ಪುಣ್ಯನಾಮಗಳೂ ಆಗಿರುವುದು ವಿಶೇಷ. ಬ್ರಹ್ಮಸೂತ್ರ ಹಾಗೂ ಅದರ ವ್ಯಾಖ್ಯಾನಗಳಲ್ಲಿ ಉಲ್ಲೇಖವಾಗಿರುವಂತೆ, ಜಗತ್ತಿನ ಸಕಲ ನಾಮಗಳೂ ಸಹ ಶ್ರೀಹರಿಯ ಹೆಸರೇ ಆಗಿರುವವು; ಎಂದರೆ ಸಕಲ ಬಗೆಯ ವರ್ಣಾತ್ಮಕ ಹಾಗೂ ಧ್ವನ್ಯಾತ್ಮಕ ವರ್ಣಗಳು ಶ್ರೀಹರಿಯ ಮಹಿಮೆಯನ್ನೇ ತಿಳಿಸುವವು ಎಂದರ್ಥ. ಲೋಕದಲ್ಲಿ ದೋಷವಾಚಕ ಶಬ್ದಗಳೆಂದು ಪ್ರಸಿದ್ಧವಾದ ದುಃಖ, ಶೂನ್ಯ, ತುಚ್ಛ ಮೊದಲಾದ ಶಬ್ದಗಳೂ ಸಹ ದುಃಖ ಮೊದಲಾದವುಗಳಿಗೆ ಸ್ವಾಮಿಯಾದವನು ಶ್ರೀಹರಿ ಎಂಬ ಅರ್ಥದಲ್ಲಿ ಅವನ ಪುಣ್ಯನಾಮಗಳೇ ಆಗಿರುವವು ಎಂಬುದು ಶಾಸ್ತ್ರಗಳ ನಿಲುವು. ಪುಣ್ಯ ಎಂಬ ಹೆಸರುಳ್ಳವನು ಎಂಬ ಅರ್ಥವು ಪುಣ್ಯನಾಮ ಎಂಬ ಶಬ್ದಕ್ಕೆ ಉಂಟು. ಪಾವನಗೊಳಿಸುವುದರಿಂದ ಶ್ರೀಹರಿಗೆ ಪುಣ್ಯ ಎಂದು ಹೆಸರು (**ಪುನಾತೇಃ ಪುಣ್ಯನಾಮವಾನ್**).

೫. **ಪುರಾಣಪುರುಷೋತ್ತಮ:** ಪುರಾಣಪುರುಷರಲ್ಲಿ ಉತ್ತಮನಾದವನು ಎಂದರ್ಥ. ಪುರಾಣ ಎಂದರೆ ಅನಾದಿನಿತ್ಯ ಎಂದರ್ಥ. ಕ್ಷರ, ಅಕ್ಷರ ಎಂಬುದಾಗಿ ಚೇತನರು ಎರಡು ಬಗೆ. ಬ್ರಹ್ಮಾದಿಗಳು ಕ್ಷರಪುರುಷರೆನಿಸಿದರೆ, ಮಹಾಲಕ್ಷ್ಮಿಯು ಅಕ್ಷರಪುರುಷಳು. ಶ್ರೀಹರಿಯು ಈ ಕ್ಷರಾಕ್ಷರಪುರುಷರಿಗಿಂತ ಮಿಗಿಲಾದ್ದರಿಂದ ಅವನಿಗೆ ಪುರಾಣಪುರುಷೋತ್ತಮ ಎಂದು ಹೆಸರು. ಇದು ಭಗವದ್ಗೀತೆಯ ೧೫ನೆಯ ಅಧ್ಯಾಯದ ಕೊನೆಯ ೫ ಶ್ಲೋಕಗಳಲ್ಲಿ ಬಂದಿರುವ

---

೧. ತದಾ ಶಿವೇನ ಪ್ರಣತೋ ಬಾಣರಕ್ಷಣಕಾಮ್ಯಯಾ।
ಕೃತ್ವಾ ಸ್ವಭಕ್ತಂ ಬಾಣಂ ತಂ ರರಕ್ಷ ದ್ವಿಭುಜೀಕೃತಮ್ ॥ 		- ಮ.ಭಾ.ತಾ.ನಿ (೨೦/೨೬೬)

ವಿಷಯಗಳ ಸಾರ[೧]. ಆ ಅಧ್ಯಾಯಕ್ಕೆ ಪುರುಷೋತ್ತಮ ಯೋಗ ಎಂದೇ ಹೆಸರು. ಒಟ್ಟಾಗಿ ಸರ್ವೋತ್ತಮ ಎಂಬುದು ಪುರುಷೋತ್ತಮ ಶಬ್ದದ ಅರ್ಥ. ಇದನ್ನು ಪುರಾಣ ಹಾಗೂ ಪುರುಷೋತ್ತಮ ಎಂಬುದಾಗಿ ೨ ಪದಗಳನ್ನಾಗಿಯೂ ಓದಿಕೊಳ್ಳಬಹುದು. ಪುರಾಣ ಎಂಬುದು ಶ್ರೀಹರಿಯ ಹೆಸರುಗಳಲ್ಲೊಂದು: **ಅಜೋ ನಿತ್ಯಃ ಶಾಶ್ವತೋಽಯಂ ಪುರಾಣಃ।** -ಭಗವದ್ಗೀತೆ(೨/೨೦)

ಮೂಲರೂಪದಂತೆಯೇ ಇತರ ಸಕಲ ರೂಪಗಳಲ್ಲೂ ಸಹ ಅನಾದಿನಿತ್ಯನಾಗಿಯೇ ಇರುವವನು ಎಂಬ ಅರ್ಥದಲ್ಲಿಯೂ ಅವನ ಎಲ್ಲ ರೂಪಗಳೂ ಸಹ ಅನಾದಿನಿತ್ಯ ಎಂಬ ಅರ್ಥದಲ್ಲೂ ಪುರಾಣ ಎಂಬುದು ಶ್ರೀಹರಿಯ ವಿಶೇಷ ನಾಮ.

೬. **ನಿಪುಣ:** ನಿಪುಣ ಎಂದರೆ ಕುಶಲ, ದಕ್ಷ ಎಂದರ್ಥ. ಶ್ರೀಹರಿಯು ಸಕಲ ಜಗತ್ತಿಗೂ ಅನಾದಿಕಾಲದಿಂದ ಸಕಲ ಬಗೆಯಲ್ಲೂ ಸಹ ಸಕಲ ಕಾರ್ಯಗಳನ್ನೂ ಅನಾಯಾಸದಿಂದ ಮಾಡುವ ಮಹಾನಿಪುಣ ಎಂಬುದು ಶಾಸ್ತ್ರಗಳಲ್ಲಿ ಪ್ರತಿಪಾದಿತವಾದ ಪ್ರಮೇಯ. ಸಕಲ ಕಾರ್ಯಗಳಲ್ಲೂ, ಸಕಲ ರೀತಿಯಲ್ಲೂ, ಸಕಲ ಕಾಲದಲ್ಲೂ ಅತ್ಯಂತ ನಿಪುಣ ಎಂಬುದು ಶ್ರೀಹರಿಯ ವಿಶೇಷ ಮಹಿಮೆ.

೭. **ಅಣುರೇಣುಪರಿಪೂರ್ಣ:** ಅಣು ಎಂಬುದು ಅತಿಚಿಕ್ಕ ಪದಾರ್ಥ. ರೇಣು ಎಂಬುದಕ್ಕೂ ಸಹ ಧೂಳಿನ ಕಣ ಎಂಬ ಅರ್ಥದಲ್ಲಿ ಅದೇ ಅರ್ಥವೇ ಉಂಟು. ಶ್ರೀಹರಿಯು **ಅಣೋರಣೀಯಾನ್ ಮಹತೋಮಹೀಯಾನ್** ಎಂಬ ವಿಶಿಷ್ಟ ಹಿರಿಮೆ ಹೊಂದಿದವನು ಎಂದರೆ ಏಕಕಾಲಕ್ಕೆ ಅಣುವೂ ಹಾಗೂ ಮಹತ್ತೂ ಆಗಿರಬಲ್ಲ ಅನುಪಮ ಹಿರಿಮೆಯ ಮಹಾಪುರುಷ. ಅಣುವು ಮಹತ್ತಾಗಲಿ, ಮಹತ್ತು ಅಣುವಾಗಲಿ, ಏಕಕಾಲದಲ್ಲಿ ಎರಡು ಸಾಧ್ಯವಿಲ್ಲ. ಆದರೆ ಶ್ರೀಹರಿಯು ಏಕಕಾಲದಲ್ಲಿ ಹಾಗಿರುವ ಮೂಲಕ ತಾನು ಸರ್ವವ್ಯಾಪ್ತ ಎಂಬುದನ್ನು ಸೂಚಿಸಿರುವನು. ಅಣು ಪ್ರದೇಶದಲ್ಲಿನ ವ್ಯಾಪ್ತಿಯು ಸಹ ಅವನ ಪರಿಪೂರ್ಣತೆಗೆ ಧಕ್ಕೆ ತರದು ಎಂಬುದು ಅವನ ಮತ್ತೊಂದು ಮಹಿಮೆ ಎಂಬುದು **ಅಣೋರಣೀಯಾನ್**

೧. ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ।
ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ॥
ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ।
ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ॥
ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ।
ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥
ಯೋ ಮಾಮೇವಮಸಮ್ಮೂಢೋ ಜಾನಾತಿ ಪುರುಷೋತ್ತಮಮ್।
ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ॥
ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾಽನಘ।
ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ॥ ಭಗವದ್ಗೀತೆ (೧೫/೧೬-೨೦)

**ಮಹತೋಮಹೀಯಾನ್**. ಅಣುವಿನಂತಹ ಜೀವರಲ್ಲೂ ರೇಣುವಿನಂತಹ ಅತಿಸೂಕ್ಷ್ಮ ಪದಾರ್ಥದಲ್ಲಿಯೂ ಶ್ರೀಹರಿಯು ಪರಿಪೂರ್ಣನಾಗಿಯೇ ನೆಲೆಸಿರುವನು ಎಂಬುದು ಇನ್ನೊಂದು ಬಗೆಯ ಅರ್ಥ. ಅಣು ಎಂಬುದು ಶ್ರೀಹರಿಯ ಹೆಸರೂ ಹೌದು. **ಅಣುಃ ಬೃಹತ್ ಕೃಶಃ ಸ್ಥೂಲಃ** – ವಿಷ್ಣುಸಹಸ್ರನಾಮ. ಅಣುರೇಣುತೃಣಕಾಷ್ಠ ಪರಿಪೂರ್ಣ ಎಂಬ ಶ್ರೀಪುರಂದರದಾಸರ ಮಾತಿನ ಭಾವ ಇದರಲ್ಲಿದೆ.

೮. **ಕ್ಷೋಣಿಪತಿ**: ಕ್ಷೋಣಿ ಎಂದರೆ ಭೂಮಿ; ಕ್ಷೋಣಿಪತಿ ಎಂದರೆ ಭೂಪತಿಯಾದ ವರಾಹರೂಪದ ಶ್ರೀಹರಿ ಎಂದರ್ಥ. ಪ್ರಳಯೋದಕದಲ್ಲಿ ಮುಳುಗಿದ್ದ ಭೂಮಿಯನ್ನು ಎತ್ತಿ ತಂದದ್ದು ಹಿರಣ್ಯಾಕ್ಷನ ಆಕ್ರಮಣಕ್ಕೊಳಗಾಗಿದ್ದ ಭೂಮಿಯನ್ನು ಪಾಲಿಸಿದ್ದು ಭೂಮಿಯನ್ನು ಸದಾ ತನ್ನ ಕೋರೆಗಳ ಮೇಲೆ ಸದಾ ಧರಿಸಿರುವುದು ಹೀಗೆ ಅನೇಕ ರೀತಿಯಲ್ಲಿ ಶ್ರೀಹರಿಯು ಕ್ಷೋಣಿಪತಿ ಎನ್ನಿಸಿರುವನು. ಕ್ಷೋಣಿ ಎಂಬುದಕ್ಕೆ ಭೂರೂಪದ ಮಹಾಲಕ್ಷ್ಮಿ ಎಂದರ್ಥ. ಲಕ್ಷ್ಮೀಪತಿ ಎಂದು ತಾತ್ಪರ್ಯ. ಭೂದೇವಿ ಎಂಬ ಭೂಮಿಗೆ ಅಭಿಮಾನಿನಿಯಾದ ಧರಾದೇವಿಗೂ ಶ್ರೀಹರಿಯು ಪತಿ. ಧರಾದೇವಿಗೆ ಪತಿ ಎಂದರೆ ಧರಾದೇವಿಗೆ ಅಂತರ್ಯಾಮಿಯಾದ ಧರಾರೂಪದ ಮಹಾಲಕ್ಷ್ಮಿಗೆ ಪತಿ ಎಂಬುದು ಮುಖ್ಯಾರ್ಥ. ಕ್ಷೋಣಿಪತಿ ಎಂಬುದಕ್ಕೆ ಭೂಪತಿ, ರಾಜ ಎಂಬ ಅರ್ಥವು ಪ್ರಸಿದ್ಧ. ರಾಮನಾಗಿ ನಿಜವಾದ ಅರ್ಥದಲ್ಲಿ ರಾಜನೆನ್ನಿಸಿ ತನ್ನ ರಾಜ್ಯವನ್ನು ರಾಮರಾಜ್ಯ ಎನ್ನಿಸಿದ ಹಿರಿಮೆ ಶ್ರೀರಾಮರೂಪದ ಶ್ರೀಹರಿಯದು ಎಂಬ ಅರ್ಥವೂ ಇದರಿಂದ ಸೂಚಿತ. ಭೂಲೋಕದ ರಾಜರಲ್ಲಿ ಒಂದು ರೂಪದಿಂದ ನೆಲೆಸಿದ್ದು ಮುಖ್ಯಾರ್ಥದಲ್ಲಿ ಭೂಮಿಯನ್ನು ಪಾಲಿಸುವವನು ಶ್ರೀಹರಿಯೇ ಆಗಿರುವನು ಎಂಬ ಇನ್ನೊಂದು ಬಗೆಯ ಅರ್ಥವೂ ಉಂಟು. ರಾಜರಲ್ಲಿ ವಿಭೂತಿರೂಪವನ್ನು ಇರಿಸಿರುವ ವಿವರ ಭಗವದ್ಗೀತೆಯಲ್ಲಿ ಬಂದಿದೆ: ನರಾಣಾಂಚ ನರಾಧಿಪಃ।(೧೦/೨೭); **ನಾವಿಷ್ಣುಃ ಪೃಥಿವೀಪತಿಃ** (ಪುರಾಣವಾಕ್ಯ).

೯. **ಸುಲಲಿತ**:ಸುಲಲಿತ ಎಂಬುದಕ್ಕೆ ಅತ್ಯಂತ ಮನೋಹರ ಎಂದರ್ಥ. ಶ್ರೀಹರಿಯ ಸಕಲ ರೂಪಗಳು ಸಹ ಮನ್ಮಥನಿಗೆ ಮಿಗಿಲಾದ ಸುರೂಪದಿಂದ ಕೂಡಿದವುಗಳಾಗಿವೆ. **ಸಾಕ್ಷಾನ್ಮನ್ಮಥಮನ್ಮಥಃ** – ಗೋಪೀಗೀತ-ಶ್ರೀಮದ್ಭಾಗವತ; **ಲಾವಣ್ಯದಲಿ ನೋಡೆ ಲೋಕಮೋಹಕನಯ್ಯ** (ಶ್ರೀಪುರಂದರದಾಸರು). ಶ್ರೀಮನ್ಮಧ್ವಾಚಾರ್ಯರ ದ್ವಾದಶಸ್ತೋತ್ರದ ಈ ಕೆಳಗಿನ ವಾಕ್ಯದ ಸ್ಫೂರ್ತಿಯನ್ನು ಇದರಲ್ಲಿ ಗುರುತಿಸಬಹುದು: **ಸುಲಲಿತತನುವರವರದಮಹಾಬಲ ಯದುವರ ಪಾರ್ಥಪ ಭವ ಮಮ ಶರಣಮ್ ।**

೧೦. **ಸುದರ್ಶನಪಾಣಿ**: ಸುದರ್ಶನ ಚಕ್ರವನ್ನು ಕೈಯಲ್ಲಿ ಹಿಡಿದವನು. ಶ್ರೀಹರಿಯ ಅನಂತರೂಪಗಳು ಸಹ ಸಕಲ ಬಗೆಯ ಆಯುಧಗಳನ್ನು ಧರಿಸಿದ ವಿಶೇಷತೆಯನ್ನು ಹೊಂದಿವೆ. ಎಂಬುದು ಈ ಪದದಿಂದ ಸೂಚಿತ. ಸುದರ್ಶನಚಕ್ರಕ್ಕೆ ಮುಖ್ಯಾಭಿಮಾನಿನಿ ಮಹಾಲಕ್ಷ್ಮಿಯ ಶ್ರೀದುರ್ಗಾರೂಪ. ಕಾಮ ಅವಾಂತರ ಅಭಿಮಾನಿ. ಇವರಿಬ್ಬರಿಗೂ ಆದರಂತೆ ಸರ್ವರಿಗೂ

ನಿಯಾಮಕನಾದವನು ಶ್ರೀಹರಿ ಎಂಬ ಅರ್ಥ ಸುದರ್ಶನಪಾಣಿ ಎಂಬ ಪದದಿಂದ ಸೂಚಿತ. ಸುದರ್ಶನ ಎಂಬುದಕ್ಕೆ ಸುಜ್ಞಾನ ಎಂದೂ ಅರ್ಥ. ಸುದರ್ಶನಪಾಣಿ ಎಂಬುದಕ್ಕೆ ಜ್ಞಾನಮುದ್ರೆಯನ್ನು ಧರಿಸಿದ ಶ್ರೀವೇದವ್ಯಾಸ, ಕಪಿಲ ಮೊದಲಾದ ರೂಪಗಳ ಶ್ರೀಹರಿಯು ವಿವಕ್ಷಿತ.

೧೧. **ಸುಲಲಿತಸುದರ್ಶನಪಾಣಿ:** ಸುಲಲಿತವಾಗಿ ಸುದರ್ಶನವನ್ನು ಸದಾ ಕೈಯಲ್ಲಿ ಧರಿಸಿದವನು ಎಂದರ್ಥ. ಒಮ್ಮೆ ಅಶ್ವತ್ಥಾಮರು ಶ್ರೀಕೃಷ್ಣನ ಬಳಿಗೆ ತೆರಳಿ ಅವನ ಸುದರ್ಶನವನ್ನು ತಮಗೆ ನೀಡಲು ಕೇಳಿಕೊಳ್ಳುವರು. ಆಗ ಶ್ರೀಕೃಷ್ಣ ಅದನ್ನು ಸ್ವೀಕರಿಸಲು ತಿಳಿಸುವನು. ಸದಾ ರುದ್ರಾವತಾರವಾದ ಅವರಿಗೆ ಅದನ್ನು ಎತ್ತುವುದಿರಲಿ ಅಲುಗಾಡಿಸಲು ಸಾಧ್ಯವಾಗದೇ ನಿರಾಶರಾಗುವರು ಎಂಬ ಪ್ರಸಂಗ ಶ್ರೀಮನ್ಮಹಾಭಾರತದಲ್ಲಿ ಬಂದಿದೆ. ಈ ಹಿನ್ನೆಲೆಯಲ್ಲಿ ಶ್ರೀಕೃಷ್ಣ ಅಂತಹ ಅಸಾಮಾನ್ಯವಾದ ಚಕ್ರವನ್ನು ಸದಾ ಅನಾಯಾಸವಾಗಿ ಧರಿಸಿರುವವನು ಎಂಬುದು ಅವನ ಸರ್ವೋತ್ತಮತ್ವಕ್ಕೆ ಸೂಚಕ ಎಂದು ಭಾವ.

೧೨. **ಪಾಂಡವರಾಜಕಾರ್ಯಧುರೀಣ:** ಪಾಂಡವರ ರಾಜಕಾರ್ಯ ಎಂದರೆ ದುಷ್ಟ ನಾಶರೂಪವಾದ ಮಹತ್ತರವಾದ ಕಾರ್ಯ ಹಾಗೂ ಸಜ್ಜನರ ರಕ್ಷಣೆಯ ರೂಪವಾದ ಪಾಲಸಕಾರ್ಯ: **ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್** (ಗೀತಾ -೪/೮) ಒಟ್ಟಾಗಿ ಸಜ್ಜನರ ಸಂರಕ್ಷಣೆ, ದುರ್ಜನರ ವಿನಾಶ, ಧರ್ಮಸ್ಥಾಪನೆ ಹಾಗೂ ಅಧರ್ಮದ ವಿನಾಶ ಇವು ರಾಜರ ಮುಖ್ಯಕರ್ತವ್ಯಗಳು. ಪಾಂಡವರು ಶ್ರೀಕೃಷ್ಣನ ಸಂರಕ್ಷಣೆಯಲ್ಲಿ ಈ ಸಕಲ ಕಾರ್ಯಗಳನ್ನು ಪೂರ್ಣವಾಗಿ ಮಾಡಿ ರಾಮರಾಜ್ಯವನ್ನು ಹೋಲುವಂತಹ ದಿವ್ಯರಾಜ್ಯವನ್ನು ನಿರ್ಮಿಸಿದರು. ಇದಕ್ಕೆ ಮುಖ್ಯಕಾರಣ ಶ್ರೀಕೃಷ್ಣರೂಪದ ಶ್ರೀಹರಿಯ ಅನುಗ್ರಹ ಎಂದರ್ಥ. ಪಾಂಡವರ ಮುಖ್ಯರಾಜಕಾರಣವಾದ ಕುರುಕ್ಷೇತ್ರ ಯುದ್ಧದಲ್ಲಿ ನೇತೃತ್ವವಹಿಸಿ ಸಾರಥಿಯಾಗಿ ಕುಳಿತೇ ಅವರಿಗೆ ಯಶ ತಂದಿತ್ತವನು ಎಂದರ್ಥ.

೧೩. **ಜಗನಿರ್ಮಾಣ:** ಜಗತ್ತನ್ನು ಸೃಷ್ಟಿಸುವವನು ಎಂದರ್ಥ. ಸೃಷ್ಟಿಯೊಂದಿಗೆ ಸ್ಥಿತಿ, ಲಯ, ಜ್ಞಾನ, ಅಜ್ಞಾನ, ನಿಯಮನ, ಬಂಧ ಹಾಗೂ ಮೋಕ್ಷ ಮೊದಲಾಗಿ ಎಲ್ಲವನ್ನೂ ಮಾಡುವವನು ಎಂಬುದು ಇದರ ಮುಖ್ಯಾರ್ಥ: **ಜನ್ಮಾದ್ಯಸ್ಯ ಯತಃ** -(ಬ್ರಹ್ಮಸೂತ್ರ). ಹೀಗೆ ಸಕಲ ಜಗತ್ತಿನ ಸಕಲ ಕಾರ್ಯಗಳನ್ನು ಸಹ ಸಕಲ ಕಾಲಗಳಲ್ಲು ಮಾಡುವ ಶ್ರೀಹರಿ ಸರ್ವೋತ್ತಮ ಎಂದು ತಾತ್ಪರ್ಯ. ಜಗತ್ ಎಂಬುದಕ್ಕೆ ವಾಯು ಎಂಬ ಅರ್ಥವೂ ಉಂಟು. ಶ್ರೀವಾಯುದೇವರನ್ನು ಸೃಷ್ಟಿಸಿದವನು ಎಂದರ್ಥ: **ಪ್ರಾಣಾದ್ವಾಯುರಜಾಯತ** - (ಪುರುಷಸೂಕ್ತ); ಸಂಕರ್ಷಣರೂಪದಿಂದ ಜಯಾರೂಪದ ಮಹಾಲಕ್ಷ್ಮಿಯಲ್ಲಿ ಸೂತ್ರನಾಮಕ ವಾಯುದೇವರನ್ನು ಸೃಷ್ಟಿಸಿದವನು ಎಂಬ ಅರ್ಥವು ವಿವಕ್ಷಿತ.

*****

## ೧೪. ಅಗಣಿತಲೀಲ ರಕ್ಷಿಸು

ನೀಲವರ್ಣ ವಿಶಾಲಶುಭಗುಣ-
ಶೀಲ ಮುನಿಕುಲಪಾಲ ಲಕ್ಷ್ಮೀ-
ಲೋಲ ರಿಪುಶಿಶುಪಾಲಮಸ್ತಕಶೂಲ ವನಮಾಲ ।
ಮೂಲಕಾರಣ ವಿಮಲ ಯಾದವ-
ಜಾಲಹಿತ ಗೋಪಾಲ ಅಗಣಿತ-
ಲೀಲ ಕೋಮಲಕಾಯ ರಕ್ಷಿಸು ನಮ್ಮನನವರತ ॥ ೧೪ ॥

ಅ: ನೀಲವರ್ಣದವನೇ, ವಿಶಾಲವಾದ ಮಂಗಳಕರವಾದ ಗುಣಗಳನ್ನು ಸಹಜವಾಗಿ ಹೊಂದಿರುವವನೇ, ಮುನಿವೃಂದವನ್ನು ಪೊರೆವವನೇ, ಲಕ್ಷ್ಮೀವಿಲಾಸನೇ, ಶತ್ರುವಾದ ಶಿಶುಪಾಲನನ್ನು ಹಣಿದವನೇ, ವನಮಾಲೆ ಧರಿಸಿದವನೇ, ಸಕಲ ಜಗತ್ತಿಗೂ ಮುಖ್ಯ ನಿಮಿತ್ತಕಾರಣನಾದವನೇ, ದೋಷರಹಿತನೇ, ಯಾದವವೃಂದಕ್ಕೆ ಹಿತವೆಸಗಿದವನೇ, ಗೋಪಾಲಕನೇ, ಎಣೆಯಿರದ ಲೀಲೆಗಳನ್ನು ತೋರಿದವನೇ, ಕೋಮಲ ದೇಹನೇ, ಶ್ರೀಹರಿಯೇ! ನೀನು ಸದಾ ನಮ್ಮನ್ನು ರಕ್ಷಿಸು.

ವಿ: ೧. ಈ ಪದ್ಯದಲ್ಲಿಯೂ ಶ್ರೀರಾಮ ಹಾಗೂ ಶ್ರೀಕೃಷ್ಣರೂಪಗಳ ಸ್ತವನ ಮುಂದುವರೆದಿದೆ.

೨. ನೀಲವರ್ಣ: ಶ್ರೀರಾಮ ಹಾಗೂ ಶ್ರೀಕೃಷ್ಣ ಎರಡು ರೂಪಗಳು ಸಹ ನೀಲವರ್ಣದ ರೂಪಗಳು[೧]: ನೀಲ ಎಂಬುದು ಗಗನ ಹಾಗೂ ಸಾಗರಗಳಲ್ಲಿ ಕಂಡುಬರುವ ವಿಶಿಷ್ಟವಾದ ವರ್ಣ. ಗಗನವು ಅನಂತ, ಸಾಗರವು ಅಪಾರ. ಶ್ರೀಹರಿಯ ಈ ಎರಡು ರೂಪಗಳ ನೀಲವರ್ಣವು ಅವನು ಗಹನ, ಅನಂತ ಎಂಬ ವಿಶೇಷ ಮಹಿಮೆಯನ್ನು ಸೂಚಿಸುವುದು. ಆದರಂತೆ ಅವನು ಅಪ್ರಮೇಯ, ಸಾಕಲ್ಯೇನ ಸರ್ವಥಾ ತಿಳಿಯಲಾಗದವನು ಎಂಬ ವಿಶೇಷಾರ್ಥವು ಇದರಿಂದ ಸೂಚಿತ.

೩. **ವಿಶಾಲಶುಭಗುಣಶೀಲ:** ವಿಸ್ತಾರವಾದ ಮಂಗಳ ಗುಣಗಳ ಖಣಿ ಶ್ರೀಹರಿ. ಶ್ರೀಹರಿಯು ಅನಂತಾನಂತಕಲ್ಯಾಣಗುಣಗಣಪರಿಪೂರ್ಣ. ಅವನ ಸಕಲ ಗುಣಗಳು ಸಹ ಪ್ರತ್ಯೇಕಪ್ರತ್ಯೇಕವಾಗಿಯೇ ಅನಂತ. ಅಷ್ಟೆಲ್ಲ ಗುಣಗಳು ಸಹ ಅವನಲ್ಲಿ ಸದಾ ಇರುವ ಸ್ವಾಭಾವಿಕ ಗುಣಗಳೇ ಹೊರತು, ಯಾವುದೋ ಕಾರಣದಿಂದ ಯಾವುದೋ ಕಾಲದಲ್ಲಿ ಯಾರಿಂದಲೋ

---

೧. 'ಶ್ಯಾಮಂ...' (ತಂತ್ರಸಾರಸಂಗ್ರಹ) ಎಂಬುದಾಗಿ ಶ್ರೀರಾಮಮಂತ್ರದ ಧ್ಯಾನಶ್ಲೋಕದಲ್ಲೂ 'ಹರಿನ್ಮಣಿನಿಭಂ..; (ತಂತ್ರಸಾರಸಂಗ್ರಹ) ಎಂಬುದಾಗಿ ಶ್ರೀಕೃಷ್ಣಮಂತ್ರದ ಧ್ಯಾನಶ್ಲೋಕದಲ್ಲೂ ಬಂದಿರುವ ಪದಗಳು ಗಮನಾರ್ಹ.

ಲಭಿಸಿದ ಗುಣಗಳು ಸರ್ವಥಾ ಅಲ್ಲ ಎಂಬ ವಿಶೇಷಾಂಶ ಶೀಲ ಎಂಬ ಪದದಿಂದ ಸೂಚಿತ. ವಿಶಾಲ ಎಂಬುದು ಅಪಾರತೆಯ ಸಂಕೇತ. ಅಂತಹ ಅಪಾರತೆ ಸಂಖ್ಯೆ ಹಾಗೂ ಸತ್ತ್ವ ಎರಡಕ್ಕೂ ಅನ್ವಯಿಸುವಂತಹುದು. ಎಂದರೆ ಶ್ರೀಹರಿಯ ಗುಣಗಳು ಅನಂತ, ಅನಂತಗುಣದಲ್ಲಿನ ಒಂದೊಂದು ಗುಣಗಳು ಸಹ ಪ್ರತ್ಯೇಕವಾಗಿಯೇ ಅನಂತ ಎಂಬುದು ಇದರ ಭಾವ.

೪. **ವಿಶಾಲಶುಭಗುಣಶೀಲ:** ಇದನ್ನು **ವಿಶಾಲ, ಶುಭಗುಣಶೀಲ** ಎಂಬುದಾಗಿ ಎರಡು ಪ್ರತ್ಯೇಕ ಪದಗಳನ್ನಾಗಿಯೂ ಓದಿಕೊಳ್ಳಬಹುದು. ವಿಶಾಲ ಎಂಬುದು ದೇಶತಃ, ಕಾಲತಃ ಹಾಗೂ ಗುಣತಃ ಅನಂತ ಎಂಬ ಅರ್ಥವನ್ನು ಕೊಡುವುದು. ಶುಭಗುಣಶೀಲ ಎಂಬುದು ಗುಣಗಳ ಸ್ವರೂಪವನ್ನು ತಿಳಿಸುವಂತಹುದು. ಶ್ರೀಹರಿಯ ಗುಣಗಳು ಅನಂತ. ಆದ್ದರಿಂದ ಅವನು ಸಗುಣ. ಸರ್ವಥಾ ನಿರ್ಗುಣನಲ್ಲ ಎಂಬ ವಿಶೇಷಾಂಶವೂ ಇದರಿಂದ ಸೂಚಿತ. ಬ್ರಹ್ಮನಿರ್ಗುಣ ಎಂಬ ವಚನವೂ ಶಾಸ್ತ್ರದಲ್ಲಿದೆ. ಅಲ್ಲಿಯ ನಿರ್ಗುಣ ಎಂಬುದಕ್ಕೆ ಅಶುಭ ಎನಿಸುವ ಪ್ರಾಕೃತಗುಣಗಳಿಂದ ರಹಿತನಾದವನು ಎಂಬ ಅವನ ಮತ್ತೊಂದು ಮಹತ್ತ್ವವನ್ನು ತಿಳಿಸುವುದು. ಒಟ್ಟಾಗಿ ಅವನು ಅಪ್ರಾಕೃತವಾದ ಅನಂತಗುಣಗಳಿಂದ ಸದಾ ಪೂರ್ಣನಾದವನು ಎಂದು ತಾತ್ಪರ್ಯ.

೫. **ವಿಶಾಲ, ಶುಭ, ಗುಣಶೀಲ** ಎಂಬುದಾಗಿ ಪ್ರತ್ಯೇಕವಾದ ಮೂರು ಪದಗಳನ್ನಾಗಿಯೂ ಇದನ್ನು ವಿಭಾಗಿಸಬಹುದು. ಆಗ ವಿಶಾಲ ಎಂಬುದಕ್ಕೆ ವ್ಯಾಪ್ತ ಎಂದೂ, ಶುಭ ಎಂಬುದಕ್ಕೆ [೧]ಮಂಗಳ ಎಂದೂ, ಗುಣಶೀಲ ಎಂಬುದಕ್ಕೆ ಅನಂತಾನಂತಕಲ್ಯಾಣಗುಣಪೂರ್ಣ ಎಂದೂ ಅರ್ಥವಾಗುವುದು.

೬. **ಮುನಿಕುಲಪಾಲ:** ಮುನಿಗಳ ಸಮೂಹವನ್ನು ರಕ್ಷಿಸಿದವನು. ಶ್ರೀರಾಮರೂಪದಲ್ಲಿ ದಂಡಕಾರಣ್ಯ ಪ್ರಾಂತಗಳಲ್ಲಿ ನೆಲೆಸಿದ್ದ ಖರದೂಷಣಾದಿ ಮಹಾದೈತ್ಯರಿಂದಾಗಿ ಅಪಾರವಾಗಿ ನೊಂದಿದ್ದ ಅಸಂಖ್ಯ ಮುನಿಗಳ ಸಮೂಹವನ್ನು ಸಂರಕ್ಷಿಸಿದ್ದು ರಾಮಾಯಣದಲ್ಲಿ ಸುಪ್ರಸಿದ್ಧ: **ತ್ರಿದಶಮುನಿಕೃತೇಽರಣ್ಯಮೇವಾವಿವೇಶ** – (ಮ.ಭಾ.ತಾ.ನಿ ೫/೩) ಶ್ರೀರಾಮರೂಪದ ವನವಾಸದ ಮುಖ್ಯಕಾರ್ಯ ಮುನಿವೃಂದದ ಸಂರಕ್ಷಣೆಯಾಗಿದ್ದಿತು ಎಂಬುದು ಸುಪ್ರಸಿದ್ಧವೇ ಆದ ವಿವರ. ವಿಶ್ವಾಮಿತ್ರಮುನಿಗಳ ಯಜ್ಞಪ್ರಸಂಗದಲ್ಲಿಯೂ ಮುನಿಗಳ ವೃಂದವು ಪಾಲಿತವಾದದ್ದು ರಾಮಾಯಣದಲ್ಲಿ ಬಂದಿದೆ. ಶ್ರೀಕೃಷ್ಣರೂಪದಿಂದಲೂ ಮುನಿಗಳನ್ನು, ಮುನಿಪತ್ನಿಯರನ್ನು ಪಾಲಿಸಿದ ಅನೇಕ ವಿವರಗಳು ಉಲ್ಲೇಖಿಸಲ್ಪಟ್ಟಿವೆ. ಮುನಿ ಎಂಬುದಕ್ಕೆ ಮನನಶೀಲರಾದ ಜ್ಞಾನಿಗಳು ಎಂದು ಅರ್ಥ: **ಮನನಾನ್ಮುನಿರುಚ್ಯತೇ.** ಇದರಿಂದ ಶಾಸ್ತ್ರಶ್ರವಣಮಾಡಿ ಅದರ ಅರ್ಥವನ್ನು ಮನನ ಮಾಡುವ ಭಕ್ತವೃಂದವನ್ನು ಪಾಲಿಸುವವನು ಶ್ರೀಹರಿ ಎಂಬ ಅರ್ಥಸೂಚಿತ. ಮುನಿ ಶಬ್ದಕ್ಕೆ ಕಾಮಕ್ರೋಧರಹಿತನಾದವನು(ಸ ಹಿ

೧. ಮಂಗಲಂ ಭಗವಾನ್ ವಿಷ್ಣುರ್ಮಂಗಲಂ ಮಧುಸೂದನಃ।
ಮಂಗಲಂ ದೇವಕೀಪುತ್ರೋ ಮಂಗಲಂ ಗರುಡಧ್ವಜಃ॥ – ಮಹಾಭಾರತ

**ಲೋಕೇ ಮುನಿರ್ನಾಮ ಯಃ ಕಾಮಕ್ರೋಧವರ್ಜಿತಃ**), ಸ್ಥಿತಪ್ರಜ್ಞನಾದವನು (**ಸ್ಥಿತಧೀರ್ಮುನಿರುಚ್ಯತೇ**) ಎಂಬ ಅರ್ಥಗಳೂ ವಿವಕ್ಷಿತ. ಶ್ರೀಹರಿಯು ಕಾಮಕ್ರೋಧರಹಿತರಾದ ಸ್ಥಿತಪ್ರಜ್ಞರನ್ನು ವಿಶೇಷವಾಗಿ ರಕ್ಷಿಸುವವನು ಎಂಬುದು ಇದರ ತಾತ್ಪರ್ಯ.

೭. **ಲಕ್ಷ್ಮೀಲೋಲ:** ಮಹಾಲಕ್ಷ್ಮಿಯು ಬ್ರಹ್ಮರುದ್ರಾದಿ ದೇವತೆಗಳಿಗಿಂತ ಮಿಗಿಲಾದವರು; ಅವ್ಯಕ್ತತತ್ತ್ವಕ್ಕೆ ಅಭಿಮಾನಿದೇವತೆ, ತ್ರಿಗುಣಗಳಿಗೂ ಕ್ರಮವಾಗಿ ಶ್ರೀ ಭೂ ಹಾಗೂ ದುರ್ಗಾರೂಪಗಳಿಂದ ಪ್ರತ್ಯೇಕವಾಗಿಯೂ ಅಭಿಮಾನಿದೇವತೆ ಎಂಬುದು ಮಹಾಲಕ್ಷ್ಮಿಯ ವೈಭವ. ಮಹಾಲಕ್ಷ್ಮಿಯು ಶ್ರೀಹರಿಯಂತೆ ಸರ್ವದಾ ಅಪ್ರಾಕೃತ ದೇಹವನ್ನು ಹೊಂದಿದ ಅಕ್ಷರಪುರುಷಳು ಎಂಬುದಾಗಿಯೂ ಶಾಸ್ತ್ರಗಳಲ್ಲಿ ಪ್ರಸಿದ್ಧ: **ಕೂಟಸ್ಥೋಽಕ್ಷರ ಉಚ್ಯತೇ** -ಗೀತಾ(೧೫/೧೬) ಇಂತಹ ಮಹಾಲಕ್ಷ್ಮಿಗೆ ಪತಿ ಎಂಬುದು ಶ್ರೀಹರಿಯ ಸರ್ವೋತ್ತಮತ್ವಕ್ಕೆ ಸ್ಪಷ್ಟ ನಿದರ್ಶನ . ಶ್ರೀಮನ್ಮಧ್ವಾಚಾರ್ಯರ ದ್ವಾದಶಸ್ತೋತ್ರದ ೭ನೆಯ ಅಧ್ಯಾಯದ **ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ** ಎಂಬ ಮಾತಿನಲ್ಲಿ ಈ ವಿಷಯಗಳ ವಿವರಣೆ ವಿಶೇಷವಾಗಿ ಬಂದಿದೆ.

೮. **ರಿಪುಶಿಶುಪಾಲಮಸ್ತಕಶೂಲ:** ಶಿಶುಪಾಲ ಆ ಮುನ್ನ ಹಿರಣ್ಯಕಶಿಪು ಹಾಗೂ ರಾವಣನಾಗಿ ಶ್ರೀಹರಿಯ ದ್ವೇಷವನ್ನು ಮಾಡಿದ್ದವನು, ಅವನು ಮೂಲತಃ ಹಿರಣ್ಯಕಶಿಪು ಎಂಬ ಅಸುರನ ಅವತಾರ. ಅವನಲ್ಲಿ ಜಯ ಎಂಬ ವಿಷ್ಣುವಿನ ದ್ವಾರಪಾಲಕನ ಆವೇಶವೂ ಇದ್ದಿತು. ಪಾಂಡವರ ರಾಜಸೂಯಯಾಗದಲ್ಲಿ ಶ್ರೀಕೃಷ್ಣನಿಗೆ ಅಗ್ರಪೂಜೆ ನಡೆದಾಗ ಅವಾಚ್ಯ ಶಬ್ದಗಳಿಂದ ಶ್ರೀಕೃಷ್ಣನನ್ನು ಪರಿಪರಿಯಾಗಿ ನಿಂದಿಸಿದವನು. ಶ್ರೀಕೃಷ್ಣ ಶಿಶುಪಾಲನ ತಾಯಿಗೆ ವಚನನೀಡಿದ್ದಂತೆ ಅವನ ೧೦೦ ತಪ್ಪುಗಳನ್ನು ಮನ್ನಿಸಿ, ಆ ಬಳಿಕ ತನ್ನ ಸುದರ್ಶನಚಕ್ರದಿಂದ ಅವನ ತಲೆಯನ್ನು ಕತ್ತರಿಸಿ ಸಂಹರಿಸಿದನು. ಇತರರನ್ನು ನಿಂದಿಸಿ, ಆ ಮುನ್ನ ಸಾಯದೆ ಉಳಿದಿದ್ದ ಅವನು ಶ್ರೀಕೃಷ್ಣನಿಂದ ಹೀಗೆ ಹತನಾದ ಎಂಬುದು ಶ್ರೀಮದ್ಭಾಗವತಾದಿಗಳಲ್ಲಿ ಬಂದಿರುವ ವಿವರ. ಅದನ್ನೆಲ್ಲ ಈ ಪದದಿಂದ ಸೂಚಿಸಿರುವರು ಎಂದು ತಿಳಿಯಬೇಕು. ಶತ್ರುವಾದ ಶಿಶುಪಾಲನ ಪಾಲಿಗೆ ತಲೆನೋವಾಗಿದ್ದವನು. ಎಂದರೆ, ವಿಶ್ವಪ್ರಯತ್ನ ಮಾಡಿಯೂ ಸಹ ಶ್ರೀಕೃಷ್ಣನಿಗೆ ಯಾವುದೇ ರೀತಿಯ ಚ್ಯುತಿಯನ್ನು ಮಾಡಲು ಸಹ ಅವನಿಗೆ ಸಾಧ್ಯವಾಗಿರಲಿಲ್ಲ ಎಂದರ್ಥ.

೯. **ವನಮಾಲ:** ವನಮಾಲೆ ಎಂದರೆ ಶಿರಸ್ಸಿನಿಂದ ಪಾದದವರೆಗೆ ಅನ್ವಯಿಸುವಂತಹ ಪುಷ್ಪಮಾಲೆ ಎಂದರ್ಥ. ಅದರಲ್ಲಿ ಬಹುಮುಖ್ಯವಾಗಿ ಮಹಾಲಕ್ಷ್ಮಿಯ ಸನ್ನಿಧಾನ: **ಶ್ರೀರೇವ ವನಮಾಲಾಯಾಮ್** (ಪದ್ಮಮಾಲಾ). ಇಂತಹ ಮಾಲೆಯನ್ನು ಇತರರು ಧರಿಸುವಂತಿಲ್ಲ, ಶ್ರೀಮಹಾಲಕ್ಷ್ಮಿಯೇ ಅಭಿಮಾನಿನಿಯಾದ ಈ ವನಮಾಲೆಯನ್ನು ಧರಿಸುವಂತಹ ಅರ್ಹತೆ ಶ್ರೀಲಕ್ಷ್ಮೀಪತಿಯಾದ ಶ್ರೀಹರಿಯದು ಮಾತ್ರ. ಅದಕ್ಕಾಗಿಯೇ ವಿಷ್ಣುಸಹಸ್ರನಾಮ ಮೊದಲಾದ ಶ್ರೀಹರಿಯ ಸ್ತೋತ್ರಗಳಲ್ಲಿ ವನಮಾಲೀ ಎಂಬುದಾಗಿ ಅವನನ್ನು ಸ್ತುತಿಸಲಾಗಿದೆ: **ಭಗವಾನ್**

**ಭಗಹಾ ನಂದೀ ವನಮಾಲೀ ಹಲಾಯುಧಃ** - (ವಿಷ್ಣುಸಹಸ್ರನಾಮ). ಮೇಲ್ನೋಟಕ್ಕೆ ಕೇವಲ ಅಲಂಕಾರವಾಚಕ ಎಂಬಂತೆ ಕಾಣುವ ಇಂತಹ ಪದಗಳು ಶಾಸ್ತ್ರದ ಹಿನ್ನೆಲೆಯಲ್ಲಿ ನೋಡಿದಾಗ ಶ್ರೀಹರಿಯ ಸರ್ವೋತ್ತಮತ್ವಕ್ಕೆ ಗಮಕವಾಗುವುದು ವಿಶೇಷ.

೧೦. **ಮೂಲಕಾರಣ**: ಯಾವುದೇ ಒಂದು ಕಾರ್ಯಕ್ಕೂ ಉಚಿತವಾದ ಒಂದು ಕಾರಣವಿರಲೇಬೇಕು ಎಂಬುದು ನಿಯಮ: ನ ಹಿ ಕಾರ್ಯಮಕಾರಣಮ್. ಕೆಲವು ಕಾರ್ಯಗಳಿಗೆ ಕೆಲವು ಕಾರಣಗಳು ಪ್ರತ್ಯೇಕ ಎಂಬುದಾಗಿ ಕಾಣುವುದು ನಿಜ ಆದರೆ ಅಂತಹ ಎಲ್ಲ ಕಾರಣಗಳಿಗೂ ಮುಖ್ಯವಾದ ಮೂಲಕಾರಣನು ಶ್ರೀಹರಿಯೊಬ್ಬನೇ ಎಂಬುದು ಸಕಲ ಶಾಸ್ತ್ರಗಳಲ್ಲಿ ಸ್ಫುಟವಾಗಿ ನಿರೂಪಿತವಾಗಿರುವ ಮಹಾಪ್ರಮೇಯ: **ತೇನ ವಿನಾ ತೃಣಮಪಿ ನ ಚಲತಿ**(ಶ್ರುತಿ), **ಕಾರಣಕಾರಣ ಪೂರ್ಣ ವರೇಣ್ಯ** (ದ್ವಾದಶಸ್ತೋತ್ರ), ಸ ಕಾರಣಂ ಕಾರಣತಸ್ತತೋಽಪಿ ತಸ್ಯಾಪಿ ಹೇತುಃ ಪರಹೇತುಹೇತುಃ (ಬ್ರಹ್ಮಪಾರಸ್ತೋತ್ರ), ಜನ್ಮಾದ್ಯಸ್ಯ **ಯತಃ** (ಬ್ರಹ್ಮಸೂತ್ರ). ಇದರಿಂದ ಶ್ರೀಹರಿಯನ್ನು ಜಗತ್ತಿಗೆ ಕೇವಲ ಯಾವುದೋ ಹಂತದ ಒಂದು ಕಾರಣ ಮಾತ್ರ ಎಂದು ತಿಳಿಯದೆ, ಸಕಲಕಾರ್ಯಗಳಿಗೂ ಸರ್ವಕಾಲಗಳಲ್ಲೂ ಸರ್ವರೀತಿಯಲ್ಲೂ ಪ್ರಧಾನವಾದ ಮೂಲಕಾರಣ ಎಂಬುದಾಗಿ ತಿಳಿದು ಆರಾಧಿಸಬೇಕು ಎಂಬ ತತ್ತ್ವವು ಸೂಚಿತ. ಮೂಲ, ಕಾರಣ ಎಂಬುದಾಗಿ ಪ್ರತ್ಯೇಕವಾಗಿಯೂ ಈ ಪದವನ್ನು ಅರ್ಥಮಾಡಿಕೊಳ್ಳಬಹುದು. ಅದಕ್ಕೆ ಜಗತ್ತಿಗೆ [೧]ಮೂಲನು, ಸಕಲವಿಧ [೨]ಕಾರಣನೂ ಆಗಿರುವನು ಎಂದು ಅರ್ಥವಾಗುವುದು.

೧೧. **ವಿಮಲ**: ಮಲ ಎಂದರೆ ದೋಷ, ವಿಮಲ ಎಂದರೆ ನಿರ್ದೋಷ. ಶ್ರೀಹರಿಯು ಅನಂತಾನಂತ ಗುಣಪೂರ್ಣನಾಗಿರುವಂತೆ ಸಕಲ ದೋಷದೂರನೂ ಆಗಿರುವನು ಎಂಬುದು ಅವನ ಪ್ರಧಾನಲಕ್ಷಣಗಳಲ್ಲೊಂದು: **ನಾರಾಯಣಂ ಗುಣೈಃ ಸರ್ವೈರುದೀರ್ಣಂ ದೋಷವರ್ಜಿತಮ್** -(ಭಾಷ್ಯ). ಹಿರಿಮೆಗೆ ಕುಂದು ತರುವುದನ್ನು ದೋಷ ಎನ್ನುವರು. ಚಿಂತೆ, ಸಂತಾಪ, ದುಃಖ ಮೊದಲಾದವುಗಳು ಇಂತಹ ದೋಷಗಳಾಗಿವೆ. ಶ್ರೀಹರಿಗೆ ಇಂತಹ ಯಾವ ದೋಷಗಳು ಸಹ ಯಾವ ಕಾಲದಲ್ಲೂ ಯಾವ ರೀತಿಯಲ್ಲೂ ಇಲ್ಲ ಎಂಬುದು ಇದರ ಭಾವ: **ಚಿಂತಾಸಂತಾಪಲೇಪೋದ್ಭವಮುಖರಾಶೇಷದೋಷಾತಿದೂರಮ್** (ತತ್ತ್ವಪ್ರಕಾಶಿಕಾ).

೧೨. **ಯಾದವಜಾಲಹಿತ**: ಯಾದವರು ಪರಮ ಸಾತ್ವಿಕರು. ಪ್ರತಿಯೊಬ್ಬ ಯಾದವನು ಸಹ ಒಬ್ಬ ದೇವತೆಯ ಅವತಾರ ಎಂಬುದು ವಿಶೇಷಾಂಶ. ಆದ್ದರಿಂದಲೇ ಯಾದವರು ಮುಖ್ಯವಾಗಿ ಸದ್ಗುಣಗಳ ಖಣಿ ಎನ್ನಿಸಿದ ಪರಮ ಸಾತ್ವಿಕರು. ಆ ಕಾರಣದಿಂದಲೇ ಶ್ರೀಹರಿ ಶ್ರೀಕೃಷ್ಣರೂಪದಿಂದ ಯಾದವರಲ್ಲಿ ಅವತರಿಸಿ, ಯಾದವಕೃಷ್ಣ ಎನ್ನಿಸಿ ಅವರನ್ನು ಪರಿಪರಿಯಾಗಿ

೧. ಊರ್ಧ್ವಮೂಲಮಧಃಶಾಖಂ। - ಭಗವದ್ಗೀತಾ (೧೫/೧)
೨. ಸ ಕಾರಣಂ ಕಾರಣತಸ್ತತೋऽಪಿ ತಸ್ಯಾऽಪಿ ಹೇತುಃ ಪರಹೇತುಹೇತುಃ। - ಬ್ರಹ್ಮಪಾರಸ್ತೋತ್ರ

ಪೊರೆದ ಎಂಬುದು ಶಾಸ್ತ್ರಪ್ರತಿಪಾದಿತವಾದ ವಿವರ. ಈ ಪದದಿಂದ ಸಕಲ ಸಜ್ಜನರ ಗುಂಪುಗಳಿಗೂ ಸಹ ಶ್ರೀಹರಿಯು ಹಿತಕರನಾದವನು ಎಂಬ ಪ್ರಮೇಯ ಸೂಚಿತ.

೧೩. **ಗೋಪಾಲ**: ಗೋಪಾಲ ಎಂಬುದಕ್ಕೆ ಗೋವುಗಳನ್ನು ಪಾಲಿಸಿದವನು ಎಂಬುದು ಪ್ರಸಿದ್ಧವಾದ ಅರ್ಥ. ಕಂಸ ಒಡ್ಡಿದ ಬಗೆಬಗೆಯ ಅಪಾಯಗಳಿಂದ ಗೋವುಗಳನ್ನು ಪಾಲಿಸಿದವನು ಶ್ರೀಕೃಷ್ಣ ಎಂಬುದು ಶ್ರೀಮದ್ಭಾಗವತಾದಿಗಳಲ್ಲಿ ಪ್ರಸಿದ್ಧ. ಗೋ ಎಂಬುದಕ್ಕೆ ಶಾಸ್ತ್ರ ಎಂಬುದು ಮತ್ತೊಂದು ಬಗೆಯ ಅರ್ಥ. ಆದ್ದರಿಂದ ಗೋಪಾಲ ಎಂಬುದಕ್ಕೆ ಶಾಸ್ತ್ರಗಳ ಪ್ರಾಮಾಣ್ಯವನ್ನು ಸಮರ್ಥಿಸಿ, ಅವುಗಳ ಹಿರಿಮೆಯನ್ನು ಸ್ಥಾಪಿಸಿದವನು ಎಂಬ ಅರ್ಥದಲ್ಲಿ ಶ್ರೀಕೃಷ್ಣನಿಗೆ ಇದು ಅನ್ವಯಿಸುವುದು. ಅದರಂತೆ ಸಮಸ್ತ ಶಾಸ್ತ್ರಪ್ರಪಂಚವನ್ನು ಸಹ ಆವಿಷ್ಕರಿಸಿದ ಶ್ರೀವಾಸಿಷ್ಠಕೃಷ್ಣರೂಪದ ಶ್ರೀಹರಿಯ ವೇದವ್ಯಾಸರೂಪಕ್ಕೂ ಸಹ ಇದು ಅನ್ವಯಿಸುವುದು: **ಅನಾಕುಲಂ ಗೋಕುಲಮುಲ್ಲಲಾಸ** (ಮಧ್ವವಿಜಯ ೧/೨). ಶಾಸ್ತ್ರಪ್ರಪಂಚವನ್ನು ಹಾಗೆ ಪೊರೆಯುವುದು ಎಂದರೆ ಲುಪ್ತವಾದ ಶಾಸ್ತ್ರಗಳನ್ನು ಪುನಃ ಮುಂಚಿನಂತೆ ಆವಿಷ್ಕರಿಸುವುದು, ಅಪಪಾಠದಿಂದ ತಿರೋಹಿತವಾದ ಪಾಠಗಳಿಗೆ ಶುದ್ಧಪಾಠವನ್ನು ನೀಡುವುದು. ಶಾಸ್ತ್ರಗಳ ಪ್ರಾಮಾಣ್ಯವನ್ನು ಸ್ಥಾಪಿಸುವುದು, ದುಃಶಾಸ್ತ್ರಗಳನ್ನು ಖಂಡಿಸುವುದು ಮೊದಲಾದ ಅನೇಕ ಮುಖದ ಸಂರಕ್ಷಣೆಯು ಸೂಚಿತ.

೧೪. **ಅಗಣಿತಲೀಲ**: ಶ್ರೀಹರಿಯ ಪ್ರತಿಯೊಂದು ರೂಪದ ಲೀಲೆಯು ಸಹ ಅಗಣಿತವಾದುದು. ಲೆಕ್ಕಕ್ಕೆ ಸಿಗದಷ್ಟು ಅಪೂರ್ವ ಹಾಗೂ ಅಪಾರ ಎಂದರ್ಥ. ಇಂತಹ ಲೀಲೆಗಳಿಂದಾಗಿ ಸಹ ಅವನು ಸರ್ವೋತ್ತಮ ಎಂಬುದು ಸ್ಫುಟಪಡುವುದು ಎಂದು ತಿಳಿಯಬೇಕು.

೧೫. **ಕೋಮಲಕಾಯ**: ಕೋಮಲ ಎಂಬುದು ಮೃದುತ್ವವನ್ನು ಸೂಚಿಸುವ ಪದ. ಇದು ಕೇವಲ ಆ ಅರ್ಥವನ್ನು ಮಾತ್ರ ಕೊಡದೆ ಅಪ್ರಾಕೃತ ಎಂಬ ವಿಶೇಷಾರ್ಥವನ್ನು ಸಹ ಕೊಡುವುದು ಎಂದು ತಿಳಿಯಬೇಕು. ನಿಜವಾದ ಅರ್ಥದಲ್ಲಿ ನಿರಪೇಕ್ಷವಾದ ಕೋಮಲತ್ವವು ಹೊಂದುವುದು ಅಪ್ರಾಕೃತರೂಪಕ್ಕೆ ಮಾತ್ರ ಎಂದು ತಿಳಿದಾಗ, ಈ ಮಾತಿನ ಸ್ವಾರಸ್ಯ ಸ್ಫುಟಪಡುವುದು: **ಸುಲಲಿತತನುವರವರದ** ಎಂಬ ದ್ವಾದಶಸ್ತೋತ್ರದ ಮಾತನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು.

*****

## ೧೫. ಭವರೋಗವೈದ್ಯ ರಕ್ಷಿಸು

ನಾಗನಗರಿಧರಿತ್ರಿಕೋಶವಿ-
ಭಾಗತಂತ್ರನಿಯೋಗಗಮನ ಸ-
ರಾಗ ಪಾಂಡವರಾಜಜಿತಸಂಗ್ರಾಮ ನಿಸ್ಸೀಮ ।

**ಯೋಗಗಮ್ಯ ಭವಾಬ್ಧಿವಿಷಧರ**
**ನಾಗಗಾರುಡಮಂತ್ರವಿದ ಭವ-**
**ರೋಗವೈದ್ಯ ವಿಚಿತ್ರ ರಕ್ಷಿಸು ನಮ್ಮನನವರತ** ॥ ೧೫ ॥

**ಅ: ಹಸ್ತಿನಾಪುರದ ರಾಜ್ಯ, ಕೋಶಗಳನ್ನು ವಿಭಾಗಿಸಿ ಕೊಡುವಂತಹ ರಾಜಕಾರಣಕ್ಕೆ ರಾಯಭಾರವನ್ನು ವಹಿಸಿ ತೆರಳಿದವನೇ, ಅನಾಯಾಸವಾಗಿ ಸಂಚರಿಸುವವನೇ, ರಾಜರಾದ ಪಾಂಡವರಿಗೋಸ್ಕರವಾಗಿ ಯುದ್ಧ ಗೆಲ್ಲಿಸಿಕೊಟ್ಟಂತಹ, ಪರಿಮಿತಿ ಇಲ್ಲದ, ಯೋಗಕ್ಕೆ ಲಭಿಸುವಂತಹ, ಸಂಸಾರಸಮುದ್ರವೆಂಬ ವಿಷಪೂರಿತವಾದ ನಾಗಗಳಿಗೆ ಗರುಡಮಂತ್ರದಂತಿರುವ, ಭವರೋಗಕ್ಕೆ ವೈದ್ಯನಾದ, ಚಿತ್ರ ವಿಚಿತ್ರವಾದ ಮಹಿಮೆಯುಳ್ಳ ಶ್ರೀಹರಿಯೇ ! ನೀನು ನಮ್ಮನ್ನು ರಕ್ಷಿಸು.**

ವಿ: ೧. ನಾಗನಗರಿ ಎಂದರೆ ಹಸ್ತಿನಾಪುರ; ಅದರ ಧರಿತ್ರಿ ಎಂದರೆ ಭೂಮಿ, ರಾಜ್ಯ. ಉದ್ಯೋಗಪರ್ವದಲ್ಲಿ ಶ್ರೀಕೃಷ್ಣ ಪಾಂಡವರ ರಾಯಭಾರಿಯಾಗಿ ಕೌರವ ಸಭೆಗೆ ತೆರಳಿದ ಪ್ರಸಂಗದ ಉಲ್ಲೇಖ ಇದಾಗಿದೆ. ಹನುಮಂತನು ಶ್ರೀಹರಿಯಾದ ಶ್ರೀರಾಮನ ರಾಯಭಾರಿಯಾಗಿ ರಾವಣನ ಬಳಿಗೆ ತೆರಳಿದ್ದಂತೆ ಈ ಪ್ರಸಂಗ ಎಂದು ತಿಳಿಯಬೇಕು.

೨. **ನಾಗನಗರಿಧರಿತ್ರಿಕೋಶವಿಭಾಗ**: ನಾಗನಗರಿ ಎಂದರೆ ನಾಗಲೋಕ; ವಾಸುಕಿ ಮೊದಲಾದ ಸರ್ಪಗಳು ನೆಲೆಸಿರುವಂತಹ ಪಾತಾಳಲೋಕದ ಒಂದುಭಾಗ. ಧರಿತ್ರಿ ಎಂದರೆ ಭೂಮಿ; ಕೋಶ ಎಂದರೆ ಸಂಪತ್ತಿನ ನೆಲೆ. ವಿಭಾಗ ಎಂದರೆ ಅಂತಹ ಕೋಶಗಳ ಅನೇಕ ನೆಲೆಗಳು.

೩. **ತಂತ್ರನಿಯೋಗ**: ತಂತ್ರ ಎಂಬುದು ರಾಜಕೀಯವಾಗಿ ಸಂಧಿ ಮೊದಲಾದ ಆರಕ್ಕೆ ಅನ್ವಯಿಸುವುದು; ಮತ್ತೊಂದು ಬಗೆಯಲ್ಲಿ ತಂತ್ರಶಾಸ್ತ್ರಕ್ಕೆ ಅನ್ವಯಿಸುವುದು.

೪. **ಗಮನಸರಾಗ**: ಎಂದರೆ ಯಾವುದೇ ಅಡೆತಡೆ ಇಲ್ಲದೆ ಸಂಚರಿಸುವುದು, ನೆಲೆಸುವುದು ಎಂದರ್ಥ.

೫. **ಪಾಂಡವರಾಜಜಿತಸಂಗ್ರಾಮ**: ಪಾಂಡವರಾಜರಾದ ಯುಧಿಷ್ಠಿರಾದಿಗಳಿಗೋಸ್ಕರವಾಗಿ ಕುರುಕ್ಷೇತ್ರಯುದ್ಧದಲ್ಲಿ ಜಯವನ್ನು ತಂದುಕೊಟ್ಟವನು ಎಂದರ್ಥ; ಅಥವಾ ಪಾಂಡವರಾಜರು ಯುದ್ಧದಲ್ಲಿ ಜಯ ಸಾಧಿಸುವಂತೆ ಮಾಡಿದವನು ಎಂದೂ ಅರ್ಥ. ಒಟ್ಟಾಗಿ ಯುದ್ಧ ಮಾಡಿದವರು ಪಾಂಡವರಾದರೂ, ಅವರೊಳಗೆ ಅಂತರ್ಯಾಮಿಯಾಗಿ ನೆಲೆಸಿ ಕೌರವರನ್ನು, ಅವರ ಸೇನೆಯನ್ನು ಸದೆಬಡಿದು ಅವರ ಜಯದ ಸೂತ್ರಧಾರನಾಗಿ ಕಾರ್ಯನಿರ್ವಹಿಸಿದವನು ಮುಖ್ಯವಾಗಿ ಶ್ರೀಕೃಷ್ಣ ಎಂದರ್ಥ:

**ಮಯಾ ಹತಾನ್ ತ್ವಂ ಜಹಿ ಮಾ ವ್ಯಥಿಷ್ಠಾಃ।** - **ಭಗವದ್ಗೀತೆ (೧೧/೩೪)**

೬. **ಸರಾಗಪಾಂಡವರಾಜಜಿತಸಂಗ್ರಾಮ**: ಎಂಬುದಾಗಿ ಒಂದು ಪದವನ್ನಾಗಿಯೂ ಇದನ್ನು ಓದಿಕೊಳ್ಳಬಹುದು. ರಾಗ ಎಂದರೆ ಭಕ್ತಿ[೧]. ಸರಾಗರು ಎಂದರೆ ಭಕ್ತಿಯುಕ್ತರಾದವನು ಎಂದರ್ಥ. ತನ್ನಲ್ಲಿ ಭಕ್ತಿಯುಕ್ತರಾಗಿದ್ದ ಪಾಂಡವ ರಾಜರಾದ ಯುಧಿಷ್ಠಿರಾದಿಗಳಿಗೆ ಯುದ್ಧ ಗೆದ್ದುಕೊಟ್ಟವನು ಎಂದರ್ಥ.

೭. **ನಿಸ್ಸೀಮ**: ಸೀಮೆ ಎಂದರೆ ಮಿತಿ, ಪರಿಮಿತಿ; ನಿಸ್ಸೀಮ ಎಂದರೆ ಪರಿಮಿತಿ ಇಲ್ಲದವನು – ಅನಂತ ಎಂದರ್ಥ. ಮಿತಿಯು ದೇಶ, ಕಾಲ ಹಾಗೂ ಗುಣಗಳಿಗೆ ಅನ್ವಯಿಸುವಂತಹುದು. ಈ ಯಾವ ಬಗೆಯ ಮಿತಿಯೂ ಸಹ ಶ್ರೀಹರಿಗೆ ಇಲ್ಲ; ಎಂದರೆ ಅವನು ದೇಶತಃ, ಕಾಲತಃ ಹಾಗೂ ಗುಣತಃ ಅನಂತನಾದವನು ಎಂದು ಭಾವ.

೮. **ಯೋಗಗಮ್ಯ**: ಯೋಗಕ್ಕೆ ಲಭಿಸುವವನು; ಜ್ಞಾನಗಮ್ಯ ಇದ್ದಂತೆ. ಯೋಗ ಎಂದರೆ ಪತಂಜಲಿಯ ಯೋಗ ಮೊದಲಾದ ಯೋಗ ಎಂದರ್ಥವಲ್ಲ. ಭಗವದ್ಗೀತೆಯಲ್ಲಿ ನಿರೂಪಿತವಾಗಿರುವಂತೆ '**ಯೋಗಃ ಕರ್ಮಸು ಕೌಶಲಂ**'; '**ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ**' – ಯೋಗಶಬ್ದದ ಅರ್ಥವನ್ನು ತಿಳಿಯಬೇಕು. ತಮ್ಮ ಪಾಲಿಗೆ ವಿಹಿತವಾದ ಕರ್ತವ್ಯಕರ್ಮಗಳನ್ನು ಯಾವುದೇ ಬಗೆಯ ಪ್ರತಿಫಲವನ್ನು ಅಪೇಕ್ಷಿಸದೆ, ಕೇವಲ ಕೃಷ್ಣಾರ್ಪಣಬುದ್ಧಿಯಿಂದ ಮಾಡಿ ಅದನ್ನು ಭಕ್ತಿಯಿಂದ ಸಮರ್ಪಿಸುವುದೇ ಈ 'ಯೋಗ' ಶಬ್ದದ ಮುಖ್ಯವಾದ ಅರ್ಥ. ಅಂತಹ ಯೋಗವು ಜ್ಞಾನಯೋಗ, ಕರ್ಮಯೋಗ ಎಂದು ಎರಡು ಬಗೆ. ಜ್ಞಾನಯೋಗ ಎಂದರೆ ಜ್ಞಾನಪ್ರಚುರಯೋಗ; ಕರ್ಮಯೋಗ ಎಂದರೆ ಕರ್ಮಪ್ರಚುರಯೋಗ ಎಂದು ತಿಳಿಯಬೇಕು. ಭಕ್ತಿಯೋಗ ಎಂಬ ಮೂರನೆಯ ಬಗೆಯನ್ನು ಶ್ರೀಮದ್ಭಾಗವತ ಮೊದಲಾದ ಪುರಾಣಗಳು ನಿರೂಪಿಸಿವೆ. ಅದಕ್ಕೂ ಸಹ ಭಕ್ತಿಪೂರ್ವಕವಾದ ಜ್ಞಾನಯೋಗ, ಭಕ್ತಿಪೂರ್ವಕವಾದ ಕರ್ಮಯೋಗ ಎಂದೇ ಅರ್ಥ. ಭಕ್ತಿಯು ಎರಡುವಿಧ ಯೋಗಗಳಿಗೂ ಸಮಾನ ಎಂಬುದು ಇದರ ಭಾವ.

೯. **ಭವಾಬ್ಧಿವಿಷಧರ**: ಸಂಸಾರಸಮುದ್ರದಲ್ಲಿ ಒಡಗೂಡಿರುವ ವಿಷವನ್ನು ನಾಶಪಡಿಸು-ವವನು ಎಂದರ್ಥ. ಕ್ಷೀರಸಮುದ್ರದಲ್ಲಿ ಕಾಲಕೂಟ ನೆಲೆಸಿರುವುದು, ಸಂಸಾರಸಮುದ್ರ-ದಲ್ಲಿನ ದುಃಖಕ್ಕೆ ಸಂಕೇತ. ಅಂತಹ ವಿಷವನ್ನು ಶ್ರೀಹರಿಯ ಆದೇಶದಂತೆ ಶ್ರೀವಾಯುದೇವರು ಹಾಗೂ ಶ್ರೀರುದ್ರದೇವರು ನಿಯಂತ್ರಿಸಿದ ಬಗೆಯನ್ನು ಶ್ರೀಮದ್ಭಾಗವತಮಹಾಪುರಾಣ, ಪದ್ಮಮಹಾಪುರಾಣ ಹಾಗೂ ಋಗ್ವೇದಗಳಲ್ಲಿ ನಿರೂಪಿಸಲಾಗಿದೆ.

೧೦. **ನಾಗಗಾರುಡಮಂತ್ರವಿದ**: ನಾಗರಹಾವಿನ ವಿಷಕ್ಕೆ ಗರುಡಮಂತ್ರ ರಾಮಬಾಣ; ಎಂತಹ ಭಯಂಕರವಿಷವೂ ಸಹ ಗರುಡನ ಮಂತ್ರಕ್ಕೆ ಅಳಿಯುವಂತೆ, ಶ್ರೀಹರಿಯ ಅನುಗ್ರಹದಿಂದ ಸಂಸಾರದ ಮಹಾಪತ್ತುಗಳೂ ಪರಿಹಾರವಾಗುವುವು ಎಂದು ಭಾವ.

---

೧. ರಸೋ ರಾಗಃ ತಥಾ ರಕ್ತಿಃ ಶೋಭನಾಧ್ಯಾಸ ಉಚ್ಯತೇ । – ಗೀತಾಭಾಷ್ಯ(೨/೫೬)

೧೧. **ಭವಾಬ್ಧಿವಿಷಧರನಾಗಗಾರುಡಮಂತ್ರವಿದ** ಎಂಬುದಾಗಿ ಒಂದೇ ಪದವನ್ನಾಗಿಯೂ ಇವುಗಳನ್ನು ಓದಿಕೊಳ್ಳಬಹುದು. ಆಗ ಭವಸಾಗರದಲ್ಲಿ ವಿಷವನ್ನು ಧರಿಸಿರುವ ವಿಷಯಗಳು ಎಂಬ ನಾಗಗಳಿಗೆ ಪರಿಹಾರರೂಪವಾದ ಗರುಡಮಂತ್ರವನ್ನು ತಿಳಿದವನು ಎಂಬ ವಿಶೇಷಾರ್ಥ ಲಭ್ಯವಾಗುವುದು. ಎಂದರೆ, ಶ್ರೀಹರಿಯ ಆರಾಧನೆಯಿಂದ ಈ ಸಂಸಾರಸಮುದ್ರದಲ್ಲಿ ವಿಷದಂತೆ ಕಾಣುವ ವಿಷಯಗಳ ಮೇಲೆ ನಿಯಂತ್ರಣವನ್ನು ಹೊಂದಿ ಮುಕ್ತಿಯನ್ನು ಹೊಂದಬಹುದು ಎಂದು ಅರ್ಥವಾಗುವುದು.

೧೨. **ಭವರೋಗವೈದ್ಯ**: ಸಂಸಾರದಲ್ಲಿ ಬಗೆಬಗೆಯ ರೋಗಗಳು ಸರ್ವಾನುಭವಸಿದ್ಧ. ಆದರೆ, ಸಂಸಾರವೇ ಈ ಎಲ್ಲಬಗೆಯ ರೋಗಗಳಿಗೂ ಮೂಲಕಾರಣವಾದ ಮಹಾರೋಗ. ಅದರ ಪರಿಹಾರಕ್ಕೆ ಶ್ರೀಹರಿಯೊಬ್ಬನೇ ವೈದ್ಯ - ಎಂದರೆ ಮುಕ್ತಿ ನೀಡುವ ಪರದೇವತೆ ಎಂದರೆ ಶ್ರೀಹರಿ ಮಾತ್ರ ಎಂದು ಭಾವ.

೧೩. **ವಿಚಿತ್ರ**: ಚಿತ್ರ ಎಂದರೆ ಆಶ್ಚರ್ಯಕರ ಎಂದರ್ಥ; ಇದರಿಂದ ವಿಚಿತ್ರ ಎಂಬುದಕ್ಕೆ ಚಿತ್ರವಿಚಿತ್ರವಾದ ಮಹಾಮಹಿಮೆಗಳಿಂದ ಕೂಡಿದ ಸರ್ವೋತ್ತಮದೇವತೆ ಶ್ರೀಹರಿ ಎಂದು ತಾತ್ಪರ್ಯ.

*****

## ೧೬. ಕ್ಷೇಮವಾರ್ತೆಯನರುಹಿ ರಕ್ಷಿಸು

**[೧]ಶ್ರೀಮದುತ್ಸಹ ದೇವನುತ ಶ್ರೀ -**
**ರಾಮ ನಿನ್ನಯ ಚರಣಸೇವಕ**
**ಪ್ರೇಮದಿಂ ಸಾಷ್ಟಾಂಗವೆರಗುತೆ ಮಾಳ್ಪೆ ಬಿನ್ನಪವ ।**
**ಈ ಮಹಿಯೊಳೀವರೆಗೆ ನಾವ್ ಸು-**
**ಕ್ಷೇಮಿಗಳು ನಿನ್ನಯ ಪಾದಾಬ್ಜ-**
**ಕ್ಷೇಮವಾರ್ತೆಯನರುಹಿ ರಕ್ಷಿಸು ನಮ್ಮನನವರತ ॥ ೧೬ ॥**

ಅ: ಮಹಾಲಕ್ಷ್ಮಿಯಿಂದ ಕೂಡಿ ಸದಾ ನಲಿಯುವವನೇ, ದೇವತೆಗಳಿಂದ ಸ್ತುತಿಸಲ್ಪಡುವವನೇ, ಸೀತಾಸಮೇತನಾದ ಶ್ರೀರಾಮನೇ, ನಿನ್ನ ಪಾದಸೇವಕನಾದ ನಾನು ಭಕ್ತಿಯಿಂದ ಸಾಷ್ಟಾಂಗ ಪ್ರಣಾಮಗೈದು ಬಿನ್ನಹವನ್ನು ಮಾಡುವೆನು. ಈ ಭೂಮಿಯೊಳಗೆ ನಾವು ಈ ವರೆಗೂ ಕ್ಷೇಮದಿಂದಿರುವೆವು. ನಿನ್ನ ಪಾದಕಮಲದ ಕ್ಷೇಮವಾರ್ತೆಯನ್ನು ತಿಳಿಸಿ, ನಮ್ಮನ್ನು ಸದಾ ರಕ್ಷಿಸು.

---
೧. ಶ್ರೀಮದುತ್ಸವದೇವನುತ (ಪಾ.)

ವಿ: ೧. ಶ್ರೀ ಎಂದರೆ ಮಹಾಲಕ್ಷ್ಮೀ; ಅಂತಹ ಮಹಾಲಕ್ಷ್ಮಿಯಿಂದ ಕೂಡಿ ಅನಾದ್ಯನಂತ ಕಾಲದಲ್ಲಿ ಸದಾ ನಲಿಯುವವನೇ. ಇದು ಶ್ರೀಹರಿ ಮತ್ತು ಮಹಾಲಕ್ಷ್ಮೀ ಇಬ್ಬರೂ ಸಹ ಎಂದೂ ವಿಯೋಗವಿಲ್ಲದ ನಿತ್ಯ ದಂಪತಿಗಳು ಎಂಬ ವಿಶೇಷಾರ್ಥಕ್ಕೆ ಸೂಚಕ. ಇತರ ಸಕಲ ದೇವತೆಗಳು ಮಹಾಲಕ್ಷ್ಮಿಯ ಕೃಪಾಕಟಾಕ್ಷಕ್ಕಾಗಿ ಹಂಬಲಿಸುತ್ತಿದ್ದರೆ, ಶ್ರೀಹರಿಯು ಅಂತಹ ಮಹಾಲಕ್ಷ್ಮಿಯಿಂದ ಒಳಗೂಡಿಯೇ ಸದಾ ಇರುವನು ಎಂಬುದು ಅವನ ಸರ್ವೋತ್ತಮತ್ವಕ್ಕೆ ದ್ಯೋತಕ ಎಂದರ್ಥ.

೨. **ಶ್ರೀಮದುತ್ಸಹದೇವನುತ**: ಎಂಬುದು ಇನ್ನೊಂದು ಬಗೆಯ ವಿಭಾಗ. ಇಲ್ಲಿ ಶ್ರೀ ಎಂದರೆ ಭಾರತೀದೇವಿ[೧]. ಅವರೊಂದಿಗೆ ಸದಾ ರಮಿಸುವ ವಾಯುದೇವರು ಶ್ರೀಮದುತ್ಸಹದೇವ ಎನ್ನಿಸುವರು. ಇತರ ಸಕಲದೇವತೆಗಳು ಶ್ರೀಹರಿಯನ್ನು ನುತಿಸುವವರೇ ಆದರು ಸಹ ಪ್ರಳಯಕಾಲದಲ್ಲೂ ಸಹ ಎಚ್ಚರದಿಂದಿದ್ದು ಯಾವ ಕಾರಣಕ್ಕೂ ಭಾಗವತಧರ್ಮವನ್ನು ತಪ್ಪದೇ ಶ್ರೀಹರಿಯನ್ನು ಆರಾಧಿಸುವ ವಿಶಿಷ್ಟ ದೇವತೆ ವಾಯುದೇವರು ಎಂದು ಇದರ ಒಟ್ಟು ಭಾವ. ಎರಡೂ ಕಿವಿಗಳನ್ನು ಮುಚ್ಚಿಕೊಂಡಾಗ ಓಂಕಾರದಂತಹ ಧ್ವನಿಯೊಂದು ಕೇಳಿಬರುವುದು. ಅದು ನಮ್ಮ ಶರೀರದಲ್ಲೂ ಸಹ ಸತತ ನೆಲೆಸಿರುವ ಶ್ರೀವಾಯುದೇವರು ಶ್ರೀಹರಿಯನ್ನು ಸ್ತುತಿಸುವ ಧ್ವನಿ ಎಂದು ಶಾಸ್ತ್ರಗಳಲ್ಲಿ ನಿರೂಪಿತವಾಗಿದೆ. ಈ ಅರ್ಥದಲ್ಲೂ ಶ್ರೀಮದುತ್ಸಹದೇವನುತ ಎಂಬ ಮಾತು ಅತ್ಯಂತ ವಿಶಿಷ್ಟವಾದ ಅರ್ಥವನ್ನು ನೀಡುವುದು. ಈ ಸೂಕ್ಷ್ಮವನ್ನು ಶ್ರೀಕನಕದಾಸರು ನಿರೂಪಿಸಿರುವ ಪರಿ ಅತ್ಯಂತ ರೋಚಕ ಎಂದು ತಿಳಿಯಬೇಕು.

೩. **ಶ್ರೀಮದುತ್ಸಹ**: ಶ್ರೀಮಂತರು ಎಂದರೆ ಧರ್ಮದಿಂದ ಸಂಪಾದಿಸಿದ ಐಶ್ವರ್ಯ-ವುಳ್ಳವರು ಎಂದರ್ಥ. ಅಂತಹ ಐಶ್ವರ್ಯವಂತರಿಗೆ ಧರ್ಮಕಾರ್ಯಗಳನ್ನು ಮಾಡುವ ಉತ್ಸಾಹವನ್ನು ನೀಡುವವನು ಶ್ರೀಹರಿ ಎಂದರ್ಥ. ಶ್ರೀ ಎಂಬುದಕ್ಕೆ ಶಿರಸ್ಸಿನಲ್ಲಿ ನೆಲೆಸಿರುವ ಇಂದ್ರಿಯಾಭಿಮಾನಿದೇವತೆಗಳು ಎಂಬ ಅರ್ಥ ಐತರೇಯೋಪನಿಷತ್ತಿನಲ್ಲಿ ಬಂದಿದೆ. ಸಕಲ ಇಂದ್ರಿಯಗಳನ್ನು ಸಹ ಶ್ರೀಹರಿಗೆ ಪ್ರೀತಿಕರವಾದ ವಿಷಯಗಳಲ್ಲಿ ತೊಡಗಿಸಿಕೊಳ್ಳುವಂತಹ ಉತ್ಸಾಹವನ್ನು ಹೊಂದುವುದು ಸಾಧಕರ ಮುಖ್ಯಕರ್ತವ್ಯ. ಶ್ರೀಹರಿ ಅಂತಹ ಉತ್ಸಾಹನೀಡುವ ಕರುಣಾಳುವಾದ ದೇವತೆ ಎಂದು ಭಾವ.

೪. **ದೇವನುತ**: ದೇವತೆಗಳಿಂದ ಸ್ತುತನಾದವನು ಎಂದರ್ಥ. ರಮಾಬ್ರಹ್ಮಾದಿ ಸಕಲ ದೇವತೆಗಳಿಂದ ಸ್ತುತನಾದ ಶ್ರೀಹರಿಯು ಸರ್ವೋತ್ತಮ ಎಂದು ಭಾವ. ಸಕಲ ದೇವತೆಗಳೂ ಸಹ ಶ್ರೀಹರಿಯನ್ನು ಕಾಲಕಾಲಕ್ಕೆ ಸ್ತುತಿಸಿದ ವಿವರಗಳು ಶ್ರೀಮದ್ಭಾಗವತಾದಿ ಆಕರ ಗ್ರಂಥಗಳಲ್ಲಿ ಸ್ಪಷ್ಟ. **ಬ್ರಹ್ಮವಾಣಿಫಣೀಂದ್ರವೀಂದ್ರಭವೇಂದ್ರಮುಖವಿನುತ** ಎಂಬ ಹರಿಕಥಾಮೃತಸಾರದ ಮಂಗಲಪದ್ಯದ ಮಾತು ಇದರ ವಿವರಣೆಯಂತಿದೆ.

---

೧. ಶಂರೂಪೇ ತು ರತೇರ್ವಾಯೌ ಶ್ರೀರಿತ್ಯೇವ ಚ ಕೀರ್ತಿತಾ । – ಮ.ಭಾ.ತಾ.ನಿ (೨/೧೨೬)

**೫. ಶ್ರೀರಾಮ:** ಶ್ರೀಹರಿಯ ದಶಾವತಾರಗಳಲ್ಲಿ ೭ನೆಯ ಅವತಾರ ರಾಮಾವತಾರ. ಭಗವಂತನಿಗೂ ಅವನ ರೂಪಗಳಿಗೂ ಯಾವುದೇ ರೀತಿಯ ಭೇದವಿಲ್ಲದಿರುವುದರಿಂದ ಇಲ್ಲಿ ಶ್ರೀರಾಮ ಎಂದರೆ ಶ್ರೀಹರಿ ಎಂದೇ ಅರ್ಥ. ವಿಷ್ಣುಸಹಸ್ರನಾಮದಲ್ಲೂ ರಾಮೋ ವಿರಾಮೋ ವಿರಜಃ ಎಂಬುದಾಗಿ ವಿಷ್ಣುವಿನ ನಾಮವಾಗಿ ಶ್ರೀರಾಮಶಬ್ದವು ಬಂದಿದೆ. ರಮತೇ ಇತಿ ರಾಮಃ, ರಮಯತಿ ಇತಿ ರಾಮಃ ಎಂಬ ವಿವರಣೆಯಂತೆ ಸದಾ ಆನಂದಾದಿ ಗುಣಗಳಿಂದ ಕ್ರೀಡಿಸುವವನು, ತನ್ನ ಆರಾಧಕರಿಗೆ ಆನಂದ ನೀಡುವವನು ಎಂದು ಇದರ ಭಾವ.

೬. **ನಿನ್ನಯ ಚರಣಸೇವಕ:** ಶ್ರೀಹರಿಯ ಪಾದಸೇವಕ ಎಂದರೆ ಅವನ ಪರಮಭಕ್ತ ಎಂದರ್ಥ. ಪಾದಗಳನ್ನು ಸೇವಿಸುವುದು ಪರಮಭಕ್ತಿಯ ಸಂಕೇತ. ಪಾದ ಎಂಬುದಕ್ಕೆ ಪದ ಎಂದೂ ಅರ್ಥ. ಶ್ರೀರಾಮನ ಪದಗಳು ಎಂದರೆ ಶ್ರೀವ್ಯಾಸಕೃತವಾದ ಮಹಾಭಾರತಾದಿ ಕೃತಿಗಳು ಎಂದು ಭಾವ. ಅವುಗಳ ಸೇವಕ ಎಂದರೆ ಶ್ರವಣಮನನಾದಿಗಳ ಮೂಲಕ ಅವುಗಳ ಅರ್ಥಚಿಂತಕ ಎಂದು ಭಾವ. ಈ ರೀತಿಯಾಗಿ ಶ್ರೀಹರಿಯ ಸಂದೇಶರೂಪದ ಶಾಸ್ತ್ರಗಳ ಶ್ರವಣಾದಿಗಳನ್ನು ಮಾಡುವವರು ಸದಾ ಕ್ಷೇಮದಿಂದಿರುವರು ಎಂಬ ಭಾವ ಇಲ್ಲಿ ಸೂಚಿತ. ಚರಣಚರಣವಾಗಿ ಶ್ರೀಹರಿಯನ್ನು ಕೊಂಡಾಡುವ ಸ್ತೋತ್ರವನ್ನು ಅಧ್ಯಯನ ಮಾಡುವ ಸೇವಕ ಎಂಬ ಅರ್ಥವನ್ನೂ ಇಲ್ಲಿ ಕಾಣಬಹುದು.

೭. **ಪ್ರೇಮದಿಂ:** ಪ್ರೇಮ ಎಂದರೆ ಭಕ್ತಿ ಎಂದರ್ಥ. ಮಾಹಾತ್ಮ್ಯಜ್ಞಾನಪೂರ್ವಕವಾಗಿ ಶ್ರೀಹರಿಯಲ್ಲಿ ಮಾಡುವ ಪ್ರೇಮಕ್ಕೆ ಭಕ್ತಿ ಎಂದು ಹೆಸರು. ಇದರಿಂದ ಶ್ರೀಹರಿಯಲ್ಲಿ ಭಕ್ತರು ಮಾಡುವ ಭಕ್ತಿ ಶಾಸ್ತ್ರವಿಹಿತವಾದ ನಿರ್ಮಲ ಭಕ್ತಿಯೇ ಹೊರತು, ಮೂಢಭಕ್ತಿಯಲ್ಲ ಎಂಬ ಭಾವ ಸೂಚಿತ[೧].

೮. **ಸಾಷ್ಟಾಂಗವೆರಗುತೆ:** ಸಾಷ್ಟಾಂಗ ನಮಸ್ಕಾರ ಎಂದರೆ ಎದೆ, ಶಿರಸ್ಸು, ನೋಟ, ಮನಸ್ಸು ಮಾತು, ಪಾದಗಳು, ಕೈಗಳು ಹಾಗೂ ಮೊಳಕಾಲುಗಳು; ಇವುಗಳಿಂದ ಕೂಡಿದ ನಮಸ್ಕಾರ ಎಂದರ್ಥ:

**ಉರಸಾ ಶಿರಸಾ ದೃಷ್ಟ್ಯಾ ಮನಸಾ ವಚಸಾ ತಥಾ ।**
**ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋऽಷ್ಟಾಂಗ ಈರಿತಃ ॥**

–ಕೃಷ್ಣಾಮೃತಮಹಾರ್ಣವ (೯೦)

೯. **ಮಾಳ್ಪೆ ಬಿನ್ನಪವ:** ಬಿನ್ನಹವನ್ನು ಮಾಡುವೆನು ಎಂದರ್ಥ. ಬಿನ್ನಹ ಎಂದರೆ ವಿಜ್ಞಾಪನೆ, ವಿನಂತಿ ಎಂದರ್ಥ.

---

೧. ಪರಮೇಶ್ವರ ಭಕ್ತಿರ್ನಾಮ ನಿರವಧಿಕಾನಂತಾನವದ್ಯ ಕಲ್ಯಾಣಗುಣತ್ವ ಜ್ಞಾನಪೂರ್ವಕಃ ಸ್ವಾತ್ಮಾತ್ಮೀಯ–ಸಮಸ್ತವಸ್ತುಭ್ಯೋऽನೇಕಗುಣಾಧಿಕೋऽಂತರಾಯಸಹಸ್ರೇಣಾಪ್ಯಪ್ರತಿಬದ್ಧ ನಿರಂತರ ಪ್ರೇಮಪ್ರವಾಹಃ ।
– ಶ್ರೀಜಯತೀರ್ಥರು (ನ್ಯಾಯಸುಧಾ)

೧೦. **ಈ ಮಹಿಯೊಳೀವರೆಗೆ** ಎಂದರೆ ಸಾಧನಭೂಮಿಯಾದ ಈ ಭೂಲೋಕದಲ್ಲಿ ಎಂದೂ, ಸಾಧನದೇಹವಾದ ಮನುಷ್ಯದೇಹದಲ್ಲಿ ಎಂದೂ ಅರ್ಥ.

೧೧. **ನಾವ್ ಸುಕ್ಷೇಮಿಗಳು** ಎಂದರೆ ನಿನ್ನ ಅನುಗ್ರಹದಿಂದ ಬಯಸಿದ ಎಲ್ಲವನ್ನೂ ಸಾಧನೆಗೆ ಅನುಕೂಲವಾದ ಎಲ್ಲ ವಸ್ತುಗಳನ್ನು ಸಹ ಪಡೆದವರು ಎಂದು ಭಾವ. ಪರಸ್ಪರ ಕುಶಲವನ್ನು ವಿಚಾರಿಸುವಾಗ ತಮ್ಮ ಕ್ಷೇಮಸಮಾಚಾರವನ್ನು ತಿಳಿಸುವುದು ಶಾಸ್ತ್ರರೂಢಿ. ಅದಕ್ಕನುಗುಣವಾಗಿ, ಕನಕದಾಸರು ಹೀಗೆ ತಾವು ಸುಕ್ಷೇಮಿಗಳು ಎಂದು ಹೇಳಿಕೊಂಡಿರುವರು ಎಂದು ತಿಳಿಯಬೇಕು.

೧೨. **ನಿನ್ನಯ ಪಾದಾಬ್ಜ ಕ್ಷೇಮವಾರ್ತೆಯನರುಹಿ:** ನಿನ್ನ ಪಾದಕಮಲಗಳ ಕ್ಷೇಮವಾರ್ತೆಯನ್ನು ತಿಳಿಸು ಎಂದು ಪ್ರಾರ್ಥಿಸುವುದು ಸಹ ಮೇಲೆ ಹೇಳಿದಂತೆ ಉಭಯಕುಶಲೋಪರಿಯ ಒಂದು ಪರಿ ಎಂದು ತಿಳಿಯಬೇಕು. ಶ್ರೀಹರಿಯಂತಹ ಶ್ರೇಷ್ಠವ್ಯಕ್ತಿಗಳನ್ನು ಹಾಗೆ ಕ್ಷೇಮವಿಚಾರಿಸುವುದು ಎಂದರೆ ಅವರ ಆರಾಧಕರ ಕ್ಷೇಮವನ್ನು ತಿಳಿಯಬಯಸುವುದು ಎಂದಷ್ಟೇ ಅರ್ಥ. ಪೂರ್ಣಾನಂದಸ್ವರೂಪನಾದ ಶ್ರೀಹರಿಗೆ ಹೊಸತಾಗಿ ಉಂಟಾಗಬೇಕಾದ ಕ್ಷೇಮ ಬೇರಾವುದಿದೆ? ಅಲ್ಲವೆ?

೧೩. **ಅರುಹಿ** ಎಂದರೆ ತಿಳಿಸಿ ಎಂದರ್ಥ. ಈ ಮೂಲಕವಾದ ಪ್ರಾರ್ಥನೆಯಿಂದ ಸ್ವಾಮಿಯಾದ ಶ್ರೀಹರಿಯೊಂದಿಗೆ ಆತ್ಮೀಯತೆಯನ್ನು ಗುರುತಿಸಿಕೊಳ್ಳುವುದು ಎಂದರ್ಥ. ಇಂತಹ ಆತ್ಮೀಯತೆಯ ಪರಿಕಲ್ಪನೆಯಲ್ಲಿ ನೈಜಭಕ್ತಿಯ ಸ್ವರೂಪವನ್ನು ಗುರುತಿಸಲು ಸಾಧ್ಯವಿದೆ.

೧೪. ಕ್ಷೇಮಿಗಳು ಎಂದರೆ, ಕ್ಷೇಮ ಉಳ್ಳವರು ಎಂದರ್ಥ. ನಮಗೆ ಬೇಕಾದ ವಸ್ತು ದೊರೆಯುವದನ್ನು ಯೋಗ ಎನ್ನುವರು (ಅಪ್ರಾಪ್ತಪ್ರಾಪಣಂ ಯೋಗಃ); ದೊರೆತ ವಸ್ತು ಸುರಕ್ಷಿತವಾಗಿ ಉಳಿಯುವುದಕ್ಕೆ ಕ್ಷೇಮ ಎನ್ನುವರು (ಪ್ರಾಪ್ತಪರಿರಕ್ಷಣಂ ಕ್ಷೇಮಃ). ಈ ಹಿನ್ನೆಲೆಯಲ್ಲಿ ನಾವು ನಿನ್ನ ಅನುಗ್ರಹದಿಂದ ದೊರೆತದ್ದನ್ನು ಸುರಕ್ಷಿತವಾಗಿ ಉಳಿಸಿಕೊಂಡವರಾಗಿರುವೆವು ಎಂದು ಅರ್ಥವಾಗುವುದು.

೧೫. ಅದರಂತೆ ನಿನ್ನ 'ಪಾದಾಬ್ಜಕ್ಷೇಮವಾರ್ತೆ' ಎಂಬುದಕ್ಕೆ ಶ್ರೀಹರಿಯು ಸದಾ ಸುಕ್ಷೇಮಿಯಾಗಿದ್ದರೂ ಭಕ್ತರಿಗೆ ಅದು ಮನಸ್ಸಿನಲ್ಲಿ ದೃಢವಾಗಿ ತಿಳಿಯುವಂತೆ, ಉಳಿಯುವಂತೆ ಮಾಡುವ ಅನುಗ್ರಹದ ವಾರ್ತೆ ಎಂದು ತಿಳಿಯಬೇಕು.

೧೬. ಈ ರೀತಿಯಾದ ಕುಶಲಪ್ರಶ್ನೆಯ ಮಾಧ್ಯಮದಲ್ಲಿ ಭಗವಂತನೊಂದಿಗೆ ವ್ಯವಹರಿಸುವುದು ಭಕ್ತನಿಗೆ ಭಗವಂತನಲ್ಲಿರುವ ಅಪಾರವಾದ ಆಪ್ತತೆಗೆ ಉತ್ತಮ ನಿದರ್ಶನ. ಶ್ರೀಕನಕದಾಸರ ಈ ಕೃತಿಯ ಯಶಸ್ಸಿನಲ್ಲಿ ಈ ಭಾವವು ಸಹ ಒಂದು ಮುಖ್ಯ ಕಾರಣ.

*****

## ೧೭. ಅಯೋಗಿಗಳ ಮಾತೇನು ರಕ್ಷಿಸು

**ಈಗಲೀ ಮರ್ಯಾದೆಯಲಿ ಶರ-**
**ಣಾಗತರ ಸೇವೆಯೊಳು ಪೊಂಪುಳಿ-**
**ಯಾಗಿ ಬಾಳುವರೇನು ಧನ್ಯರೊ ಹರ ಮಹಾದೇವ।**
**ಭೋಗಭಾಗ್ಯವ ಬಯಸಿ ಮುಕ್ತಿಯ**
**ನೀಗಿ ನಿಮ್ಮನು ಭಜಿಸಲರಿಯದ-**
**ಯೋಗಿಗಳ ಮಾತೇನು ರಕ್ಷಿಸು ನಮ್ಮನನವರತ ॥ ೧೭ ॥**

**ಅ: ಈಗ ಶಾಸ್ತ್ರಮರ್ಯಾದೆಗೆ ಅನುಗುಣವಾಗಿ ನಿನ್ನನ್ನು ಶರಣುಹೊಂದಿದವರ ಸೇವಾಕಾರ್ಯದಲ್ಲಿ ನಲಿವಿನಿಂದ ಜೀವನ ಸಾಗಿಸುವವರು ಎಷ್ಟು ಧನ್ಯರೋ ಹೇಳಲು ಸಾಧ್ಯವಿಲ್ಲ. ಹಾಗೆ ಮಾಡದೆ ಭೋಗಭಾಗ್ಯಗಳನ್ನು ಬಯಸಿ, ಮುಕ್ತಿಯ ಬಗ್ಗೆ ಗಮನ ನೀಡದೆ, ನಿಮ್ಮನ್ನು ಸೇವಿಸಲು ತಿಳಿಯದ ಅಯೋಗಿಗಳ ರೀತಿಯನ್ನು ಎಷ್ಟೆಂದು ಹೇಳುವುದು; ಶ್ರೀಹರಿಯೇ! ನೀನು ನಮ್ಮನ್ನು ಸದಾ ರಕ್ಷಿಸು.**

ವಿ.: ೧. ಮರ್ಯಾದೆ ಎಂದರೆ ಶಾಸ್ತ್ರವಿಧಿಸಿದ ಕಟ್ಟಳೆ ಎಂದರ್ಥ. ಶಾಸ್ತ್ರದ ವಿಧಿವಿಧಾನಗಳಿಗೆ ಅನುಗುಣವಾಗಿ ಹರಿಭಕ್ತರ ಸೇವೆಯನ್ನು ಮಾಡುವುದು ವಿಶೇಷವಾದ ಸಾಧನೆ ಎಂದರ್ಥ. ಶಾಸ್ತ್ರಕ್ಕೆ ವಿರೋಧವಾಗದಂತೆ ಭಗವದ್ಭಕ್ತರ ಬೇಕುಬೇಡಗಳನ್ನು ತಿಳಿದು, ಅವರಿಗೆ ಹಿತವಾಗುವಂತೆ ಬದುಕುವುದರಲ್ಲಿ ಜೀವನದ ಸಾರ್ಥಕ್ಯವಿದೆ ಎಂಬುದು ಇಲ್ಲಿಯ ಮುಖ್ಯ ಸಂದೇಶ. ಇದು ಶ್ರೀಮನ್ಮಧ್ವಾಚಾರ್ಯರು ಗೀತಾತಾತ್ಪರ್ಯದಲ್ಲಿ ನೀಡಿರುವ ಸಾರಸರ್ವಸ್ವವಾದ ವಚನ: **ನಾನಾಜನಸ್ಯ ಶುಶ್ರೂಷಾ ಕರ್ಮಾಖ್ಯಾ ಕರವನ್ಮಿತೇಃ... ತಸ್ಯ ಪ್ರಾಣ್ಯುಪಕಾರೇಣ ಸಂತುಷ್ಟೋ ಭವತಿ ಈಶ್ವರಃ**[೧].

೨. ಪೊಂಪುಳಿ ಎಂದರೆ, ನಲಿವು, ಆನಂದ, ಉತ್ಸಾಹ ಎಂದರ್ಥ. ಧರ್ಮಾಚರಣೆಯನ್ನು ಬೇಸರಿಸದೇ ಅತ್ಯಂತ ಶ್ರದ್ಧೆಯಿಂದ ಉತ್ಸಾಹದಿಂದ ಮಾಡಬೇಕು ಎಂಬುದು ಶಾಸ್ತ್ರದ

---

೧. ನಾನಾಜನಸ್ಯ ಶುಶ್ರೂಷಾ ಕರ್ಮಾಖ್ಯಾ ಕರವನ್ಮಿತೇಃ।
ಯೋಗಾರ್ಥಿನಾ ತು ಸಾ ಕಾರ್ಯಾ ಯೋಗಸ್ಥೇನ ಹರೌ ಸ್ಥಿತಿಃ।
ತೇನಾಪಿ ಸ್ವೋತ್ತಮಾನಾಂ ತು ಕಾರ್ಯಾಽನ್ಯೈರಖಿಲೇಷ್ವಪಿ।
ಶಕ್ತಿತಃ ಕರಣೀಯೇತಿ ವಿಶೇಷೋಽಸಿದ್ಧಸಿದ್ಧಯೋಃ।
ಪ್ರಾಪ್ತೋಪಾಯಸ್ತು ಸಿದ್ಧಃ ಸ್ಯಾತ್ ಪ್ರೇಪ್ಸುಃ ಸಾಧಕ ಉಚ್ಯತೇ।
ತಸ್ಯ ಪ್ರಾಣ್ಯುಪಕಾರೇಣ ಸಂತುಷ್ಟೋ ಭವತೀಶ್ವರಃ।
ಸಿದ್ಧೋಪಾಯೇನ ವಿಷ್ಣೋಸ್ತು ಧ್ಯಾನವ್ಯಾಖ್ಯಾರ್ಚನಾದಿಕಮ್।
ಕಾರ್ಯಂ ನಾನ್ಯತ್ ತಸ್ಯ ತೇನ ತುಷ್ಟೋ ಭವತಿ ಕೇಶವಃ॥ – ಗೀತಾತಾತ್ಪರ್ಯ (೬/೩)

ವಿಧಿ. ಧರ್ಮಾಚರಣೆಯನ್ನು ಮಾಡುವ ಅನೇಕರು ಅದರ ಬಗ್ಗೆ ಬೇಸರದಿಂದಲೇ ಮಾಡುವುದು ಹೊಸತೇನಲ್ಲ. ಏಕಾದಶ್ಯಾದಿ ವ್ರತಗಳ ಆಚರಣೆ, ಚಾತುರ್ಮಾಸ್ಯ ಮೊದಲಾದವುಗಳನ್ನು ಅನುಷ್ಠಾನ ಮಾಡುವ ಅನೇಕರುಗಳಲ್ಲಿ ಅವುಗಳ ಬಗ್ಗೆ ಉತ್ಸಾಹದ ಬದಲು ನಿರುತ್ಸಾಹವೇ ತುಂಬಿರುತ್ತದೆ. ಅಂತಹ ಅನುಷ್ಠಾನಕ್ಕೆ ಪೂರ್ಣಫಲ ಲಭಿಸದು. ಆದ್ದರಿಂದ ಸ್ವಧರ್ಮಾಚರಣೆಯನ್ನು ಅತ್ಯಂತ ಉತ್ಸಾಹದಿಂದ ಸಂಭ್ರಮದಿಂದ ಆಚರಿಸಿ, ಶ್ರೀಹರಿಯ ಕೃಪೆಗೆ ಪಾತ್ರರಾಗಬೇಕು ಎಂಬುದು ಇಲ್ಲಿಯ ಸಂದೇಶ[೧].

೩. ಮನುಷ್ಯನ ಸಫಲ ಜೀವನಕ್ಕೆ ಅತ್ಯಂತ ಅಗತ್ಯವಾದುದು ಭಗವಂತನ ಒಲುಮೆ. ಅದನ್ನು ಪಡೆಯಲು ಇರುವ ರಾಜಮಾರ್ಗ ಭಗವದ್ಭಕ್ತರ ಸೇವೆ ಎಂಬುದು ಸಾಧನೆಯ ಪರಮ ರಹಸ್ಯ. ದೈನಂದಿನ ನಿತ್ಯಕರ್ಮಗಳು, ತೀರ್ಥಯಾತ್ರೆ ಮೊದಲಾದ ವಿಶೇಷ ಕಾರ್ಯಗಳು, ದಾನ-ಧರ್ಮ ಮೊದಲಾದ ಇತರ ಸಾಧನೆಗಳು ಅಪೇಕ್ಷಿತವಾಗಿರುವಂತೆ ಭಗವಂತನ ಒಲುಮೆಗೆ ಯೋಗ್ಯ ಚೇತನರ ವಿಶೇಷ ಸೇವೆ ಇನ್ನೂ ಹೆಚ್ಚು ಅಪೇಕ್ಷಿತ ಎಂಬುದು ಅತ್ಯಂತ ವಿಶಿಷ್ಟವಾದ ಸಂದೇಶ. ಆಧುನಿಕ ಪರಿಕಲ್ಪನೆಯ ಸಮಾಜಸೇವೆ ಇದರ ಅನುಕರಣೆ ಮಾತ್ರ. ದೇಶಹಿತ, ಜನಹಿತ ಮಾತ್ರವಲ್ಲದೆ, ನೊಂದವರ ಸೇವೆ ಭಗವಂತನ ಪ್ರೀತಿಗೂ ಸಾಧನ ಎಂಬುದೇ ನಿಜವಾದ ಅಧ್ಯಾತ್ಮ. ನುಡಿದಂತೆ ನಡೆದ ಶ್ರೀಕನಕದಾಸರು ಈ ನಿಟ್ಟಿನಲ್ಲಿ ತಮ್ಮ ಬದುಕಿನ ಮೂಲಕವೂ ಮಾಡಿರುವ ಸಾಧನೆ ಅದ್ಭುತವಾದುದು.

೪. ಇದನ್ನು ಮರೆತು ಕೇವಲ ಸ್ವಾರ್ಥಸಾಧನೆಯಲ್ಲಿ ಮಗ್ನರಾಗಿ ಭೋಗಭಾಗ್ಯಗಳನ್ನಷ್ಟೇ ಅರಸುತ್ತಾ ಬದುಕುವುದು ಮಾತಿಗೂ ನಿಲುಕದಂತಹ ಕೀಳು ಜೀವನ ಎಂಬುದನ್ನು **ಅಯೋಗಿಗಳ ಮಾತೇನು** ಎಂಬುದಾಗಿ ಇಲ್ಲಿ ಕಟುವಾಗಿ ಟೀಕಿಸಲಾಗಿದೆ. ಭೋಗಭಾಗ್ಯಗಳು ಜೀವನಕ್ಕೆ ಅಗತ್ಯವೆಂಬುದು ನಿಜ; ಆದರೆ ಅವುಗಳೇ ಪರಮ ಗುರಿ ಎನ್ನಿಸುವುದು ಮಾತ್ರ ಭಗವಂತ ಮೆಚ್ಚುವ ಸಂಗತಿಯಲ್ಲ. ದೇವರು ಎಂದೂ ಸಹ ಅಂತಹ ಸ್ವಾರ್ಥಿಗಳಿಗೆ ಒಲಿಯುವವನಲ್ಲ ಎಂಬ ವಿಶೇಷ ಎಚ್ಚರಿಕೆಯನ್ನು ಸಹ ಇಲ್ಲಿ ಗುರುತಿಸಬಹುದು. ಜಗತ್ತಿನ ಹೆಚ್ಚು ಸಂಖ್ಯೆಯ ಜನ ಇಂತಹ ಸ್ವಾರ್ಥಪರ ಬದುಕಿನಲ್ಲೇ ಸಾರ್ಥಕ್ಯ ಕಾಣುವುದು ನಿಜವಾದ ಆಧ್ಯಾತ್ಮಿಕ ದುರಂತ. ಇದನ್ನು ಮೀರಿ, ಗುರುಹಿರಿಯರ, ಭಗವಂತನ ಸೇವೆಗೆ ತೊಡಗಿಕೊಳ್ಳುವವರಿಗೆ ಪರಲೋಕಪ್ರಾಪ್ತಿಯೊಂದಿಗೆ ನಿತ್ಯಜೀವನದಲ್ಲೂ ಭೋಗಭಾಗ್ಯಗಳು ದೊರೆಯುವುದು ಸಹಜ. ಇದನ್ನು ಮರೆಯುವ ಜನ ಭೋಗಭಾಗ್ಯಗಳನ್ನಷ್ಟೇ ಅರಸಿ, ಹರಿಯನ್ನು ಮರೆಯುತ್ತ, ಇಹ-ಪರಗಳ ಸುಖಸಂತೋಷಗಳಿಗೆ ಎರವಾಗುವುದು ಸರ್ವಥಾ ಅನುಚಿತ ಎಂದು ಭಾವ. ಹರಿಕಥಾಮೃತಸಾರದ ಈ ಕೆಳಗಿನ ಪದ್ಯ ಇದೇ ಭಾವವನ್ನು ವ್ಯಕ್ತಪಡಿಸುವುದು:

---

೧. ಗೃಹಕರ್ಮವ ಬ್ಯಾಸರದಲೆ ಪರಮೋ-ತ್ಸಹದಲಿ ಮಾಡುತ ಮೂರ್ಜಗದ
ಮಹಿತನ ಸೇವೆಯಿದೆನುತಲಿ ಮೋದದಿ - ಅಹರಹರ್ಮನದಿ ಸಮರ್ಪಿಸುತಿಪ್ಪುದೆ
- (ಫಲವಿದುಬಾಳ್ದುದಕೆ) ಎಂಬ ಶ್ರೀಜಗನ್ನಾಥದಾಸರ ಮಾತು ಇದರ ವಿವರಣೆಯಂತಿದೆ.

ಕಬ್ಬಿನೊಳಗಿಹ ರಸ ವಿದಂತನಿ-
ಗಬ್ಬಬಲ್ಲದೆ ಭಾಗ್ಯಯೌವನ
ಮಬ್ಬಿನಲಿ ಮೈಮರೆದವಗೆ ಹರಿಸುಚರಿತಾಮೃತವು ।
ಲಭ್ಯವಾಗದು ಹರಿಪದಾಬ್ಧದಿ
ಹಬ್ಬಿದತಿಸದ್ಭಕ್ತಿರಸವುಂ-
ಡುಬ್ಬಿ ಕೊಬ್ಬಿ ಸುಖಾಬ್ಧಿಯೊಳಗಾಡುವವಗಲ್ಲದಲೆ ॥ (೧೦/೧೯)

೫. ಇಲ್ಲಿನ ಹರಮಹಾದೇವ ಎಂಬ ಉದ್ಗಾರ ಪರಹಿತದಲ್ಲಿ ಹರಿಸೇವೆಯನ್ನು ಕಾಣುವ ಜನರ ಬಗ್ಗೆ ದಾಸರು ವ್ಯಕ್ತಪಡಿಸಿರುವ ಅಭಿನಂದನೆಯ ಅಪೂರ್ವ ಪದಗಳು. ಇದನ್ನು ಗಮನಿಸದ ಕೆಲವರು ಶ್ರೀಕನಕದಾಸರು ಇಲ್ಲಿ ಶಿವನ ಹೆಸರುಗಳನ್ನು ಉಲ್ಲೇಖಿಸುವ ಮೂಲಕ ತಾವು ಶೈವರು ಎಂಬುದನ್ನು ತಿಳಿಸಿರುವರು ಎಂಬುದಾಗಿ ತಪ್ಪಾಗಿ ಬರೆದಿರುವುದುಂಟು. ಶಿವಶಿವ, ಹರಹರ ಎಂಬ ಪದಗಳು ಭಾವನೆಗಳ ತೀವ್ರತೆಯನ್ನು ವ್ಯಕ್ತಪಡಿಸುವ ವಿಶಿಷ್ಟ ವಾಗ್ರೂಢಿಗಳು ಎಂಬುದನ್ನು ಗಮನಿಸಿದಲ್ಲಿ, ಈ ಗೊಂದಲಕ್ಕೆ ಅವಕಾಶವಿರದು. ಅಲ್ಲದೆ, ಹರ, ಮಹಾದೇವ ಎಂಬ ಹೆಸರುಗಳು ಶ್ರೀಕನಕದಾಸರು ನಂಬಿದ ವೈಷ್ಣವಸಿದ್ಧಾಂತದಲ್ಲಿ ಮುಖ್ಯವಾಗಿ ಮಹಾವಿಷ್ಣುವಿನ ಹೆಸರುಗಳೇ ಆಗಿವೆ ಎಂಬುದನ್ನೂ ಗಮನಿಸಬೇಕು.

೬. ವೈಷ್ಣವರು ಮನೋನಿಯಾಮಕ ಎಂಬುದಾಗಿ ಶಿವನನ್ನು ಸಹ ಆರಾಧಿಸುವುದರಿಂದ ಶಿವ ಶಿವ ಎಂಬ ಉದ್ಗಾರ ಮನಸ್ಸಿನ ಭಾವನೆಗಳ ಅಭಿವ್ಯಕ್ತಿಗೆ ಉತ್ತಮವಾದ ಸಾಧನ ಎಂಬ ಅರ್ಥದಲ್ಲೂ ಹರಹರಮಹಾದೇವ, ಶಿವಶಿವ ಎಂಬ ಮಾತುಗಳು ಇಂತಹ ಕೃತಿಗಳಲ್ಲಿ ಅತ್ಯಂತ ಅರ್ಥವತ್ತಾಗುವವು.

*****

## ೧೮. ಭಕ್ತಿಸಾರದ ಚರಿತೆಯನು ರಚಿಸುವೆ ರಕ್ಷಿಸು

ಭಕ್ತಿಸಾರದ ಚರಿತೆಯನು ಹರಿ-
ಭಕ್ತರಾಲಿಸುವಂತೆ ರಚಿಸುವೆ
ಯುಕ್ತಿಯಲಿ ಬರೆದೋದಿದವರಿಷ್ಟಾರ್ಥ ಸಿದ್ಧಿಪುದು ।
ಮುಕ್ತಿಗಿದು ನೆಲೆದೋರುವುದು [೧]ಹರಿ-
ಭಕ್ತರನು ಲಾಲಿಪುದು ನಿಜಪತಿ
ಭಕ್ತಿಗೊಲಿವಂದದಲಿ ರಕ್ಷಿಸು ನಮ್ಮನನವರತ ॥ ೧೮ ॥

೧. ಹರಿಭಕ್ತರೊಲಿದಾಲಿಪುದು (ಪಾ.)

**ಅ: ಭಕ್ತಿಸಾರದ ಚರಿತ್ರೆಯನ್ನು ಹರಿಭಕ್ತರು ಗಮನಕೊಟ್ಟು ಕೇಳುವ ರೀತಿಯಲ್ಲಿ ಯುಕ್ತಿಯುಕ್ತವಾಗಿ ರಚಿಸುವೆನು; ಇದನ್ನು ಸಯುಕ್ತಿಕವಾಗಿ ತಿಳಿದು, ಬರೆದು ಓದುವವರ ಮನೋಭಿಲಾಷೆಗಳು ಈಡೇರುವವು; ಅದರೊಂದಿಗೆ ಮುಕ್ತಿಯ ಸಾಧನೆಗೂ ಸಹ ದಾರಿ ತೆರೆದುಕೊಳ್ಳುವುದು. ಆದ್ದರಿಂದ ಹರಿಭಕ್ತರು ಇದನ್ನು ಆದರದಿಂದ ಆಲಿಸಬೇಕು. ಪತಿವ್ರತಾ ಸ್ತ್ರೀಗೆ ಅವಳ ಪತಿ ಒಲಿಯುವಂತೆ, ಸ್ವಾಮಿಯಾದ ಶ್ರೀಹರಿಯೇ ನೀನು ಒಲಿದು ಸದಾ ನಮ್ಮನ್ನು ರಕ್ಷಿಸು.**

ವಿ.: ೧. ಭಕ್ತಿಸಾರ ಎಂದರೆ ಭಕ್ತಿಯ ಬಗ್ಗೆ ಸಕಲ ವಿವರಗಳ ಸಂಗ್ರಹ ಎಂದರ್ಥ. ನಿಜವಾದ ಅರ್ಥದಲ್ಲಿ ಭಕ್ತಿಯ ಲಕ್ಷಣ ಹೀಗಿದೆ:

> **ಮಾಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋऽಧಿಕಃ ।**
> **ಸ್ನೇಹೋ ಭಕ್ತಿರಿತಿ ಪ್ರೋಕ್ತಸ್ತಯಾ ಮುಕ್ತಿರ್ನ ಚಾನ್ಯಥಾ ॥** - ಮ.ಭಾ.ತಾ.ನಿ (೧/೮೫)

- ಎಂದರೆ ಶ್ರೀಹರಿಯ ಮಾಹಾತ್ಮ್ಯವನ್ನು ಸರಿಯಾದ ರೀತಿಯಲ್ಲಿ ತಿಳಿದು, ಅತ್ಯಂತ ಸುದೃಢವಾದ ಪ್ರೀತಿಯನ್ನು ಹೊಂದುವುದೇ ಭಕ್ತಿ ಎನ್ನಿಸುವುದು. ಇಂತಹ ಭಕ್ತಿಯ ಬಗ್ಗೆ ತಿಳಿಸುವುದು ಸಹ ಸೇವೆಯ ಒಂದು ಮುಖ. ಅಂತಹ ತಿಳಿಸುವ ರೀತಿಯು ಸಹ ಮನಸ್ಸಿಗೆ ಹಿಡಿಸುವಂತೆ ಹರ್ಷ ಉಕ್ಕುವಂತೆ ಇರಬೇಕಾದದ್ದು ಅಗತ್ಯ. ಇಂತಹ ಉತ್ತಮ ರೀತಿಯಲ್ಲಿಯೇ ತಾವು ಈ ಕೃತಿಯನ್ನು ರಚಿಸುವುದಾಗಿ ಇದರಲ್ಲಿ ತಿಳಿಸಿರುವರು.

೨. ಒಂದು ಕಾರ್ಯವನ್ನು ಕೇವಲ ಮಾಡುವುದು ಯಶಸ್ಸಿಗೆ ಕಾರಣವಾಗದು. ಅದು ಯೋಗವೆನ್ನಿಸಬೇಕಾದರೆ, ಮೇಲೆ ಹೇಳಿದ ರೀತಿಯಲ್ಲಿ ಆದರ್ಶಪ್ರಾಯವಾದ ರೀತಿಯಲ್ಲೂ ನಡೆದಿರಬೇಕು: **ಯೋಗಃ ಕರ್ಮಸು ಕೌಶಲಮ್**. ಕೇವಲ ಬೇಯಿಸುವುದಷ್ಟೇ ಅಡುಗೆಯವನ ಕರ್ತವ್ಯವಲ್ಲ, ಅದು ರುಚಿಯಾಗಿರುವಂತೆಯೂ ಎಚ್ಚರವಹಿಸಬೇಕು. ಹಾಗಿದ್ದಲ್ಲಿ ಮಾತ್ರವೇ ಅವನು ಅಡುಗೆಯವನು ಎನ್ನಿಸಿಕೊಳ್ಳಲು ಸಾಧ್ಯ. ಅದರಂತೆ ಕೃತಿರಚನೆಯೂ ಸಹ ಒಂದು ಶ್ರೇಷ್ಠವಾದ ಕಲೆ. ಅದು ಅರ್ಥವಾಗುವಂತಿರಬೇಕಾದದ್ದು ಮೊದಲ ಅಗತ್ಯವಾದರೆ, ಅಭಿರುಚಿಯನ್ನು ಹೆಚ್ಚಿಸುವಂತಿರಬೇಕಾದದ್ದು ಮುಂದಿನ ಅಗತ್ಯ. ಅಂತಹ ಕೃತಿಗಳು ಮಾತ್ರವೇ, ಆದರಣೀಯವೆನ್ನಿಸುವವು. ಪ್ರಸ್ತುತ ಹರಿಭಕ್ತಿಸಾರವು ಈ ಬಗೆಯ ಕೃತಿ ಎಂಬುದನ್ನು ಇಲ್ಲಿ ಸ್ಪಷ್ಟಪಡಿಸಲಾಗಿದೆ.

೩. ಇಲ್ಲಿ ಯುಕ್ತಿಯಲ್ಲಿ ಎಂಬ ಪದವನ್ನು ರಚಿಸುವೆ ಎಂಬುದಕ್ಕೂ, ಬರೆದೋದಿದವರು ಎಂಬುದಕ್ಕೂ ಅನ್ವಯಿಸಿಕೊಳ್ಳಬೇಕು. ದಾಸರು ಇದನ್ನು ರಚಿಸುತ್ತಿರುವುದು ಯುಕ್ತಿಗೆ ಅನುಗುಣವಾಗಿರುವಂತೆ, ಇದನ್ನು ಓದುವವರು ಸಹ ಯುಕ್ತಿಗೆ ಅನ್ವಯಿಸಿಕೊಂಡು ಓದಬೇಕು ಎಂದು ಅರ್ಥ. ಹೇಳುವವರು ಸಯುಕ್ತಿಕವಾಗಿ ಹೇಳುವಂತೆ, ಓದುವವರೂ, ಕೇಳುವವರೂ ಸಹ ಅದನ್ನು ಸಯುಕ್ತಿಕವಾಗಿ ಕೇಳಬೇಕು. ಎಂದರೆ, ಸೂಕ್ತರೀತಿಯಲ್ಲಿ ಮನನ ಮಾಡಿ ದೃಢತೆಯನ್ನು ಹೊಂದಬೇಕು ಎಂದು ಭಾವ.

೪. ಇಂತಹ ರಚನೆಯಾಗಿರುವುದರಿಂದಲೇ ಇದು ಸಿದ್ಧಿಪ್ರದ ಎಂದು ತಿಳಿಯಬೇಕು. ಸಿದ್ಧಿಯು ಸಹ ಓದುವವರ ಮನಸ್ಸಿನ ಅಭಿಲಾಷೆಗಳನ್ನು ಪೂರೈಸುವ ಸ್ವರೂಪದ್ದಾಗಿರಬೇಕು ಎಂಬುದನ್ನು **ಬರೆದೋದಿದವರ ಇಷ್ಟಾರ್ಥ ಸಿದ್ಧಿಪುದು** ಎಂಬ ಮಾತಿನಿಂದ ತಿಳಿಸಿರುವರು. ಕೃತಿಯ ಯಶಸ್ಸು ಓದಿದಾಗ ಮಾತ್ರವಲ್ಲದೆ, ಬರೆದಾಗ ಬರೆದು ಇತರರಿಗೆ ತಿಳಿಯುವಂತೆ ಓದಿದಾಗ ಇನ್ನೂ ಪರಿಪೂರ್ಣ ಎನ್ನಿಸುವುದು. ಕೇವಲ ಓದಿಸಿಕೊಳ್ಳುವಂತಹ ಕೃತಿಗಳ ಸಂಖ್ಯೆಯೇ ವಿರಳ. ಓದಿನೊಂದಿಗೆ ತಾವು ಬರೆಯುವುದು, ಇತರರಿಗೆ ತಿಳಿಯುವಂತೆ ಓದಿ ಹೇಳುವುದು, ಮೊದಲಾದ ಹಿರಿಮೆಯನ್ನು ಪಡೆಯುವ ಕೃತಿಗಳ ಸಂಖ್ಯೆ ಇನ್ನೂ ವಿರಳ. ನಿಜವಾಗಿ ಸತ್ವವಿರುವ ಕೃತಿಗಳು ಮಾತ್ರ ಈ ಸಾಲಿಗೆ ಸೇರುವವು. ಹರಿಭಕ್ತಿಸಾರ ಈ ಬಗೆಯ ಕೃತಿ ಎಂಬುದು ಇದರ ಭಾವ. ಪಠ್ಯಪುಸ್ತಕಗಳನ್ನು ಮಾತ್ರವೇ ಬರೆಯಲು, ಓದಲು ಹಾಗೂ ಬರೆದು ಓದಲು ಸಾಧ್ಯ. ಕಥೆಪುಸ್ತಕಗಳನ್ನಾಗಲಿ, ವಾರ್ತಾಪತ್ರಿಕೆಗಳನ್ನಾಗಲಿ ಬರೆದು ಓದುವ ಅವಿವೇಕವನ್ನು ವಿವೇಕಿಗಳು ಮಾಡಲಾರರು ಎಂಬುದು ಎಲ್ಲರಿಗೂ ತಿಳಿದಿರುವ ಸಂಗತಿ; ಹರಿಭಕ್ತಿಸಾರ ಒಂದು ಹಂತದ ವರೆಗೆ ಮಾತ್ರವಲ್ಲದೆ ಇನ್ನೂ ಹೆಚ್ಚಿನ ರೀತಿಯಲ್ಲಿ ಅಧ್ಯಯನಕ್ಕೆ ಯೋಗ್ಯವಾದ ಶ್ರೇಷ್ಠ ಆಧ್ಯಾತ್ಮಿಕ ಕೃತಿ ಎಂಬುದು ಇಲ್ಲಿನ ಮುಖ್ಯ ಆಶಯ.

೫. ಹಾಗೆ ಮಾಡುವುದು ಅತಿಮುಖ್ಯವಾಗಿ ಮುಕ್ತಿಗೆ ಸಾಧನ ಎಂಬುದರಿಂದ ಇದು ಲೌಕಿಕ ಕಾವ್ಯವಾಗಿರದೆ, ಪರಲೋಕದ ಸಾಧನೆಗೆ ನೆರವಾಗುವ ಆಧ್ಯಾತ್ಮಿಕ ಶಾಸ್ತ್ರ ಎಂಬ ಭಾವವೂ ಸೂಚಿತ.

೬. ಭಕ್ತಿಸಾರದ ಕೃತಿಯ ಅಧ್ಯಯನ ಭಕ್ತಿವೃದ್ಧಿಗೆ ಸಾಧನವೆನಿಸಿ, ಶ್ರೀಹರಿಯ ಒಲುಮೆಗೆ ಕಾರಣವಾಗುವುದು. ನಿಜಪತಿ ಭಕ್ತಿಗೊಲಿವಂದದಲಿ ಎಂಬ ಮಾತು ಜಗತ್ಪತಿಯಾದ ಆದಿಕೇಶವನು ಭಕ್ತಿಗೆ ಒಲಿಯುವನು ಎಂಬ ಅರ್ಥದೊಂದಿಗೆ, ಪರಿವ್ರತಾ ಸ್ತ್ರೀಯ ಭಕ್ತಿಗೆ ಅವಳ ಪತಿ ಸಂಪೂರ್ಣ ವಶವಾಗುವಂತೆ ಎಂಬ ಅರ್ಥವನ್ನು ಧ್ವನಿಸುವ ಮೂಲಕ ಶ್ರೀಹರಿಯಲ್ಲಿ ಪತಿವ್ರತಾ ಸ್ತ್ರೀಯು ಪತಿಯಲ್ಲಿ ತೋರುವಂತಹ ನೈಜ ಭಕ್ತಿಯನ್ನು ಹೊಂದಬೇಕು ಎಂಬ ಸಂದೇಶವನ್ನು ಕಾಣಬಹುದು. ಇದು **ವಶೀಕುರ್ವಂತಿ ಮಾಂ ಭಕ್ತ್ಯಾ ಸತ್ಸ್ತ್ರಿಯಃ ಸತ್ಪತಿಂ ಯಥಾ**[೧] ಎಂಬ ಶ್ರೀಮದ್ಭಾಗವತದ ವಿವರಣೆಯಂತಿರುವ ಮಾತು.

೭. ಈ ಪದ್ಯ ಒಂದು ರೀತಿಯಲ್ಲಿ ಕೃತಿಯ ಫಲಶ್ರುತಿಯಾಗಿದೆ. ಸಾಮಾನ್ಯವಾಗಿ ಫಲ-ಶ್ರುತಿಯನ್ನು ಕೃತಿಯ ಕೊನೆಯಲ್ಲಿ ತಿಳಿಸುವುದು ಪದ್ಧತಿ. ಆದರೆ, ಅಧ್ಯಯನ ಮಾಡುವವರಿಗೆ ಕೃತಿಯ ಬಗ್ಗೆ ಆದರವನ್ನು ಹುಟ್ಟಿಸಲು ಕೆಲವೊಮ್ಮೆ ಪ್ರಾರಂಭದಲ್ಲಿಯೂ ಫಲಶ್ರುತಿಯನ್ನು ಹೇಳುವುದುಂಟು. ಇದು ಅಂತಹ ಪ್ರಸಂಗ. ಈ ಕೃತಿಯ ಕೊನೆಯಲ್ಲಿ ಇನ್ನೂ ವಿಶೇಷ ರೀತಿಯಲ್ಲಿ ಫಲಶ್ರುತಿ ಬಂದಿದೆ ಎಂಬುದು ಸಹ ಗಮನಿಸಬೇಕಾದ ಅಂಶ.

*****

---

೧. ಶ್ರೀಮದ್ಭಾಗವತ (೯/೬/೫೫)

## ೧೯. ಸನ್ಮತಿಗಳಿಗೆ ಮಂಗಳವಿತ್ತು ರಕ್ಷಿಸು

ನಳಿನಲೋಚನ ನಿಮ್ಮ ಮೂರ್ತಿಯ
ಕಳೆ ಬೆಳೆಗುತಿದೆ ಲಹರಿಯಲಿ ಭೂ-
ತಳದೊಳಚ್ಚರಿಯಾದ ನಾಮಾಮೃತಸಮುದ್ರದಲಿ ।
ಬಳಸುವರು ಸತ್ಕವಿಗಳವರ-
ಗ್ಗಳಿಕೆ ಎನಗಿನಿತಿಲ್ಲ ಸನ್ಮತಿ-
ಗಳಿಗೆ ಮಂಗಳವಿತ್ತು ರಕ್ಷಿಸು ನಮ್ಮನನವರತ ॥ ೧೯ ॥

ಅ: ಎಲೈ ಪುಂಡರೀಕಾಕ್ಷನಾದ ಶ್ರೀಹರಿಯೇ ! ನಿಮ್ಮ ಮೂರ್ತಿಯ ತೇಜಸ್ಸು, ನನ್ನ ಮನಸ್ಸಿನಲ್ಲಿ ಗೋಚರಿಸುತ್ತಿದೆ. ಇದು ಭೂಮಿಯಲ್ಲಿಯೇ ಆಶ್ಚರ್ಯವೆನ್ನಿಸುವಂತಹ ರೂಪ. ಉತ್ತಮಜ್ಞಾನಿಗಳು ಅದನ್ನು ನಿನ್ನ ನಾಮಾಮೃತವೆಂಬ ಅಮೃತಸಮುದ್ರದಲ್ಲಿ ವರ್ಣನೆಗೆಂದು ಬಳಸಿಕೊಳ್ಳುವರು. ಆದರೆ ಅವರ ಹಿರಿಮೆ ನನಗೆ ಸ್ವಲ್ಪವೂ ಇಲ್ಲ. ನನ್ನ ಸನ್ಮತಿಗೆ ಮಂಗಳವನ್ನು ನೀಡಿ, ಸದಾ ರಕ್ಷಿಸು.

ವಿ.: ೧. ಶ್ರೀಹರಿಯ ವರ್ಣನೆಗೆ ಹೊರಟಿರುವ ತಮಗೆ ವಿಶೇಷವಾದಂತಹ ಮತಿಯನ್ನು ನೀಡಿ ಅನುಗ್ರಹಿಸಲು, ಪ್ರಾರ್ಥಿಸಿಕೊಂಡಿರುವರು.

೨. ನಳಿನಲೋಚನ ಎಂದರೆ ಪುಂಡರೀಕಾಕ್ಷ ಎಂದರ್ಥ. ಪುಂಡರೀಕಾಕ್ಷ ಎಂಬುದು ಶ್ರೀಹರಿಯ ವಿಶಿಷ್ಟವಾದ ಲಕ್ಷಣ. ಹೀಗೆ ಸ್ತುತಿಸುವ ಮೂಲಕ ಅವನು ತನ್ನ ದಿವ್ಯ ನೋಟವನ್ನು ತಮ್ಮತ್ತ ಹರಿಸಲಿ ಎಂಬ ಬೇಡಿಕೆಯನ್ನು ಸೂಚಿಸಿರುವರು.

೩. ಶ್ರೀಹರಿಯ ಮಹಿಮೆಯನ್ನು ವರ್ಣಿಸಲು ಹೊರಟ ಅವರು ಅವನ ಮೂರ್ತಿಯನ್ನು ತಮ್ಮ ಹೃದಯದಲ್ಲಿ ಧ್ಯಾನಿಸುತ್ತಿರುವರು ಎಂಬುದು ಇದರಿಂದ ತಿಳಿಯುವುದು. ಧ್ಯಾನಕಾಲದಲ್ಲಿ ಗೋಚರಿಸುವ ಆ ಮೂರ್ತಿಯು ಭೂಮಿಯಲ್ಲೆಲ್ಲೂ ಕಾಣಲಾಗದಂತಹ ಆಶ್ಚರ್ಯಕರವಾದ ಸೊಬಗನ್ನು ಹೊಂದಿದೆ ಎಂಬುದನ್ನು ತಿಳಿಸುವ ಮೂಲಕ ಶ್ರೀಹರಿಯು ಸಾಕಾರ, ಅವನ ಆಕೃತಿಯ ಸೊಬಗು ಊಹಾತೀತ ಎಂಬ ವಿಶೇಷಾಂಶವನ್ನು ಸೂಚಿಸಿರುವರು.

೪. ಜ್ಞಾನಿಗಳು ಶ್ರೀಹರಿಯ ಮಹಿಮೆಯನ್ನು ಅವನ ಬಗೆಬಗೆಯ ನಾಮಗಳನ್ನು ವರ್ಣಿಸುವ ಮೂಲಕ ತಿಳಿಸುವರು. ಅವನ ನಾಮಗಳು ಅನಂತ ಎಂಬುದನ್ನು ಅದನ್ನು ಅಮೃತ ಸಾಗರ ಎಂದು ಕರೆಯುವ ಮೂಲಕ ಸೂಚಿಸಿರುವರು. ಸಂಖ್ಯೆಯಲ್ಲಿ ಅನಂತ ಮಾತ್ರವಲ್ಲದೆ, ಗುಣದಲ್ಲಿ ಅತ್ಯಂತ ತಾರಕ ಎಂಬುದನ್ನು ಅಮೃತ ಎಂಬ ಪದದಿಂದ ಸೂಚಿಸಿರುವರು.

೫. ಶ್ರೀಹರಿಯ ಮಹಿಮೆಯನ್ನು ವರ್ಣಿಸುವವರು ಸತ್ಕವಿಗಳು ಎನ್ನುವ ಮೂಲಕ ಹರಿ ಮಹಿಮೆಯನ್ನು ವರ್ಣಿಸದ ಕವಿಗಳು ಅಂತಹ ಸತ್ಕವಿಗಳಲ್ಲ ಎಂಬ ಸೂಚನೆಯನ್ನೂ

ಮಾಡಿರುವರು.ನಾರಾಯಣನ ವರ್ಣನೆಯ ಮುಂದೆ ನರರ ವರ್ಣನೆ ಅದೆಂತು ಶೋಭಿಸೀತು ಎಂಬ ತತ್ತ್ವವು ಇಲ್ಲಿದೆ. ನರ ಪರಿಮಿತ, ನಾರಾಯಣ ಅಪರಿಮಿತ, ಆದ್ದರಿಂದ ನರವರ್ಣನೆಯ ಕೃತಿಗಳ ವರ್ಣನೆಯೂ ಪರಿಮಿತ. ನಾರಾಯಣನ ವರ್ಣನೆಯ ಕೃತಿಗಳೂ ಸಹ ಅಪರಿಮಿತ ಎನ್ನುವ ಮೂಲಕ ತಾವು ಅಂಥಹ ಸತ್ಕೃತಿಯ ರಚನೆಗೆ ತೊಡಗಿರುವುದನ್ನು ನಿವೇದಿಸಿಕೊಂಡಿರುವರು.

೬. ಸತ್ಕವಿಗಳು ಎಂಬುದಕ್ಕೆ [೧]**'ಸದಿತಿ ಪ್ರಾಣಃ'** ಎಂಬ ಮಾತಿನಂತೆ ಪ್ರಾಣದೇವರ ಸಿದ್ಧಾಂತವನ್ನು ಅನುಸರಿಸಿ ನಾರಾಯಣನನ್ನು ಆರಾಧಿಸುವ ಜ್ಞಾನಿಗಳು, 'ಸದಿತಿ ಬ್ರಹ್ಮ' ಶ್ರೀಹರಿಯನ್ನು ಆರಾಧಿಸುವ ಭಾಗವತರು ಎಂಬ ವಿಶೇಷಾರ್ಥವನ್ನು ಸೂಚಿಸಿರುವರು.

೭. ಅಂತಹ ಉತ್ತಮಕೃತಿರಚನೆಯ ಹಂಬಲವಿದ್ದರೂ ಅದಕ್ಕೆ ಅಗತ್ಯವಾದ ಅರ್ಹತೆ ತಮ್ಮಲ್ಲಿಲ್ಲ ಎಂಬ ವಿನಯದ ಮಾತನ್ನು ಎನಗಿನಿತಿಲ್ಲ ಎಂಬ ಮಾತಿನಿಂದ ಸೂಚಿಸಿರುವರು. ಇಂತಹ ವಿನಯೋಕ್ತಿ ಜ್ಞಾನಿಗಳಿಗೆ ಸಹಜ: **ವಿನಯೋ ಹಿ ಭೂಷಯತಿ ಸರ್ವರಸಮ್.**

೮. ಕಾವ್ಯರಚನೆಗೆ ಅಗತ್ಯವಾದ ಮತಿಯನ್ನು ಹಾಗೂ ಅದಕ್ಕೆ ಮಂಗಳಚಿಂತನೆಯ ಹಿರಿಮೆಯನ್ನು ಸಹ ಅನುಗ್ರಹಿಸಲು ಪ್ರಾರ್ಥಿಸುತ್ತಾ ಅದೇ ಶ್ರೀಹರಿಯು ಭಕ್ತರಿಗೆ ನೀಡಬಹುದಾದ ಶ್ರೇಷ್ಠ ರಕ್ಷಣೆಯೆಂಬ ಮಾತನ್ನು ತಿಳಿಸಿರುವರು.

೯. **ಅಗ್ಗಳಿಕೆ** ಎಂದರೆ ಹಿರಿಮೆ, ಹೆಚ್ಚುಗಾರಿಕೆ, ಶ್ರೇಷ್ಠತೆ ಎಂದರ್ಥ.

*****

## ೨೦. ನಾಮಾವಳಿಯ ಪೊಗಳಿಕೆಯಿತ್ತು ರಕ್ಷಿಸು

**ಗಿಳಿಯ ಮರಿಯನು ತಂದು ಪಂಜರ-**
**ದೊಳಗೆ ಪೋಷಿಸಿ ಕಲಿಸಿ ಮೃದುನುಡಿ-**
**ಗಳನು ಲಾಲಿಸಿ ಕೇಳ್ವ ಪರಿಣತರಂತೆ ನೀನೆನಗೆ ।**
**ತಿಳುಹಿ ಮತಿಯನು ಎನ್ನ ಜಿಹ್ವೆಗೆ**
**ಮೊಳಗುವಂದದಿ ನಿನ್ನ ನಾಮಾ -**
**ವಳಿಯ ಪೊಗಳಿಕೆಯಿತ್ತು ರಕ್ಷಿಸು ನಮ್ಮನನವರತ ॥ ೨೦ ॥**

**ಅ:** **ಗಿಳಿಯ ಮರಿಯನ್ನು ತಂದು ಪಂಜರದೊಳಗೆ ಅದನ್ನು ಇರಿಸಿ, ಪೋಷಣೆಮಾಡಿ, ಅದಕ್ಕೆ ಮೃದುನುಡಿಗಳನ್ನು ಕಲಿಸಿ, ಅದನ್ನು ಪ್ರೀತಿಯಿಂದ ಆಲಿಸುವ ಜ್ಞಾನಿಗಳಂತೆ**

---

೧. ಛಾಂದೋಗ್ಯೋಪನಿಷತ್.

**ಶ್ರೀಹರಿಯೇ! ಮತಿಯನ್ನು ನೀಡಿ, ಅವರ ನಾಲಿಗೆಗೆ ಹೊಂದುವಂತೆ, ನಿನ್ನ ನಾಮಾವಳಿಯ ಹೊಗಳುವಿಕೆಯನ್ನು ಕರುಣಿಸಿ, ನಮ್ಮನ್ನು ಸದಾಕಾಲ ರಕ್ಷಿಸು.**

ವಿ.: ೧ ಗಿಳಿಯ ಮರಿಗೆ ಮೊದಲಿನ ಅಗತ್ಯ ಪೋಷಣೆ. ಅದಕ್ಕೆ ಆಹಾರವನ್ನು ಒದಗಿಸುವ ಕಾರ್ಯದಂತೆ ಶತ್ರುಗಳಾದ ಪ್ರಾಣಿಗಳಿಂದ ರಕ್ಷಣೆಯನ್ನು ನೀಡುವುದು ಸಹ ಅತ್ಯಗತ್ಯ. ಅದರಂತೆ ಒಬ್ಬ ಜೀವಿ, ಗಿಳಿಯ ಮರಿಯಂತೆ ಅಸಹಾಯಕ. ಅವನಿಗೆ ಪೋಷಣೆಯಂತೆ ಕಾಮಕ್ರೋಧಾದಿ ಶತ್ರುಗಳಿಂದ ರಕ್ಷಣೆಯೂ ಅಗತ್ಯ. ಅದನ್ನು ನೀಡಬಲ್ಲ ಸಾಮರ್ಥ್ಯ ಭಗವಂತನದು ಮಾತ್ರ ಎಂದರ್ಥ.

೨. ಗಿಳಿಯಮರಿಯನ್ನು ರಕ್ಷಿಸಲು ಅದನ್ನು ಪಂಜರದಲ್ಲಿ ಇರಿಸುವ ಕಾರ್ಯ ನಡೆಯುವುದು. ಪಂಜರದಲ್ಲಿರುವ ಗಿಳಿಗೆ ಅಪಾಯಕರವಾದ ಸ್ಥಳಗಳಿಗೆ ತೆರಳದಂತೆ ರಕ್ಷಣೆ ದೊರೆಯುವುದು. ಅದರಂತೆ ಅಪಾಯಕರವಾದ ಪ್ರಾಣಿಗಳು ಅದು ಇರುವಲ್ಲಿಗೆ ಬಂದು, ಆಕ್ರಮಿಸದಂತೆಯೂ ಆಗುವುದು. ಭಗವಂತನು ಭಕ್ತರನ್ನು ಹೀಗೆ ರಕ್ಷಿಸಲೆಂದೇ ಸಂಸಾರಕ್ಕೆ ತರುವನು ಎಂದರ್ಥ. ಇಲ್ಲಿ ಗಿಳಿಯು ಜೀವನ ಪ್ರತೀಕವಾದರೆ, ಪಂಜರ ಸಂಸಾರದ ಪ್ರತೀಕ. ಪಂಜರದ ಗಿಳಿಗೆ ಪಂಜರವು ರಕ್ಷಣೆ ಹಾಗೂ ಬಂಧನ ಹಾಗೂ ಎರಡೂ ಆಗಿರುವಂತೆ ಸಂಸಾರದಲ್ಲಿನ ಜೀವನಿಗೆ ಅದು ರಕ್ಷಣೆ ಹಾಗೂ ಬಂಧನ ಎರಡೂ ಆಗಿದೆ ಎಂಬ ಅರ್ಥ ಸೂಚಿತ. ಸೂಕ್ತರೀತಿಯಲ್ಲಿ ಬಳಸಿಕೊಂಡರೆ ಸಂಸಾರವು ರಕ್ಷಣೆಗೆ ಸಾಧನ; ತಪ್ಪಿದಲ್ಲಿ ಅನರ್ಥಕ್ಕೂ ಸಾಧನ ಎಂದರ್ಥ. ಶ್ರೀಪುರಂದರದಾಸರ **ಗಿಳಿಯು ಪಂಜರದೊಳಿಲ್ಲ** ಎಂಬ ಪದದ ಪ್ರಭಾವವನ್ನು ಈ ಪದ್ಯದಲ್ಲಿ ಗುರುತಿಸಬಹುದು.

೩. ಪೋಷಣೆಯ ಅನಂತರದ ಕಾರ್ಯ ಅದಕ್ಕೆ ಮಾತನ್ನು ಕಲಿಸುವುದು. ಪ್ರಾಣಿವರ್ಗದಲ್ಲಿ ಗಿಳಿ ಹಾಗೂ ಸಾರಿಕಾ ಎಂಬ ಪಕ್ಷಿಗಳಿಗೆ ಮಾತುಗಳನ್ನು ಕಲಿಯುವ ವಿಶೇಷವಾದ ಗುಣ ಕಂಡುಬರುವುದು[೧]. ಹೇಳಿಕೊಟ್ಟ ಮಾತನ್ನು ಯಥಾವತ್ತಾಗಿ ಒಪ್ಪಿಸುವ ವಿಶಿಷ್ಟ ಚಾಣಾಕ್ಷತೆ ಎರಡು ಪಕ್ಷಿಗಳಲ್ಲಿದೆ. ಒಂದರ್ಥದಲ್ಲಿ ಇವುಗಳನ್ನು ಪ್ರಕೃತಿದತ್ತವಾದ ಧ್ವನಿಮುದ್ರಿಕೆಗಳು ಎನ್ನಬಹುದು. ಶ್ರೀಹರಿಯು ಜೀವಿಗಳಿಗೆ ಮಾತನ್ನು ನೀಡುವ ಕರುಣಾಳುವೂ ಆಗಿರುವನು. ಇಲ್ಲಿ ಶ್ರೀಹರಿಯು ಕಲಿಸುವ ಮಾತುಗಳು ಎಂದರೆ ಶಾಸ್ತ್ರವಚನಗಳು ಎಂದರ್ಥ. ಸವಿನುಡಿಗಳು ಎಂದರೆ ಕೇಳಲು ಹಿತಕರವಾದ, ಮನನಕ್ಕೆ ರೋಚಕವಾದ ಮಾತುಗಳು ಎಂದರ್ಥ. ಗಿಳಿಯು ನುಡಿಯಲು ಸಾಧ್ಯವಾಗುವಂತಹ ಇತಿಮಿತಿಯಲ್ಲಿಯೇ ಅವಕ್ಕೆ ಮಾತನ್ನು ಕಲಿಸುವುದು ಅಗತ್ಯ. ಜೀವರಿಗೆ ಅವರ ಯೋಗ್ಯತೆಗೆ ಅನುಗುಣವಾದ ರೀತಿಯಲ್ಲಿಯೇ ಶಾಸ್ತ್ರಪಾಠ ವಿಹಿತ. ಅದನ್ನು ಗುರುಗಳಲ್ಲಿದ್ದು ಮಾಡಿಸುವವನು ಸಹ ಭಗವಂತ ಎಂಬ ಅಧ್ಯಾತ್ಮ ಇದರಲ್ಲಿದೆ.

---

೧. ಇದು ಶ್ರೀಜಯತೀರ್ಥರ ತತ್ತ್ವಪ್ರಕಾಶಿಕೆಯಲ್ಲಿನ 'ಅಕ್ಷೋಭ್ಯತೀರ್ಥಗುರುಣಾ ಶುಕವಚ್ಛಿಕ್ಷಿತಸ್ಯ ಮೇ।' ಎಂಬ ಮಾತಿನ ಹಿನ್ನೆಲೆಯನ್ನು ಹೊಂದಿದೆ.

೪. ಗಿಳಿಯ ಮಾತುಗಳನ್ನು ಕಲಿಸಿದವನು ಆಲಿಸಿ ಸಂತೋಷಪಡುವುದು ಅದರಲ್ಲಿ ಹೊಸ ವಿಷಯಗಳು ಇರುವ ಕಾರಣದಿಂದಲ್ಲ; ತಾನು ಹೇಳಿದ್ದನ್ನೇ ಅದು ಯಥಾವತ್ತಾಗಿ ಉಚ್ಚರಿಸುವುದಷ್ಟೇ ಕಾರಣ. ಅದರಂತೆ ಶಾಸ್ತ್ರದ ಮಾತುಗಳನ್ನು ಅಪಚಾರವಾಗದಂತೆ ಯೋಗ್ಯರೀತಿಯಲ್ಲಿ ಶ್ರೀಹರಿಯ ಸ್ತೋತ್ರವನ್ನಾಗಿ ಬಳಸಿಕೊಳ್ಳುವುದು ಸಾಧಕನಿಗೆ ವಿಹಿತ. ಶಾಸ್ತ್ರದ ಸಕಲ ಮಾತುಗಳು ಶ್ರೀಹರಿಯ ಸ್ತೋತ್ರವಾಗಿರುವುದರಿಂದ ಅದನ್ನು ಅವನು ಪ್ರೀತಿಯಿಂದ ಆಲಿಸುವನು ಎಂದರ್ಥ.

೫. ಈ ರೀತಿಯಾದ ಶಾಸ್ತ್ರದ ಮಾತುಗಳು ಬರುವುದು ಅವುಗಳನ್ನು ಉಚ್ಚರಿಸಲು ಸಾಧ್ಯವಾಗುವುದು ಶ್ರೀಹರಿಯು ಅನುಗ್ರಹಿಸಿದಾಗ ಮಾತ್ರ. ಅಂತಹ ಅನುಗ್ರಹವನ್ನು ಅವನು ಮಾಡಿ, ಉಚ್ಚರಿಸುವ ಪ್ರತಿಮಾತು ಸಹ ಅವನ ನಾಮಾವಳಿಯಾಗುವಂತೆ ಒಲುಮೆ ತೋರಲಿ ಎಂಬುದು ಇಲ್ಲಿಯ ಪ್ರಾರ್ಥನೆ.

೬. ಇಂತಹ ಪ್ರಾರ್ಥನೆಯ ಮೂಲಕ ಶ್ರೀಹರಿಯನ್ನು ಸ್ತುತಿಸುವ ಕೃತಿಯು ಶ್ರೀಹರಿಯ ಪ್ರೇರಣೆಯಿಂದಲೇ ರಚಿತವಾಗಿ ಅವನ ಪ್ರೀತಿಗೆ ಕಾರಣವಾಗಲಿ ಎಂಬ ಕಳಕಳಿ ಇಲ್ಲಿ ವ್ಯಕ್ತವಾಗಿದೆ.

೭. ಇಲ್ಲಿ ದಾಸರು ನಾಮ ಎನ್ನದೆ, ನಾಮಾವಳಿ ಎಂದಿರುವುದು ವಿಶೇಷ. ಶ್ರೀಹರಿಯನ್ನು ಕೊಂಡಾಡಲು ಒಂದು ನಾಮ ಸಾಲದು, ನಾಮಗಳ ರಾಶಿಯೇ ಬೇಕು ಎಂದು ಇದರ ಭಾವ.ಶ್ರೀಹರಿಯ ಒಂದೊಂದು ನಾಮವು ಸಹ ಅವರ ಒಂದೊಂದು ಗುಣಗಳನ್ನು ತಿಳಿಸಿಕೊಡುವುದು[೧]. ಆದ್ದರಿಂದ ಹೆಚ್ಚು ನಾಮಗಳನ್ನು ತಿಳಿದಂತೆ ಹೆಚ್ಚು ಗುಣಗಳನ್ನು ಸಹ ತಿಳಿಯಲು ಸಾಧ್ಯವಾಗುವುದು. ಆದ್ದರಿಂದ ಶ್ರೀಹರಿಯ ನಾಮದ ಬದಲು ನಾಮಾವಳಿಯನ್ನೇ ತಿಳಿಯುವ ಕಾತರ ಭಕ್ತರಿಗಿರಬೇಕು ಎಂಬುದು ಇಲ್ಲಿಯ ಸಂದೇಶ. ಲೋಕದ ಬಗ್ಗೆ ಹೆಚ್ಚು ತಿಳಿಯುವುದರ ಬದಲು ಲೋಕನಾಯಕನಾದ ಶ್ರೀಹರಿಯ ಬಗ್ಗೆ ಹೆಚ್ಚು ತಿಳಿಯುವುದು ವಿವೇಕ ಎಂಬ ಧ್ವನಿಯೂ ಇದರಲ್ಲಿದೆ.

*****

## ೨೧. ನಿಗಮತತಿ ಕಾಣದೆ ಬಳಲುತಿದೆ

ಪೊಗಳಲಳವೇ ನಿನ್ನ ನಾಮವ
ಸುಗುಣ ಸಚ್ಚಾರಿತ್ರಕಥನ
ವಗಣಿತೋಪಮ ಅಮಿತವಿಕ್ರಮ ಗಮ್ಯ ನೀನೆಂದು ।

೧. ಯಾನಿ ನಾಮಾನಿ ಗೌಣಾನಿ ವಿಖ್ಯಾತಾನಿ ಮಹಾತ್ಮನಃ। - ವಿಷ್ಣುಸಹಸ್ರನಾಮಸ್ತೋತ್ರ

**ನಿಗಮತತಿ ಕೈವಾರಿಸುತ ಪದ -**
**ಯುಗವ ಕಾಣದೆ ಬಳಲುತಿದೆ ವಾ-**
**ಸುಕಿಶಯನ ಸರ್ವೇಶ ರಕ್ಷಿಸು ನಮ್ಮನನವರತ ॥ ೨೧ ॥**

**ಅ: ಎಲೈ ಶ್ರೀಹರಿಯೇ ! ನಿನ್ನ ನಾಮವನ್ನು ಹೊಗಳಲು ಸಾಧ್ಯವೇ ? ನೀನು ಅನಂತ ಸದ್ಗುಣಗಳಿಂದ ತುಂಬಿದವನು, ಸಚ್ಚರಿತ್ರನು, ಉತ್ತಮ ಮಾಹಾತ್ಮ್ಯವುಳ್ಳವನು, ಗಣನೆಗೆ ನಿಲುಕದವನು, ಉಪಮೆ ಇಲ್ಲದವನು, ಅಪರಿಮಿತವಾದ ವಿಕ್ರಮಶಾಲಿಯಾದವನು, ಭಕ್ತಿಗೆ ಗಮ್ಯವಾದವನು - ಹೀಗೆ ನಿನ್ನನ್ನು ವಣಿಸುತ್ತಾ ವೇದಗಳ ರಾಶಿ ನಿನ್ನ ಎರಡು ಪಾದಗಳನ್ನು ಸಹ ಪೂರ್ಣವಾಗಿ ತಿಳಿಯಲಾಗದೆ, ಬಳಲುತ್ತಿದೆ. ವಾಸುಕಿ ಶಯನನೆ! ಸಕಲರಿಗೂ ಈಶನಾದವನೆ! ಶ್ರೀಹರಿಯೇ! ನೀನು ನಮ್ಮನ್ನು ಅನವರತ ರಕ್ಷಿಸು.**

ವಿ.: ೧. ಶ್ರೀಹರಿಯ ನಾಮ, ಗುಣ, ಚರಿತ್ರೆ, ಮಹಿಮೆ, ಪರಾಕ್ರಮ ಮೊದಲಾದವು- ಗಳು ಊಹೆಗೂ ನಿಲುಕದಷ್ಟು ಅಪರಿಮಿತ ಎಂಬುದು ಇಲ್ಲಿಯ ಮುಖ್ಯಭಾವ.

೨. ಶ್ರೀಹರಿಯ ನಾಮಗಳನ್ನು ಹೊಗಳಲು ಸಾಧ್ಯವಿಲ್ಲ ಎಂದರೆ ಅವನ ನಾಮಗಳು ಅನಂತ ಎಂದರ್ಥ. ಒಂದೊಂದು ನಾಮವು ಸಹ ಒಂದೊಂದು ಗುಣವನ್ನು ನಿರೂಪಿಸುವುದರಿಂದ ಅನಂತನಾಮದ ಶ್ರೀಹರಿಯು ಅನಂತ ಗುಣಪೂರ್ಣ ಎಂದರ್ಥ: **ಅನಂತನಾಮವತ್ತ್ವಾಚ್ಚ ಅನಂತಗುಣ ಈರಿತಃ.**

೩. ಶ್ರೀಹರಿಯು **ಸುಗುಣ** ಎಂದರೆ ಅವನಲ್ಲಿ ಇರುವುದು ಕೇವಲ ಸದ್ಗುಣಗಳು ಎಂದರ್ಥ. ದೋಷಲೇಶವೂ ಇರದ ಅವನಲ್ಲಿ ದುರ್ಗುಣಗಳಿಗೆ ಅವಕಾಶವೇ ಇರದು: **ಚಿಂತಾಸಂತಾಪಲೇಪೋದ್ಭವಮೃತಿಮುಖರಾಶೇಷದೋಷಾತಿದೂರಮ್**-ತತ್ತ್ವಪ್ರಕಾಶಿಕಾ; **ಅಸ್ಪೃಷ್ಟದೋಷಗಂದಾಯ** (ತಾತ್ಪರ್ಯಚಂದ್ರಿಕಾ).

೪. ಶ್ರೀಹರಿಯು **ಸಚ್ಚಾರಿತ್ರ** ಎಂದರೆ ಅವನ ಸಕಲ ಕಾರ್ಯಗಳು ಸಹ ಅತ್ಯಂತ ನಿರ್ಮಲವಾದವು, ಯಾವುದೇ ಕಾರಣಕ್ಕೂ ಅವನ ನಡತೆಯಲ್ಲಿ ದೋಷದ ಶಂಕೆಗೂ ಸರ್ವಥಾ ಅವಕಾಶವಿರದು ಎಂದರ್ಥ. ಇದರಿಂದ **ಗೋಪೀಜನಜಾರ, ನವನೀತಚೋರ** ಮೊದಲಾದ ಅವನ ಕಾರ್ಯಗಳು ಸಹ ಉತ್ತಮತತ್ತ್ವವನ್ನು ಸೂಚಿಸುವ ಮಹತ್ಕಾರ್ಯಗಳೇ ಆಗಿದ್ದು ಲೋಕದ ಜನರಲ್ಲಿ ಕಾಣುವಂತೆ ಅನುಚಿತಕಾರ್ಯಗಳಾಗಿಲ್ಲ ಎಂಬ ವಿಶೇಷಪ್ರಮೇಯ ಇದರಿಂದ ಸೂಚಿತವಾಗುವುದು.

೫. ಕಥನ ಎಂದರೆ ಮಹಿಮೆ ಎಂದರ್ಥ. **ಸತ್ಕಥನ** - ಉತ್ತಮವಾದ ಮಹಿಮೆವುಳ್ಳವನು ಎಂದರ್ಥ.

೬. ಅಗಣಿತ ಎಂದರೆ ಗಣಿಸಲಾಗದವನು, ಎಣಿಕೆ ಮೀರಿದವನು, ಅನಂತ ಎಂದರ್ಥ.

೭. ಉಪಮೆ ಎಂದರೆ ಹೋಲಿಕೆ. ಅಗಣಿತ ಎಂಬಲ್ಲಿನ ನಕಾರವು ಉಪಮ ಎಂಬುದಕ್ಕೂ ಅನ್ವಯವಾಗಿ ಅನುಪಮ ಎಂದಾಗುವುದು. ಶ್ರೀಹರಿಯು ಸರಿಸಾಟಿಯಿಲ್ಲದ ಸರ್ವೋತ್ತಮ ಎಂದರ್ಥ: **ನಾಸ್ತಿ ನಾರಾಯಣಸಮಂ ನ ಭೂತಂ ನ ಭವಿಷ್ಯತಿ - ಏತೇನ ಸತ್ಯವಾಕ್ಯೇನ ಸರ್ವಾರ್ಥಾನ್ ಸಾಧಯಾಮ್ಯಹಮ್** -(ಮಹಾಭಾರತ). ಶ್ರೀಹರಿಯು ಹೀಗೆ ಅನುಪಮ ಎಂದು ತಿಳಿಯುವುದು ಸಕಲ ಪುರುಷಾರ್ಥಗಳಿಗೂ ಸಾಧನವಾಗುವ ಮಹಾಪ್ರಮೇಯ ಎಂಬ ಹಿನ್ನೆಲೆಯಲ್ಲಿ ಈ ಮಾತಿಗೆ ವಿಶೇಷ ಮಹತ್ವವಿದೆ ಎಂದು ತಿಳಿಯಬೇಕು.

೮. **ಅಮಿತವಿಕ್ರಮ** ಎಂದರೆ ಅಪರಿಮಿತವಾದ ವಿಶಿಷ್ಟಕ್ರಮವುಳ್ಳವನು ಎಂದರ್ಥ. ಕ್ರಮ ಎಂದರೆ ಹೆಜ್ಜೆ, ವಿಶಿಷ್ಟಕ್ರಮವುಳ್ಳವನು ವಿಕ್ರಮ. ಒಂದೊಂದು ಹೆಜ್ಜೆಯಿಂದ ಸಮಸ್ತಲೋಕಗಳನ್ನು ಸಹ ಅಳೆದ ಮಹಾವಿಷ್ಣುವಿನ ತ್ರಿವಿಕ್ರಮರೂಪಕ್ಕೆ ಅನ್ವಯಿಸುವ ಪದ ಇದಾಗಿದೆ. ಹಾಗೆ ಮೂರು ಲೋಕಗಳನ್ನು ಅಳೆದರೂ ಸಹ ಅದಕ್ಕೆ ಪರಿಮಿತಿ ಇಲ್ಲವಾದ್ದರಿಂದ ಅಮಿತವಿಕ್ರಮ ಎಂಬ ಹೆಸರು ಸಾರ್ಥಕವೆನ್ನಿಸುವುದು. ಇದು ವಿಷ್ಣುಸಹಸ್ರನಾಮದಲ್ಲಿ ಬಂದಿರುವ ನಾಮ ಎಂಬುದು ವಿಶೇಷ: ಪ್ರದ್ಯುಮ್ನೋऽ **ಮಿತವಿಕ್ರಮಃ**.

೯. ಶ್ರೀಹರಿಯು ಗಮ್ಯ ಎಂಬುದು ಮತ್ತೊಂದು ವಿಶೇಷ. ದೇಶತಃ ಕಾಲತಃ ಗುಣತಃ ಅನಂತನಾಗಿರುವ ಅವನು ಸ್ವತಃ ಅವ್ಯಕ್ತಸ್ವರೂಪ. ಆದರೂ ಸಹ ಭಕ್ತರು ಮಾಡುವ ಭಕ್ತಿಗೆ ಅನುಗ್ರಹಿಸುವವನು ಎಂದರ್ಥ: **ಜ್ಞೇಯಂ ಗಮ್ಯಂ** -(ಬ್ರಹ್ಮಸೂತ್ರಭಾಷ್ಯ); **ಜ್ಞಾನಗಮ್ಯಃ ಪುರಾತನಃ** - ವಿಷ್ಣುಸಹಸ್ರನಾಮ; ಸಾಕಲ್ಯೇನ ಅಗಮ್ಯನಾದರೂ ಭಕ್ತರ ಸಾಧನೆಗೆ ಅನುಗುಣವಾಗಿ ಯಥೋಚಿತವಾಗಿ ಗಮ್ಯ ಎಂಬುದು ಮತ್ತೊಂದು ಬಗೆಯ ಅರ್ಥ. **ಅಮಿತವಿಕ್ರಮಗಮ್ಯ** ಎಂಬುದನ್ನು ಸಮಸ್ತಪದವನ್ನಾಗಿ ಅರ್ಥಮಾಡಿಕೊಂಡಲ್ಲಿ ಅಪರಿಮಿತವಾದ ವಿಶಿಷ್ಟಸಾಧನೆಯನ್ನು ಮಾಡುವ ಭಕ್ತರಿಗೆ ಅವರ ಸಾಧನೆಗೆ ಅನುಗುಣವಾಗಿ ಗಮ್ಯ ಎಂದು ಅರ್ಥವಾಗುವುದು: **ನಭಃ ಪತಂತ್ಯಾತ್ಮಸಮಂ ಪತತ್ರಿಣಃ ತಥಾ ಸಮಂ ವಿಷ್ಣುಗತಿಂ ವಿಪಶ್ಚಿತಃ** - ಶ್ರೀಮದ್ಭಾಗವತ (೧/೧೮/೨೩).

೧೦. ಈ ರೀತಿಯಾದ ಶ್ರೀಹರಿಯ ಹಿರಿಮೆಯು ಕೇವಲ ಊಹೆಯಾಗಿರದೆ, ಶ್ರುತಿಗಳಿಂದ ಸಿದ್ಧವಾದ, ಖಚಿತವಾದ, ಪ್ರಮೇಯ ಎಂಬುದನ್ನು ನಿಗಮತತಿ ಕೈವಾರಿಸುತ ಎಂಬ ಪದದಿಂದ ತಿಳಿಸಿರುವರು.

೧೧. **ನಿಗಮ** ಎಂದರೆ ವೇದ, ಶ್ರೀಹರಿಯನ್ನು ವಿಶೇಷವಾಗಿ ತಿಳಿಸಿಕೊಡುವುದರಿಂದ ವೇದಗಳಿಗೆ ಆ ಹೆಸರು; **ವೇದಾ ಹ್ಯೇವೈನಂ ವೇದಯಂತಿ ತಸ್ಮಾದಾಹುಃ ವೇದಾ** ಇತಿ. **ತತಿ** ಎಂದರೆ ಗುಂಪು, ನಿಗಮತತಿ ಎಂದರೆ ವೇದಗಳ ಗುಂಪು. ನಿಗಮ ಎಂಬ ಪದವು ಮುಖ್ಯವಾಗಿ ವೇದಗಳಿಗೆ ಅನ್ವಯಿಸಿದರೂ ವೇದಕ್ಕೆ ಸಮ ವೇದಕ್ಕಿಂತ ಮಿಗಿಲು ಎನ್ನಿಸಿರುವ ಇತಿಹಾಸಪುರಾಣಗಳಿಗೂ ಅನ್ವಯಿಸುವುದು. ಅವುಗಳೆಲ್ಲಾ ಪಂಚಮವೇದ

ಎಂಬುದಾಗಿಯೇ ಪ್ರಸಿದ್ಧವಲ್ಲವೆ: **ಇತಿಹಾಸಪುರಾಣಾಃ ಪಂಚಮೋ ವೇದಾನಾಂ ವೇದಃ.** '**ನಿಗಮತತಿ**' ಎಂಬ ಪದದಿಂದ ವೇದಾದಿಶಾಸ್ತ್ರಗಳ ಕೆಲವು ಭಾಗ ಅಥವಾ ವಾಕ್ಯಗಳು ಮಾತ್ರ ಶ್ರೀಹರಿಯ ಮಹಿಮೆಯನ್ನು ಪ್ರತಿಪಾದಿಸುವವು ಎಂದಲ್ಲ, ಸಮಸ್ತ ವಾಙ್ಮಯ ರಾಶಿಯೇ ಭಗವನ್ಮಹಿಮಾಪ್ರತಿಪಾದಕ ಎಂಬ ವಿಶೇಷಾರ್ಥ ನಿರೂಪಿತವಾಗುವುದು: **ಸರ್ವೇ ವೇದಾ ಯತ್ಪದಮಾಮನಂತಿ; ವೇದೈಶ್ಚ ಸರ್ವೈರಹಮೇವ ವೇದ್ಯಃ** - (ಗೀತಾ-೧೫/೧೫)

ಇಲ್ಲಿ ವೇದಶಾಸ್ತ್ರಪುರಾಣಗಳು ಎಂಬ ಪದದಿಂದ ಅವುಗಳ ಅಭಿಮಾನಿದೇವತೆಯಾದ ಮಹಾಲಕ್ಷ್ಮೀ ಹಾಗೂ ಸರಸ್ವತಿ, ಭಾರತಿಯರು ಸಹ ವಿವಕ್ಷಿತ.

೧೨. ಇಷ್ಟಾಗಿಯೂ ವೇದಗಳು ಶ್ರೀಹರಿಯನ್ನು ಸಾಕಲ್ಯೇನ ಬಣ್ಣಿಸಲಾರವು. ಅವುಗಳ ಸಕಲ ನಿರೂಪಣೆಯು ಸಹ ಅವನ ಇಡೀ ವ್ಯಕ್ತಿತ್ವದ ಹಿರಿಮೆಯಾಗಿರದೆ, ಕೇವಲ ಅವನ ಪಾದಗಳ ಹಿರಿಮೆಯಷ್ಟೇ ಆಗಿದೆ. ಎಂದರೆ ಶ್ರೀಹರಿಯ ಮಹಿಮೆ ವೇದಗಳಿಂದ ನಿರೂಪಿತವಾಗಿರುವುದು ಅತ್ಯಂತ ಅಲ್ಪ ಎಂದರ್ಥ: **ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ.**

೧೩. **ಪದಯುಗ** ಎಂಬುದಕ್ಕೆ ಶ್ರೀಹರಿಯ ಎರಡು ಪಾದಗಳು ಎಂದರ್ಥ. ಅವು ಜ್ಞಾನ ಹಾಗೂ ಆನಂದಗಳ ಸಂಕೇತ[೧]. ಪದಯುಗ ಕಾಣದೆ ಎಂಬುದಕ್ಕೆ ಶ್ರೀಹರಿಯ ಜ್ಞಾನ ಹಾಗೂ ಆನಂದಗಳ ಸೀಮೆಯನ್ನು ವೇದಗಳು ಸರ್ವಥಾ ಅರಿಯಲಾರವು ಎಂಬ ಭಾವ ಸೂಚಿತ: **ಸರ್ವೇ ವೇದಾ ಯತ್ಪದಮಾಮನಂತಿ.**

೧೪. **ಬಳಲುತಿದೆ** ಎಂಬ ಮಾತಿನಿಂದ ವೇದಗಳು ಎಷ್ಟೇ ಬಗೆಯಲ್ಲಿ ವರ್ಣಿಸಿದರೂ ಸಹ ಶ್ರೀಹರಿಯ ಮಹಿಮೆ ಸ್ವಲ್ಪವೂ ಸಹ ವರ್ಣಿತವಾದಂತೆ ಆಗದು; ಎಂದರೆ ವೇದಗಳು ವರ್ಣಿಸುವ ಮಹಿಮೆ ಅವನ ಒಟ್ಟು ಮಹಿಮೆಯ ಒಂದಂಶಕ್ಕೂ ಸಾಟಿ ಎನ್ನಿಸದು ಎಂಬ ವಿಶೇಷಾರ್ಥ ಸೂಚಿತವಾಗುವುದು.

೧೫. **ವಾಸುಕಿಶಯನ** ಎಂದರೆ ನಾಗರಾಜನಾದ ವಾಸುಕಿಯಮೇಲೆ ಪವಡಿಸಿದವನು ಎಂದರ್ಥ. ಇನ್ನೂ ಮುಖ್ಯವಾಗಿ ವಾಸುಕಿಶಯನ ಎಂಬುದಕ್ಕೆ ಶೇಷಶಯನ ಎಂದೇ ಅರ್ಥ[೨]. ವಾಸುಕಿ ಮೊದಲಾದ ಶಬ್ದಗಳು ಅವರಿಗಿಂತ ಮೇಲಿನವರಾದ ಶೇಷದೇವರಿಗೆ ಮುಖ್ಯವಾಗಿ

---

೧. ಸ್ವಿತ್ಯಾನಂದಃ ಸಮುದ್ದಿಷ್ಟೋ ವರಿತಿ ಜ್ಞಾನಮುಚ್ಯತೇ।
ಮೋಕ್ಷದಾನೇನ ತಜ್ಜ್ಞಾನಾತ್ ಸುವರಸ್ಯ ಪದದ್ವಯಮ್ ॥ - ಬೃಹದಾರಣ್ಯಕೋಪನಿಷದ್ಭಾಷ್ಯ

೨. ಕೆಲವರು, "ವಸ್ತುತಃ 'ವಾಸುಕಿಶಯನ' ಎಂಬ ಪಾಠವೇ ಸರಿಯಲ್ಲ, ಅದನ್ನಿಟ್ಟುಕೊಂಡರೆ ದ್ವಿತಿಯಾಕ್ಷರವಾದ ಗಕಾರ ಪ್ರಾಸ ತಪ್ಪಿಹೋಗುತ್ತದೆ. ಕಿ ಎಂಬ ಅಕ್ಷರ ಗಕಾರ ಪ್ರಾಸಕ್ಕೆ ಹೊಂದಿಕೊಳ್ಳುವುದಿಲ್ಲ. ಆದ್ದರಿಂದ 'ಪನ್ನಗಶಯನ' ಎಂಬ ಪಾಠವಿದ್ದರೆ ಒಳ್ಳೆಯದು". ಎಂದು ಅಭಿಪ್ರಾಯಪಟ್ಟಿರುವುದುಂಟು. ಅದು ಸರಿಯಲ್ಲ. "ಕಗಯೋರಭೇದಃ ಎಂಬ ಮಾತಿನಿಂದ ಕ ಇದ್ದರೂ ಸಹ ಗಕಾರಪ್ರಾಸಕ್ಕೆ ಕುಂದಿಲ್ಲ". ಎಂಬುದನ್ನು ಗಮನಿಸಬೇಕು. ಆದ್ದರಿಂದ 'ವಾಸುಕಿಶಯನ' ಎಂಬ ಪಾಠಕ್ಕೆ ಬದಲಾಗಿ 'ಪನ್ನಗಶಯನ' ಎಂಬುದು ಅಪಪಾಠವೇ ಸರಿ.

ಅನ್ವಯಿಸುವುದು ಶಾಸ್ತ್ರೀಯ ಪ್ರಕ್ರಿಯೆಯಾಗಿದ್ದು ವಾಸುಕಿಶಯನ ಎಂಬುದಕ್ಕೆ ಶೇಷಶಯನ ಎಂಬ ಅರ್ಥ ಸಮುಚಿತವೇ ಆಗುವುದು.

೧೬. **ಸರ್ವೇಶ:** ಸರ್ವರಿಗೂ ಈಶ, ಸರ್ವಕಾಲಕ್ಕೂ ಈಶ, ಸರ್ವ ಬಗೆಯಲ್ಲೂ ಈಶ, ಸರ್ವದಾ ಈಶ, ಸರ್ವತ್ರ ಈಶ – ಮೊದಲಾದ ಅನೇಕ ಅರ್ಥಗಳು ವಿವಕ್ಷಿತ. ಸರ್ವೇಶ ಎಂಬುದನ್ನು ಸರ್ವ ಈಶ ಎಂಬುದಾಗಿಯೂ ಬಿಡಿಸಿಯೂ ಓದಿಕೊಳ್ಳಬಹುದು; ಆಗ ಸರ್ವ ಎಂಬುದು ವಿಷ್ಣುಸಹಸ್ರನಾಮದ ಪದ (ಸರ್ವಃ ಶರ್ವಃ ಶಿವಃ ಸ್ಥಾಣುಃ). ಸರ್ವ ಎಂಬುದಕ್ಕೆ ಶ್ರೀಮದ್ಭಗವದ್ಗೀತೆ ಹಾಗೂ ಉಪನಿಷತ್ತುಗಳಲ್ಲಿ ಬಂದಿರುವಂತೆ ಸರ್ವಂ ಖಲ್ವಿದಂ ಬ್ರಹ್ಮ; **ಈಶಾವಾಸ್ಯಮಿದಂ ಸರ್ವಂ, ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ, ಸರ್ವಂ ಸಮಾಪ್ನೋಷಿ ತತೋऽಸಿ ಸರ್ವಃ** – ಇತ್ಯಾದಿ ವಾಕ್ಯಗಳಿಂದ ಸೂಚಿತವಾದ ಅರ್ಥಗಳನ್ನು ತಿಳಿದುಕೊಳ್ಳಬೇಕು.

೧೭. ಈಶ ಎಂದರೆ ಸಮರ್ಥ ಎಂದರ್ಥ. ಶ್ರೀಹರಿಯು ಸರ್ವರೀತಿಯಲ್ಲೂ ಸರ್ವದಾ ಸಮರ್ಥ. ಅವನಿಲ್ಲದೆ ತೃಣವೂ ಅಲುಗದು ಎಂಬ ಅರ್ಥ ಸೂಚಿತ: ತೇನ ವಿನಾ ತೃಣಮಪಿ **ನ ಚಲತಿ.**

೧೮. ಈಶ ಎಂದರೆ ಈಶಾನ; ಇದು **ಈಶಾನಃ** ಪ್ರಾಣದಃ ಎಂಬ ವಿಷ್ಣುಸಹಸ್ರನಾಮದ ಪದ.

*****

## ೨೨. ಜ್ಞಾನೋದಯವನೆನಗಿತ್ತು ರಕ್ಷಿಸು

**ವೇದಶಾಸ್ತ್ರಪುರಾಣಪುಣ್ಯದ**
**ಹಾದಿಯನು ನಾನರಿಯೆ ತರ್ಕದ**
**ವಾದದಲಿ ಗುರುಹಿರಿಯರರಿಯದ ಮೂಢಮತಿ ಎನಗೆ ।**
**ಆದಿಮೂರುತಿ ನೀನು ನೆರೆ ಕರು-**
**ಣೋದಯನು ಹೃದಯಾಂಗಣದಿ ಜ್ಞಾ-**
**ನೋದಯವನೆನಗಿತ್ತು ರಕ್ಷಿಸು ನಮ್ಮನನವರತ ॥ ೨೨ ॥**

ಅ: ವೇದಾದಿಶಾಸ್ತ್ರಗಳು ಹಾಗೂ ಪುರಾಣಗಳು ತಿಳಿಸಿರುವ ಪುಣ್ಯಸಂಪಾದನೆಯ ಹಾದಿಯನ್ನು ನಾನು ತಿಳಿಯೆನು. ತರ್ಕದಿಂದ ವಾದಮಾಡುವ ವಿಷಯದಲ್ಲಿ ನನ್ನದು ಗುರುಗಳು, ಹಿರಿಯರು ಎಂದು ಗಮನಿಸದಂತಹ ಮೂಢಮತಿ. ನೀನು ಆದಿಮೂರುತಿಯಾದವನು; ಹಾಗೂ ತುಂಬಾ ಕರುಣೆಯಿಂದ ತುಂಬಿದವನು; ನನ್ನ ಹೃದಯಾಂಗಣದಲ್ಲಿ ನಿನ್ನ ಬಗೆಗೆ ಜ್ಞಾನೋದಯವನ್ನು ನೀಡಿ, ನಮ್ಮನ್ನು ಅನವರತ ರಕ್ಷಿಸು.

ವಿ: ೧. ಈ ಪದ್ಯದಲ್ಲಿ ಶ್ರೀದಾಸರು ಅಪರೋಕ್ಷಜ್ಞಾನವನ್ನು ನೀಡಿ ಅನುಗ್ರಹಿಸಲೆಂದು ಶ್ರೀಹರಿಯನ್ನು ಪ್ರಾರ್ಥಿಸಿರುವರು.

೨. ವೇದಾದಿ ಶಾಸ್ತ್ರಗಳು ಶ್ರೀಹರಿಯ ಹಿರಿಮೆ ಹಾಗೂ ಮಹಿಮೆಗಳನ್ನು ತಿಳಿಸುವ ಮೂಲ ಆಕರ ಗ್ರಂಥಗಳು. ಅವುಗಳನ್ನು ತಿಳಿಯದವರಿಗೆ ಭಗವನ್ಮಹಿಮೆ ಸರಿಯಾದ ರೀತಿಯಲ್ಲಿ ಗೋಚರಿಸದು. ಆದರೆ ಅಂತಹ ಶಾಸ್ತ್ರಗಳ ಅರಿವು ತಮಗಿಲ್ಲ ಎಂದು ವಿನಯದಿಂದ ನಿವೇದಿಸಿಕೊಂಡಿರುವುದು ಈ ಭಾಗದ ವೈಶಿಷ್ಟ್ಯ.

೩. ವೇದಾದಿ ಶಾಸ್ತ್ರಗಳು ಎಂದರೆ ಋಗ್ವೇದ, ಯಜುರ್ವೇದ, ಸಾಮವೇದ ಹಾಗೂ ಅಥರ್ವಣವೇದ ಎಂಬ ನಾಲ್ಕು ವೇದಗಳು ಹಾಗೂ ಮಹಾಭಾರತವೆಂಬ ಜಯ ನಾಮದ ಇತಿಹಾಸ. ಹಾಗೂ ಬ್ರಹ್ಮಮೀಮಾಂಸಾಶಾಸ್ತ್ರವು ಸೇರಿದೆ. ಶಾಸ್ತ್ರವೆಂಬುದು ನಿರ್ಣಾಯಕ. ಅಂತಹ ನಿರ್ಣಾಯಕ ಶಾಸ್ತ್ರ ಬ್ರಹ್ಮಮೀಮಾಂಸಾಶಾಸ್ತ್ರ. ಆದ್ದರಿಂದ ವೇದಶಾಸ್ತ್ರ ಎಂಬ ಪದಕ್ಕೆ ವೇದಗಳು ಹಾಗೂ ಬ್ರಹ್ಮಮೀಮಾಂಸಾಶಾಸ್ತ್ರ ಎಂಬುದೇ ಮುಖ್ಯವಾದ ಅರ್ಥ. ಹರಿವಂಶದಲ್ಲಿನ 'ವೇದಶಾಸ್ತ್ರಾತ್ ಪರಂ ನಾಸ್ತಿ' ಹಾಗೂ ಸದಾಚಾರಸ್ಮೃತಿಯಲ್ಲಿನ 'ವೇದಶಾಸ್ತ್ರವಿನೋದೇನ' ಎಂಬ ಪದಗಳಲ್ಲಿನ ವೇದಶಾಸ್ತ್ರ ಎಂಬ ಪದವನ್ನು ಆಧರಿಸಿ ಶ್ರೀದಾಸರು ಈ ಪದವನ್ನು ಪ್ರಯೋಗಿಸಿರುವರು ಎಂದು ತಿಳಿಯಬಹುದು.

೪. ಪುರಾಣವು ಸಹ ಪಂಚಮವೇದವೆಂದು ಪರಿಗಣಿತವಾಗಿರುವ ಶಾಸ್ತ್ರವೇ ಆಗಿದೆ: 'ಇತಿಹಾಸಪುರಾಣಃ ಪಂಚಮೋ ವೇದಾನಾಂ ವೇದಃ'. ಇಂತಹ ಪುರಾಣಗಳು ವೇದಾಂತನಿರ್ಣಯದ ಭಾಷ್ಯಸ್ವರೂಪವನ್ನು ಹೊಂದಿದ್ದು ಅವುಗಳು ಮಹಾಪುರಾಣಗಳು ಹಾಗೂ ಉಪಪುರಾಣಗಳು ಎಂಬುದಾಗಿ ಎರಡು ಬಗೆ. ಮಹಾಪುರಾಣಗಳ ಸಂಖ್ಯೆ ೧೮, ಹಾಗೂ ಉಪಪುರಾಣಗಳ ಸಂಖ್ಯೆಯೂ ಸಹ ೧೮.

೫. ಒಟ್ಟಾಗಿ ವೇದ, ಶಾಸ್ತ್ರ ಹಾಗೂ ಪುರಾಣಗಳ ಪರಿಜ್ಞಾನ ಬ್ರಹ್ಮಜ್ಞಾನಕ್ಕೆ ಅತ್ಯಗತ್ಯ ಎಂದರ್ಥ: ಶಾಸ್ತ್ರಯೋನಿತ್ವಾತ್ (ಬ್ರಹ್ಮಸೂತ್ರ)

೬. ತರ್ಕದ ವಾದದಲಿ ಎಂಬ ಮಾತಿಗೆ ಕೇವಲ ಬುದ್ಧಿಶಕ್ತಿಯ ಪ್ರದರ್ಶನಕ್ಕಾಗಿ ತರ್ಕಕ್ಕೆ ತೊಡಗುವವರು ಗುರುಹಿರಿಯರು ಎಂಬ ಪರಿಜ್ಞಾನವಿಲ್ಲದೆ ತಲೆಗೆ ತೋಚಿದಂತೆ ತಮ್ಮ ವಿಚಾರಗಳನ್ನು ಮುಂದಿಟ್ಟು ಅವರ ಆಗ್ರಹಕ್ಕೆ ಗುರಿಯಾಗುವ ಅವಿವೇಕಕ್ಕೆ ಬಲಿಯಾಗುವರು ಎಂದರ್ಥ. ಪಾಂಡಿತ್ಯದೊಂದಿಗೆ ಬರುವ ಅಪಾಯದಲ್ಲಿ ಇಂತಹ ಅವಿವೇಕ ಪ್ರಧಾನವಾದುದು. ಈ ಬಗ್ಗೆ ಎಚ್ಚರವಿಲ್ಲದವರ ಶಾಸ್ತ್ರಾಧ್ಯಯನ ಹಾಗೂ ಬುದ್ಧಿಕೌಶಲ ವ್ಯರ್ಥವೆನ್ನಿಸುವುದು ಮಾತ್ರವಲ್ಲದೆ ಆಧ್ಯಾತ್ಮಿಕ ದುರಂತಕ್ಕೆ ಕಾರಣವಾಗುವುದು ಎಂಬ ಎಚ್ಚರವನ್ನು ಶ್ರೀದಾಸರು ಈ ಮೂಲಕ ತಿಳಿಸಿರುವರು ಎಂದು ತಿಳಿಯಬೇಕು. ರಾವಣ, ದುರ್ಯೋಧನನಂತಹವರು ತಾವು ಮಾಡಿದ ದುಷ್ಕಾರ್ಯಗಳಿಗೆ ಸಮರ್ಥನೆಯನ್ನಾಗಿ ಆಡುವ ವಿಚಾರಗಳೆಲ್ಲಾ ಈ ಬಗೆಯವೇ.

ಅದೇಕೆ ? ಪ್ರತಿಯೊಬ್ಬ ಧರ್ಮಭ್ರಷ್ಟನೂ ಸಹ ತನ್ನ ಅಂತಹ ವರ್ತನೆಗೆ ನೀಡುವ ಕಾರಣಗಳೆಲ್ಲ ಇಂತಹ ಕುತರ್ಕದ ಹಿನ್ನೆಲೆಯನ್ನೇ ಹೊಂದಿರುತ್ತವೆ. ಭಗವದ್ಗೀತೆಯಲ್ಲಿ ಅರ್ಜುನನ ವಿಷಾದಕ್ಕೆ ಕಾರಣವಾದ ವಾದಗಳನ್ನು ಭಗವಂತನಾದ ಶ್ರೀಕೃಷ್ಣ 'ಪ್ರಜ್ಞಾವಾದ' ಎಂದು ಕರೆದಿರುವ ಹಿನ್ನೆಲೆಯಲ್ಲಿ ಈ ಮಾತಿಗೆ ವಿಶೇಷವಾದ ಅರ್ಥವನ್ನು ಕಂಡುಕೊಳ್ಳಲು ಸಾಧ್ಯ.

೭. ಒಂದೆಡೆ ವೇದಾದಿ ಶಾಸ್ತ್ರಗಳ ಅಜ್ಞಾನ. ಮತ್ತೊಂದೆಡೆ ಕುತರ್ಕ. ಈ ಎರಡರ ಆಘಾತಕ್ಕೆ ಗುರಿಯಾದವನು ಎಂದೂ ಸಹ ಇಹಪರಗಳಲ್ಲಿ ಯಶಸ್ಸಿಗೆ ಪಾತ್ರನಾಗನು ಎಂಬುದು ಇಲ್ಲಿಯ ಒಟ್ಟು ಭಾವ.

೮. ಶ್ರೀದಾಸರು ತಮ್ಮಲ್ಲಿ ಈ ದೋಷಗಳನ್ನು ಆರೋಪಿಸಿಕೊಳ್ಳುತ್ತಿರುವುದು ಕೇವಲ ವಿನಯೋಕ್ತಿ ಎಂದು ತಿಳಿಯಬೇಕು. ಇಂತಹ ವಿನಯವು ಮೂಲತಃ ಉನ್ನತ ಸಾತ್ವಿಕ ಚೇತನಗಳ ಸ್ವಭಾವ. ಶ್ರೀಜಯತೀರ್ಥರ ನ್ಯಾಯಸುಧೆಯಲ್ಲಿನ ಈ ಕೆಳಗಿನ ಮಾತನ್ನು ಇದು ಜ್ಞಾಪಿಸುವಂತಿದೆ:

**ನ ಶಬ್ದಾಬ್ಧೌ ಗಾಢಾ ನ ಚ ನಿಗಮಚರ್ಚಾಸು ಚತುರಾ**
**ನ ಚ ನ್ಯಾಯೇ ಪ್ರೌಢಾ ನ ಚ ವಿದಿತವೇದ್ಯಾ ಅಪಿ ವಯಮ್ ।**
**ಪರಂ ಶ್ರೀಮತ್ಪೂರ್ಣಪ್ರಮತಿಗುರುಕಾರುಣ್ಯಸರಣಿಂ**
**ಪ್ರಪನ್ನಾ ಮಾನ್ಯಾಃ ಸ್ಮಃ ಕಿಮಪಿ ಚ ವದಂತೋऽಪಿ ಮಹತಾಮ್ ॥**

೯. ಮತ್ತೊಂದು ರೀತಿಯಲ್ಲಿ ಇದು ವಸ್ತುಸ್ಥಿತಿಯು ಆಗಿದೆ ಎಂದು ತಿಳಿಯಬಹುದು. ಕಾರಣ ವೇದಶಾಸ್ತ್ರಗಳು ಅತ್ಯಂತ ಗಹನ. ಅವುಗಳನ್ನು ಪೂರ್ತಿಯಾಗಿ ತಿಳಿಯುವುದು ಬ್ರಹ್ಮಾಯುಗಳಂತಹ ಪರಿಪೂರ್ಣಚೇತನರಿಗೆ ಹೊರತು ಇತರರಿಗಲ್ಲ. ಅಲ್ಲದೆ, ಶಾಸ್ತ್ರಪ್ರಪಂಚಕ್ಕೆ ಕೊನೆಮೊದಲೆಂಬುದು ಇಲ್ಲ. ಅದು ಅಗಾಧ. ಅದರಂತೆ ತರ್ಕವೂ ಸಹ ವ್ಯಕ್ತಿಯ ಬುದ್ಧಿಮತ್ತೆಗೆ ಅನುಗುಣವಾಗಿ ಬಗೆಬಗೆಯ ವಿಕೃತಿಗೆ ಒಳಗಾಗುವ ಅಪಾಯವನ್ನು ಹೊಂದಿದೆ: **ನೈಷಾ ತರ್ಕೇಣ ಮತಿರಾಪನೇಯಾ.** ಇದರಿಂದಾಗಿ ಗುರುಹಿರಿಯರ ಅನುಗ್ರಹವಿಲ್ಲದೆ ಭಗವಂತನ ಕೃಪೆ ಇಲ್ಲದೆ ಕೇವಲ ಶಾಸ್ತ್ರಾಧ್ಯಯನ ಹಾಗೂ ತರ್ಕಗಳಿಂದ ಭಗವಂತನನ್ನು ಅರಿಯುವುದು ಅಸಾಧ್ಯ ಎಂಬ ತತ್ತ್ವ ಸೂಚಿತ ಎಂದು ತಿಳಿಯಬೇಕು.

೧೦. ಇನ್ನು ಶ್ರೀಹರಿಯಾದರೋ ಆದಿಮೂರುತಿ ಎಂದರೆ ಎಲ್ಲರಿಗಿಂತ ಮುಂಚಿತವಾಗಿ ಸದಾಕಾಲವೂ ಸಹ ಒಂದೇ ತೆರನಾಗಿ ಇರುವ ಪರಿಪೂರ್ಣಹಿರಿಮೆಯ ಮಹಾಮಹಿಮ; ಅಂತಹವನ ಅತ್ಯಂತ ಮುಖ್ಯವಾದಂತಹ ಗುಣಗಳಲ್ಲಿ ಕಾರುಣ್ಯವೂ ಸೇರಿದೆ. ಅಂತಹ ಕರುಣೆಯಿಂದಾಗಿಯೇ ಭಕ್ತರು ಅವನನ್ನು ಅರಿಯಲು, ಅರಿತು ಆರಾಧಿಸಲು, ಆರಾಧಿಸಿ ನಲಿಯಲು ಸಾಧ್ಯವಾಗಿದೆ ಎಂಬುದು ಅತ್ಯಂತ ಗಮನಾರ್ಹವಾದ ಪ್ರಮೇಯ. ಅದನ್ನು ದಾಸರು ಹೀಗೆ ತಿಳಿಸಿರುವರು.

೧೧. **ಹೃದಯಾಂಗಣದಿ** ಎಂಬ ಪದದಿಂದ ಬಿಂಬರೂಪಿ ಶ್ರೀಹರಿಯ ಸಾಕ್ಷಾತ್ಕಾರ-ವಾಗುವುದೇ ಜೀವನದ ಪರಮಸಿದ್ಧಿ ಎಂಬ ತತ್ತ್ವ ಸೂಚಿತ. ಗ್ರಂಥಗಳಿಂದ ದೇವರನ್ನು ತಿಳಿಯುವುದು

ಪರೋಕ್ಷಜ್ಞಾನಮಾತ್ರ. ಆದರೆ ಹೃದಯರಂಗದಲ್ಲಿ ಶ್ರೀಹರಿಯನ್ನು ಅಪರೋಕ್ಷೀಕರಿಸಿಕೊಳ್ಳುವುದು ಮಾತ್ರವೇ ನಿಜ ಅರ್ಥದಲ್ಲಿ ಜ್ಞಾನ ಎನ್ನಿಸುವುದು: ನ ಹಿ ಜ್ಞಾನೇನ ಸದೃಶಂ ಎಂಬ ಮಾತು ಇಂತಹ ಅಪರೋಕ್ಷಜ್ಞಾನಕ್ಕೆ ಅನ್ವಯಿಸುವುದು. ಇಂತಹ ಅಪರೋಕ್ಷಜ್ಞಾನವು ಕೇವಲ ಪ್ರಯತ್ನದಿಂದ ಮಾತ್ರವೇ ಸಾಧ್ಯವಾಗದು. ಅದಕ್ಕೆ ಮುಖ್ಯವಾಗಿ ಶ್ರೀಹರಿಯ ಪರಮಾನುಗ್ರಹವೇ ಸಾಧನ ಎಂಬುದನ್ನು '**ಜ್ಞಾನೋದಯವನೆನಗಿತ್ತು**' ಎಂಬ ಪದದಿಂದ ಸೂಚಿಸಿರುವರು. ಇದು 'ಯೋ ವೇದ ನಿಹಿತಂ ಗುಹಾಯಾಮ್ ।' ಎಂಬ ತೈತ್ತಿರಿಯೋಪನಿಷತ್ತಿನ ಭಾವವಾಗಿದೆ.

೧೨. ಸೂರ್ಯನು ಉದಯಿಸುವುದು ಎಂದರೆ ಕಣ್ಣಿಗೆ ಕಾಣಿಸಿಕೊಳ್ಳುವುದು ಎಂದರ್ಥ. ಅದರಂತೆ ಜ್ಞಾನವು ಉದಯಿಸುವುದು ಎಂದರೆ ಜೀವನ ಸ್ವರೂಪದಲ್ಲಿಯೇ ಅಡಗಿರುವ ಜ್ಞಾನದ ಅಭಿವ್ಯಕ್ತಿಗೊಳಿಸುವುದು ಎಂಬ ವಿಶೇಷಾಂಶವನ್ನು ಜ್ಞಾನೋದಯ ಎಂಬ ಪದದಿಂದ ಸೂಚಿಸಿರುವರು ಎಂದು ತಿಳಿಯಬೇಕು. ಸುಜೀವಿಗಳ ಸ್ವರೂಪವು ಮುಖ್ಯವಾಗಿ ಜ್ಞಾನಾ-ನಂದಾತ್ಮಕವಾದುದು ಎಂಬುದು ಶಾಸ್ತ್ರಗಳಿಂದ ನಿರೂಪಿತವಾಗಿರುವ ಪ್ರಮೇಯ:

ಬಲಮಾನಂದ ಓಜಶ್ಚ ಸಹೋ ಜ್ಞಾನಮನಾಕುಲಮ್ ।
ಸ್ವರೂಪಾಣ್ಯೇವ ಜೀವಸ್ಯ ವ್ಯಜ್ಯಂತೇ ಪರಮಾದ್ವಿಭೋಃ ॥
- ಬ್ರಹ್ಮಸೂತ್ರಭಾಷ್ಯ (೨/೩/೩೧)

ಅದರಂತೆ ಅರುಣೋದಯ ಎಂಬ ಪದವನ್ನು ಸಹ ಅರ್ಥಮಾಡಿಕೊಳ್ಳಬೇಕು. ಪರಮಾತ್ಮನ ಕರುಣೆಯು ಸಹ ಅವನ ಸ್ವರೂಪವೇ ಆಗಿದ್ದು ವಿಹಿತಸಾಧನೆಯನ್ನು ಪೂರೈಸಿದ ಜೀವನಿಗೆ ಅಂತಹ ಕರುಣೆಯನ್ನು ಪರಮಾತ್ಮ ತೋರುವನು ಎಂಬುದು ಇದರ ಭಾವ.

೧೩. ಹೀಗೆ ಅಪರೋಕ್ಷಜ್ಞಾನವನ್ನು ಸಂಪಾದಿಸಿದಾಗಲೇ ನಿಜವಾದ ರಕ್ಷಣೆ ಸಾಧ್ಯ. ಇತರ ಯಾವ ಲಾಭವೂ ಸಹ ಮುಖ್ಯವಾದ ಅರ್ಥದಲ್ಲಿ ಕರುಣೆ ಎನ್ನಿಸದು ಎಂಬ ಸೂಚನೆ ಇದರಲ್ಲಿದೆ. ಇಂತಹ ದಿವ್ಯಜ್ಞಾನದ ಭಗವಂತ ನೀಡುವ ರಕ್ಷಣೆ ಪರಿಪೂರ್ಣವಾದುದು ಎಂಬುದನ್ನು ರಕ್ಷಿಸು ನಮ್ಮನನವರತ ಎಂಬ ಪದದಿಂದ ಸೂಚಿಸಿರುವರು ಎಂದು ತಿಳಿಯಬಹುದು.

*****

## ೨೩. ಪರಮಾತ್ಮ ನೀನೆಂದುಸುರುತಿವೆ ವೇದಗಳು

**ಹಸಿವರಿತು ತಾಯ್ತನ್ನ ಶಿಶುವಿಗೆ**
**ಒಸೆದು ಮೊಲೆಕೊಡುವಂತೆ ನೀ ಪೋ-**
**ಷಿಸದೆ ಬೇರಿನ್ನಾರು ಪೋಷಕರಾಗಿ ಸಲಹುವರು ।**
**ಬಸಿರೊಳಗೆ ಬ್ರಹ್ಮಾಂಡಕೋಟಿಯ**
**ಪಸರಿಸಿದ ಪರಮಾತ್ಮ ನೀನೆಂ-**
**ದುಸುರುತಿವೆ ವೇದಗಳು ರಕ್ಷಿಸು ನಮ್ಮನನವರತ ॥ ೨೩ ॥**

**ಅ: ತನ್ನ ಶಿಶುವಿನ ಹಸಿವನ್ನು ಅರಿತು ಹೆತ್ತ ತಾಯಿ ಅದಕ್ಕೆ ಪ್ರೀತಿಯಿಂದ ಸ್ತನ್ಯಪಾನ ಮಾಡಿಸುವಂತೆ ನೀನು ಜಗತ್ತನ್ನು ಪೋಷಿಸುವವನು. ನೀನು ಪೋಷಿಸದೆ ಹೋದಲ್ಲಿ ಈ ರೀತಿ ಬೇರೆ ಯಾರು ತಾನೆ ಈ ರೀತಿ ಜಗತ್ತನ್ನು ಪೋಷಕರಾಗಿ ಸಲಹಲು ಸಾಧ್ಯ ? ಗರ್ಭದೊಳಗೆ ಬ್ರಹ್ಮಾಂಡ ಕೋಟಿಯನ್ನು ತುಂಬಿಸಿಕೊಂಡಿರುವ ಪರಮಾತ್ಮನೇ ನೀನು ಎಂಬುದಾಗಿ ವೇದಗಳು ಸಾರುತ್ತಿವೆ; ಅಂತಹ ಶ್ರೀಹರಿಯೇ! ನೀನು ನಮ್ಮನ್ನು ಸದಾ ರಕ್ಷಿಸು.**

ವಿ.: ೧. ಶ್ರೀಹರಿಯ ವಿಶೇಷವಾದ ಮಹಿಮೆಯನ್ನು ತಾಯಿಯ ದೃಷ್ಟಾಂತದೊಂದಿಗೆ ಈ ಪದ್ಯ ನಿರೂಪಿಸುವುದು.

೨. ಮಗುವಿಗೆ ತನಗೆ ಹಸಿವಾಗಿರುವುದು ಸಹ ತಿಳಿಯಲಾಗದಷ್ಟು ಅಜ್ಞಾನ. ಅದಕ್ಕೆ ಆಹಾರವನ್ನು ತೆಗೆದುಕೊಳ್ಳುವ ಅರಿವು ಸಹ ಇರುವುದಿಲ್ಲ. ಆದರೆ ಅದರ ಹಸಿವನ್ನು ಗುರುತಿಸಿ, ಅದಕ್ಕೆ ಅನುಗುಣವಾಗಿ ಹಾಲನ್ನು ಕುಡಿಸಿ, ಅದನ್ನು ಪೋಷಿಸುವ ವಿವೇಕ ಹಾಗೂ ಕಾರುಣ್ಯ ತಾಯಿಯದು.

೩. ಶ್ರೀಹರಿಯು ಇಂತಹ ತಾಯಿಯ ಕಾರುಣ್ಯ ಹಾಗೂ ವಿವೇಕಗಳನ್ನು ಪಡೆದ ಪರದೇವತೆ. ದೇವರನ್ನು ಸಾಮಾನ್ಯವಾಗಿ ಭಯದಿಂದಲೆ ತಿಳಿಯುವ ಜನ ಹೆಚ್ಚು. ಆದರೆ ಅವನನ್ನು ಕರುಣಾಳು; ತಮ್ಮ ಅಗತ್ಯವನ್ನು ಗುರುತಿಸಿ ಸಲಹುವನು; ಅಪಾರವಾದ ಕೃಪೆ ಅವನದು ಎಂಬ ತತ್ತ್ವ ತಿಳಿದಾಗ ಅವನಲ್ಲಿ ಭಯದ ಭಾವ ತೊಲಗಿ, ಭಕ್ತಿಯ ಭಾವ ಮೂಡುವುದು. ದೇವರ ಬಗ್ಗೆ ಇಂತಹ ಅಪೂರ್ವ ಭಕ್ತಿಭಾವವನ್ನು ಹುಟ್ಟಿಸುವ ರೀತಿಯ ನಿರೂಪಣೆ ಹರಿದಾಸಸಾಹಿತ್ಯದ ವೈಶಿಷ್ಟ್ಯಗಳಲ್ಲೊಂದು.

೪. ಇದು ಮೂಲತಃ ಶ್ರೀಮದಾಚಾರ್ಯರ ದ್ವಾದಶಸ್ತೋತ್ರದಲ್ಲಿನ 'ಹರಿರೇವ ಜಗತ್ಪಿತೃಮಾತೃಗತಿಃ' ಎಂಬ ಮಾತಿನಲ್ಲಿಯ ಮಾತೃತ್ವವನ್ನು ವಿವರಿಸುವ ನಿದರ್ಶನ ಎಂದು ತಿಳಿಯಬೇಕು.

೫. ತಾಯಿಯಲ್ಲಿ ಎದ್ದು ಕಾಣುವ ಗುಣ ಒಂದೆಡೆ ವಾತ್ಸಲ್ಯವಾದರೆ, ಮತ್ತೊಂದೆಡೆ ಕಾರುಣ್ಯ. ತಾಯಿಯಿಲ್ಲದೆ ಮಗುವಿನ ಹುಟ್ಟು ಸಹ ಆಗದು; ಆದರಂತೆ ಜಗತ್ತಿಗೆ ಸೃಷ್ಟಿಕರ್ತನಾದ ದೇವರು ಇದ್ದೇ ಇರುವನು. ಅವನಿಲ್ಲದೆ ಜಗತ್ತು ಹೇಗೆ ತಾನೆ ಇದ್ದೀತು ಎನ್ನುವ ಧ್ವನಿ ಇದರಲ್ಲಿ ಇದ್ದೇ ಇದೆ. ಇದರಿಂದ ದೇವರನ್ನು ಒಪ್ಪದ ನಾಸ್ತಿಕ ಮನೋಭಾವದ ಜನರಿಗೂ ಸೂಕ್ತ ಉತ್ತರ ಕೊಟ್ಟಂತಾಗುವುದು. ಹತಾಶೆ, ದೌರ್ಬಲ್ಯ ಮೊದಲಾದವುಗಳ ಸಂಕೇತವಾದ ಪ್ರಾಣಿಸಂಕುಲವನ್ನು ಹೊಂದಿರುವ ಜಗತ್ತು ಅಸ್ವತಂತ್ರ. ಭಗವಂತನಾದರೋ ಸ್ವತಂತ್ರ. ಅಂತಹ ಸ್ವತಂತ್ರನಾದ ಶ್ರೀಹರಿಯಿಂದಲೇ ಜಗತ್ತಿನ ಸಕಲ ಆಗುಹೋಗುಗಳು ನಡೆಯುವವವು. ತಾಯಿಯ ಪ್ರತಿಯೊಂದು ಕಾರ್ಯವೂ ಮಗುವಿನ ಒಳಿತಿಗಾಗಿಯೇ ಎನ್ನುವಂತೆ, ಭಗವಂತನ

ಪ್ರತಿಯೊಂದು ವ್ಯಾಪಾರವೂ ಸಹ ಜೀವಸಂಕುಲದ ಒಳಿತಿಗಾಗಿಯೇ ಹೊರತು ಬೇರೆ ಕಾರಣಕ್ಕಾಗಿ ಅಲ್ಲ. ಇದನ್ನು ತಿಳಿದಾಗ ಅವನಲ್ಲಿ ಭಕ್ತಿಭಾವದೊಂದಿಗೆ ನಮ್ಮ ಕರ್ತವ್ಯದ ಬಗ್ಗೆ ಎಚ್ಚರವೂ ಸಹ ಹುಟ್ಟುವುದು.

೬. ಶ್ರೀಹರಿಯು ಇಡೀ ಜಗತ್ತನ್ನು ತನ್ನ ಗರ್ಭದಲ್ಲಿ ಧರಿಸಿರುವನು; ತಾಯಿಯು ಮಗುವನ್ನು ಹೇಗೋ ಹಾಗೆ. ಇಂತಹ ಜಗತ್ತು ಸಹ ಒಂದೆರಡಾಗಿರದೆ, ಅನಂತಕೋಟಿ ಸಂಖ್ಯೆಯದಾಗಿದೆ. ಸೀಮಿತ ಸಂಖ್ಯೆಯ ಶಿಶುಗಳನ್ನು ಗರ್ಭದಲ್ಲಿ ಧರಿಸುವ ತಾಯಿಯ ಕಾರುಣ್ಯವೇ ಸರಿಸಾಟಿ ಇಲ್ಲದ್ದು ಎನ್ನಿಸಿರುವಾಗ ಅನಂತ ಬ್ರಹ್ಮಾಂಡಗಳನ್ನು ತನ್ನ ರೋಮಕೂಪಗಳಲ್ಲಿ ಧರಿಸಿ ಸಲಹುವ ಭಗವಂತನ ಕಾರುಣ್ಯ, ಸಾಮರ್ಥ್ಯ ಮೊದಲಾದವುಗಳು ಊಹಾತೀತ ಎಂಬ ಭಾವವು ಇದರಲ್ಲಿದೆ. ಒಂದುಕಾಲಕ್ಕೆ ಒಂದೇ ಬ್ರಹ್ಮಾಂಡ ಎಂಬುದು ಶಾಸ್ತ್ರದ ನಿರ್ಣಯ[೧]. ಆದ್ದರಿಂದ ಇಲ್ಲಿಯ ಬ್ರಹ್ಮಾಂಡಕೋಟಿ ಎಂಬುದಕ್ಕೆ ಹಿಂದೆ ಆದ, ಮುಂದೆ ಆಗುವ ಎಂಬ ಅರ್ಥವನ್ನು ತಿಳಿಯಬೇಕು.

೭. ತಾಯಿಯು ಮಗವನ್ನು ಪಾಲಿಸದಿದ್ದಲ್ಲಿ ಅದರ ಗತಿ ಅಧೋಗತಿ ಎಂಬುದು ನಿಶ್ಚಿತ. ಅದರಂತೆ ಶ್ರೀಹರಿಯು ಕೈಬಿಟ್ಟಲ್ಲಿ ಜಗತ್ತು ಸರ್ವಾತ್ಮನಾ ನಾಶಹೊಂದುವುದು. ಕರುಣಾಳುವಾದ ಅವನು ಹಾಗೆ ಸರ್ವಥಾ ಮಾಡಲಾರ; ಆದ್ದರಿಂದ ಭಕ್ತರು ಎಂದೂ ಹತಾಶರಾಗಿ ಕಂಗೆಡಬೇಕಿಲ್ಲ ಎಂಬ ಸಂದೇಶವು ಇದರಲ್ಲಿದೆ.

೮. ಹೀಗಿರುವ ಶ್ರೀಹರಿಯೇ ಪರಮಾತ್ಮ, ಪರದೈವ, ಸರ್ವಸ್ವಾಮಿ ಎಂದು ತಿಳಿಯಬೇಕು. ಆತ್ಮ ಎಂದರೆ ಸ್ವಾಮಿ ಎಂದರ್ಥ. ಪರಮಾತ್ಮನು ಜಗತ್ತಿನ ಸ್ವಾಮಿ ಎಂಬ ತತ್ತ್ವವನ್ನು ತಿಳಿದಲ್ಲಿ ಜೀವಿಗಳಿಗೆ ಹತಾಶಪ್ರಜ್ಞೆ ಮಾಯವಾಗಿ ಜೀವನದಲ್ಲಿ ಉತ್ಸಾಹ ಮೂಡಿ, ಮೋಕ್ಷಪ್ರಾಪ್ತಿ ಎಂಬ ಮುಖ್ಯ ಗುರಿಯನ್ನು ತಲುಪಲು ಸಾಧ್ಯವಾಗುವುದು. ಎಂಬ ಉಪದೇಶವನ್ನು ಇದರಲ್ಲಿ ಗುರುತಿಸಬಹುದು.

*****

## ೨೪. ಹಬ್ಬಿಸಿದೆ ಪ್ರಾಣಿಗಳ ರಕ್ಷಿಸು

**ಇಬ್ಬರಣುಗರು ನಿನಗೆ ಅವರೊಳ-**
**ಗೊಬ್ಬಮಗನೀರೇಳುಲೋಕದ**
**ಹೆಬ್ಬೆಳಸು ಬೆಳೆವಂತೆ ಕಾರಣಕರ್ತನಾದವನು ।**

೧. 'ಏಕಮಂಡಂ ಬಹುತ್ವೇನ ಪ್ರತ್ಯೇಕಂ ರೋಮಕೂಪಗಮ್ ।
ಬ್ರಹ್ಮಾಽಪಶ್ಯತ್ ತಥಾಽಽತ್ಮಾನಂ ಹರೇಸ್ತೇಷು ಪೃಥಕ್ ಪೃಥಕ್' ॥ ಇತಿ ಬ್ರಹ್ಮಾಂಡೇ ।
'ಬೃಹದಂಡಮಭೂದೇಕಮ್' ಇತಿ ಚ ಭಾರತೇ - ಭಾ.ತಾ. (೩/೧೨/೪೦)
ಸ್ವಯಮೇಕಂ ಚ ಬಹುವತ್ ಪ್ರತ್ಯೇಕಂ ರೋಮಕೂಪಗಮ್ ।
ರಮಾಬ್ರಹ್ಮಾದಿಗಂ ದೇಶಕಾಲವರ್ಣಾಂಡಪೂರ್ವಕಮ್ ॥ - ಸತ್ತತ್ತ್ವರತ್ನಮಾಲಾ (೩.೨೫)

**ಒಬ್ಬ ಮಗನವ ಬರೆವ ಕರಣಿಕ-**
**ರಿಬ್ಬರೀ ಲೋಕಪ್ರಸಿದ್ಧರು**
**ಹಬ್ಬಿಸಿದೆ ಪ್ರಾಣಿಗಳ ರಕ್ಷಿಸು ನಮ್ಮನನವರತ ॥ ೨೪ ॥**

**ಅ: ಎಲೈ ಶ್ರೀಹರಿಯೇ ! ನಿನಗೆ ಇಬ್ಬರು ಪುತ್ರರು; ಅದರೊಳಗೆ ಒಬ್ಬ ಮಗನು ಹದಿನಾಲ್ಕು ಲೋಕಗಳನ್ನು ದೊಡ್ಡ ಬೆಳೆಯಂತೆ ಬೆಳೆಸುವ ಕಾರಣಪುರುಷ; ಇನ್ನೊಬ್ಬನು ಅವರ ಹಣೆಬರಹವನ್ನು ಬರೆಯುವ ಕರಣಿಕ; ಇವರಿಬ್ಬರೂ ಲೋಕಪ್ರಸಿದ್ಧರೇ. ಇವರ ಮೂಲಕ ನೀನು ಪ್ರಾಣಿಗಳನ್ನು ಬೆಳೆಸಿದೆ. ಇಂತಹ ನೀನು ನಮ್ಮನ್ನು ರಕ್ಷಿಸು.**

ವಿ: ೧. ಶ್ರೀಹರಿಯು ಜಗತ್ತಿನ ಸೃಷ್ಟಿಕರ್ತ ಎಂಬ ಪ್ರಮೇಯವನ್ನು ವಿವರಿಸುವ ಪದ್ಯ ಇದಾಗಿದೆ. ಜಗತ್ತು ಎಷ್ಟು ವಿಶಾಲ ಎಂಬುದು ಶಾಸ್ತ್ರ ಹಾಗೂ ಲೋಕ ಎರಡರಿಂದಲೂ ಸಿದ್ಧವಾದುದು. ಇಂತಹ ಜಗತ್ತನ್ನು ನಿರ್ಮಿಸಲು ಶ್ರೀಹರಿ ಸೃಷ್ಟಿಸಿದವರಲ್ಲಿ ಚತುರ್ಮುಖ ಬ್ರಹ್ಮ ಹಾಗೂ ಕಾಮ ಇಬ್ಬರು ಇರುವರು. ಅವರಿಬ್ಬರಿಂದ ಸೃಷ್ಟಿಕಾರ್ಯ ಅಗಾಧವಾಗಿ ನಡೆಯಿತು ಎಂದರ್ಥ; **ಅಣುಗ** – ಪುತ್ರ, ಭಕ್ತ.

೨. ಕಾಮ ಸೃಷ್ಟಿಯ ಕಾರ್ಯದಲ್ಲಿ ವಹಿಸುವ ಪಾತ್ರ ಹಿರಿದು. ಪ್ರಜಾಸೃಷ್ಟಿಗೆ ಮುಖ್ಯಕಾರಣ ಕಾಮವೇ ಆಗಿದೆ. ಕಾಮ ಎಂದರೆ ಮನ್ಮಥ. ಅವನು ಮಹಾವಿಷ್ಣುವಿನ ಮನಸ್ಸಿನಿಂದ ಹುಟ್ಟಿದವನು. ಅದಕ್ಕಾಗಿ ಅವನಿಗೆ ಮನಸಿಜ, ಮನೋಜ ಮೊದಲಾದ ನಾಮಾಂತರಗಳೂ ಇವೆ. ಎಂತಹ ಋಷಿಮುನಿಗಳೂ ಸಹ ಕಾಮಬಾಣಕ್ಕೆ ತುತ್ತಾಗಿ ಸೃಷ್ಟಿಯ ಕಾರ್ಯದಲ್ಲಿ ತೊಡಗಿದ್ದು ಇತಿಹಾಸಪುರಾಣಗಳಲ್ಲಿ ಪ್ರಸಿದ್ಧ. ವಿಶ್ವಾಮಿತ್ರರು ಮೇನಕೆಯತ್ತ ಆಕರ್ಷಿತರಾಗಿ ಹುಟ್ಟಿದ ಶಕುಂತಲೆ, ದುಷ್ಯಂತನ ಪತ್ನಿ ಎನ್ನಿಸಿ ಭರತ ಚಕ್ರವರ್ತಿಗೆ ತಾಯಿ ಎನ್ನಿಸಿದಳು. ಅದರಿಂದ ಭರತವಂಶ ಬೆಳೆಯಿತು. ತಾರೆಯತ್ತ ಆಕರ್ಷಿತನಾದ ಚಂದ್ರನಿಂದ ಬುಧನು ಜನಿಸಿ, ಚಂದ್ರವಂಶ ಸಾಗಿಬಂದಿತು. ಅದರ ಕವಲಾಗಿ ಬೆಳೆದ ಭರತವಂಶ ವಿಶ್ವಖ್ಯಾತಿಯ ಪಾಂಡವರನ್ನು ಜಗತ್ತಿಗೆ ನೀಡಿದ್ದು ಇತಿಹಾಸ. ಇಡೀ ಜಗತ್ತೇ ಈ ಕಾಮದ ಸೃಷ್ಟಿ ಎಂದಮೇಲೆ ವಿಷ್ಣುಪುತ್ರನಾದ ಕಾಮನ ಹಿರಿಮೆ ತಿಳಿಯುವುದು. ಇದರ ಮೂಲಕಾರಣ ವಿಷ್ಣುವೇ ಆಗುವುದರಿಂದ ಜಗತ್ತಿನ ಮುಖ್ಯ ಸೃಷ್ಟಿಕರ್ತ ಅವನೇ ಆಗಿರುವನು ಎಂದು ತಾತ್ಪರ್ಯ.

೩. ಚತುರ್ಮುಖಬ್ರಹ್ಮನು ಮಹಾವಿಷ್ಣುವಿನ ನಾಭಿಕಮಲದಿಂದ ಜನಿಸಿದ ಮೊದಲಮಗ. ತನ್ನ ಅವಯವಗಳಿಂದ, ಮನಸ್ಸಿನಿಂದ ವಸಿಷ್ಠ ಮೊದಲಾದ ಮಹರ್ಷಿಗಳನ್ನು, ಸ್ವಾಯಂಭುವ ಮನು, ಶತರೂಪ ದಂಪತಿಗಳನ್ನು, ಕರ್ದಮ ಮೊದಲಾದ ಪ್ರಜಾಪತಿಗಳನ್ನು ಸೃಷ್ಟಿಸಿ ಪ್ರಜಾವೃದ್ಧಿಗೆ ನಾಂದಿಹಾಡಿದ ಮಹಾಪ್ರಜಾಪತಿ ಎಂಬುದು ಬ್ರಹ್ಮದೇವರ ಹಿರಿಮೆ. ಅದರೊಂದಿಗೆ ಪ್ರತಿಯೊಂದು ಸೃಷ್ಟಿಕಾರ್ಯದ ಹಿನ್ನೆಲೆಯಲ್ಲೂ ಬ್ರಹ್ಮದೇವರ ಪಾತ್ರ ಅನಿವಾರ್ಯ. ಸೃಷ್ಟಿಯೊಂದಿಗೆ ಹಾಗೆ ಸೃಷ್ಟಿಸಲ್ಪಟ್ಟ ಜನರ ಹಣೆಬರಹವನ್ನು ಬರೆಯುವ

ಹಿರಿಮೆ ಬ್ರಹ್ಮದೇವರದು. ವಿಧಿಲಿಖಿತ, ಹಣೆಬರಹ ಎಂಬ ಮಾತುಗಳಲ್ಲಿ ಬ್ರಹ್ಮಶಾಸನದ ಮಹತ್ತ್ವ ಅಡಗಿದೆ. ಜಗತ್ತನ್ನು ಸೃಷ್ಟಿಸುವುದರೊಂದಿಗೆ ಅದನ್ನು ನಿಯಂತ್ರಿಸುವ ಕಾರ್ಯವನ್ನೂ ಸಹ ವಹಿಸಿರುವುದು ಬ್ರಹ್ಮದೇವರ ಹಿರಿಮೆ. ಮನುಷ್ಯರ ಪ್ರಯತ್ನಕ್ಕೆ ಬೆಲೆ ಇರುವುದು ನಿಜ; ಆದರೆ, ಆ ಪ್ರಯತ್ನವು ವಿಧಿಲಿಖಿತದ ಹಾದಿಯಲ್ಲೇ ಸಾಗುವುದು ಅನಿವಾರ್ಯ. ಇದರಿಂದಾಗಿ ವಿಧಿಲಿಖಿತದ ಪ್ರಾಬಲ್ಯ ಎಲ್ಲಕಾಲದಲ್ಲೂ ಮಹತ್ತರವೆನ್ನಿಸುವುದು. ಅದನ್ನು ಬರೆಯುವ ಬ್ರಹ್ಮ ಸರ್ವನಿಯಂತ್ರಕನೆನ್ನಿಸಿದರೆ, ಅಂತಹ ಬ್ರಹ್ಮನ ತಂದೆಯಾಗಿ ಅವನನ್ನೂ ಒಳಗೊಂಡಂತೆ ಇಡೀ ವಿಶ್ವವನ್ನು ನಿಯಂತ್ರಿಸುವ ಮಹಾಮಹಿಮ ಶ್ರೀಹರಿ ಎಂದು ಭಾವ.

೪. ಬ್ರಹ್ಮಶಬ್ದದಿಂದ ವಾಯುದೇವರು ಉಪಲಕ್ಷಿತ[೧] ಎಂದು ತಿಳಿಯಬೇಕು. ಸೃಷ್ಟಿಗೆ ಬ್ರಹ್ಮನ ಅಗತ್ಯವಿರುವಂತೆ ಸೃಷ್ಟಿಸಿದ ಪದಾರ್ಥಗಳು ಜೀವಿಸಿರಲು ಅವುಗಳಲ್ಲಿ ಪ್ರಾಣಶಕ್ತಿಯ ನಿಯಾಮಕನಾಗಿ ಮುಖ್ಯಪ್ರಾಣ ಇರಲೇಬೇಕು. ಪ್ರಾಣ ಎಂಬ ಹೆಸರೇ ಪ್ರಾಣಗಳಿಗೆ ಮುಖ್ಯಪ್ರಾಣನ ಅನುಗ್ರಹದ ಅಗತ್ಯವನ್ನು ತಿಳಿಸುವುದು.

೫. ಬ್ರಹ್ಮ ಹಾಗೂ ಕಾಮರನ್ನು ಪುತ್ರರು ಎಂದು ಕರೆಯದೆ, ಅಣುಗರು ಎನ್ನುವ ಮೂಲಕ ಸರ್ವವ್ಯಾಪ್ತನಾದ ಶ್ರೀಹರಿಯ ಮುಂದೆ ಅವರು ಅಣುಗಳು ಎನ್ನಿಸುವರು ಎನ್ನುವ ಅರ್ಥವನ್ನು ಧ್ವನಿಸುವ ಮೂಲಕ ದಾಸರು ತೋರಿರುವ ಕೌಶಲ ಅಪೂರ್ವವಾದುದು. ಅಣುಗರು ಎಂಬ

---

೧. ಶ್ರೀಕನಕದಾಸರ ಈ ಕೆಳಗಿನ ಮಾತುಗಳಲ್ಲಿ ಈ ಪದ್ಯದ ವಿವರಣೆ ಬಂದಿದೆ:
ಎಂಬತ್ತುನಾಲ್ಕು ಲಕ್ಷ ಜೀವರಾಶಿಗಳನ್ನು
ಬೊಂಬೆಗಳನು ಮಾಡಿ ಭವದಿಂದದಲಿ
ತುಂಬಿ ಕಲೆಗಳನೊತ್ತಿ ನೊಸಲ ಬರೆಹವ ಬರೆವ
ಅಂಬುಜೋದ್ಭವ ನಿನ್ನ ಹೆಮ್ಮಗನೈ ದೇವ ॥
ಸಕಲ ಜೀವರಾಶಿಗಳನು ಕಲ್ಪಿಸುವ ಬೀಜ
ಸುಖದಿಂದ ಮಾಯಾಂಗನೆಯರೊಡಲೊಳು
ಅಕ್ಕರದಿ ಪಿಂಡಾಂಡಗಳ ಕಟ್ಟಿ ಬಲಿಸುವ
ಮಕರಾಂಕನೆಂಬುವನು ನಿನ್ನ ಕಿರಿಮಗ ದೇವ ॥
(ಜಗದಂತರ್ಯಾಮಿ ಎಂತೆಂದು ನಿನ್ನ
ನಿಗಮ ಸಾರುವ ಮಾತು ಪುಸಿಯೆ ಕೋನೇರಿ ತಿಮ್ಮ ॥)
ಸಕಲೈಶ್ವರ್ಯದ ಶ್ರೀದೇವಿ ನಿನ್ನರಸಿ ಬಹು-
ಮುಕುತಿಯಿಂದಲಿ ಲೋಕ ಪುಟ್ಟಿಸುವ
ಶಕುತ ನಿನ್ನ ಹಿರಿಯ ಮಗನು ಪ್ರಾಣಗಳ ಮೋ-
ಹಕದಿ ಮರುಳುಮಾಳ್ಪ ಕಿರಿಯ ಮಗ ನಿನಗಿಹನು ॥
(ಸಿರಿಯ ಮದವೆ ಮುಕುಂದ – ನಿನ್ನ
ಚರಣ ಸೇವಕನ ಬಿನ್ನಹ ಪರಾಕೆಲೊ ದೇವ ॥)
– ಆದ್ದರಿಂದ ಇಲ್ಲಿ ವಾಯುದೇವರನ್ನು ನೇರವಾಗಿ ಗ್ರಹಿಸುವ ವ್ಯಾಖ್ಯಾನ ಈ ಪ್ರಸಂಗಕ್ಕೆ ಅನುಗುಣವಾದುದಲ್ಲ ಎಂದು ಸ್ಪಷ್ಟಪಡುವುದು.

ಪದದಲ್ಲಿ ಅವರ ವ್ಯಾಪ್ತಿ ಅಣುವಿನದು ಹಾಗೂ ಅವರ ಸಾಮರ್ಥ್ಯವೂ ಶ್ರೀಹರಿಯ ಮುಂದೆ ನಗಣ್ಯವೆನ್ನಿಸುವಂತಹುದು ಎಂಬ ಅರ್ಥವು ಅಡಗಿದೆ. ಇದರಿಂದಾಗಿ ಶ್ರೀಹರಿಯ ಸ್ವಾತಂತ್ರ್ಯ ಇತರರಲ್ಲಿ ಸರ್ವಥಾ ಕಾಣದು ಎಂಬ ತತ್ತ್ವ ನಿರೂಪಿತ.

೬. ಕಾಮನಂತೂ ಅನಂಗ ಎಂದೇ ಹೆಸರಾದವನು; ಎಂದರೆ ಮೇಲೆ ಕಾಣುವಂತಹ ಆಕೃತಿ ಅವನಿಗಿಲ್ಲ. ಕಣ್ಣಿಗೆ ಕಾಣದಂತೆಯೇ ಮನಸ್ಸಿನ ಮೇಲೆ ಆಕ್ರಮಣ ನಡೆಸುವ ಕೌಶಲ ಅವನದು. ಆದರಿಂದಾಗಿಯೇ ಅವನನ್ನು ಸೋಲಿಸುವುದು ಎಂತಹ ಮಹಾಸಾಹಸಿಗನಿಗೂ ನೀಗದ ಕಾರ್ಯ. ಆದರಿಂದಾಗಿಯೇ ಜಗತ್ತಿನ ಸೃಷ್ಟಿ ನಿರಂತರ ನಡೆಯಲು ಸಾಧ್ಯವಾಗಿದೆ.

೭. ಕೆಲವೊಮ್ಮೆ ತನ್ನಿಂದ ಸೃಷ್ಟವಾದ ವಸ್ತು ತನ್ನ ನಿಯಂತ್ರಣಕ್ಕೆ ಸಿಗದೆ ಆತ್ಮಘಾತಕವಾಗುವುದುಂಟು. ಇಂದು ವಿಜ್ಞಾನ ನಿರ್ಮಿಸಿರುವ ಅನೇಕ ಶಸ್ತ್ರಾಸ್ತ್ರಗಳು ಈ ಬಗೆಯವು. ದುರ್ಯೋಧನ ಮೊದಲಾದವರು ತಂದೆಯಾದ ಧೃತರಾಷ್ಟ್ರನ ನಿಯಂತ್ರಣಕ್ಕೆ ಸಿಗದೆ, ಅವನನ್ನೇ ನಿಯಂತ್ರಿಸಿದ ದುಷ್ಟರೆನ್ನಿಸಿದವರು. ಆದರೆ, ಕಾಮ ಹಾಗೂ ಬ್ರಹ್ಮರ ಸೃಷ್ಟಿ ಈ ಬಗೆಯದಲ್ಲ. ಅವರ ತಂದೆಯಾದ ಶ್ರೀಹರಿಯಂತೂ ಸರ್ವನಿಯಂತ್ರಕ. ಈ ವಿವರದಿಂದಾಗಿ ಶ್ರೀಹರಿಯು ಜಗತ್ತಿನ ಸೃಷ್ಟಿಕರ್ತರಾದ ಬ್ರಹ್ಮ, ಕಾಮ ಮೊದಲಾದ ಸಕಲರಿಗೂ ಸ್ವಾಮಿಯಾಗಿದ್ದು ತಾನು ಮಾತ್ರ ಯಾರ ಅಂಕೆಗೂ ಒಳಪಡದ ಸರ್ವತಂತ್ರ ಸ್ವತಂತ್ರ. ಆದ್ದರಿಂದಲೇ ಅವನ ರಕ್ಷಣೆಯ ಅಗತ್ಯ ಸರ್ವರಿಗೂ, ಸರ್ವಕಾಲಕ್ಕೂ, ಸರ್ವರೀತಿಯಲ್ಲೂ ಅನಿವಾರ್ಯ ಎಂಬುದು ಇಲ್ಲಿಯ ತಾತ್ಪರ್ಯ.

*****

## ೨೫. ಜಂಗಮಸ್ಥಾವರ ಕುಟುಂಬಿಗ ನೀನು ರಕ್ಷಿಸು

ಸಿರಿಯು ಕುಲಸತಿ ಸುತನು ಕಮಲಜ
ಹಿರಿಯಸೊಸೆ ಶಾರದೆ ಸಹೋದರಿ
ಗಿರಿಜೆ ಮೈದುನ ಶಂಕರನು ಸುರರೆಲ್ಲ ಕಿಂಕರರು ।
ನಿರುತ ಮಾಯೆಯು ದಾಸಿ ನಿಜಮಂ-
ದಿರವಜಾಂಡವು ಜಂಗಮಸ್ಥಾ-
ವರ ಕುಟುಂಬಿಗ ನೀನು ರಕ್ಷಿಸು ನಮ್ಮನನವರತ ॥ ೨೫ ॥

ಅ: ಮಹಾಲಕ್ಷ್ಮಿಯು ಧರ್ಮಪತ್ನಿ; ಕಮಲಸಂಭವರಾದ ಬ್ರಹ್ಮದೇವರು ಪುತ್ರ; ಸರಸ್ವತಿಯು ಹಿರಿಯ ಸೊಸೆ; ಪಾರ್ವತಿಯು ಸಹೋದರಿ; ರುದ್ರದೇವರು ಮೈದುನ; ಇತರ ಎಲ್ಲ ದೇವತೆಗಳು ಅನುಚರರು; ಮಾಯಾಶಕ್ತಿಯು ನಿನ್ನ ದಾಸಿ; ಬ್ರಹ್ಮಾಂಡವೇ ನಿನ್ನ ಗೃಹ - ಹೀಗೆ ಜಡ ಹಾಗೂ ಚೇತನಗಳನ್ನು ಕುಟುಂಬವರ್ಗವನ್ನಾಗಿ ಹೊಂದಿರುವ ಶ್ರೀಹರಿಯೇ! ನೀನು ನಮ್ಮನ್ನು ಅನವರತ ರಕ್ಷಿಸು.

ವಿ: ೧. ಶ್ರೀಹರಿಯು ಪರದೇವತೆ ಎಂಬುದನ್ನು ಕೌಶಲಪೂರ್ಣವಾಗಿ ನಿರೂಪಿಸುವ ಪದ್ಯ ಇದಾಗಿದೆ.

೨. ಸಂಪತ್ತಿನ ಅಧಿದೇವತೆಯಾದ ಮಹಾಲಕ್ಷ್ಮಿಯು ಶ್ರೀಹರಿಯ ಪತ್ನಿ; ಸೃಷ್ಟಿಕರ್ತನೆಂದು ಪ್ರಸಿದ್ಧನಾದ ಬ್ರಹ್ಮದೇವ ಶ್ರೀಹರಿಯ ಪುತ್ರ; ಬ್ರಹ್ಮಪತ್ನಿಯಾದ ಸರಸ್ವತಿಯು ಸೊಸೆ; ಪಾರ್ವತಿಯು ಸಹೋದರಿ; ಲಯಕರ್ತೃವಾದ ಶಿವನು ಮೈದುನ; ಉಳಿದೆಲ್ಲ ದೇವತೆಗಳು ಇವನ ಕಿಂಕರರು; ಇಡೀ ಜಗತ್ತನ್ನು ನಿಯಂತ್ರಿಸುವ ಮಾಯಾಶಕ್ತಿಯು ಇವನಿಗೆ ದಾಸಿ; ಬ್ರಹ್ಮಾಂಡವೇ ಮನೆ – ಹೀಗಿರುವ ಶ್ರೀಹರಿ ವಿಶ್ವಕುಟುಂಬಿ ಎಂದರ್ಥ.

೩. **ಸಿರಿಯು ಕುಲಸತಿ** ಎಂಬಲ್ಲಿ ಕುಲಸತಿ ಎಂಬುದಕ್ಕೆ ಧರ್ಮಪತ್ನಿ, ಗೃಹಲಕ್ಷ್ಮೀ ಎಂದರ್ಥ. ಆ ಮೂಲಕ ಲಕ್ಷ್ಮೀಪತಿಯಾದ ಶ್ರೀಹರಿಯು ಸರ್ವೋತ್ತಮದೇವತೆ ಎಂಬ ವಿಶೇಷ ಪ್ರಮೇಯ ಸೂಚಿತವಾಗುವುದು: ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ.

೪. ಮಹಾಲಕ್ಷ್ಮಿಯನ್ನೊಳಗೊಂಡಂತೆ ಸಮಸ್ತದೇವತಾವೃಂದಕ್ಕೆ ಅಧಿಪತಿಯಾದ ಶ್ರೀಹರಿಯು ಪರದೇವತೆ ಎಂಬುದು ಇದರ ಒಟ್ಟುಭಾವ.

೫. **ಸಹೋದರಿ ಗಿರಿಜೆ:** ಶ್ರೀಕೃಷ್ಣನ ತಂಗಿ ಸುಭದ್ರೆಯಲ್ಲಿ ಗಿರಿಜಾದೇವಿಯ ಆವೇಶ. ಆ ಅರ್ಥದಲ್ಲಿ ಸಹೋದರಿ ಗಿರಿಜೆ ಎಂಬ ಮಾತು ಸೂಕ್ತವೆನ್ನಿಸುವುದು. ಶ್ರೀಕೃಷ್ಣನ ತಂಗಿಯೆನ್ನಿಸಿದ ದುರ್ಗಾದೇವೀ ವಾಸ್ತವಿಕವಾಗಿ ಸಾಕ್ಷಾತ್ ಮಹಾಲಕ್ಷ್ಮೀ. ಆದರೆ ಪಾರ್ವತೀದುರ್ಗೆಯಲ್ಲಿ ಲಕ್ಷ್ಮಿಯ ಸನ್ನಿಧಾನ. ಆದ್ದರಿಂದ ದುರ್ಗಾರೂಪದ ಪಾರ್ವತಿಯು ಶ್ರೀಕೃಷ್ಣನ ಸಹೋದರಿ ಎಂಬುದು ಉಚಿತವಾಗುವುದು.

೬. **ಮೈದುನ ಶಂಕರನು:** ಹೀಗೆ ಗಿರಿಜೆಯು ಶ್ರೀಕೃಷ್ಣನ ತಂಗಿಯಾಗುವುದರಿಂದ ಅವಳ ಪತಿಯಾದ ಶಂಕರನು ಶ್ರೀಹರಿಗೆ ಮೈದುನ ಎಂಬುದು ಉಕ್ತವಾಗುವುದು. ಅರ್ಜುನನಲ್ಲಿ ಶಂಕರನ ಆವೇಶವಿಲ್ಲವಾದರೂ, ಶಂಕರನ ವಿಶೇಷಾನುಗ್ರಹಕ್ಕೆ ಪಾತ್ರ ಎಂಬರ್ಥದಲ್ಲಿ ಇದು ಉಚಿತ. ಸುಭದ್ರೆಯ ಗಂಡನಾದ ಅರ್ಜುನ ಶ್ರೀಕೃಷ್ಣನಿಗೆ ಮೈದುನ. ಅವನು ಇಂದ್ರಾವತಾರ; ಇಂದ್ರ ಶಿವನ ತಮ್ಮ[೧]. ಬ್ರಹ್ಮಾಂಡಪುರಾಣದ ವಚನದಂತೆ ಗರುಡ, ಶೇಷ, ರುದ್ರ ಹಾಗೂ ಇಂದ್ರ ಈ ನಾಲ್ವರು ವಾಯು–ಭಾರತಿಯರ ಪುತ್ರರು. ಆದ್ದರಿಂದ ಇಂದ್ರನು ಶಿವನ ತಮ್ಮ ಎಂಬುದು ಉಕ್ತವಾಗುವುದು. ಆದ್ದರಿಂದ ಶಿವನೂ ಸಹ ಮೈದುನ ಎನ್ನಿಸುವನು ಎಂದು ತಿಳಿಯಬಹುದು.

---

೧. ಯಸ್ಯಾಃ ಪ್ರಸಾದಾತ್ ಪರಮಂ ವಿದಂತಿ ಶೇಷಃ ಸುಪರ್ಣೋ ಗಿರಿಶಃ ಸುರೇಂದ್ರಃ।
ಮಾತಾ ಚ ಏಷಾಂ ಪ್ರಥಮೈವ ಭಾರತೀ ಸಾ ದ್ರೌಪದೀ ನಾಮ ಬಭೂವ ಭೂಮೌ ॥
ಯಾ ಮಾರುತಾದ್ಗರ್ಭಮಧತ್ತ ಪೂರ್ವಂ ಶೇಷಂ ಸುಪರ್ಣಂ ಗಿರಿಶಂ ಸುರೇಂದ್ರಮ್ ।
ಚತುರ್ಮುಖಾಭಾಂಶ್ಚತುರಃ ಕುಮಾರಾನ್ ಸಾ ದ್ರೌಪದೀ ನಾಮ ಬಭೂವ ಭೂಮೌ ॥
– ಮ.ಭಾ.ತಾ.ನಿ (೨/೭೦,೭೧)

೭. ಇವರೆಲ್ಲರು ಅನುಚರರಾದ್ದರಿಂದ ಶ್ರೀಹರಿಯ ಆರಾಧನೆಯಿಂದ ಇವರೆಲ್ಲರ ಪ್ರಸನ್ನತೆಯು ಸಹ ಲಭಿಸುವುದು ಎಂಬ ತತ್ತ್ವ ಸೂಚಿತ.

೮. ಶ್ರೀಹರಿಯ ಪರಿವಾರಕ್ಕೆ ಸೇರಿದವರಾದ್ದರಿಂದ ಇವರೆಲ್ಲರ ಆರಾಧನೆಯೂ ಸಹ ಅತ್ಯಗತ್ಯ ಎಂಬ ಸಂದೇಶವೂ ಇದರಲ್ಲಿದೆ.

೯. ಒಂದೊಂದು ಕಾರ್ಯಗಳಿಗೆ ಪ್ರಸಿದ್ಧರೆನ್ನಿಸಿರುವ ಈ ಎಲ್ಲ ದೇವತೆಗಳು ಶ್ರೀಹರಿಯ ಅನುಚರರಾದ್ದರಿಂದ ಮುಖ್ಯವಾಗಿ ಜಗತ್ತಿನ ಸಕಲಕಾರ್ಯಗಳಿಗೂ ಮುಖ್ಯನಿಯಂತ್ರಕನಾದ ಸ್ವಾಮಿ ಶ್ರೀಹರಿಯೇ ಆಗಿರುವನು ಎಂಬ ಮತ್ತೊಂದು ಪ್ರಮೇಯವು ಇದರಲ್ಲಿದೆ.

೧೦. **ಮಾಯೆಯು ಸದಾ ದಾಸಿ** ಎಂಬ ಮಾತಿನಲ್ಲಿ ಜಗತ್ತಿನ ನಿಯಂತ್ರಣದ ಮಾಯಾ-ಶಕ್ತಿ ಮೂಲತಃ ಶ್ರೀಹರಿಯ ಅಧೀನ್ಯಕ್ಕೆ ಒಳಪಡುವುದು. ಆದ್ದರಿಂದ ಶ್ರೀಹರಿಯನ್ನು ಶರಣುಹೊಂದುವವರಿಗೆ ಮಾಯಾಶಕ್ತಿಯ ಪ್ರಭಾವ ಸ್ವಲ್ಪವೂ ಇರದು ಎಂಬ ಸಂದೇಶವೂ ಸೂಚಿತ. ಇದು ಭಗವದ್ಗೀತೆಯ 'ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ' ಎಂಬ ಮಾತಿನ ವಿವರಣೆಯಾಗಿದೆ. ಇದರಿಂದ ಈ ಮಾಯಾಶಕ್ತಿಯು ಪ್ರಕೃತಿ ಹಾಗೂ ಅದರ ಅಧಿದೇವತೆಯಾದ ದುರ್ಗಾರೂಪದ ಮಹಾಲಕ್ಷ್ಮಿ ಎಂಬ ವಿಶೇಷಾಂಶ ತಿಳಿಯುವುದು. ಮಾಯಾ ಎಂಬುದು ಶ್ರೀಲಕ್ಷ್ಮಿಯ ಒಂದು ರೂಪವಾಗಿದ್ದು ಅದು ಶ್ರೀಹರಿಯ ವಾಸುದೇವ ರೂಪದ ಪತ್ನಿ. ಈ ಅರ್ಥದಲ್ಲೂ ಮಾಯೆಯು ಸದಾ ದಾಸಿ ಎಂಬುದು ಉಕ್ತವೆನ್ನಿಸುವ ನಿರೂಪಣೆ. ನಿರುತ ಮಾಯೆಯು ದಾಸಿ ಎನ್ನುವ ಮೂಲಕ ಮಹಾಲಕ್ಷ್ಮಿಯು ನಿತ್ಯಮುಕ್ತಳೇ ಆಗಿದ್ದರೂ, ಸದಾ ಪರಮಾತ್ಮನಿಗೆ ಅಧೀನಳಾಗಿರುವ ಅಸ್ವತಂತ್ರತತ್ತ್ವದ್ದರಿಂದ ಅವರು ನಿರುತ ದಾಸಿಯಾಗಿರುವರು ಎಂಬ ವಿಶೇಷಾಂಶ ಸೂಚಿತ. ಶ್ರೀಪುರಂದರದಾಸರ 'ಏನು ಧನ್ಯಳೋ ಲಕುಮಿ ಎಂಥ ಮಾನ್ಯಳೋ' ಎಂಬ ಕೀರ್ತನೆಯಲ್ಲಿ ಬಂದಿರುವ 'ತಾನೇ ಸೇವೆ ಮಾಡುತಿಹಳು' ಎಂಬ ಮಾತು ಅವರು ಶ್ರೀಹರಿಯ ನಿತ್ಯದಾಸಿ ಎಂಬುದನ್ನು ತಿಳಿಸುವುದು.

೧೧. ಈ ಪದ್ಯದಿಂದ ತಿಳಿಯುವಂತೆ ಇಡೀ ವಿಶ್ವವು ಶ್ರೀಹರಿಯ ಆಧಿಪತ್ಯಕ್ಕೆ ಒಳಪಟ್ಟಿದ್ದು ಅವನ ಒಲುಮೆ ಪಡೆದವರಿಗೆ ಇಹಪರಗಳ ಪೂರ್ಣಸುಖವು ಸುಸಾಧ್ಯ ಎಂದಾಗುವುದು.

೧೨. ಶ್ರೀಜಯತೀರ್ಥರ ಈ ಕೆಳಗಿನ ಪದ್ಯ ಇದಕ್ಕೆ ಮೂಲವೆನ್ನಿಸುವಂತಿದೆ:

**ಕಲತ್ರಂ ಕಮಲಾ ಯಸ್ಯ ಪುತ್ರಃ ಕಮಲಸಂಭವಃ ।**
**ಶಿವಾದ್ಯಾಃ ಸೇವಕಾಸ್ತಸ್ಮೈ ನಮೋ ವಿಶ್ವಕುಟುಂಬಿನೇ ॥**

**-ವಿಷ್ಣುತತ್ತ್ವವಿನಿರ್ಣಯಟೀಕಾ**

೧೩. ಸುಪ್ರಸಿದ್ಧವಾದ ಮಂಗಲಾಷ್ಟಕದ ಈ ಕೆಳಗಿನ ಶ್ಲೋಕದ ಭಾವವೂ ಇದರಲ್ಲಿ ಬಂದಿದೆ:

**ಲಕ್ಷ್ಮೀರ್ಯಸ್ಯ ಪರಿಗ್ರಹಃ ಕಮಲಭೂಃ ಸೂನುರ್ಗರುತ್ಮಾನ್ ರಥಃ**
**ಪೌತ್ರಶ್ಚಂದ್ರವಿಭೂಷಣಃ ಸುರಗುರುಃ ಶೇಷಶ್ಚ ಶಯ್ಯಾ ಪುನಃ ।**

ಬ್ರಹ್ಮಾಂಡಂ ವರಮಂದಿರಂ ಸುರಗಣಾ ಯಸ್ಯ ಪ್ರಭೋಃ ಸೇವಕಾಃ
ಸ ತ್ರೈಲೋಕ್ಯಕುಟುಂಬಪಾಲನಪರಃ ಕುರ್ಯಾದ್ಧರಿರ್ಮಂಗಲಮ್ ॥

೧೪. ಈ ಪದ್ಯದ ವಿವರಣೆಯಂತಿರುವ ಶ್ರೀಕನಕದಾಸರ ಪದ ಹೀಗಿದೆ:

ಜಗದಂತರ್ಯಾಮಿ ಎಂತೆಂದು ನಿನ್ನ
ನಿಗಮ ಸಾರುವ ಮಾತು ಪುಸಿಯೆ ಕೋನೇರಿ ತಿಮ್ಮ ॥ ಪ ॥
ಭೇದವಿಲ್ಲದೆ ಸಕಲ ಜೀವರನು ಪೊತ್ತಿಹಳು
ಭೂದೇವಿಯೆಂಬಾಕೆ ನಿನ್ನ ಅರ್ಧಾಂಗಿಯು
ಸಾಧನಸಿರಿಯ ಸಂಪತ್ತು ಭಾಗ್ಯವನೀವ
ಆ ದಯಾನಿಧಿ ಲಕ್ಷ್ಮಿ ನಿನ್ನ ಸತಿಯು ದೇವ ॥ ೧ ॥
ಎಂಬತ್ತುನಾಲ್ಕು ಲಕ್ಷ ಜೀವರಾಶಿಗಳನ್ನು
ಬೊಂಬೆಗಳನು ಮಾಡಿ ಭವದಿಂದದಲಿ
ತುಂಬಿ ಕಲೆಗಳನೊತ್ತಿ ನೊಸಲ ಬರೆಹವ ಬರೆವ
ಅಂಬುಜೋದ್ಭವ ನಿನ್ನ ಹೆಮ್ಮಗನ್ನೆ ದೇವ ॥ ೨ ॥
ಸಕಲ ಜೀವರಾಶಿಗಳನು ಕಲ್ಪಿಸುವ ಬೀಜ
ಸುಖದಿಂದ ಮಾಯಾಂಗನೆಯರೊಡಲೊಳು
ಅಕ್ಕರದಿ ಪಿಂಡಾಂಡಗಳ ಕಟ್ಟಿ ಬಲಿಸುವ
ಮಕರಾಂಕನೆಂಬುವನು ನಿನ್ನ ಕಿರಿಮಗ ದೇವ ॥ ೩ ॥
ಜಂಗಮ ಸ್ಥಾವರಕಾಧಾರವಾಗಿಹಳು
ಭಂಗಿಸುತ ಜನರ ಕರ್ಮವ ಕಳೆವಳು
ಹಿಂಗದೆ ಜಗವ ಪಾವನವ ಮಾಡುವ ಪುಣ್ಯ
ಗಂಗೆಯೆಂಬಾಕೆ ನಿಮ್ಮಯ ಮಗಳು ದೇವ ॥ ೪ ॥
ಇಂತು ಅಣುರೇಣು ತೃಣ ಕಾಷ್ಠದೊಳಗೆಲ್ಲ
ಸಂತೋಷವಾಗಿಹುದು ನಿನ್ನ ಸ್ಮರಣೆ
ಯಂತ್ರವಾಹಕನೆಂಬ ಬಿರುದು ಸಲುವುದು ನಿನಗೆ
ಕಂತುಪಿತ ಕಾಗಿನೆಲೆಯಾದಿಕೇಶವನೆ ॥ ೫ ॥

*****

## ೨೬. ಭವಸಾಗರದಿ ಮುಳುಗಿಸದೆ ರಕ್ಷಿಸು

**ಸಾಗರನ ಮಗಳರಿಯದಂತೆ ಸ-**
**ರಾಗದಲಿ ಸಂಚರಿಸುತಿಹೆ ಉ-**
**ದ್ಯೋಗವೇನು ನಿಮಿತ್ತಕಾರಣವಿಲ್ಲ ಲೋಕದಲಿ ।**

**ಭಾಗವತರಾದವರ ಸಲಹುವ-**
**ನಾಗಿ ಸಂಚರಿಸುವುದು ಈ ಭವ-**
**ಸಾಗರದಿ ಮುಳುಗಿಸದೆ ರಕ್ಷಿಸು ನಮ್ಮನನವರತ ॥ ೨೬ ॥**

**ಅ: ಸಾಗರನ ಮಗಳಾದ ಮಹಾಲಕ್ಷ್ಮಿಗೂ ಸಹ ಪೂರ್ಣ ಅರಿಯಲಾಗದ ರೀತಿಯಲ್ಲಿ ನಿನ್ನ ವ್ಯಾಪಾರ ನಡೆದಿದೆ. ಇದಕ್ಕೆ ಯಾವುದೇ ನಿಮಿತ್ತವು ಕಾರಣವಾಗಿಲ್ಲ. ಭಾಗವತರಾದವರನ್ನು ಸಂರಕ್ಷಿಸುವುದು ನಿನ್ನ ಈ ತೆರನಾದ ವ್ಯಾಪಾರದ ಮುಖ್ಯ ಉದ್ದೇಶ. ಅಂತಹ ಶ್ರೀಹರಿಯೇ! ನೀನು ಈ ಸಂಸಾರಸಾಗರದಲ್ಲಿ ನಮ್ಮನ್ನು ಮುಳುಗದಂತೆ ಸದಾ ರಕ್ಷಿಸು.**

ವಿ: ೧. ಶ್ರೀಹರಿಯ ವ್ಯಾಪಾರವು ಮಹಾಲಕ್ಷ್ಮಿಗೂ ಎಟುಕದ ಅಪೂರ್ವತೆಯನ್ನು ಹೊಂದಿದೆ ಎಂಬುದು ಈ ಪದ್ಯದ ಮುಖ್ಯ ಭಾವ[1].

೨. ಮಹಾಲಕ್ಷ್ಮಿಯು ಅಕ್ಷರಪುರುಷಳೆನ್ನಿಸಿದ್ದು ಶ್ರೀಹರಿಯ ಅನಂತರದ ಜಗತ್ತಿನ ಸರ್ವನಿಯಂತ್ರಕಶಕ್ತಿ ಎನ್ನಿಸಿರುವಳು. ಅವಳಿಗೂ ಸಹ ಶ್ರೀಹರಿಯ ಕಾರ್ಯದ ಪರಿಪೂರ್ಣ ಅರಿವು ಅಶಕ್ಯ ಎಂದರ್ಥ.

೩. ಮಹಾಲಕ್ಷ್ಮಿಯು ಶ್ರೀಹರಿಯಂತೆ ದೇಶತಃ ಕಾಲತಃ ವ್ಯಾಪ್ತಳಾಗಿದ್ದರೂ, ಗುಣದಲ್ಲಿ ಅವನಿಗಿಂತ ಅನಂತಪಟ್ಟು ನ್ಯೂನಳೆನ್ನಿಸಿರುವುದರಿಂದ, ಅವಳ ಸಾಮರ್ಥ್ಯ ಬ್ರಹ್ಮಾದಿಗಳಿಗಿಂತ ಮಿಗಿಲಾಗಿದ್ದರೂ ಶ್ರೀಹರಿಯನ್ನು ಪೂರ್ಣ ತಿಳಿಯುವಷ್ಟು ಪರಿಪೂರ್ಣವಲ್ಲ ಎಂದು ಭಾವ.

೪. ಶ್ರೀಹರಿಯ ಮಹಿಮೆ ಸಾಗರಜಾತೆಯಾದ ಮಹಾಲಕ್ಷ್ಮಿಯೂ ಸಾಕಲ್ಯೇನ ಅರಿಯಲಾಗದಷ್ಟು ಅಪೂರ್ವವಾದುದು. ಆದರೆ, ಅಂತಹ ಅದ್ಭುತಕಾರ್ಯ ಅವನಿಗೆ ಮಾತ್ರ ಸರಾಗ, ಅನಾಯಾಸವಾಗಿ ನಡೆಯುವ ಸಹಜಪ್ರಕ್ರಿಯೆ ಎಂಬ ಇಲ್ಲಿಯ ನಿರೂಪಣೆ ಅಪೂರ್ವವಾದುದು.

೫. ಇಲ್ಲಿ 'ಸಂಚಾರ' ಎಂಬುದಕ್ಕೆ ಸೃಷ್ಟಿಸ್ಥಿತಿ ಮೊದಲಾದ ಜಗದ್ವ್ಯಾಪಾರ ಎಂದು ಅರ್ಥ. ಶ್ರೀಹರಿಯ ಸೃಷ್ಟ್ಯಾದಿ ಕಾರ್ಯಗಳು ಅವನ ಸ್ವಂತಕ್ಕೋಸ್ಕರವಾಗಿ ಸರ್ವಥಾ ಅಲ್ಲ ಎಂಬು-

---

೧. ಜಗದುದರನತಿವಿಮಲಗುಣರೂಪಗಳನಾಲೋಚನದಿ ಭಾರತ-
ನಿಗಮತತಿಗಳತಿಕ್ರಮಿಸಿ ಕ್ರೀಯಾವಿಶೇಷಗಳ।
ಬಗೆಬಗೆಯ ನೂತನವ ಕಾಣುತ ಮಿಗೆ ಹರುಷದಿಂ ಪೊಗಳಿ ಹಿಗ್ಗುವ
ತ್ರಿಗುಣಮಾನಿ ಮಹಾಲಕುಮಿ ಸಂತೈಸಲನುದಿನವು ॥ – ಹರಿಕಥಾಮೃತಸಾರ (೧/೨)
– ಎಂಬ ಶ್ರೀಜಗನ್ನಾಥದಾಸರ ಈ ಮಾತಿನಲ್ಲಿ ಶ್ರೀಹರಿಯ ಗುಣ, ರೂಪ, ಕ್ರಿಯೆ ಮೊದಲಾದ ಪ್ರತಿಯೊಂದು ಸಹ ಮಹಾಲಕ್ಷ್ಮಿಗೂ ಹೊಸಹೊಸದಾಗಿ ಕಾಣುವುದು ಎಂಬು ವಿಶೇಷಾಂಶ ನಿರೂಪಿತವಾಗಿದ್ದು ಇದು ಶ್ರೀಕನಕದಾಸರ ಮಾತನ್ನು ಅರ್ಥಮಾಡಿಕೊಳ್ಳಲು ನೆರವಾಗುವುದು.

ದನ್ನು 'ನಿಮಿತ್ತಕಾರಣವಿಲ್ಲ' ಎಂಬ ಪದದಿಂದ ಸೂಚಿಸಿರುವರು; ಶ್ರೀಹರಿಯ ಲೋಕಕ್ಕೆ ಅನಿಮಿತ್ತೋಪಕಾರಿ ಎಂದು ಭಾವ.

೬. ಈ ಭಾವವನ್ನು ಕಾಕುಸ್ವರದಲ್ಲಿ ಧ್ವನಿಸಿರುವುದು ಇಲ್ಲಿಯ ನಿರೂಪಣೆಯ ವೈಖರಿ.

೭. ಹೀಗೆ ಸರ್ವಥಾ ಸ್ವಾರ್ಥರಹಿತನಾದ್ದರಿಂದಲೇ ಅವನ ಸಕಲಕಾರ್ಯಗಳೂ ಲೋಕಹಿತವನ್ನು ಉದ್ದೇಶಿಸಿದ್ದು, ಮುಖ್ಯವಾಗಿ ಭಾಗವತರನ್ನು ಸಂರಕ್ಷಿಸುವವು: "**ಅಸ್ಮದಿಷ್ಟೈಕಕಾರ್ಯಾಯ ಪೂರ್ಣಾಯ ಹರಯೇ ನಮಃ**" (ದ್ವಾದಶಸ್ತೋತ್ರ ೨/೯).

೮. ಭವಸಾಗರ ಎಂದರೆ ಸಂಸಾರಸಾಗರ; ಇದು ಇತರ ಸಾಗರಗಳಂತಲ್ಲದೆ, ಅಪಾರವೂ ಭಯಾನಕವೂ ಆಗಿದ್ದು ಯಾರಿಗೂ ದಾಟಲು ಸಾಧ್ಯವೆನ್ನಿಸದಂತಹ ಅಪಾಯವನ್ನು ಹೊಂದಿದೆ. ಶ್ರೀಹರಿಗೆ ಮಾತ್ರ ಇಂತಹ ಘೋರಸಂಸಾರಸಾಗರದಿಂದ ಬಿಡುಗಡೆ ಮಾಡುವ ಸಾಮರ್ಥ್ಯ ಶಾಸ್ತ್ರಗಳಲ್ಲಿ ಪ್ರತಿಪಾದಿತವಾಗಿದೆ:

**ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।**
**ಭವಾಮಿ ನ ಚಿರಾತ್ ಪಾರ್ಥ ಮಯ್ಯಾವೇಶಿತಚೇತಸಾಮ್ ॥**

- ಗೀತಾ(೧೨/೭)

೯. ಶ್ರೀರಾಘವೇಂದ್ರಸ್ತೋತ್ರದಲ್ಲಿ ಸಂಸಾರಸಾಗರದ ರಮ್ಯ ಚಿತ್ರಣ ಹೀಗೆ ಬಂದಿದೆ:

ಸಂಸಾರೇಽಕ್ಷಯಸಾಗರೇ ಪ್ರಕೃತಿತೋಽಗಾಧೇ ಸದಾ ದುಸ್ತರೇ
ಸರ್ವಾವದ್ಯಜಲಗ್ರಹೈರನುಪಮೈಃ ಕಾಮಾದಿಭಂಗಾಕುಲೇ ।
ನಾನಾವಿಭ್ರಮದುರ್ಭ್ರಮೇಽಮಿತಭಯಸ್ತೋಮಾದಿಫೇನೋತ್ಕಟೇ
ದುಃಖೋತ್ಕೃಷ್ಟವಿಷೇ ಸಮುದ್ಧರ ಗುರೋ ಮಾ ಮಗ್ನರೂಪಂ ಸದಾ ॥ ೨೩ ॥

*****

## ೨೭. ಪರಾತ್ಪರ ವಸ್ತುವಲ್ಲವೆ ನೀನು ರಕ್ಷಿಸು

**ಹಸ್ತಿವಾಹನನಾದಿಯಾದ ಸ-**
**ಮಸ್ತದೇವನಿಕಾಯದೊಳಗೆ ಪ್ರ-**
**ಶಸ್ತನಾವನು ನಿನ್ನವೊಲು ಶರಣಾಗತರ ಪೊರೆವ ।**
**ಹಸ್ತಕಲಿತಸುದರ್ಶನದೊಳರಿ-**
**ಮಸ್ತಕವನಿಳುಹುವ ಪರಾತ್ಪರ**
**ವಸ್ತುವಲ್ಲವೆ ನೀನು ರಕ್ಷಿಸು ನಮ್ಮನನವರತ ॥ ೨೭ ॥**

**ಅ: ಐರಾವತವೆಂಬ ಆನೆಯನ್ನು ವಾಹನವನ್ನಾಗಿ ಉಳ್ಳ ಇಂದ್ರನೇ ಮೊದಲಾದ ಸಕಲ ದೇವತೆಗಳ ಸಮೂಹದಲ್ಲಿ ನಿನ್ನಂತೆ ಶರಣಾಗತರನ್ನು ಪಾಲಿಸುವ ಪ್ರಶಸ್ತನಾದ ಬೇರಾವನು ತಾನೇ ಇರುವನು; ಕೈಯಲ್ಲಿ ಹಿಡಿದ ಸುದರ್ಶನಚಕ್ರದಿಂದ ಶತ್ರುಗಳ ತಲೆಯನ್ನು ಕತ್ತರಿಸುವ ಪರಾತ್ಪರ ವಸ್ತು ನೀನು, ಅಲ್ಲವೆ! ಇಂತಹ ನೀನು ನಮ್ಮನ್ನು ಸದಾ ರಕ್ಷಿಸು.**

ವಿ.: ೧. ಸಮಸ್ತದೇವತಾವೃಂದದಲ್ಲಿ ಶ್ರೀಹರಿಯಂತೆ ಶರಣಾಗತರಕ್ಷಕನಾದ ಬೇರೊಬ್ಬ ದೇವತೆ ಇಲ್ಲ ಎಂಬುದು ಇಲ್ಲಿಯ ಭಾವ.

೨. ಸಾಮಾನ್ಯವಾಗಿ ಇಂದ್ರನು ತ್ರಿಲೋಕೇಶ ಎಂದು ಪ್ರಸಿದ್ಧನಾದವನು. ತ್ರಿಲೋಕಗಳಿಗೆ ಒಡೆಯನಾದ ಇಂದ್ರನು ಶರಣಾಗತರನ್ನು ರಕ್ಷಿಸುವ ಹೊಣೆಹೊತ್ತವನು. ಆದರೆ ಬಲಿಚಕ್ರವರ್ತಿ ಮೊದಲಾದ ಪ್ರಸಂಗಗಳಲ್ಲಿ ಇಂದ್ರನೇ ಪರಾಜಿತನಾಗುವಂತಾಗಿ, ರಕ್ಷಣೆಗಾಗಿ ಹಂಬಲಿಸುವಂತಾಗುವುದು; ಆಗ ಅವನ ಪ್ರಾರ್ಥನೆಯಂತೆ ವಾಮನರೂಪದಿಂದ ಅವತರಿಸಿ, ಬಲಿಯನ್ನು ನಿಗ್ರಹಿಸಿ, ಇಂದ್ರನಿಗೆ ಮರಳಿ ತ್ರಿಲೋಕಾಧಿಪತ್ಯವನ್ನು ಶ್ರೀಹರಿಯು ನೀಡಿದ ಪ್ರಸಂಗ ಶ್ರೀಮದ್ಭಾಗವತಾದಿಗಳಲ್ಲಿ ಸುಪ್ರಸಿದ್ಧ. ಇನ್ನೂ ಕೆಲವು ಪ್ರಸಂಗಗಳಲ್ಲಿ ಇದೇ ರೀತಿಯಾಗಿ ಇಂದ್ರನು ಶ್ರೀಹರಿಯಿಂದ ರಕ್ಷಣೆ ಪಡೆದ ವಿವರಗಳು ಪುರಾಣಗಳಲ್ಲಿ ನಿರೂಪಿತವಾಗಿವೆ. ಹೀಗೆ ತ್ರಿಲೋಕಾಧಿಪತಿಯಾದ ಇಂದ್ರನಿಗೂ ಸಹ ರಕ್ಷಣೆ ನೀಡುವ ಶ್ರೀಹರಿಯೇ ನಿಜ ಅರ್ಥದಲ್ಲಿ ಶರಣಾಗತರನ್ನು ಸರ್ವರೀತಿಯಿಂದ ಸದಾ ರಕ್ಷಿಸುವ ಅನುಪಮ ದೇವತೆ ಎಂದು ತಿಳಿಯುವುದು.

೩. ಇಂದ್ರನಿಗಿಂತ ಮಿಗಿಲಾದ ದೇವತೆಗಳು ಬ್ರಹ್ಮ ಹಾಗೂ ಶಿವ; ಆದರೆ ಬ್ರಹ್ಮ ಸೃಷ್ಟಿಕರ್ತನೆಂಬುದಾಗಿಯೂ, ಶಿವ ಲಯಕರ್ತನೆಂಬುದಾಗಿಯೂ ಪ್ರಸಿದ್ಧ. ರಕ್ಷಣೆಯ ಹೊಣೆಯ ದೃಷ್ಟಿಯಿಂದ ತ್ರಿಲೋಕೇಶನೆನ್ನಿಸಿ, ನಿಯಮಿತನಾದವನು ಇಂದ್ರನೇ. ಆದ್ದರಿಂದ ಅವರಿಬ್ಬರನ್ನೂ ಬಿಟ್ಟು ಇಂದ್ರನನ್ನೇ ಹೆಸರಿಸಿರುವುದು ಸಮುಚಿತವಾಗಿದೆ ಎಂದು ತಿಳಿಯಬೇಕು. ಇದರಿಂದ ನಿಜವಾದ ಅರ್ಥದಲ್ಲಿ ಸ್ಥಿತಿಕರ್ತನು ಶ್ರೀಹರಿ ಎಂಬುದು ಸ್ಫುಟಪಡುವುದು ಎಂದು ಭಾವ.

೪. ಹಸ್ತಿವಾಹನ ಎಂದರೆ ಆನೆಯನ್ನು ವಾಹನವನ್ನಾಗಿ ಉಳ್ಳವನು ಎಂದರ್ಥ. ಇತರ ದೇವತೆಗಳು ಸಹ ದಿಗ್ಗಜಗಳಲ್ಲಿ ಒಂದೊಂದನ್ನು ಹೊಂದಿರುವವರಾದರೂ ಆನೆಯನ್ನೇ ಪ್ರಧಾನವನ್ನಾಗಿ ವಾಹನವನ್ನಾಗಿ ಮಾಡಿಕೊಂಡಿರುವವನು ಇಂದ್ರ. ಆದ್ದರಿಂದ ಹಸ್ತಿವಾಹನ ಎಂದರೆ ಇಂದ್ರ ಎಂದೇ ಅರ್ಥ. ಇಂದ್ರನ ವಾಹನವಾದ ಆನೆಯ ಹೆಸರು ಐರಾವತ ಎಂದು ಪುರಾಣಗಳಲ್ಲಿ ನಿರೂಪಿತವಾಗಿದೆ.

೫. ರಕ್ಷಣೆ, ಅಭೀಷ್ಟಪ್ರಾಪ್ತಿ ಹಾಗೂ ಅನಿಷ್ಟನಿವೃತ್ತಿ ಎಂಬುದಾಗಿ ಎರಡು ಬಗೆ. ದುಷ್ಟರಿಂದಾಗುವ ಕೇಡನ್ನು ಪರಿಹರಿಸುವ ಅನಿಷ್ಟನಿವೃತ್ತಿರೂಪವಾದ ರಕ್ಷಣೆಗೆ ಹೆಚ್ಚು ಪ್ರಾಧಾನ್ಯ.

ಅದಕ್ಕೆಂದೇ ಭೂಮಿಯಲ್ಲಿ ಅಸುರರ ಹಾವಳಿ ಹೆಚ್ಚಾದಾಗ ಶ್ರೀಹರಿಯು ಅವತರಿಸಿ, ದುಷ್ಟರನ್ನು ಸಂಹರಿಸಿ, ಲೋಕಕ್ಕೆ ಅಭಯ ನೀಡಿರುವ ಪ್ರಸಂಗಗಳು ಪುರಾಣಗಳಲ್ಲಿ ಪರಿಪರಿಯಾಗಿ ದಾಖಲಾಗಿವೆ. ಭಗವದ್ಗೀತೆಯಲ್ಲಿ ಬಂದಿರುವುದು ಸಹ 'ವಿನಾಶಾಯ ಚ ದುಷ್ಕೃತಾಮ್' ಎಂದೇ. ಬ್ರಹ್ಮಾದಿ ದೇವತೆಗಳ ವರದಿಂದ ಕೊಬ್ಬಿದ ಮಹಾದೈತ್ಯರನ್ನು ಇತರ ದೇವತೆಗಳು ನಿಗ್ರಹಿಸಲು ಅಸಮರ್ಥರಾದಾಗ ಅವರ ಪ್ರಾರ್ಥನೆಯಂತೆ ಶ್ರೀಹರಿಯು ಬಗೆ ಬಗೆಯ ಅವತಾರಗಳನ್ನೆತ್ತಿ ಆ ದುಷ್ಟರನ್ನು ಅನಾಯಾಸದಿಂದ ಸಂಹರಿಸಿದ ಅನೇಕ ಪ್ರಸಂಗಗಳು ಸುಪ್ರಸಿದ್ಧ. ಆದ್ದರಿಂದ ಇಲ್ಲಿ ದುಷ್ಟರ ಸಂಹಾರದ ಪ್ರಸಂಗವು ನಿರೂಪಿತವಾಗಿರುವುದು ಸಮುಚಿತವೇ ಆಗಿದೆ.

೬. ಶ್ರೀಹರಿಯು ದುಷ್ಟರನ್ನು ಶಿಕ್ಷಿಸುವ ಪರಿಯೂ ಸಹ ವಿಶಿಷ್ಟ ಬಗೆಯದು. ಮುಖ್ಯವಾಗಿ ಸುದರ್ಶನಚಕ್ರದಿಂದ ಅಸುರರನ್ನು ತರಿಯುವ ಅವನ ಹಿರಿಮೆ ಅಪೂರ್ವವಾದುದು. ಶಿಶುಪಾಲಾದಿಗಳನ್ನು ಶ್ರೀಕೃಷ್ಣರೂಪದಿಂದ ಹಾಗೆ ಸಂಹರಿಸಿದ್ದು ಲೋಕವಿದಿತ. ಈ ಹಿನ್ನೆಲೆಯಲ್ಲಿ ಇದರ ಪ್ರಸ್ತಾಪ ಅತ್ಯಂತ ಉಚಿತವಾಗಿದೆ.

೭. ಸುದರ್ಶನ ಚಕ್ರಕ್ಕೆ ಅಧಿದೇವತೆ ದುರ್ಗಾದೇವಿ. ಆ ದುರ್ಗೆಯು ಸಾಕ್ಷಾತ್ ಮಹಾಲಕ್ಷ್ಮಿಯ ಒಂದು ರೂಪ. ಆದ್ದರಿಂದ ಸುದರ್ಶನ ಚಕ್ರವನ್ನು ಪ್ರಯೋಗಿಸುವುದು ಎಂದರೆ ಮಹಾಲಕ್ಷ್ಮಿಯನ್ನು ನಿಯಂತ್ರಿಸುವುದು ಎಂದರ್ಥ. ಇದರಿಂದ ಲಕ್ಷ್ಮೀಪತಿಯಾದ ಶ್ರೀಹರಿಯೇ ಸಕಲ ದೇವತೆಗಳಲ್ಲಿ ಮಿಗಿಲಾದ ಪರದೇವತೆ ಎಂಬ ಭಾವವು ಸೂಚಿತ.

*****

## ೨೮. ನಿನ್ನೊಳು ಜೈಸುವವರೀಜಗದೊಳುಂಟೇ ದೇವ ರಕ್ಷಿಸು

**ಹಗೆಯರಿಗೆ ವರವೀವರಿಬ್ಬರು**
**ತೆಗೆಯಲರಿಯರು ಕೊಟ್ಟ ವರಗಳ**
**ತೆಗೆದುಕೊಡುವ ಸಮರ್ಥರಾರೀ ಜಗಕೆ ನಿನ್ನಂತೆ ।**
**ಸುಗುಣರಿನ್ನಾರುಂಟು ಕದನವ**
**ಬಗೆದು ನಿನ್ನೊಳು ಜೈಸುವವರೀ-**
**ಜಗದೊಳುಂಟೇ ದೇವ ರಕ್ಷಿಸು ನಮ್ಮನನವರತ ॥ ೨೮ ॥**

ಅ: ದೇವತೆಗಳ ವೈರಿಗಳಾದ ಅಸುರರಿಗೆ ವರಗಳನ್ನು ನೀಡುವವರೆಂದು ಹೆಸರಾದ ಇಬ್ಬರು ದೇವತೆಗಳು ಎಂದರೆ ಬ್ರಹ್ಮ ಹಾಗೂ ಶಿವ; ಆದರೆ ಅವರಿಗೆ ತಾವು ನೀಡುವ ವರಗಳನ್ನು ಹಿಂತೆಗೆದುಕೊಳ್ಳುವ ಸಾಮರ್ಥ್ಯವಿಲ್ಲ. ಆದರೆ ವರ ನೀಡುವಂತೆ,

**ನೀಡಿದ ವರವನ್ನು ಹಿಂತೆಗೆದುಕೊಳ್ಳುವ ಸಾಮರ್ಥ್ಯ ಹೊಂದಿರುವ ಪರದೇವತೆ ಎಂದರೆ ನೀನೊಬ್ಬನೇ. ನಿನ್ನಂತೆ ಕಲ್ಯಾಣಗುಣಪೂರ್ಣರಾದವರು ಬೇರೆ ಯಾರು ತಾನೆ ಇರುವರು? ನಿನ್ನೊಂದಿಗೆ ಯುದ್ಧಕ್ಕೆ ತೊಡಗಿ, ಜಯಿಸುವವರು ಈ ಜಗತ್ತಿನಲ್ಲಿ ಯಾರಾದರೂ ಇರುವರೆ ! ಎಲೈ ದೇವನಾದ ಶ್ರೀಹರಿಯೇ! ನೀನು ನಮ್ಮನ್ನು ಸದಾ ರಕ್ಷಿಸು.**

ವಿ.: ೧. ಶ್ರೀಹರಿಯು ಪರದೇವತೆ ಎಂಬುದನ್ನು ಮತ್ತೊಂದು ಬಗೆಯಲ್ಲಿ ನಿರೂಪಿಸುವ ಪದ್ಯವಿದು.

೨. ದೈತ್ಯರು ವಿಶೇಷವಾಗಿ ಬ್ರಹ್ಮ ಹಾಗೂ ಶಿವರನ್ನು ಆರಾಧಿಸಿ, ಅಜೇಯತ್ವ, ಅವಧ್ಯತ್ವ ಮೊದಲಾದ ವರಗಳನ್ನು ಪಡೆದಿರುವ ಪ್ರಸಂಗಗಳು ಪುರಾಣಗಳಲ್ಲಿ ಉದ್ದಕ್ಕೂ ಕಂಡುಬರುತ್ತವೆ. ಆದರೆ ಮುಂದೆ ಆ ದೈತ್ಯರಿಂದ ಅಗಾಧಪ್ರಮಾಣದ ಲೋಕನಾಶ ನಡೆದಾಗ ವರನೀಡಿದ ಬ್ರಹ್ಮ ಹಾಗೂ ಶಿವರು ಅದರ ಪರಿಹಾರಕ್ಕಾಗಿ ವಿಷ್ಣುವನ್ನು ಮೊರೆಹೊಗುವುದು, ಅದರಂತೆ ವಿಷ್ಣು ಅವತರಿಸಿ, ಅಂತಹ ಅಸುರರನ್ನು ಸದೆಬಡಿಯುವುದು ಸುಪ್ರಸಿದ್ಧ; ಇದರಿಂದ ವರನೀಡುವ ಅವರಿಬ್ಬರಿಗೂ ತಮ್ಮ ವರವನ್ನು ಹಿಂತೆಗೆದುಕೊಳ್ಳುವ ಸಾಮರ್ಥ್ಯ ಇಲ್ಲವೆಂಬುದು ತಿಳಿಯುವುದು. ಬಹಳ ಮುಖ್ಯವಾಗಿ ಭಸ್ಮಾಸುರನ ಪ್ರಸಂಗದಲ್ಲಿ ತಾನು ನೀಡಿದ ವರವನ್ನು ತನ್ನ ತಲೆಯ ಮೇಲೆಯೇ ಕೈಯಿರಿಸಿ, ಪರೀಕ್ಷಿಸುವ ದುಃಸಾಹಸಕ್ಕೆ ತೊಡಗಿದ ಆ ಅಸುರನಿಂದ ಪಾರಾಗಲು, ಶಿವನಿಗೆ ಮಹಾವಿಷ್ಣುವೇ ದಾರಿತೋರಿದ ವಿವರ ಇದಕ್ಕೆ ಉತ್ತಮನಿದರ್ಶನ. ತನ್ನ ವರದಿಂದ ತಾನೇ ಸಂಕಟಕ್ಕೆ ಗುರಿಯಾದಾಗ ಶಿವ ಅದರಿಂದ ಪಾರಾದದ್ದು ಮಹಾವಿಷ್ಣುವಿನ ಅನುಗ್ರಹದಿಂದ: **ಮೋಚಿತಃ ಸಂಕಟಾತ್ ಶಿವಃ** – (ಭಾಗವತ ೧೦/೯೨/೩೭). ಇದು ಶ್ರೀಹರಿಯು ಇತರರು ನೀಡುವ ವರಗಳನ್ನು ಸಹ ತಾನು ಪರಿಹರಿಸಬಲ್ಲ ಎಂಬ ವಿಶೇಷಾಂಶ ತಿಳಿಯುವುದು. ಹೀಗೆ ವರ ನೀಡುವಂತೆ ವರವನ್ನು ಹಿಂತೆಗೆದುಕೊಳ್ಳುವಲ್ಲೂ ಸಹ ಪೂರ್ಣ ಸಮರ್ಥ ಎಂಬ ವಿಶಿಷ್ಟಹಿರಿಮೆಯನ್ನು ಹೊಂದಿರುವ ಶ್ರೀಹರಿಯೇ ಪರದೇವತೆ ಎಂಬುದು ಇಲ್ಲಿಯ ಭಾವ.

೩. ಶ್ರೀಹರಿಯು ಹೀಗೆ ವರನೀಡಲು ಹಾಗೂ ಹಿಂತೆಗೆದುಕೊಳ್ಳಲು ಸಹ ಸಮರ್ಥ ಎಂಬ ಇಲ್ಲಿಯ ನಿರೂಪಣೆ ಶ್ರೀಮಧ್ವಾಚಾರ್ಯರ ದ್ವಾದಶಸ್ತೋತ್ರದ ವರದೇಶವರಪ್ರದಮ್ (೧/೧) ಎಂಬ ಮಾತಿನ ಭಾವವಾಗಿದೆ. ವರದಾನಾಂ **ಈಶಾಃ ವರದೇಶಾಃ ತೇಷಾಮಪಿ ವರಪ್ರದಃ ತಂ** ಎಂಬುದು ಇದರ ಒಂದು ಅರ್ಥವಾದರೆ, **ವರಾನ್ ದ್ಯತಿ ಇತಿ ವರದಾಃ ತೇಷಾಂ ಈಶಾಃ ವರದೇಶಾಃ; ತೇಷಾಮಪಿ ವರಾನ್ ಪ್ರಕರ್ಷೇಣ ದ್ಯತಿ ಇತಿ ವರದೇಶವರಪ್ರದಃ** ಎಂಬುದು ಅದರ ಇನ್ನೊಂದು ಅರ್ಥ.

## ೨೯. ವೈರವ ಮಾಡಿದವರಿಗೆ ಅಮರಪದವಿಯನಿತ್ತೆ ರಕ್ಷಿಸು

**ಸುಮನಸರ ವೈರದಲಿ ಕೆಲವರು**
**ಕುಮತಿಗಳು ತಪದಿಂದ ಭರ್ಗನ**
**ಕಮಲಜನ ಪದಯುಗವ ಮೆಚ್ಚಿಸಿ ವರವ ಪಡೆದಿಹರು ।**
**ಸಮರಮುಖದೊಳಗುಪಮೆಯಲಿ ವಿ-**
**ಕ್ರಮದಿ ವೈರವ ಮಾಡಿದವರಿಗೆ**
**ಅಮರಪದವಿಯನಿತ್ತೆ ರಕ್ಷಿಸು ನಮ್ಮನನವರತ ॥ ೨೯ ॥**

ಅ: ದೇವತೆಗಳ ಮೇಲೆ ವೈರಭಾವವನ್ನು ಹೊಂದಿದ ಕೆಲವರು ದುರ್ಬುದ್ಧಿಯವರು ತಪಸ್ಸು ಮಾಡಿ ಶಿವನ, ಬ್ರಹ್ಮನ ಪದಯುಗವನ್ನು ಆರಾಧಿಸಿ, ಮೆಚ್ಚಿಸಿ ವರವನ್ನು ಪಡೆದಿರುವರು. ಯುದ್ಧರಂಗದಲ್ಲಿ ಒಳ್ಳೆಯ ರೀತಿಯಲ್ಲಿ ಪರಾಕ್ರಮವನ್ನು ತೋರಿಸಿ, ವೈರವನ್ನು ಮಾಡಿದವರಿಗೆ ಅಮರ ಪದವಿಯನ್ನು ನೀಡಿದೆ. ಶ್ರೀಹರಿಯೇ! ಇಂತಹ ನೀನು ನಮ್ಮನ್ನು ಸದಾ ರಕ್ಷಿಸು.

ವಿ.: ೧. ಹಿಂದಿನ ಪದ್ಯದ ನಿರೂಪಣೆ ಇದರಲ್ಲಿ ಮುಂದುವರೆದಿದೆ.

೨. ದೇವತೆಗಳ ಮೇಲೆ ವೈರವನ್ನು ಸಾಧಿಸಲೆಂದು ದುರ್ಬುದ್ಧಿಯ ಕೆಲವು ಜನರು ಶಿವ ಹಾಗೂ ಬ್ರಹ್ಮನನ್ನು ಆರಾಧಿಸಿ, ವರವನ್ನು ಪಡೆದುಕೊಂಡರು. ಇದು ಹಿಂದಿನ ಪದ್ಯದಲ್ಲಿನ ಹಗೆಯರಿಗೆ ವರವೀವರಿಬ್ಬರು ಎಂಬ ಮಾತಿಗೆ ವಿವರಣೆಯಾಗಿದೆ; **ಭರ್ಗ– ಶಿವ; ಕಮಲಜ– ಬ್ರಹ್ಮ; ಸುಮನಸರು – ದೇವತೆಗಳು.**

೩. ಹಾಗೆ ವರಪಡೆದವರಲ್ಲೂ ಸಹ ಯುದ್ಧರಂಗದಲ್ಲಿ ಉತ್ತಮಹೋರಾಟವನ್ನು ಮಾಡಿಯೇ ವೈರವನ್ನು ಸಾಧಿಸಹೊರಟವರು ಅಂತಹ ಉತ್ತಮಚೇತನರಿಗೆ ಅಮರ ಪದವಿಯನ್ನು ನೀಡಿ ಅನುಗ್ರಹಿಸಿದ್ದು ಶ್ರೀಹರಿ.

೪. ಬ್ರಹ್ಮ ಹಾಗೂ ಶಿವನಿಂದ ಅವಧ್ಯತ್ವ ಹಾಗೂ ಅಜೇಯತ್ವ ವರಪಡೆದ ಅಸುರರು ಸಾಮಾನ್ಯವಾಗಿ, ವಿನಾಶವನ್ನು ಹೊಂದಿದವರು. ಆದರೆ ಅಂತಹವರಲ್ಲಿ ಕೆಲವರು ಮಾತ್ರ ನ್ಯಾಯಬದ್ಧರೀತಿಯಲ್ಲಿ ಯುದ್ಧಕ್ಕೆ ತೊಡಗಿದ ಹಿರಿಮೆಯನ್ನು ಮೆರೆದವರು. ಅಂತಹವರು ವಿನಾಶವನ್ನು ಕಾಣದೆ, ದೇವತೆಗಳಲ್ಲಿ ಪರಿಗಣಿತರಾಗುವಂತಾದರು ಎಂದರ್ಥ.

೫. ಇದಕ್ಕೆ ನಿದರ್ಶನವನ್ನಾಗಿ ಬಲಿಚಕ್ರವರ್ತಿಯನ್ನು ಭಾವಿಸಬಹುದು. ಅವನು ಮೇಲ್ನೋಟಕ್ಕೆ ದೇವತೆಗಳ ಪ್ರಬಲ ವೈರಿ ಎಂದು ಕಂಡರೂ ಮೂಲತಃ ಸಾತ್ವಿಕನಾದ್ದರಿಂದ ಅವನ ಸಾಧನೆಗೆ ಫಲಶ್ರುತಿಯಾಗಿ ಇಂದ್ರಪದವಿ ಲಭಿಸಿತು. ಒಬ್ಬ ದೇವದ್ವೇಷಿ ದೇವರಾಜನಾದ

ಕಥೆ ಇದಾಗಿದೆ. ಇದು ಅವನು ಮೂಲತಃ ಸಾತ್ವಿಕಚೇತನ ಎಂಬುದಕ್ಕೆ ಪುರಾವೆಯಾಗಿದೆ ಎಂದರ್ಥ.

೬. ಬಾಣಾಸುರ ಇದಕ್ಕೆ ಇನ್ನೊಂದು ನಿದರ್ಶನ. ಕಾರ್ತವೀರ್ಯಾರ್ಜುನನಂತೆ ಸಾವಿರ ತೋಳಿನವನಾಗಿದ್ದ ಅವನು ಶ್ರೀಕೃಷ್ಣನ ಮೇಲೆ ಯುದ್ಧಕ್ಕೆ ತೊಡಗಿದ. ಶ್ರೀಕೃಷ್ಣ ಅವನ ೯೯೮ ತೋಳುಗಳನ್ನು ಕತ್ತರಿಸಿ ಎರಡು ಕೈಗಳನ್ನು ಮಾತ್ರ ಉಳಿಸಿ ಉದ್ಧರಿಸಿದ. ಅವನೊಳಗಿದ್ದ ಬಾಣ ಎಂಬ ಅಸುರನ ಆವೇಶವನ್ನು ನಾಶಮಾಡಿ ಅವನನ್ನು ಅಮರನೆನ್ನಿಸಿದ ಎಂಬ ವಿವರ ಶ್ರೀಮದ್ಭಾಗವತ ಹಾಗೂ ಹರಿವಂಶ ಮೊದಲಾದ ಗ್ರಂಥಗಳಲ್ಲಿ ಬಂದಿದೆ.

೭. ಪ್ರಹ್ಲಾದನ ಕಥೆ ವಿಲಕ್ಷಣವಾದುದು. ಹುಟ್ಟಿದ್ದು ದೈತ್ಯಕುಲದಲ್ಲಾದರೂ ಭಾಗವತ ಶಿರೋಮಣಿ ಎಂದು ಖ್ಯಾತನಾದ ವಿಶೇಷ ಹಿರಿಮೆ ಪ್ರಹ್ಲಾದನದು. ಅವನು ದೈತ್ಯಕುಲದವನು ಎಂದು ಗಮನಿಸದೇ ಭಕ್ತನೆಂಬ ಕಾರಣದಿಂದ ಪರಿಪೂರ್ಣರಕ್ಷಣೆಯನ್ನು ಒದಗಿಸಿ ಸಕಲ ಸೌಭಾಗ್ಯವನ್ನು ನೀಡಿದ ಕರುಣಾಳು ಶ್ರೀಹರಿ.

*****

## ೩೦. ಕೂಡಿದ ಕೆಲಸ ಉತ್ತಮವಾಯ್ತು ರಕ್ಷಿಸು

**ಬಲಿಯ ಬಂಧಿಸಿ ಮೊರೆಯಿಡುವ ಸತಿ-**
**ಗೊಲಿದು ಅಕ್ಷಯವಿತ್ತು ಕರುಣದಿ**
**ಮೊಲೆಯನುಣಿಸಿದ ಬಾಲಿಕೆಯ ಪಿಡಿದಸುವನಪಹರಿಸಿ ।**
**ಶಿಲೆಯ ಸತಿಯಳ ಮಾಡಿ ತ್ರಿಪುರರ**
**ಲಲನೆಯರ ವ್ರತಗೆಡಿಸಿ ಕೂಡಿದ**
**ಕೆಲಸ ಉತ್ತಮವಾಯ್ತು ರಕ್ಷಿಸು ನಮ್ಮನನವರತ ॥ ೩೦ ॥**

**ಅ: ಬಲಿಯನ್ನು ಬಂಧಿಸಿ, ಮೊರೆಯಿಟ್ಟಂತಹ ದ್ರೌಪದಿಗೆ ಒಲಿದು ಕರುಣೆಯಿಂದ ಅಕ್ಷಯವಸ್ತ್ರವನ್ನು ನೀಡಿ, ಸ್ತನ್ಯಪ್ರಾಶನ ಮಾಡಿಸಿದ ಪೂತನಿಯನ್ನು ಹಿಡಿದು ಅವಳ ಪ್ರಾಣವನ್ನು ಕಳೆದು, ಶಿಲೆಯಾಗಿದ್ದ ಅಹಲ್ಯೆಯನ್ನು ಪುನಃ ಸತಿಯಳನ್ನಾಗಿ ಮಾಡಿ, ತ್ರಿಪುರಾಸುರರ ಪತ್ನಿಯರ ವ್ರತವನ್ನು ಕೆಡಿಸಿ, ಕೂಡಿದ ನಿನ್ನ ಅತ್ಯಂತ ಉತ್ತಮವೇ ಆಯಿತು. ಅಂತಹ ಶ್ರೀಹರಿಯೇ! ನೀನು ನಮ್ಮನ್ನು ಅನವರತ ರಕ್ಷಿಸು.**

ವಿ.: ೧ ಬಗೆಬಗೆಯ ಭಕ್ತರಿಗೆ ಶ್ರೀಹರಿ ಅನುಗ್ರಹಿಸಿದ ಶ್ರೀಹರಿಯ ಕಾರುಣ್ಯವನ್ನು ಪ್ರಸ್ತಾಪಿಸುತ್ತ ಅವನು ನಮ್ಮನ್ನು ಸದಾ ರಕ್ಷಿಸಬೇಕು ಎಂಬುದಾಗಿ ಇದರಲ್ಲಿ ಪ್ರಾರ್ಥಿಸಿಕೊಳ್ಳಲಾಗಿದೆ.

೨. ಬಲಿಯನ್ನು ಬಂಧಿಸಿದ ಪ್ರಸಂಗ ವಾಮನಾವತಾರದಿಂದ ಎಂಬುದಾಗಿ ಶ್ರೀಮದ್ಭಾಗವತ ಅಷ್ಟಮಸ್ಕಂಧದಲ್ಲಿ ನಿರೂಪಿತವಾಗಿದೆ. ಇತರ ಅನೇಕ ಪುರಾಣಗಳಲ್ಲೂ ರಾಮಾಯಣ,

ಮಹಾಭಾರತಗಳಲ್ಲೂ ಈ ಬಗ್ಗೆ ನಿರೂಪಣೆ ಕಂಡುಬರುವುದು. ಬಲಿಚಕ್ರವರ್ತಿಯು ಮಹಾಭಾಗವತ ಶಿರೋಮಣಿ ಎಂದು ಪ್ರಖ್ಯಾತನಾದ ಪ್ರಹ್ಲಾದನ ಮೊಮ್ಮಗ. ಇವನ ತಂದೆ ವಿರೋಚನ ಹಿರಣ್ಯಕಶ್ಯಪುವಿನಂತೆ ಭಗವದ್ವಿರೋಧಿಯಾಗಿದ್ದವನು. ಇವನು ಮಾತ್ರ ತಂದೆ ವಿರೋಚನನಂತಾಗದೆ, ತಾತನಾದ ಪ್ರಹ್ಲಾದನಂತೆ, ಭಗವದ್ಭಕ್ತನೇ ಆಗಿ, ಉದ್ಧಾರ ಕಂಡವನು. ಮೂರು ಹೆಜ್ಜೆಯ ಭೂಮಿಯ ದಾನದ ನೆಪದಲ್ಲಿ ಮೂರು ಲೋಕಗಳನ್ನೇ ಪಡೆದ ವಾಮನರೂಪದ ಶ್ರೀಹರಿಯ ತ್ರಿವಿಕ್ರಮ ವೈಭವವನ್ನು ಕಂಡ ಪುಣ್ಯಶಾಲಿ ಇವನು. ಶ್ರೀಹರಿಯ ಅನುಗ್ರಹದ ಫಲವಾಗಿ ಭಾವಿ ಇಂದ್ರ ಎನ್ನಿಸಿರುವ ಇವನು ಈಗಲೂ ಸುತಳಲೋಕದಲ್ಲಿ ಶ್ರೀಹರಿಯ ವಾಮನರೂಪದಿಂದ ರಕ್ಷಿತನಾಗಿಯೇ ಇರುವನು. ವರ್ಷದ ಶ್ರೇಷ್ಠಹಬ್ಬಗಳಲ್ಲಿ ಒಂದಾದ ಬಲಿಪಾಡ್ಯ ಇವನ ಹಿರಿಮೆಯನ್ನು ಸಾರುವ ಹಬ್ಬವಾಗಿದೆ.

೩. ಮೊರೆ ಇಟ್ಟ ಸತಿ ಎಂದರೆ ದ್ರೌಪದಿ. ದುರ್ಯೋಧನ, ಶಕುನಿಯರ ನಡೆದ ದ್ಯೂತಪ್ರಸಂಗದಲ್ಲಿ ತನ್ನ ಸರ್ವಸ್ವದೊಂದಿಗೆ ತನ್ನನ್ನು ತನ್ನ ತಮ್ಮಂದಿರನ್ನು ಹಾಗೂ ದ್ರೌಪದಿಯನ್ನು ಯುಧಿಷ್ಠಿರ ಸೋತಾಗ, ತುಂಬಿದ ಸಭೆಗೆ ಕರೆತರಲ್ಪಟ್ಟ ದ್ರೌಪದಿಯ ಬಗ್ಗೆ ಅತ್ಯಂತ ಕೆಟ್ಟ ರೀತಿಯಲ್ಲಿ ದುರ್ಯೋಧನ ವರ್ತಿಸಿ, ಕೊನೆಗೆ ದ್ರೌಪದಿಯ ವಸ್ತ್ರಾಪಹರಣಕ್ಕೂ ಪ್ರಯತ್ನಿಸಿದ ಮಹಾಪಾತಕಿ. ಆ ಸಮಯದಲ್ಲಿ ದ್ರೌಪದಿಯು ಪರಿಪರಿಯಿಂದ ಶ್ರೀಹರಿಯನ್ನು ಶರಣು ಹೊಂದುವಳು. ಆಗ ಕರುಣೆಯಿಂದ ಅವಳಿಗೆ ಅಕ್ಷಯಾಂಬರವನ್ನು ನೀಡಿ ಸಲಹಿದ್ದು ಮಹಾಭಾರತದಲ್ಲಿ ಸುಪ್ರಸಿದ್ಧವಾಗಿರುವ ವಿಷಯ.

೪. ಇಲ್ಲಿ ಸ್ತನ್ಯಪ್ರಾಶನಮಾಡಿಸಿದ ಬಾಲಿಕೆ ಎಂದರೆ ಪೂತನಿ ಎಂದರ್ಥ. ಬಾಲಕೃಷ್ಣನ ಸಂಹಾರಕ್ಕೆಂದು ಕಂಸನಿಂದ ನಿಯೋಜಿಸಲ್ಪಟ್ಟ ಪೂತನಿಯು ತನ್ನ ವಿಷಪೂರಿತವಾದ ಸ್ತನ್ಯವನ್ನು ನೀಡಿ ಕೃಷ್ಣನನ್ನು ಸಂಹರಿಸಲು ಪ್ರಯತ್ನಿಸಿದ ಘೋರಪಾತಕಿ. ಸ್ವತಃ ಶ್ರೀಹರಿಯಾದ ಶ್ರೀಕೃಷ್ಣ ಅವಳನ್ನು ಸಂಹರಿಸಿ ಲೋಕಕ್ಕೆ ಕಲ್ಯಾಣವನ್ನು ಉಂಟು ಮಾಡಿದ. ಅವಳು ಹಿಂದಿನ ಜನ್ಮದಲ್ಲಿ ತಾಟಕಿಎಂಬ ರಾಕ್ಷಸಿಯಾಗಿದ್ದು ಶ್ರೀರಾಮನಿಂದ ಹತಳಾಗಿದ್ದ ವಿವರ ರಾಮಾಯಣದಲ್ಲಿದೆ. ಇಲ್ಲಿ ಪೂತನಿಯಾಗಿ ಹುಟ್ಟಿದಾಗ ಅವಳಲ್ಲಿ ಶ್ರೇಷ್ಠ ಅಪ್ಸರೆಯಾದ ಊರ್ವಶಿಯ ಆವೇಶವೂ ಇದ್ದಿತು. ಶ್ರೀಕೃಷ್ಣ ಊರ್ವಶಿಗೆ ಸದ್ಗತಿ ನೀಡಿ, ಪೂತನಿಯನ್ನು ಅಧೋಗತಿಗೆ ಕಳುಹಿಸಿದ ಎಂಬ ನಿರ್ಣಯ ಮಹಾಭಾರತತಾತ್ಪರ್ಯನಿರ್ಣಯದಲ್ಲಿದೆ; ಇದರ ವಿಸ್ತೃತ ವಿವೇಚನೆಯು ಶ್ರೀವಾದಿರಾಜಸ್ವಾಮಿಗಳ ರುಕ್ಮಿಣೀಶವಿಜಯದಲ್ಲಿ ಬಂದಿದೆ.

೫. ಶಿಲೆಯಾಗಿದ್ದ ಭಕ್ತಳು ಎಂದರೆ ಅಹಲ್ಯೆ. ಗೌತಮರ ಪತ್ನಿಯಾಗಿದ್ದ ಅಹಲ್ಯೆಯನ್ನು ಗೌತಮರ ಅಧಿಕಪುಣ್ಯದ ನಾಶಕ್ಕಾಗಿ ಇಂದ್ರದೇವರು ಗೌತಮವೇಷದಲ್ಲಿಯೇ ಬಲಾತ್ಕಾರದ ರಮಣಮಾಡಿದಾಗ ಅವರು ಶಪಿಸಿ, ಅದೃಶ್ಯಳಾಗಿ ಶಿಲೆಯಂತೆ ನಿಶ್ಚಲಳಾಗಿ ನೆಲೆಸುವ ಪರಿಸ್ಥಿತಿ ಅವಳ- ದಾಗಿತ್ತು. ಶ್ರೀರಾಮನ ದರ್ಶನಭಾಗ್ಯದಿಂದ ಪುನಃ ಅಹಲ್ಯೆ ತನ್ನ ನಿಜರೂಪವನ್ನು ಪಡೆದು ಗೌತಮರೊಂದಿಗೆ ಜೊತೆಗೂಡುವಂತಾಯಿತು. ಶ್ರೀರಾಮರೂಪದ ಶ್ರೀಹರಿಯ ಅನುಗ್ರಹದ

ಫಲ ಈ ಅಹಲ್ಯೋದ್ಧಾರ. ಈ ಬಗ್ಗೆ ಹೆಚ್ಚಿನ ವಿವರವನ್ನು ಶ್ರೀಮನ್ಮಹಾಭಾರತತಾತ್ಪರ್ಯ-ನಿರ್ಣಯದಲ್ಲಿ ಕಾಣಬಹುದು[೧].

೬. ತ್ರಿಪುರಾಸುರರು ಎಂಬವರು ಚಿನ್ನ ಬೆಳ್ಳಿ ಹಾಗೂ ಉಕ್ಕಿನ ಮೂರು ಪಟ್ಟಣಗಳನ್ನು ಮಾಡಿಕೊಂಡು ಶಿವನ ವರದಿಂದಾಗಿ ಅವಧ್ಯರೆನ್ನಿಸಿದ್ದ ಅಸುರರು. ಶಿವನ ವರದೊಂದಿಗೆ ಅವರ ಪತ್ನಿಯರ ಪಾತಿವ್ರತ್ಯವೂ ಅವರಿಗೆ ರಕ್ಷಾಕವಚದಂತಿತ್ತು. ಅವರ ಪಾತಿವ್ರತ್ಯವನ್ನು ಕೆಡಿಸಿ ತ್ರಿಪುರಾಸುರರ ಸಂಹಾರಕ್ಕೆ ರುದ್ರದೇವರಿಗೆ ಅವಕಾಶ ನೀಡಲೆಂದು ಶ್ರೀಹರಿ ಬುದ್ಧರೂಪ-ದಿಂದ ಪ್ರಾದುರ್ಭವಿಸಿದ; ಅವರ ಪಾತಿವ್ರತ್ಯವನ್ನು ಅಳಿಸಿ ಹಾಕಿದ. ಅದರ ಫಲವಾಗಿ ತ್ರಿಪುರಾಸುರರು ಶಿವನಿಂದ ಹತರಾದರು; ಶಿವನು ಪುರಾರಿ, ತ್ರಿಪುರಾರಿ ಎಂಬ ಹಿರಿಮೆಯನ್ನು ಹೊಂದಿದನು.

೭. ಇಲ್ಲಿ ಬಲಿಚಕ್ರವರ್ತಿಯ ಉದ್ಧಾರವು ಒಬ್ಬ ಪುರುಷನ ಉದ್ಧಾರದ ಸಂಗತಿಯಾದರೆ, ದ್ರೌಪದಿ, ಅಹಲ್ಯೆಯರ ಪ್ರಸಂಗಗಳು ಸ್ತ್ರೀಯರ ಉದ್ಧಾರದ ಪ್ರಸಂಗಗಳಾಗಿವೆ. ತ್ರಿಪುರಾಸುರರ ಸಂಹಾರದ ಕಥೆ ಲೋಕಕಲ್ಯಾಣದ ಕಾರಣವಾದ ಪ್ರಸಂಗವಾಗಿದೆ ಎಂಬುದು ವಿಶೇಷ.

೮. 'ಕರುಣದಿ' ಎಂಬ ಮಾತನ್ನು ಬಲಿಚಕ್ರವರ್ತಿ ದ್ರೌಪದಿ ಹಾಗೂ ಅಹಲ್ಯೆಯರ ಪ್ರಸಂಗಗಳಿಗೆ ಅನ್ವಯಿಸಿಕೊಳ್ಳಬೇಕು; ಪೂತನಿಯ ಪ್ರಸಂಗದಲ್ಲಿ ಉರ್ವಶಿಗೆ ಮಾತ್ರ ಅನ್ವಯಿಸುವ ಪದ ಇದಾಗಿದೆ ಎಂಬುದು ವಿಶೇಷ.

*****

೩೧. ಖರಹರಣವನು ಹಿಂಗಿಸಿದೆ ರಕ್ಕಸು
ಕರಿಯ ಕಾಯ್ದಾಜಲದಿ [೨]ಮಕರಿಯ
ತರಿದು ಹಿರಣ್ಯಕನನ್ನು ಸೀಳ್ದಾ-
ತರಳನನು ತಲೆಗಾಯ್ದು ಶಕಟಾಸುರನ ಹತಮಾಡಿ।

---

೧. ಅಥೋ ಅಹಲ್ಯಾಂ ಪತಿನಾऽಭಿಶಪ್ತಾಂ ಪ್ರಧರ್ಷಣಾದಿಂದ್ರಕೃತಾಚ್ಛಿಲೀಕೃತಾಮ್।
ಸ್ವದರ್ಶನಾನ್ಮಾನುಷತಾಮುಪೇತಾಂ ಸುಯೋಜಯಾಮಾಸ ಸ ಗೌತಮೇನ॥
ಬಲಂ ಸ್ವಭಕ್ತೇರಧಿಕಂ ಪ್ರಕಾಶಯನ್ನನುಗ್ರಹಂ ಚ ತ್ರಿದಶೇಷ್ವತುಲ್ಯಮ್।
ಅನನ್ಯಭಕ್ತಾಂ ಚ ಸುರೇಶಕಾಂಕ್ಷಯಾ ವಿಧಾಯ ನಾರೀಂ ಪ್ರಯಯೌ ತಯಾऽರ್ಚಿತಃ॥
- (೪/೧೦,೧೧)

ಸಾ ಹಿ ಗೌತಮವಾಕ್ಯೇನ ದುರ್ನಿರೀಕ್ಷ್ಯಾ ಬಭೂವ ಹ।
ತ್ರಯಾಣಾಮಪಿ ಲೋಕಾನಾಂ ಯಾವದ್ರಾಮಸ್ಯ ದರ್ಶನಮ್॥ - ವಾ.ರಾ. (೧/೪೯/೧೬)
- ವಿವರಗಳನ್ನು ನಮ್ಮ ಪ್ರಕಾಶನದ 'ಮ.ಭಾ.ತಾ.ನಿ ಕನ್ನಡ ಅನುವಾದ'ದಲ್ಲಿ ಕೊಡಲಾಗಿದೆ.

೨. ಮಕರವ ತರಿದು (ಪಾ.)

**ದುರುಳಕಂಸನ ಕೊಂದು ಮಗಧನ**
**ಮುರಿದು ವತ್ಸನ ಹಮ್ಮಳಿಸಿ ಖರ-**
**ಹರಣವನು ಹಿಂಗಿಸಿದೆ ರಕ್ಷಿಸು ನಮ್ಮನನವರತ ॥ ೩೧ ॥**

**ಅ: ಗಜೇಂದ್ರನನ್ನು ಕಾಯ್ದು, ಸರೋವರದಲ್ಲಿ ಅವನನ್ನು ಹಿಡಿದಿದ್ದ ಮೊಸಳೆಯನ್ನು ಸಂಹರಿಸಿದ, ಹಿರಣ್ಯಕಶಿಪುವನ್ನು ಸೀಳಿಹಾಕಿ ಬಾಲಕ ಪ್ರಹ್ಲಾದನನ್ನು ಸಂರಕ್ಷಿಸಿದ, ಶಕಟಾಸುರನನ್ನು ಸಂಹರಿಸಿದ, ದುಷ್ಟನಾದ ಜರಾಸಂಧನನ್ನು ಕೊಂದು ಅವನ ಸೊಕ್ಕನ್ನು ಮುರಿದ, ವತ್ಸಾಸುರನ ಅಹಂಕಾರವನ್ನಡಗಿಸಿದ, ಧೇನುಕಾಸುರನನ್ನು ಸಂಹರಿಸಿದ, ಶ್ರೀಹರಿಯೇ! ನೀನು ನಮ್ಮನ್ನು ಸದಾ ಪಾಲಿಸು.**

ವಿ. ೧: ಬಗೆಬಗೆಯ ಭಕ್ತರನ್ನು ಶ್ರೀಹರಿಯು ಸಂರಕ್ಷಿಸಿದ ವಿವರ ಈ ಪದ್ಯದಲ್ಲಿ ಮುಂದುವರೆದಿದೆ.

೨. ಕರಿಯ ಸಂಹರಿಸಿದ ಪ್ರಸಂಗ ಎಂದರೆ ಗಜೇಂದ್ರಮೋಕ್ಷದ ಪ್ರಸಂಗ; ಈ ಪ್ರಸಂಗವು ಶ್ರೀಮದ್ಭಾಗವತಾದಿಗಳಲ್ಲಿ ಸುಪ್ರಸಿದ್ಧವಾದುದು. ಗಜೇಂದ್ರನು ಹಾಹಾ ಎಂಬ ಗಂಧರ್ವನ ಅವತಾರವಾದರೆ, ಮೊಸಳೆಯು ಹೂಹೂ ಎಂಬ ಗಂಧರ್ವನ ಅವತಾರ. ಆ ಪ್ರಸಂಗದಲ್ಲಿ ಗಜೇಂದ್ರನ ಮೋಕ್ಷದೊಂದಿಗೆ ಆ ಮೊಸಳೆಯ ಮೋಕ್ಷವೂ ಆಯಿತು ಎಂಬುದು ವಿಶೇಷ. ಕರಿ – ಆನೆ; ಹರಣ–ದೇಹ

೩. ಹಿರಣ್ಯಕ ಎಂದರೆ ಹಿರಣ್ಯಕಶಿಪು; ಅವನ ಪುತ್ರ ಬಾಲಕ ಪ್ರಹ್ಲಾದ. ಬಗೆಬಗೆಯಿಂದ ಹಿಂಸಿಸಿ ಮಗನ ವೈಷ್ಣವ ನಿಷ್ಠೆಯನ್ನು ತಪ್ಪಿಸಲು ಹಿರಣ್ಯಕಶಿಪು ಮಾಡಿದ ಪ್ರಯತ್ನ ವಿಶ್ವ-ದಾಖಲೆಯದು. ಆದರೆ ಪ್ರಹ್ಲಾದನ ಪ್ರಾರ್ಥನೆಗೆ ಓಗೊಟ್ಟು ಶ್ರೀಹರಿಯು ನರಸಿಂಹರೂಪದಿಂದ ಹಿರಣ್ಯಕಶಿಪುವನ್ನು ಸಂಹರಿಸಿ, ಪ್ರಹ್ಲಾದನಿಗೆ ಪಟ್ಟಕಟ್ಟಿ ಉದ್ಧರಿಸಿದ. ಇದು ಶ್ರೀಮದ್ಭಾಗವತ, ವಿಷ್ಣುಪುರಾಣ, ನರಸಿಂಹಪುರಾಣ ಮೊದಲಾದ ಅನೇಕ ಆಕರ ಗ್ರಂಥಗಳಲ್ಲಿ ಪ್ರಸಿದ್ಧ.

೪. ಶಕಟಾಸುರನನ್ನು ಸಂಹರಿಸಿದ ಪ್ರಸಂಗ ಶ್ರೀಕೃಷ್ಣನ ಬಾಲಲೀಲೆಗಳಲ್ಲಿ ಒಂದು. ಶಕಟಾಸುರನು ಸ್ವಭಾವತಃ ದುಷ್ಟನಾಗಿದ್ದ ತಾಮಸಜೀವಿ. ಶ್ರೀಕೃಷ್ಣ ಅವನನ್ನು ಸಂಹರಿಸಿ ಲೋಕಕಲ್ಯಾಣ ಮಾಡಿದ. ಇದು ಸಹ ಶ್ರೀಮದ್ಭಾಗವತಾದಿಗಳಲ್ಲಿ ಪ್ರಸಿದ್ಧ.

೫. ಕಂಸನನ್ನು ಸಂಹರಿಸಿ, ಜರಾಸಂಧನ ಸೊಕ್ಕನ್ನು ಶ್ರೀಕೃಷ್ಣ ಮುರಿದದ್ದು ಅಂದಿನ ದಾಖಲೆಯ ವಿಜಯಗಳಲ್ಲೊಂದು. ಜರಾಸಂಧ ವಿಪ್ರಚಿತ್ತಿ ಎಂಬ ಅಸುರನ ಅವತಾರವಾದರೆ, ಕಂಸ ಕಾಲನೇಮಿ ಎಂಬ ಅಸುರನ ಅವತಾರ. ಕಂಸನಿಗಿದ್ದುದು ಬ್ರಹ್ಮನ ವರವಾದರೆ, ಜರಾಸಂಧನಿಗಿದ್ದುದು ಬ್ರಹ್ಮ, ಶಿವ, ದುರ್ವಾಸಮುನಿ ಹಾಗೂ ಚಂಡ-ಕೌಶಿಕರ ವರ. ಜರಾಸಂಧನ ಪುತ್ರಿಯರಾದ ಅಸ್ತಿ ಮತ್ತು ಪ್ರಾಸ್ತಿ ಎಂಬುವರು ಕಂಸನಿಗೆ ಪತ್ನಿಯರಾಗಿದ್ದರು.

ಕಂಸನ ಸಂಹಾರದಿಂದಾಗಿ ಅವರಿಬ್ಬರೂ ವಿಧವೆಯರಾಗಿ ತಂದೆಯ ಮನೆಯನ್ನು ಸೇರುವಂತಾಯಿತು. ಕೆರಳಿದ ಜರಾಸಂಧ ಪ್ರತಿಬಾರಿ ೨೩ ಅಕ್ಷೋಹಿಣಿ ಸೇನೆಯೊಂದಿಗೆ ಒಟ್ಟು ೧೮ ಬಾರಿ ಶ್ರೀಕೃಷ್ಣನ ಮೇಲೆ ಆಕ್ರಮಣ ನಡೆಸಿದ ಆದರೆ ಪ್ರತಿಬಾರಿಯೂ ಶ್ರೀಕೃಷ್ಣ ಅವನ ಸೇನೆಯನ್ನು ಸಂಪೂರ್ಣ ನಾಶಮಾಡಿ, ಅವನನ್ನು ಪುನಃ ಸೇನಾರ್ಜನೆಗೆಂದು ಕಳುಹಿಸಿಕೊಡುತ್ತಿದ್ದ. ಕೊನೆಗೆ ಭೀಮಸೇನನಿಂದ ಅವನನ್ನೂ ಸಹ ಸಂಹರಿಸಿದ. ಇಲ್ಲಿ ಮಗಧ ಎಂದರೆ ಮಗಧದೇಶದ ಅಧಿಪತಿಯಾದ ಜರಾಸಂಧ ಎಂದರ್ಥ.

೬. **ಖರಹರಣವನು** ಎಂಬುದಕ್ಕೆ ಖರಾಸುರನ ದೇಹವನ್ನು ಎಂದೂ ಅರ್ಥಮಾಡಬಹುದು. ಈ ಖರಾಸುರನು ರಾವಣನ ತಮ್ಮ. ದಂಡಕಾರಣ್ಯದಲ್ಲಿ ಹದಿನಾಲ್ಕುಸಾವಿರ ರಾಕ್ಷಸಸೇನೆಯೊಂದಿಗೆ ನೆಲೆಸಿದ್ದವನು. ಶ್ರೀರಾಮನಿಂದ ಇವನು ಸಪರಿವಾರನಾಗಿ ಹತನಾದ ವಿವರ ರಾಮಾಯಣದಲ್ಲಿದೆ. ರಾಮಾಯಣದ ಖರ ಇವನಾದರೆ, ಭಾಗವತದ ಖರ ಧೇನುಕಾಸುರ. ಇಬ್ಬರನ್ನೂ ಶ್ರೀಹರಿ ಕ್ರಮವಾಗಿ ಶ್ರೀರಾಮ ಹಾಗು ಶ್ರೀಕೃಷ್ಣರೂಪದಿಂದ ಸಂಹರಿಸಿದ ಎಂಬುದನ್ನು 'ಖರಹರಣವನು ಹಿಂಗಿಸಿದೆ' ಎಂಬ ಪದದಿಂದ ತಿಳಿಸುವ ಶ್ರೀಕನಕದಾಸರ ಕೌಶಲ ಅಪೂರ್ವವಾದುದು.

೭. ಈ ಪದ್ಯದಲ್ಲಿ ಕರಿ, ಮಕರಿ, ತರಿ, ತರಳ, ದುರುಳ, ಮುರಿದು, ಹರಹರಣ ಮೊದಲಾದ ಪದಗಳಲ್ಲಿನ ಅನುಪ್ರಾಸ ಅತ್ಯಂತ ರೋಚಕ.

*****

## ೩೨. ಮೆಚ್ಚಿಸಿದೆ ತ್ರಿಜಗವನೆಲ್ಲ ರಕ್ಷಿಸು

**ಶಿಶುತನದ ಸಾಮರ್ಥ್ಯದಲಿ ಕೆಲ -**
**ರಸುರರನು ಸಂಹರಿಸಿ ಚಕ್ರವ**
**ಬಿಸುಟು ಯೌವನಕಾಲದಲಿ ಆ ಪಾಂಡುಸುತರಿಂದ ।**
**ವಸುಮತಿಯ ಭಾರವನಿಳುಹಿ ಸಾ-**
**ಹಸದಿ ಮೆರೆದವನಾಗಿ ನೀ ಮೆ-**
**ಚ್ಚಿಸಿದೆ ತ್ರಿಜಗವನೆಲ್ಲ ರಕ್ಷಿಸು ನಮ್ಮನನವರತ ॥ ೩೨ ॥**

ಅ: ಶಿಶುತನದ ಸಾಮರ್ಥ್ಯದಲ್ಲಿ ಕೆಲವು ಅಸುರರನ್ನು ಚಕ್ರವನ್ನು ಪ್ರಯೋಗಿಸದೆ ಸಂಹರಿಸಿದೆ; ಮುಂದೆ ಯೌವನಕಾಲದಲ್ಲಿಯೂ ನೀನು ಹಾಗೆ ಅಸುರರನ್ನು ಸಂಹರಿಸಿದೆ; ಮುಂದೆ ಪಾಂಡುಪುತ್ರರಾದ ಭೀಮಾರ್ಜುನರಿಂದ ಭೂಮಿಯ ಭಾರವನ್ನು ಇಳಿಸಿ, ಸಾಹಸವನ್ನು ಮೆರೆದವನಾದೆ. ಅಂತಹ ನೀನು ಮೂರು ಲೋಕಗಳನ್ನೆಲ್ಲಾ ಮೆಚ್ಚಿಸಿದೆ. ನಮ್ಮನ್ನು ನೀನು ಸದಾ ರಕ್ಷಿಸು.

ವಿ. ೧.: ಶ್ರೀಕೃಷ್ಣರೂಪದಲ್ಲಿ ಶ್ರೀಹರಿಯು ಮಾಡಿದ ಭೂಭಾರಹರಣದ ಕಾರ್ಯದ ವಿವರಣೆ ಈ ಪದ್ಯದಲ್ಲಿ ಬಂದಿದೆ.

೨. ಶಿಶುವಾಗಿದ್ದಾಗಲೇ ಶ್ರೀಕೃಷ್ಣ ಅನೇಕ ಅಸುರರನ್ನು ಸಂಹರಿಸಿದ ಎಂಬುದು ಶ್ರೀಮದ್ಭಾಗವತಾದಿಗಳಲ್ಲಿ ಸುಪ್ರಸಿದ್ಧವಾದ ವಿವರ. ಇದು ಶ್ರೀಕೃಷ್ಣನಿಗೆ ಬಾಲ್ಯ ಯೌವನಾದಿ ಯಾವುದೇ ಕಾರಣದಿಂದಲೂ ಶಕ್ತಿ ವ್ಯತ್ಯಾಸ ಸರ್ವಥಾ ಇಲ್ಲ ಎಂಬುದಕ್ಕೆ ನಿದರ್ಶನ.

೩. ಪೂತನೆ, ಶಕಟಾಸುರ, ತೃಣಾವರ್ತ – ಈ ಮೂವರು ಶ್ರೀಕೃಷ್ಣ ಶಿಶುವಾಗಿದ್ದಾಗಲೇ ಹತರಾದ ಮಹಾದೈತ್ಯರು. ಇವರಿಗೆ ವಿಶೇಷ ವರಗಳೂ ಸಹ ಇದ್ದ ವಿವರ ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಬಂದಿದೆ. ಸ್ವಭಾವತಃ ಅಸುರರು ವಯಸ್ಸಿನಲ್ಲಿ ಹಿರಿಯರು; ವರಬಲದ ರಕ್ಷಣೆ ಹೊಂದಿದ್ದವರೂ ಆದ ಅಂತಹ ಅಸುರರನ್ನು ಶಿಶುವಾಗಿದ್ದಾಗಲೇ ಸಂಹರಿಸುವ ಮೂಲಕ ಶ್ರೀಕೃಷ್ಣ ತನ್ನದು ಅಸಾಮಾನ್ಯಸಾಮರ್ಥ್ಯ ಎಂಬುದನ್ನು ಲೋಕಕ್ಕೆ ಸಾರಿದ.

೪. ಶಿಶುತನದಿಂದ ಯೌವನದವರೆಗಿನ ಮಧ್ಯಕಾಲದಲ್ಲೂ ಸಹ ಶ್ರೀಕೃಷ್ಣ ವತ್ಸಾಸುರ, ಅರಿಷ್ಟಾಸುರ, ವ್ಯೋಮಾಸುರ, ಕೇಶಿ ಮೊದಲಾದ ಅನೇಕ ರಾಕ್ಷಸರನ್ನು ಸಂಹರಿಸಿದ ವಿವರಗಳನ್ನು ಇಲ್ಲಿ ಉಪಲಕ್ಷಣಯಾ ಗ್ರಹಿಸಬೇಕು. ಇವರಲ್ಲಿ ಅತ್ಯಂತ ಮುಖ್ಯನಾದವನು ಕಂಸ; ಬ್ರಹ್ಮವರದಿಂದ ಅವಧ್ಯನೆನ್ನಿಸಿದ ಅವನನ್ನು ಶ್ರೀಕೃಷ್ಣ ಸಂಹರಿಸಿದಾಗ ಅವನ ವಯಸ್ಸು ಹತ್ತು ಮಾತ್ರ. ಇದು ಶ್ರೀಕೃಷ್ಣನ ಬ್ರಹ್ಮಾದಿದೇವತೆಗಳಿಗಿಂತ ಹೆಚ್ಚಿನ ಹಿರಿಮೆಗೆ ಉತ್ತಮ ನಿದರ್ಶನ: **ಜಾತಃ ಕಂಸವಧಾರ್ಥಾಯ.** ಎಂಬ ಶ್ರೀಕೃಷ್ಣಾರ್ಘ್ಯಮಂತ್ರದಲ್ಲಿ ಈ ವಿವರ ಬಂದಿದೆ.

೫. ಈ ಅಸುರರ ಸಂಹಾರದೊಂದಿಗೆ ಬಾಲ್ಯದಲ್ಲೇ ಶ್ರೀಕೃಷ್ಣ ನಡೆಸಿದ ಕಾಲಿಯಮಥನ, ಗೋವರ್ಧನೋದ್ಧರಣ ಮೊದಲಾದ ಲೋಕೋತ್ತರಕಾರ್ಯಗಳೂ ಸಹ ಇದರಿಂದ ಸೂಚಿತ ಎಂದು ತಿಳಿಯಬೇಕು.

೬. ಈ ಎಲ್ಲ ಕಾರ್ಯಗಳನ್ನು ಶ್ರೀಕೃಷ್ಣ ಚಕ್ರವನ್ನು ಪ್ರಯೋಗಿಸದೆ ಲೀಲಾಜಾಲವಾಗಿ ಸಾಧಿಸಿದ ಎಂಬುದು ಮತ್ತೊಂದು ಗಮನಿಸಬೇಕಾದ ಅಂಶ. ಚಕ್ರ ಮಾತ್ರವಲ್ಲದೆ, ಗದೆ, ಬಿಲ್ಲು, ಬಾಣ ಮೊದಲಾದ ಯಾವುದೇ ಆಯುಧವನ್ನೂ ಸಹ ಉಪಯೋಗಿಸದೆ, ಆ ಕಾಲದ ಮಹಾದೈತ್ಯರನ್ನು ಶ್ರೀಕೃಷ್ಣ ಸಂಹರಿಸಿದ್ದು ಮೇಲ್ನೋಟಕ್ಕೆ ಅವನ ಪಾರಮ್ಯವನ್ನು ಸ್ಫುಟಪಡಿಸುವ ಅತ್ಯಂತ ಮುಖ್ಯವಾದ ಅಂಶ ಎಂಬ ಇಲ್ಲಿಯ ವಿವರಣೆ ಅತ್ಯಂತ ಸ್ವರಸವಾದುದು.

೭. ಇನ್ನು ಯೌವನಕಾಲದಲ್ಲಿ ಶ್ರೀಕೃಷ್ಣನು ಜರಾಸಂಧನನ್ನು ಅವನು ಹದಿನೆಂಟು ಬಾರಿ ತಂದಿದ್ದ ೨೩ ಅಕ್ಷೋಹಿಣಿ ಸೇನೆಯನ್ನು ನಾಶಗೊಳಿಸಿ ಪರಾಭವಗೊಳಿಸಿದ. ನರಕಾಸುರ ಮೊದಲಾದವರನ್ನು ಸಂಹರಿಸಿದ. ಸ್ವರ್ಗಲೋಕಕ್ಕೆ ತೆರಳಿ ಇಂದ್ರಾದಿದೇವತೆಗಳನ್ನು ಪರಾಭವಗೊಳಿಸಿ ಪಾರಿಜಾತವೃಕ್ಷವನ್ನು ದ್ವಾರಕೆಯಲ್ಲಿ ಪ್ರತಿಷ್ಠಾಪಿಸಿದ.

೮. ಮುಂದೆ ಶ್ರೀಕೃಷ್ಣ ಭೀಮಾರ್ಜುನಾದಿ ಪಾಂಡವರ ಮೂಲಕ ರಾಜಸೂಯಯಾಗದ ಪ್ರಸಂಗದಲ್ಲಿ ನಾಲ್ಕುದಿಕ್ಕುಗಳಲ್ಲಿ ದಿಗ್ವಿಜಯವನ್ನು ಮಾಡಿಸಿದ. ಅಸಂಖ್ಯ ಅಸುರರನ್ನು ನಾಶಪಡಿಸಿದ. ತುಂಬಾ ಮುಖ್ಯವಾಗಿ ದುರ್ಯೋಧನಾದಿ ಮಹಾದೈತ್ಯರನ್ನು ಭೀಮಸೇನನಿಂದಲೂ, ಜಯದ್ರಥ ಮೊದಲಾದವರನ್ನು ಅರ್ಜುನನಿಂದಲೂ ನಾಶಪಡಿಸಿದ. ಆ ಮೂಲಕವಾಗಿ ಭೂಭಾರವನ್ನು ಪರಿಹರಿಸಿದ: **ಭೂಭಾರೋತ್ತಾರಣಾಯ ಚ।**

೯. ಪಾಂಡವರ ಮೂಲಕ ಮಾಡಿಸಿದ ಭೂಭಾರಹರಣಕಾರ್ಯದಲ್ಲೂ ಶ್ರೀಕೃಷ್ಣ ಚಕ್ರವನ್ನು ಪ್ರಯೋಗಿಸಲಿಲ್ಲ ಎಂಬುದು ಮುಖ್ಯವಾದ ಅಂಶ. 'ಚಕ್ರವ ಬಿಸುಟು' ಎಂಬ ಇಲ್ಲಿಯ ಮಾತು ಅತ್ಯಂತ ಗಮನಾರ್ಹವಾದುದು. ಶ್ರೀಕೃಷ್ಣ ಕುರುಕ್ಷೇತ್ರ ಯುದ್ಧದಲ್ಲಿ ಚಕ್ರ ಮೊದಲಾದ ಆಯುಧಗಳನ್ನು ಹಿಡಿಯದೆ ಸಾರಥಿಯಾಗಿ ಅರ್ಜುನನ ರಥದಲ್ಲಿ ಕುಳಿತಿದ್ದೇ ಸಮಸ್ತ ಕುರುಸೇನೆಯ ನಾಶವನ್ನು ಭೀಮಾರ್ಜುನರ ಮಾಡಿಸಿದ ಎಂಬುದು ಅವನ ಅಗಾಧವಾದ ಸಾಮರ್ಥ್ಯಕ್ಕೆ ನಿದರ್ಶನ. ಇಲ್ಲಿ ಚಕ್ರ ಎಂಬುದು ಉಪಲಕ್ಷಕ. ಗದಾ ಮೊದಲಾದ ಯಾವ ಆಯುಧವನ್ನು ಹಿಡಿಯದೇ ಎಂದು ತಾತ್ಪರ್ಯ.

೧೦. ಇಂತಹ ತನ್ನ ಕಾರ್ಯಗಳ ಮೂಲಕ ಶ್ರೀಕೃಷ್ಣ ಮೂರು ಲೋಕಗಳಲ್ಲೂ ತನ್ನ ಸಾಮರ್ಥ್ಯವನ್ನು ಮೆರೆದ; ತ್ರಿಜಗದ್ವಂದ್ಯನೆನ್ನಿಸಿದ.

೧೧. ಯೌವನದಲ್ಲಿ ಎಂಬುದನ್ನು ಪಾಂಡುಸುತರಿಂದ ವಸುಮತಿಯ ಭಾರವನ್ನು ಇಳುಹಿದ ಎಂಬುದಕ್ಕೆ ಅನ್ವಯಿಸುವಂತಿಲ್ಲ; ಕಾರಣ ಶ್ರೀಕೃಷ್ಣ ಆ ಕಾರ್ಯವನ್ನು ಮಾಡಿಸಿದಾಗ ಅದು ಯೌವನವಾಗಿರಲಿಲ್ಲ ಎಂಬುದು ಮಹಾಭಾರತದಿಂದ ಸ್ಪಷ್ಟ

೧೨. ಶೈಶವ, ಬಾಲ್ಯ, ಯೌವನ ಹೀಗೆ ಪ್ರತಿಯೊಂದು ಹಂತದಲ್ಲೂ ಮಹಾದೈತ್ಯರನ್ನು ಕೇವಲ ತನ್ನ ಸಾಮರ್ಥ್ಯದಿಂದ ಸಂಹರಿಸಿದ ಶ್ರೀಕೃಷ್ಣನದು ದೇಶ ಕಾಲಗಳಿಗೆ ಅತೀತವೆನ್ನಿಸುವ ಅಸಾಮಾನ್ಯವಾದ ಹಿರಿಮೆ ಎಂಬುದು ಇಲ್ಲಿಯ ಮುಖ್ಯಪ್ರಮೇಯ: **ಸರ್ವದೇಶೇಷು ಕಾಲೇಷು ಸ ಏಕಃ ಪರಮೇಶ್ವರಃ।**(ಅಣುಭಾಷ್ಯ).

೧೩. ವಸುಮತಿ ಎಂದರೆ ಭೂಮಿ; ಭೂಮಿಯು ಅಪಾರವಾದ ಸಸ್ಯ ಸಂಪತ್ತು ನೀಡುವ ಕಾರಣದಿಂದ ಅದು ವಸುಮತಿ. ಅದರಂತೆ ತನ್ನ ಗರ್ಭದಲ್ಲಿಯೂ ಸಹ ಅಪಾರವಾದ ಸುವರ್ಣ ಮೊದಲಾದವುಗಳ ನಿಕ್ಷೇಪ ಹೊಂದಿರುವ ಕಾರಣದಿಂದಲೂ ಅದು ವಸುಮತಿ. ಸಮುದ್ರವು ಇಂತಹ ಕಾರಣದಿಂದಾಗಿ ರತ್ನಾಕರ ಎನಿಸಿದ್ದರೆ, ಭೂಮಿಯು ವಸುಮತಿ ಎನ್ನಿಸಿದೆ ಎಂಬುದು ಗಮನಿಸಬೇಕಾದ ಸಂಗತಿ.

೧೪. ಹೀಗೆ ಸರ್ವಾವಸ್ಥೆಗಳಲ್ಲಿಯೂ ಸಕಲಬಗೆಯ ಅಸುರರನ್ನು ಸಂಹರಿಸಿದ ಶ್ರೀಕೃಷ್ಣ ನಮ್ಮನ್ನು ಸದಾ ರಕ್ಷಿಸಲಿ ಎಂಬ ಪ್ರಾರ್ಥನೆಯು ಸಂಗತವೆನ್ನಿಸುವುದು ಎಂಬುದು ಇಲ್ಲಿಯ ಭಾವ.

೧೫. ವಸು ಎಂದರೆ ಸಂಪತ್ತು, ಐಶ್ವರ್ಯ; ಜಲ ಮೊದಲಾದ ಬಗೆಬಗೆಯ ಅಪಾರ ಸಂಪತ್ತನ್ನು ಹೊಂದಿರುವುದರಿಂದ ಭೂಮಿಗೆ ವಸುಮತಿ ಎಂಬ ಹೆಸರು ಅತ್ಯಂತ ಸಾರ್ಥಕ. ಅದರಲ್ಲಿ ಬೆಳೆಯುವ ಪೈರು ಬದುಕು ನೀಡುವ ಅಪೂರ್ವ ಸಂಪತ್ತನ್ನು ಹೊಂದಿದೆ. ಮಣ್ಣನ್ನು ಚಿನ್ನ ಎಂದು ಕರೆಯುವ ಮಾತಿನಲ್ಲಿ ಈ ಅರ್ಥ ತುಂಬಿದೆ.

*****

## ೩೩. ಬಲ್ಲಿದನು ನೀನಹುದು ರಕ್ಷಿಸು

ಎಲ್ಲರಲಿ ನೀನಾಗಿ ಸುಮನಸ-
ರಲ್ಲಿ ಅತಿಹಿತನಾಗಿ ಯಾದವ-
ರಲ್ಲಿ ಬಾಂಧವನಾಗಿ ದಾನವರಲ್ಲಿ ಹಗೆಯಾಗಿ ।
ಕೊಲ್ಲಿಸಿದೆ ಭೀಮಾರ್ಜುನರ ಕೈ-
ಯಲ್ಲಿ ಕೌರವಕುಲವನೆಲ್ಲವ
ಬಲ್ಲಿದನು ನೀನಹುದು ರಕ್ಷಿಸು ನಮ್ಮನನವರತ ॥ ೩೩ ॥

ಅ: ಶ್ರೀಹರಿಯೇ! ಎಲ್ಲರಲ್ಲಿ ನೀನು ಇರುವವನಾಗಿರುವಿ; ದೇವತೆಗಳಲ್ಲಿ ಅತ್ಯಂತ ಹಿತಕರನಾಗಿರುವಿ; ಯಾದವರಲ್ಲಿ ಬಾಂಧವನಾಗಿರುವಿ; ದಾನವರಲ್ಲಿ ಹಗೆಯಾಗಿರುವಿ – ಇಂತಹ ನೀನು ಭೀಮಾರ್ಜುನರ ಕೈಯಲ್ಲಿ ಕೌರವರ ಕುಲವನ್ನೆಲ್ಲ ಕೊಲ್ಲಿಸಿದೆ. ನೀನು ತುಂಬಾ ಪ್ರಾಜ್ಞ; ಹಾಗಿರುವುದು ನಿಜ; ನೀನು ನಮ್ಮನ್ನು ಸದಾ ರಕ್ಷಿಸು.

ವಿ: ೧. ಶ್ರೀಹರಿಯು ಸರ್ವಾಂತರ್ಯಾಮಿ; ಆದರೆ, ಅವನು ದೇವತೆಗಳ ಹಿತೈಷಿ; ಯಾದವರಿಗೆ ಬಂಧು ಹಾಗೂ ದಾನವರಿಗೆ ಹಗೆ ಎಂಬುದು ವಿಶೇಷ ಎಂಬ ಪ್ರಮೇಯ ಇದರಲ್ಲಿ ನಿರೂಪಿತವಾಗಿದೆ; ಸಮನಸರು – ದೇವತೆಗಳು.

೨. ಸುರರು ಅಸುರರು ಮೊದಲಾಗಿ ಎಲ್ಲರಲ್ಲೂ ಶ್ರೀಹರಿಯು ಅಂತರ್ಯಾಮಿಯಾಗಿ ನೆಲೆಸಿರುವನು ಎಂದು ತಿಳಿಸುವ ಮೂಲಕ ಸುರರು ನರರು ಮೊದಲಾದ ಸಕಲರಿಗಿಂತ ಶ್ರೀಹರಿಯು ಅತ್ಯಂತ ಭಿನ್ನ ಎಂಬ ಪ್ರಮೇಯ ತಿಳಿಯುವುದು.

೩. ದೇವತೆಗಳಿಗೆ ಶ್ರೀಹರಿಯು ಹಿತೈಷಿಯಾಗಿರಲು ಅವರು ಯಾರಿಗೂ ಕೇಡೆಸಗದ ಉತ್ತಮ ಮನೋಭಾವದವರು ಎಂಬುದು ಕಾರಣ ಎಂಬುದನ್ನು 'ಸುಮನಸರು' ಎಂಬ ಪದದಿಂದ ತಿಳಿಸಿರುವರು. ಇದರಿಂದ ಶ್ರೀಹರಿಯು ನಿಷ್ಕಾರಣವಾಗಿ ಸುರರಿಗೆ ಹಿತವನ್ನುಂಟು ಮಾಡುವನು ಎಂಬ ಆಕ್ಷೇಪಕ್ಕೆ ಉತ್ತರ ಲಭಿಸುವುದು.

೪. ಯಾದವರಿಗೆ ಬಾಂಧವನಾದವನು ಶ್ರೀಹರಿ. ಇದು ಅವನು ಯದುಕುಲದಲ್ಲಿ ಅವತರಿಸಿದವನು; ಆ ಕಾರಣದಿಂದ ಅವರಿಗೆ ಬಂಧು ಎಂದು ಸೂಚಿತವಾಗುವುದು. ಇದರಿಂದ ಅವನ ಬಂಧುತ್ವ ಸಜ್ಜನರಿಗೆ ಸಹಜವಾದುದು. ಯಾದವರು ಸಜ್ಜನರಾಗಿದ್ದುದು ಅವರ ಕುಲದಲ್ಲಿ ಶ್ರೀಕೃಷ್ಣರೂಪದಿಂದ ಶ್ರೀಹರಿಯು ಅವತರಿಸಲು ಕಾರಣ.

೫. ದಾನವರಿಗೆ ಹಗೆ ಎಂದರೆ ಅಸುರರಿಗೆ ಶತ್ರು ಎಂದರ್ಥ. ನಿಷ್ಕಾರಣವಾಗಿ ಕೇವಲ ಸ್ವಾರ್ಥಕ್ಕೋಸ್ಕರ ಸಜ್ಜನರಿಗೆ ಕೇಡೆಸಗುವುದು ಅಸುರರ ಮುಖ್ಯಲಕ್ಷಣ. ಅದರಿಂದಾಗಿಯೇ ಶ್ರೀಹರಿಯು ಅವರಿಗೆ ಹಗೆಯಾಗಿರುವನು ಎಂದರ್ಥ. ಕಾನೂನು ಪಾಲಿಸುವವರಿಗೆ ಸರಕಾರ ರಕ್ಷಣೆ ಒದಗಿಸುವುದು; ಅದರಂತೆ ಅದನ್ನು ಉಲ್ಲಂಘಿಸುವವರಿಗೆ ಶಿಕ್ಷೆ ನೀಡುವುದು. ಇದು ಶ್ರೀಹರಿಯು ಧರ್ಮಸಂರಕ್ಷಕ ಹಾಗೂ ಅಧರ್ಮನಾಶಕ ಎಂಬ ಪ್ರಮೇಯಕ್ಕೆ ನಿದರ್ಶನ.

೬. ಕೌರವರು ಮೇಲ್ನೋಟಕ್ಕೆ ಕೃಷ್ಣದ್ವೇಷಿಗಳಲ್ಲ, ಆದರೆ, ಪಾಂಡವದ್ವೇಷಿಗಳು. ಪಾಂಡವರು ಅಪ್ರತಿಮ ಕೃಷ್ಣಭಕ್ತರು. ತನ್ನ ಭಕ್ತರ ದ್ವೇಷಿಗಳನ್ನೂ ಸಹ ಶ್ರೀಹರಿಯು ನಾಶ ಮಾಡುವನು ಎಂಬುದು ಕೌರವರನ್ನು ಭೀಮಾರ್ಜುನರ ಮೂಲಕ ಸಂಹರಿಸಿದ ಕಾರ್ಯದ ಒಳಗಿನ ಅರ್ಥ ಎಂದು ತಿಳಿಯಬೇಕು. '**ಮಮ ಪ್ರಾಣಾ ಹಿ ಪಾಂಡವಾಃ**'[೧] ಎಂಬ ಶ್ರೀಕೃಷ್ಣನ ಮಾತಿನಲ್ಲಿ ಪಾಂಡವರು ಅವನಿಗೆ ಅತ್ಯಂತ ಪ್ರಿಯರು ಎಂಬ ವಿಷಯ ಸ್ಫುಟವಾಗಿ ನಿರೂಪಿತವಾಗಿದೆ.

೭. ಕೌರವರನ್ನು ಮಾತ್ರವಲ್ಲದೆ, ಅವರ ಕುಲವನ್ನೇ ಶ್ರೀಕೃಷ್ಣ ಭೀಮಾರ್ಜುನರ ಕೈಯಿಂದ ಕೊಲ್ಲಿಸಿದ ಎಂಬುದು ಮತ್ತೊಂದು ವಿಶೇಷಾಂಶ. ಇದು ಭಗವದ್ಭಕ್ತರ ದ್ವೇಷಿಗಳು ಸಮೂಲ ನಾಶಹೊಂದುವುದಕ್ಕೆ ನಿದರ್ಶನ. '**ಸಪುತ್ರಮಿತ್ರಬಾಂಧವೋ ವಿನಾಶಮಾಶು ಯಾಸ್ಯಸಿ**' ಎಂಬ ಹನುಮದ್ವಚನಕ್ಕೆ ಇದು ದೃಷ್ಟಾಂತ. ಭಾಸ ಮೊದಲಾದವರ ಕೃತಿಗಳಲ್ಲಿ ದುರ್ಯೋಧನನ ಮಗ ದುರ್ಜಯ ಎಂಬುವನು ಕುರುಕ್ಷೇತ್ರಯುದ್ಧದ ಬಳಿಕವೂ ಬದುಕಿದ್ದ ಎಂಬ ವಿವರ ಕಂಡುಬರುವುದುಂಟು. ಆದರೆ, ಅದು ಮಹಾಭಾರತದಲ್ಲಿ ಬಂದಿರುವ ಉಲ್ಲೇಖವಲ್ಲ. ಶ್ರೀಕನಕದಾಸರು ಮಹಾಭಾರತವನ್ನೇ ಯಥಾರ್ಥವಾಗಿ ತಿಳಿಸುತ್ತಾ ಕೌರವರ ಕುಲ ನಿಶ್ಶೇಷವಾಗಿ ಹತವಾಯಿತು ಎಂಬ ಮುಖ್ಯಾಂಶವನ್ನು ನಿರೂಪಿಸಿರುವರು.

೮. ಬಲ್ಲಿದ ಎಂದರೆ ಶ್ರೀಮಂತ ಎಂದೂ, ತಿಳಿದವನು ಎಂದೂ ಅರ್ಥ. ಶ್ರೀಕೃಷ್ಣ ಎಲ್ಲವನ್ನೂ ಬಲ್ಲ ಸರ್ವಜ್ಞ; ಅದರಿಂದಾಗಿಯೇ ಅವನು ಯೋಗ್ಯರಿಗೆ ರಕ್ಷಣೆ ನೀಡಿ ಉದ್ಧರಿಸುವಂತೆ, ಅಯೋಗ್ಯರಿಗೆ ಶಿಕ್ಷಣ ಮಾಡಿ ನಾಶಪಡಿಸುವನು. ಎಲ್ಲವನ್ನೂ ಬಲ್ಲ ಅವನಿಂದ ಸಲ್ಲದ ಯಾವ ಕಾರ್ಯವೂ ನಡೆಯದು ಎಂಬ ಅಂಶ ಇದರಲ್ಲಿದೆ; ಬಲ್ಲಿದ – ಶ್ರೀಮಂತ, ಧನಿಕ, ಜ್ಞಾನಿ, ಶ್ರೇಷ್ಠ

೧. ಮಹಾಭಾರತ (ಉದ್ಯೋಗಪರ್ವ ೯೧/೩೨)

೯. ಶ್ರೀಕೃಷ್ಣನು ಬಗೆಬಗೆಯ ಜನರಿಗೆ ಬಗೆಬಗೆಯಾಗಿ ತೋರುವ ಅಪೂರ್ವ ವಿವರ ಶ್ರೀಮದ್ಭಾಗವತದ ಈ ಕೆಳಗಿನ ಶ್ಲೋಕದಲ್ಲಿ ಬಂದಿದ್ದು ಅದರ ಪ್ರಭಾವವನ್ನು ಈ ಪದ್ಯದಲ್ಲಿ ಗುರುತಿಸಬಹುದು:

ಮಲ್ಲಾನಾಮಶನಿರ್ನೃಣಾಂ ನರವರಃ ಸ್ತ್ರೀಣಾಂ ಸ್ಮರೋ ಮೂರ್ತಿಮಾನ್
ಗೋಪಾನಾಂ ಸ್ವಜನೋಽಸತಾಂ ಕ್ಷಿತಿಭೃತಾಂ ಶಾಸ್ತಾ ಸ್ವಪಿತ್ರೋಃ ಶಿಶುಃ ।
ಮೃತ್ಯುರ್ಭೋಜಪತೇರ್ವಿರಾಡವಿದುಷಾಂ ತತ್ತ್ವಂ ಪರಂ ಯೋಗಿನಾಂ
ವೃಷ್ಣೀನಾಂ ಚ ಗತಿಃ ಸದೈವ ಶುಶುಭೇ ರಂಗೇಽಚ್ಯುತಃ ಸಾಗ್ರಜಃ ॥
- ಭಾಗವತ (೧೦/೪೨/೧೭)

*****

## ೩೪. ಪರಮ ಸಾಹಸಿ ನೀನು ರಕ್ಷಿಸು

ನರಗೆ ಸಾರಥಿಯಾಗಿ ರಣದೊಳು
ತುರಗ ನೀರಡಸಿದರೆ ವಾರಿಯ
ಸರಸಿಯನು ನಿರ್ಮಿಸಿ ಕಿರೀಟಿಯ ಕೈಲಿ ಸೈಂಧವನ ।
ಶಿರವ ಕೆಡಹಿಸಿ ಅವನ ತಂದೆಯ
ಕರತಲಕೆ ನೀಡಿಸಿದೆ ಹರಹರ
ಪರಮ ಸಾಹಸಿ ನೀನು ರಕ್ಷಿಸು ನಮ್ಮನನವರತ ॥ ೩೪ ॥

ಅ: ಅರ್ಜುನನಿಗೆ ಸಾರಥಿಯಾಗಿ ಯುದ್ಧದಲ್ಲಿ ಕುದುರೆಗಳು ಬಾಯಾರಿಕೆಯಿಂದ ಬಳಲಿದಾಗ ಅರ್ಜುನನ ಕೈಯಲ್ಲಿ ನೀರಿನ ಸರೋವರವನ್ನು ನಿರ್ಮಿಸಿ ಅವನಿಂದ ಜಯದ್ರಥನ ತಲೆಯನ್ನು ಕತ್ತರಿಸಿ ಬೀಳಿಸಿ, ಅವನ ತಂದೆಯ ಕೈಯಲ್ಲಿ ಬೀಳುವಂತೆ ಮಾಡಿಸಿದೆ. ಅಬ್ಬಾ! ನೀನು ಪರಮಸಾಹಸಿ; ಶ್ರೀಹರಿಯೇ! ನಮ್ಮನ್ನು ನೀನು ಸದಾ ರಕ್ಷಿಸು.

ವಿ.: ೧, ಅರ್ಜುನನನ್ನು ರಕ್ಷಿಸಿದಂತೆ ನಮ್ಮನ್ನು ರಕ್ಷಿಸು ಎಂಬುದಾಗಿ ಇಲ್ಲಿ ಪ್ರಾರ್ಥಿಸಿರುವರು.

೨. ಶ್ರೀಕೃಷ್ಣನು ಅರ್ಜುನನಿಗೆ ಸಾರಥಿಯಾಗಿ ಕುರುಕ್ಷೇತ್ರಯುದ್ಧದಲ್ಲಿ ಅವನನ್ನು ಪರಿಪರಿಯಾಗಿ ರಕ್ಷಿಸಿದ್ದು ಪ್ರಸಿದ್ಧವಾದ ವಿಷಯ. ಅಂತಹ ಎರಡು ಮುಖ್ಯಪ್ರಸಂಗಗಳನ್ನು ಇದರಲ್ಲಿ ಪ್ರಸ್ತಾಪಿಸಿರುವರು.

೩. ಕುರುಕ್ಷೇತ್ರಯುದ್ಧದ ಹದಿಮೂರನೆಯ ದಿನದ ಸಂಜೆಯ ವೇಳೆಗೆ ಅರ್ಜುನಪುತ್ರನಾದ ಅಭಿಮನ್ಯುವಿನ ವಧೆಯು ದ್ರೋಣಾಚಾರ್ಯರ ನೇತೃತ್ವದ ಕೌರವರಿಂದ ಪದ್ಮವ್ಯೂಹದಲ್ಲಿ ನಡೆಯಿತು. ಅದನ್ನು ತಿಳಿದು ಕೆರಳಿದ ಅರ್ಜುನ ಮಾರನೆಯ ದಿನ ಸೂರ್ಯಾಸ್ತದ ಮುನ್ನ ಜಯದ್ರಥನನ್ನು ಸಂಹರಿಸುವುದಾಗಿ ಘೋರಪ್ರತಿಜ್ಞೆಯನ್ನು ಮಾಡಿದ. ಅಂದು ರಾತ್ರಿ ಸ್ವಪ್ನದಲ್ಲಿ ಶ್ರೀಕೃಷ್ಣ ಅರ್ಜುನನನ್ನು ಕೈಲಾಸಕ್ಕೆ ಕರೆದೊಯ್ದು ಅಲ್ಲಿ ಅವನಿಗೆ ರುದ್ರದೇವರಿಂದ ಪಾಶುಪತಾಸ್ತ್ರವನ್ನು ಮತ್ತೊಮ್ಮೆ ನೀಡಿಸಿದ. ಹದಿನಾಲ್ಕನೆಯ ದಿನದಂದು ಯುದ್ಧ ಪ್ರಾರಂಭವಾದಾಗ, ದ್ರೋಣರು ಜಯದ್ರಥನ ರಕ್ಷಣೆಗೆಂದು ಶಕಟಾಬ್ಜಚಕ್ರ ಎಂಬ ಅತ್ಯಂತ ಅಬೇಧ್ಯವಾದ ವ್ಯೂಹವನ್ನು ರಚಿಸಿ ಯುದ್ಧಕ್ಕೆ ಸಿದ್ಧರಾದರು. ಅದರೊಳಗೆ ಪ್ರವೇಶಿಸಿದ ಅರ್ಜುನನಿಗೆ ಶತ್ರುಗಳೊಂದಿಗೆ ಭಯಂಕರ ಕಾದಾಟ ನಡೆಯಿತು. ಆ ಹಂತದಲ್ಲಿ ಒಮ್ಮೆ ಅರ್ಜುನನ ಕುದುರೆಗಳು ಹಸಿವು ಬಾಯಾರಿಕೆಗಳಿಂದ ಹಾಗೂ ಮೈಮೇಲೆ ಬಿದ್ದಿದ್ದ ಶತ್ರುಗಳ ಬಾಣಗಳ ಹೊಡೆತದಿಂದ ಬಸವಳಿದದ್ದನ್ನು ಗಮನಿಸಿ ಕೃಷ್ಣನನ್ನು ಪ್ರಾರ್ಥಿಸಿಕೊಂಡು, ಅವನ ಆದೇಶದಂತೆ ಆ ಘೋರ ರಣಾಂಗಣದಲ್ಲಿ ತಮ್ಮ ಅಸ್ತ್ರಕೌಶಲದಿಂದ ವಿಶಾಲವಾದ ಸರೋವರವೊಂದನ್ನು ನಿರ್ಮಿಸಿದ. ಶ್ರೀಕೃಷ್ಣ ಆಗ ರಥದಿಂದ ಕೆಳಗಿಳಿದು, ಕುದುರೆಗಳನ್ನು ಬಿಚ್ಚಿ, ಅವುಗಳನ್ನು[೧] ಸರೋವರದಲ್ಲಿ ಮೀಯಿಸಿ ಬಾಣಗಳಿಂದಾದ ಗಾಯಗಳನ್ನು ಕೂಡಲೇ ಸಂಪೂರ್ಣವಾಗಿ ವಾಸಿ ಮಾಡಿ, ಅವಕ್ಕೆ ಯಥೇಚ್ಛವಾಗಿ ಹುಲ್ಲು ನೀರನ್ನು ನೀಡಿ ಅವುಗಳಿಗೆ ಸಂಪೂರ್ಣ ರಕ್ಷಣೆ ನೀಡಿದ. ಆ ಪ್ರಸಂಗದ ಉಲ್ಲೇಖ ಈ ಪದ್ಯದ ಪೂರ್ವಾರ್ಧದಲ್ಲಿ ಬಂದಿದೆ. ಈ ಕಾರ್ಯವನ್ನು ಮಾಡಿದ್ದು ಅರ್ಜುನನಾದರೂ, ಅದಕ್ಕೆ ಸಲಹೆ, ಸೂಚನೆ, ಅನುಗ್ರಹ ಮೊದಲಾದ ಎಲ್ಲವನ್ನೂ ಮಾಡಿದ್ದು ಶ್ರೀಹರಿಯಾದ ಶ್ರೀಕೃಷ್ಣ. ಅಂತಹ ಕೃಷ್ಣನು ಕುರುಕ್ಷೇತ್ರದಂತಹ ಘೋರಸಂಸಾರದಲ್ಲಿ ಇಂದ್ರಿಯಾಶ್ವಗಳ ಬಳಲಿಕೆಯಿಂದ ಬೇಸತ್ತಿರುವ ನಮಗೆ ರಕ್ಷಣೆ ನೀಡಲಿ ಎಂಬುದು ಇಲ್ಲಿಯ ಆಶಯ.

೪. ಇದರ ಉತ್ತರಾರ್ಧದಲ್ಲಿ ಜಯದ್ರಥನ ವಧೆಯ ವಿವರ ಬಂದಿದೆ. ಸೂರ್ಯಾಸ್ತ ಸಮೀಪಿಸುತ್ತಿದ್ದರೂ, ಜಯದ್ರಥನನ್ನು ಕೊಲ್ಲುವುದಿರಲಿ ಅವನನ್ನು ಹುಡುಕಲೂ ಸಹ ಅರ್ಜುನನಿಗೆ ಸಾಧ್ಯವಾಗಿರಲಿಲ್ಲ. ಆಗ ಶ್ರೀಕೃಷ್ಣ ಗಾಢಾಂಧಕಾರವನ್ನು ಕವಿಸಿ, ಸೂರ್ಯ

೧. ಅರ್ಜುನ ಹಾಗೆ ನಿರ್ಮಿಸಿದ ಆ ಕೊಳವನ್ನು ಇಂದೂ ಕುರುಕ್ಷೇತ್ರದಲ್ಲಿ ಕಾಣಬಹುದು. ತುಂಬಾ ವಿಶಾಲವೂ ಆಳವೂ ಆಗಿರುವ ಈ ಸರೋವರ ಅರ್ಜುನನ ಮಹಾಪರಾಕ್ರಮಕ್ಕೆ ಸಂಕೇತದಂತಿದೆ. ಅದನ್ನು ಕಂಡ ಋಷಿಮುನಿಗಳು ಕೂಡಲೇ ಅಲ್ಲಿಗೆ ಧಾವಿಸಿ, ಅದರಲ್ಲಿ ಮಿಂದು ಜಪಕ್ಕೆ ತೊಡಗಿದರೆಂಬ ರೋಚಕ ವಿವರವೂ ಸಹ ಮಹಾಭಾರತದಲ್ಲಿ ಬಂದಿದೆ. ಕುರುಕ್ಷೇತ್ರದಂತಹ ವಿಶ್ವದಾಖಲೆಯ ರಣರಂಗದಲ್ಲಿ ಕ್ಷಣಮಾತ್ರದಲ್ಲಿ ವಿಶಾಲ ಕೊಳವನ್ನು ತನ್ನ ಅಸ್ತ್ರಸಾಮರ್ಥ್ಯದಿಂದ ನಿರ್ಮಿಸಿದ ಅರ್ಜುನ ಅಸಾಮಾನ್ಯ ಬಿಲ್ಗಾರ ಎಂಬುದಕ್ಕೆ ಉತ್ತಮ ನಿದರ್ಶನ. ಇದೆಲ್ಲಾ ಅವನಿಗೆ ಸಾಧ್ಯವಾದದ್ದು ಶ್ರೀಕೃಷ್ಣನ ಅಪೂರ್ವ ಸಾರಥ್ಯದಿಂದಾಗಿ. ಭಗವಂತ ಒಲಿದವರ ಹಿರಿಮೆ ಎಷ್ಟು ಅಪಾರ ಎಂಬುದಕ್ಕೂ ಇದು ನಿದರ್ಶನ.

ಮುಳುಗಿದನೆಂಬ ಭ್ರಮೆಯನ್ನು ಕೌರವರಿಗೆ ಹುಟ್ಟಿಸಿದ. ಸಂಭ್ರಮಿಸಿದ ಕೌರವರೊಂದಿಗೆ ಜಯದ್ರಥನೂ ಸಹ ಅರ್ಜುನನ ಅಗ್ನಿಪ್ರವೇಶದ ಕಾರ್ಯವನ್ನು ಕಣ್ಣಾರೆ ಕಾಣಲೆಂದು ಅಲ್ಲಿಗೆ ಧಾವಿಸಿದ. ಕೂಡಲೇ ಶ್ರೀಕೃಷ್ಣ ಅವನ ತಲೆಯನ್ನು ಕತ್ತರಿಸುವಂತೆ ಆದೇಶ ನೀಡಿದ. ಅರ್ಜುನ ಹಾಗೆಯೇ ಮಾಡಿ ತನ್ನ ಪ್ರತಿಜ್ಞೆಯನ್ನು ಪೂರೈಸಿಕೊಂಡ. ಈ ಕಾರ್ಯದ ಸಾಧನೆ ಅರ್ಜುನನಿಗೆ ಸಾಧ್ಯವಾದದ್ದು ಸಂಪೂರ್ಣವಾಗಿ ಶ್ರೀಕೃಷ್ಣನ ಪರಮಾನುಗ್ರಹದ ಫಲ ಎಂಬುದು ಈ ಪ್ರಸಂಗದಲ್ಲಿನ ಮುಖ್ಯಾಂಶ.

೫. ಜಯದ್ರಥನ ತಲೆಯನ್ನು ಕತ್ತರಿಸಿದ ಬಳಿಕ ಶ್ರೀಕೃಷ್ಣ ಅರ್ಜುನನಿಗೆ ವಿಷಯವೊಂದನ್ನು ತಿಳಿಸಿದ. ಜಯದ್ರಥನಿಗೆ ಅವನ ತಂದೆ ವೃದ್ಧಕ್ಷತ್ರನಿಂದ ಅವನ ತಲೆಯನ್ನು ಕೆಳಗೆ ಬೀಳಿಸುವವರ ತಲೆಯು ಸಾವಿರ ಹೋಳಾಗಲಿ ಎಂಬ ವರವಿತ್ತು. ಆದ್ದರಿಂದ ಅವನ ತಲೆಯನ್ನು ಕೆಳಗೆ ಬೀಳಿಸದೆ, ಅವನ ತಂದೆ ಕೈಯಲ್ಲಿ ಬೀಳುವಂತೆ ಮಾಡಲು ಅರ್ಜುನನಿಗೆ ಆದೇಶ ನೀಡಿದ. ಅರ್ಜುನ ಕೂಡಲೇ ಅಸ್ತ್ರವೊಂದನ್ನು ಅಭಿಮಂತ್ರಿಸಿ, ಅದು ಜಯದ್ರಥನ ತಲೆಯನ್ನು ಅವನ ತಂದೆಯ ಕೈಯಲ್ಲಿ ಬೀಳಿಸುವಂತೆ ಪ್ರಯೋಗಿಸಿದ. ದೂರದ ಪ್ರದೇಶದಲ್ಲಿ ಸಂಧ್ಯಾವಂದನೆಯ ಕಾರ್ಯದಲ್ಲಿ ತೊಡಗಿ, ಅರ್ಘ್ಯ ನೀಡಲೆಂದು ಕೈಯಲ್ಲಿ ನೀರು ಹಿಡಿದಿದ್ದ ವೃದ್ಧ ಕ್ಷತ್ರನ ಕೈಯಲ್ಲಿ ಜಯದ್ರಥನ ಶಿರಸ್ಸು ಬಿತ್ತು. ಚಕಿತನಾದ ಅವನು ಕೂಡಲೇ ಅದನ್ನು ನೆಲಕ್ಕೆಸೆದ. ಆ ಕ್ಷಣದಲ್ಲಿ ಅವನ ತಲೆ ಸಾವಿರ ಹೋಳಾಗಿ ಸಿಡಿದು ಅವನು ನಾಶವಾದನು. ಹೀಗೆ ಅವನು ನೀಡಿದ್ದ ವರ ಅವನಿಗೇ ಶಾಪವಾಗುವಂತೆ ಮಾಡಿ ಸಂಹಾರ ಮಾಡಿಸಿದ್ದು ಶ್ರೀಕೃಷ್ಣನ ಅತ್ಯಪೂರ್ವವಾದ ಮಹಿಮೆ. ಇದರ ಬಗ್ಗೆ ಪರಿಜ್ಞಾನವೂ ಇಲ್ಲದ ಅರ್ಜುನನಿಗೆ ಎಲ್ಲರೀತಿಯಲ್ಲೂ ಸಹ ತಿಳಿವು ನೀಡಿ ಅನುಗ್ರಹಿಸಿದ ಶ್ರೀಕೃಷ್ಣನ ಕಾರುಣ್ಯ ಊಹಾತೀತವಾದುದು. ಅವನು ಸಾಕ್ಷಾತ್ ಶ್ರೀಹರಿ ಎಂಬುದಕ್ಕೆ ಇದು ಅತ್ಯುತ್ತಮವಾದ ನಿದರ್ಶನ. ಈ ಹಿನ್ನೆಲೆಯಲ್ಲಿ ನಮಗೂ ಸಹ ಎಲ್ಲ ವಿಧವಾದ ಅರಿವನ್ನು ನೀಡಿ ದುಷ್ಟರಿಂದ ಸಂಪೂರ್ಣ ರಕ್ಷಣೆಯನ್ನು ಒದಗಿಸಿ ಸಂರಕ್ಷಿಸಬೇಕು ಎಂಬುದು ಇಲ್ಲಿಯ ಭಾವ[೧].

೬. ಇಲ್ಲಿ 'ನರಗೆ ಸಾರಥಿಯಾಗಿ' ಎಂದರೆ ಅರ್ಜುನನಿಗೆ ಸಾರಥಿಯಾಗಿ ಎಂದರ್ಥ. ನರ ಎಂಬುದಕ್ಕೆ ಶೇಷ ಎಂಬುದು ಮುಖ್ಯಾರ್ಥ. ನರ-ನಾರಾಯಣರಲ್ಲಿ ನರನು ಶೇಷ; ನಾರಾಯಣನು ಶ್ರೀಹರಿ ಎಂಬ ವಿಶೇಷ ವಿವರ ಶ್ರೀಮದಾಚಾರ್ಯರ ಭಾಗವತ-ತಾತ್ಪರ್ಯದಲ್ಲಿ ಬಂದಿದೆ. ಆದರೆ, ಅರ್ಜುನ ಇಂದ್ರಾವತಾರನೇ ಹೊರತು ಶೇಷಾ-ವತಾರನಲ್ಲ. ಅವನಲ್ಲಿ ನರಾವೇಶವಿದ್ದುದರಿಂದ ವಿಶೇಷಪ್ರಸಂಗಗಳಲ್ಲಿ ಅರ್ಜುನನನ್ನು ನರ ಎಂದು ವ್ಯವಹರಿಸಲಾಗಿದೆ. ವಸ್ತುಸ್ಥಿತಿಯಂತೆ ಅವನು ಮುಖ್ಯವಾಗಿ ಇಂದ್ರನೇ. ಅರ್ಜುನನಿಗೆ ಶ್ರೀಕೃಷ್ಣ ಹಾಗೆ ವಿಶೇಷಾನುಗ್ರಹವನ್ನು ಮಾಡಲು ಅವನಲ್ಲಿದ್ದ ನರಾವೇಶ ಕಾರಣ ಎಂಬುದನ್ನು ಸೂಚಿಸಲು ದಾಸರು ಹೀಗೆ ತಿಳಿಸಿರುವರು ಎಂದು ತಿಳಿಯಬೇಕು.

---

೧. ಸ ಹಿ ಜ್ಞಾನೀ ನರಾಂಶ ಇಂದ್ರಶ್ಚ — ಗೀತಾಭಾಷ್ಯ (೭/೪೭)

೭. ತುರಗ ಎಂದರೆ ಕುದುರೆ ಎಂದರ್ಥ; ತುರ ಎಂದರೆ ವೇಗ; ವೇಗವಾಗಿ ಸಂಚರಿಸು-ವುದರಿಂದ ಕುದುರೆಗಳಿಗೆ ಆ ಹೆಸರು. ಅರ್ಜುನನ ಕುದುರೆಗಳು ಮೂಲತಃ ಅವಧ್ಯವಾಗಿದ್ದಂತಹ ಹಿರಿಮೆಯನ್ನು ಹೊಂದಿದ್ದವು. ಅವುಗಳು ಅಚ್ಚಬಿಳಿಯ ಬಣ್ಣದವು ಎಂಬುದು ವಿಶೇಷ. ಇದರಿಂದಾಗಿ ಅರ್ಜುನನಿಗೆ ಶ್ವೇತವಾಹನ ಎಂಬ ಹೆಸರೂ ಇದ್ದಿತು. ಅರ್ಜುನನ ಪ್ರಸಿದ್ಧ ದಶನಾಮಗಳಲ್ಲಿ ಇದೂ ಒಂದು[೧].

೮. **ವಾರಿಯ ಸರಸಿ** – ವಾರಿ ಎಂದರೆ ನೀರು; ಸರಸ್ ಎಂದರೆ ಸರೋವರ; ಸಾಮಾನ್ಯವಾಗಿ ಸರೋವರ ಎಂದರೆ ನೀರಿನ ಸರೋವರ ಎಂದೇ ಅರ್ಥ. ಆದರೆ, ಆ ರಣರಂಗದಲ್ಲಿ ಅಲ್ಲಿ ನಡೆದ ಘೋರಯುದ್ಧದಿಂದಾಗಿ ರಕ್ತದ ಸರೋವರಗಳು, ನದಿಗಳು ಹರಿಯುತ್ತಿದ್ದ ವಿವರ ಮಹಾಭಾರತದಲ್ಲಿ ನಿರೂಪಿತವಾಗಿದೆ. ಆದ್ದರಿಂದ, ಸರಸ್ ಎಂದು ಮಾತ್ರ ಕರೆಯದೆ, ವಾರಿಯ ಸರಸ್ ಎಂದು ಕರೆದಿರುವರು ಎಂದು ತಿಳಿಯಬಹುದು. ಹೀಗೆ ಕರೆಯುವ ಮೂಲಕ ಅಂತಹ ರಕ್ತಮಯ ವಾತಾವರಣದಲ್ಲೂ ಪರಿಶುದ್ಧವಾದ ನೀರಿನ ಸರೋವರವನ್ನು ನಿರ್ಮಿಸಿದ ಆ ಪ್ರಸಂಗದ ಹಿರಿಮೆ ನಿರೂಪಿತವಾಗಿದೆ ಎಂಬುದು ವಿಶೇಷ. ಇದರಿಂದ ಶ್ರೀಕನಕದಾಸರು ಅಲ್ಲಿನ ಪರಿಸರದ ಬಗೆಗಿನ ಸೂಕ್ಷ್ಮತೆಯನ್ನು ನಿರೂಪಿಸಿರುವ ವೈಖರಿ ಅರ್ಥವಾಗುವುದು.

೯. **ಕಿರೀಟಿ**: ಎಂದರೆ ಕಿರೀಟ ಧರಿಸಿದವನು ಎಂದರ್ಥ. ಕಿರೀಟ ಧರಿಸಿದವರೆಲ್ಲಾ ಕಿರೀಟಿಗಳೇ, ಆದರೂ, ಬೇರಾರಿಗೂ ಬರದ ಕಿರೀಟಿ ಎಂಬ ವಿಶೇಷವಾದ ಹೆಸರು ಅರ್ಜುನನಿಗೆ ಇರಲು ಕಾರಣವಿದೆ. ವನಪರ್ವದಲ್ಲಿ ಕಿರಾತಾರ್ಜುನೀಯಪ್ರಸಂಗದ ಬಳಿಕ ಅರ್ಜುನನನ್ನು ಇಂದ್ರನಿಂದ ಆಹೂತನಾಗಿ ಇಂದ್ರಲೋಕಕ್ಕೆ ತೆರಳಿ ಅಲ್ಲಿ ಕೆಲವು ವರ್ಷಗಳ ಕಾಲ ನೆಲೆಸಿ, ಅಪೂರ್ವಶಸ್ತ್ರಾಸ್ತ್ರಗಳನ್ನು ಪಡೆದುಕೊಂಡ. ಅಲ್ಲಿಂದ ಭೂಲೋಕಕ್ಕೆ ಮರಳುವ ಮುನ್ನ ತನ್ನ ಪರಮವೈರಿಗಳಾದ ನಿವಾತಕವಚ ಕಾಲಕೇಯರನ್ನು ಸಂಹರಿಸಲು ಇಂದ್ರ ಅರ್ಜುನನ್ನು ಕೇಳಿಕೊಂಡ. ಸಂತೋಷದಿಂದ ಆ ಕಾರ್ಯಕ್ಕೆ ಒಪ್ಪಿಕೊಂಡ ಅರ್ಜುನನಿಗೆ ಇಂದ್ರ ತನ್ನ ಕಿರೀಟವನ್ನು ತೊಡಿಸಿ ಕಳುಹಿಸಿಕೊಟ್ಟ. ಹೀಗೆ ಇಂದ್ರನ ಕಿರೀಟವನ್ನು ವಿಶೇಷಕಾರಣಕ್ಕಾಗಿ ಪಡೆದ ಅರ್ಜುನನಿಗೆ ಅಂದಿನಿಂದ '**ಕಿರೀಟಿ**' ಎಂಬ ಮತ್ತೊಂದು ಹೆಸರು ಉಂಟಾಯಿತು. ಇದೂ ಸಹ ಅರ್ಜುನನ ಪ್ರಸಿದ್ಧ ದಶನಾಮಗಳಲ್ಲಿ ಒಂದು.

೧೦. '**ವಾರಿಯ ಸರಸಿಯನು ನಿರ್ಮಿಸಿ**': ಎಂಬ ಇಲ್ಲಿಯ ಪದ ಅತ್ಯಂತ ಅರ್ಥಪೂರ್ಣ-ವಾದುದು. ಸರಸಿ ಎಂದರೆ ವಾರಿಯದೇ ಆಗಿರುವುದು ಸಹಜ. ಎಂದಮೇಲೆ ವಾರಿಯ ಸರಸಿ ಎನ್ನುವುದು ಪುನರುಕ್ತಿಯಂತೆ ತೋರುವುದು. ಆದರೆ ವಿಷಯ ಹಾಗಲ್ಲ, ಅದು ರಣರಂಗ. ಕುರುಕ್ಷೇತ್ರದಂತಹ ವಿಶ್ವದಾಖಲೆಯ ಅತ್ಯದ್ಭುತವಾದ ರಣಭೂಮಿ ಅದಾಗಿತ್ತು. ಅದರಲ್ಲಿ ರಕ್ತದ ನದಿಗಳೇ ಹರಿಯುತ್ತಿದ್ದವು. ಅಂತಹ ಸ್ಥಳದಲ್ಲೂ ಸಹ ಶುದ್ಧ ನೀರಿನ ಸರೋರವನ್ನು ಅರ್ಜುನನ

---

೧. ಅರ್ಜುನಃ ಫಲ್ಗುನಃ ಕೃಷ್ಣಃ ಕಿರೀಟೀ ಶ್ವೇತವಾಹನಃ।
ಭೀಭತ್ಸುರ್ವಿಜಯಃ ಪಾರ್ಥಃ ಸವ್ಯಸಾಚೀ ಧನಂಜಯಃ॥ –ಮಹಾಭಾರತ/ವಿರಾಟಪರ್ವ/೪೩/೨೧

ಕೈಯಿಂದ ನಿರ್ಮಿಸಿದ್ದು ಶ್ರೀಕೃಷ್ಣನ ಅಪಾರ ಮಹಿಮೆಯಾಗಿತ್ತು ಎಂಬ ವಿಶೇಷಾಂಶವನ್ನು 'ವಾರಿಯ ಸರಸಿ' ಎಂಬ ಪದದ ಮೂಲಕ ತಿಳಿಸಿರುವರು. ಸಮುದ್ರತೀರದಲ್ಲಿ ಸಿಹಿನೀರಿನ ಬಾವಿ ನಿರ್ಮಿಸುವ ಹಿರಿಮೆ ಹೇಗೋ ಹಾಗೆ. ಇದು ಶ್ರೀಕನಕದಾಸರ ಅಪೂರ್ವ ಕೌಶಲಕ್ಕೆ ನಿದರ್ಶನ.

೧೧. **ಸೈಂಧವ** ಎಂದರೆ ಸಿಂಧುದೇಶದವನು ಎಂದರ್ಥ. ಸಿಂಧುದೇಶದವನಾದ್ದರಿಂದ ಜಯದ್ರಥನಿಗೆ ಆ ಹೆಸರು. ನೂರು ಕೌರವರ ತಂಗಿಯಾದ ದುಃಶಲೆಯ ಪತಿ ಇವನು. ಸ್ವರೂಪದಲ್ಲಿ ಇವನು ಕಾಲಕೇಯಗಣದ ಒಬ್ಬ ದಾನವ. ಶಿವನ ವರದಿಂದಾಗಿ ಪದ್ಮವ್ಯೂಹದ ಮುಂದೆ ನಿಂತು ಅಭಿಮನ್ಯುವಿನ ಸಾವಿಗೆ ಕಾರಣನಾದ; ಅದರಿಂದಾಗಿ ಅರ್ಜುನನಿಂದ ಹತನಾದ.

೧೨. ಹರಹರ ಎಂದರೆ ಮೇಲ್ನೋಟಕ್ಕೆ ಶಿವಶಿವ ಎಂದರ್ಥ. ಹರ ಹಾಗೂ ಶಿವ ಎಂಬವು ರುದ್ರದೇವರ ಹೆಸರುಗಳು. ಹೀಗೆ ಹರಹರ ಹಾಗೂ ಶಿವಶಿವ ಎಂಬ ಪದಗಳನ್ನು ಶ್ರೀಕನಕದಾಸರು ತಮ್ಮ ಕೃತಿಗಳಲ್ಲಿ ಅಲ್ಲಲ್ಲಿ ಪ್ರಯೋಗಿಸಿರುವರು. ಇವು ಉದ್ಗಾರಸೂಚಕ ಪದಗಳು. ಈ ಪದಗಳ ಮುಖ್ಯಭಾವ 'ಅಯ್ಯೋ' ಎಂಬುದು. ಈ ರೀತಿಯಾದ ಬಳಕೆ ಕನ್ನಡ ಸಾಹಿತ್ಯದಲ್ಲಿ ಹೊಸತೇನಲ್ಲ. ಇದನ್ನು ಅರಿಯದ ಕೆಲವು ವಿಮರ್ಶಕರು ಕನಕದಾಸರು ಈ ರೀತಿಯಾಗಿ ಶಿವಶಿವ ಹರಹರ ಎಂದು ಉಪಯೋಗಿಸಿರುವುದರಿಂದ ಅವರು ಶೈವರು ಎಂದು ವಾದಿಸುವರು. ಈ ಹಿಂದೆ (ಪದ್ಯ ೧೨ರ ವಿವರಣೆ) ಹೇಳಿದಂತೆ ಇದರ ಔಚಿತ್ಯವನ್ನು ತಿಳಿಯಬೇಕು.

*****

## ೩೫. ನಿನ್ನಾಯವನು ಬಲ್ಲವರುಂಟೆ ರಕ್ಷಿಸು

**ಬವರದಲಿ ಖತಿಗೊಂಡು ಗದೆಯೊಳು**
**ಕವಿದು ನಿನ್ನ ಶ್ರುತಾಯುಧನು ಹೊ-**
**ಕ್ಕವಘಡಿಸಿ ಹೊಯ್ದಾಡಿ ತನ್ನಾಯುಧದಿ ತಾ ಮಡಿದ ।**
**ವಿವರವೇನೋ ತಿಳಿಯೆ ನಿಮ್ಮಾ-**
**ಯವನು ನೀನೇ ಬಲ್ಲೆ ನಿನ್ನಾ-**
**ಯವನು ಬಲ್ಲವರುಂಟೆ ರಕ್ಷಿಸು ನಮ್ಮನನವರತ ॥ ೩೫ ॥**

ಅ: ಯುದ್ಧದಲ್ಲಿ ನೊಂದು ಗದೆಯಿಂದ ಆಕ್ರಮಿಸಿ, ನಿನ್ನನ್ನು ಶ್ರುತಾಯುಧನು ನುಗ್ಗಿ ಹೊಡೆಯಲೆಂದು ಧಾವಿಸಿಬಂದು ತನ್ನ ಆಯುಧದಿಂದ ತಾನೇ ಸತ್ತನು. ಇದರ ಹಿನ್ನೆಲೆ ಏನೋ ನನಗೆ ತಿಳಿಯದು. ನಿನ್ನ ಮಾಯೆಯನ್ನು ನೀನೇ ಬಲ್ಲೆ. ಅದರಿಂದ ನಿನಗಾಗುವ

**ಪ್ರಯೋಜನವನ್ನು ತಿಳಿದವರು ಇರುವರೆ? ಶ್ರೀಹರಿಯೇ! ನೀನು ನಮ್ಮನ್ನು ಸದಾ ರಕ್ಷಿಸು.**

ವಿ.: ೧. ಶ್ರೀಹರಿಯ ವಿಶಿಷ್ಟ ಸಂಹಾರ ಸಾಮರ್ಥ್ಯದ ವಿವರಣೆ ಇದರಲ್ಲಿ ಬಂದಿದೆ.

೨. ಈ ಶ್ರುತಾಯುಧನ ಮರಣಪ್ರಸಂಗ ಮಹಾಭಾರತದ ದ್ರೋಣಪರ್ವದಲ್ಲಿ ಬಂದಿದೆ. ದ್ರೋಣರ ಸೇನಾಪತ್ಯದ ನಾಲ್ಕನೆಯ ದಿವಸ ಎಂದರೆ ಕುರುಪಾಂಡವರ ಯುದ್ಧದ ಹದಿನಾಲ್ಕನೆಯ ದಿವಸ ನಡೆದ ಪ್ರಸಂಗ ಇದಾಗಿದೆ.

೩. ಶ್ರುತಾಯುಧನು ವರುಣನಿಂದ ಪರ್ಣಾಶಾ[೧] ಎಂಬ ನದಿಯಲ್ಲಿ ಜನಿಸಿದ ಪುತ್ರ. ಅವನಿಗೆ ವರುಣ ಅಮೋಘವಾದ ಗದೆಯೊಂದನ್ನು ನೀಡಿ, ಅದನ್ನು ಯುದ್ಧಮಾಡದವರ ಮೇಲೆ ಪ್ರಯೋಗಿಸಿದಲ್ಲಿ ಅದು ಅವನಿಗೇ ಮಾರಕವಾಗುವುದು ಎಂಬ ಎಚ್ಚರಿಕೆಯನ್ನೂ ನೀಡಿದ್ದ. ಅರ್ಜುನನು ಸೈಂಧವನ ಸಂಹಾರಕ್ಕೆಂದು ಘೋರ ಪ್ರತಿಜ್ಞೆ ಮಾಡಿ ದ್ರೋಣರಿಂದ ನಿರ್ಮಿತವಾಗಿದ್ದ ಶಕಟಾಬ್ಜ ಚಕ್ರ ಎಂಬ ವ್ಯೂಹದೊಳಗೆ ನುಗ್ಗಿದಾಗ ಅವನನ್ನು ಎದುರಿಸಿ ಬಂದ ಕೌರವಪಕ್ಷದ ಪ್ರಧಾನವೀರರಲ್ಲಿ ಈ ಶ್ರುತಾಯುಧನೂ ಒಬ್ಬನು. ಅರ್ಜುನನಿಂದ ತನ್ನ ಸಾರಥಿ, ರಥ, ಮೊದಲಾದವುಗಳನ್ನು ಕಳೆದುಕೊಂಡ ಅವನು ಕೋಪದಿಂದ ಗದೆಯನ್ನು ಕೈಯಲ್ಲಿ ಹಿಡಿದುಕೊಂಡು ಅರ್ಜುನನ ರಥವನ್ನೇರಿ ಶ್ರೀಕೃಷ್ಣನ ತಲೆಯ ಮೇಲೆ ಅದನ್ನು ಅಪ್ಪಳಿಸಿದ. ಕೂಡಲೇ ವರುಣ ನೀಡಿದ ಮಾತು ಸತ್ಯವಾಗಿ, ಅದು ಅವನನ್ನೇ ಅಪ್ಪಳಿಸಿ ಕೊಂದುಹಾಕಿತು[೨]. ಹೀಗೆ ವರವೇ ಶಾಪವಾದ ವಿಚಿತ್ರಪ್ರಸಂಗಗಳಲ್ಲಿ ಇದೂ ಒಂದಾಯಿತು.

೪. ಶ್ರುತಾಯುಧನು ವರುಣನು ತಿಳಿಸಿದ ಎಚ್ಚರಿಕೆಯನ್ನು ಮರೆತು ಹಾಗೆ ಆತ್ಮಘಾತಕವಾಗಿ ನಡೆದುಕೊಂಡದ್ದು ಶ್ರೀಹರಿಯ ಮಾಯೆಯೇ ಎಂಬುದು ಇಲ್ಲಿಯ ಮುಖ್ಯವಾದ ಅಂಶ. ಇದರಿಂದ ತನಗಾಗುವ ಅನರ್ಥವನ್ನು ಸಹ ಗಮನಿಸದೆ, ಅವನು ಹಾಗೆ ಮಡಿದದ್ದು

---

೧. ಪರ್ಣಾಶಾ ಜನನೀ ಯಸ್ಯ ಶೀತತೋಯಾ ಮಹಾನದಿ – ಮಹಾಭಾರತ (ದ್ರೋ. ಪ. ೯೨/೪೫)

೨. ಶ್ರುತಾಯುಧಂ ನದೀಜಾತಂ ವರುಣಾದಾಸಸಾದ ಹ।
ಯಸ್ಮಾದಾದ್ವರುಣೋ ದಿವ್ಯಾಮಮೋಘಾಂ ಮಹತೀಂ ಗದಾಮ್ ॥
ಸ ತು ತೇನ ಶರೈಸ್ತೀಕ್ಷ್ಣೈರರ್ಜಿತೋ ವಿರಥಂ ಕ್ಷಣಾತ್ ।
ಚಕಾರ ಪಾರ್ಥಸ್ಯ ರಥಮಾರುಹ್ಯಾರಿಧರಾಯ ತಾಮ್ ॥
ಗದಾಂ ಚಿಕ್ಷೇಪ ಸಾ ತಸ್ಯ ವಾರುಣೇಃ ಶಿರ ಏವ ತು ।
ಬಿಭೇದ ಶತಧಾ ಶೀರ್ಣಮಸ್ತಿಷ್ಕಃ ಸೋಽಪತದ್ಭುವಿ ॥
ಅಯುಧ್ಯಂತಂ ಸ್ವಗದಯಾ ಯದಿ ತಾಡಯಸಿ ಸ್ವಯಮ್ ।
ತಯಾ ವಿಶೀರ್ಣಮಸ್ತಿಷ್ಕೋ ಮರಿಷ್ಯಸಿ ನ ಸಂಶಯಃ ।
ಅಮೋಘಾ ಚಾನ್ಯಥಾ ಸೇಯಂ ಗದಾ ತವ ಭವಿಷ್ಯತಿ ॥
ಇತ್ಯಬ್ರವೀತ್ ತಂ ವರುಣಃ ಪುರಾ ತೇನ ಸ ಕೇಶವೇ ।
ಅಯುಧ್ಯತಿ ಗದಾಕ್ಷೇಪಾತ್ ತಯಾ ಶೀರ್ಣಶಿರಾ ಅಭೂತ್ ॥ – ಮ.ಭಾ.ತಾ.ನಿ. (೨೬/೬೨-೬೬)

ಶ್ರೀಹರಿಯ ಮಾಯಾಶಕ್ತಿ ಎಂಬುದು ಮಹಾಭಾರತತಾತ್ಪರ್ಯನಿರ್ಣಯದ ವಿವರಗಳಿಂದ ತಿಳಿಯುವುದು.

೫. ಈ ಮೂಲಕವಾಗಿ ಶ್ರೀಕೃಷ್ಣ ಎಂತಹ ಅಪೂರ್ವ ಆಯುಧಗಳು ಸಹ ದುಷ್ಟರ ಪಕ್ಷಕ್ಕೆ ಸೇರಿ ಸಜ್ಜನರ ವಿರುದ್ಧವಾಗಿ ನಿಂತಾಗ ಆತ್ಮಘಾತಕವಾಗುವವು ಎಂಬ ತತ್ತ್ವವು ಸೂಚಿತವಾಗುವುದು. ದುರ್ಯೋಧನನ ಪಕ್ಷದ ಹೆಚ್ಚಿನ ಮಹಾವೀರರುಗಳು ಈ ರೀತಿಯ ವರ, ಆಯುಧ ಮೊದಲಾದ ಹಿರಿಮೆಗಳನ್ನು ಹೊಂದಿದ್ದರೂ ಸಹ ಅವುಗಳಿಂದ ಸೂಕ್ತಪ್ರಯೋಜನವನ್ನು ಪಡೆಯಲಾಗದೆ, ನಾಶಹೊಂದಿದ ಇಂತಹ ಎಲ್ಲ ಘಟನೆಗಳಿಗೂ ಸಹ ಅನ್ವಯಿಸುವ ಮಾತು ಇದಾಗಿದೆ ಎಂದು ತಿಳಿಯಬೇಕು.

೬. ಶ್ರೀಕೃಷ್ಣನಿಗೆ ಯಾವುದೇ ರೀತಿಯಲ್ಲೂ ಸಹ ಅಪಾಯವನ್ನು ಮಾಡುವ ಶಕ್ತಿ ಆ ಗದೆಗಿರಲಿ, ಅದನ್ನು ನೀಡಿದ ವರುಣನಿಗೂ ಸಹ ಸರ್ವಥಾ ಇಲ್ಲ ಎಂಬುದು ಮುಖ್ಯವಾದ ಅಂಶ. ಆದರೂ ಶ್ರೀಕೃಷ್ಣ ಹಾಗೆ ಮಾಡುವ ಮೂಲಕ ವರುಣನ ವರವನ್ನು ಸತ್ಯಮಾಡಿ, ಅವನಿಗೆ ಅನುಗ್ರಹವನ್ನು ಸಹ ಮಾಡಿದ ಎಂದು ತಿಳಿಯಬೇಕು.

೭. ಜರಾಸಂಧ ಪ್ರಯೋಗಿಸಿದ ಶಿವದತ್ತವಾಗಿದ್ದ ಗದೆಯು ಸಹ ಅವನ ತಾಯಿಯನ್ನೇ ಸಂಹರಿಸಿ, ಕೈಲಾಸಕ್ಕೆ ಮರಳಿದ ಮಹಾಭಾರತ ಹಾಗೂ ಅದರ ತಾತ್ಪರ್ಯನಿರ್ಣಯದ ಮತ್ತೊಂದು ವಿವರವೂ ಸಹ ಇದೇ ಬಗೆಯದು ಎಂಬುದು ಗಮನಿಸಬೇಕಾದ ಅಂಶ.

೮. ಬವರ ಎಂದರೆ ಯುದ್ಧ; ಖತಿ ಎಂದರೆ ಖೇದ, ದುಃಖ, ನೋವು ಎಂದರ್ಥ; ಶ್ರುತಾಯುಧ ಎಂಬುದಕ್ಕೆ ವಿಖ್ಯಾತಿ ಪಡೆದಿದ್ದ ಆಯುಧವನ್ನು ಹೊಂದಿದವನು ಎಂಬ ಅರ್ಥದಲ್ಲಿ ಅವನಿಗೆ ಸಾರ್ಥಕವಾಗಿದ್ದ ಪದ.

೯. ನಿಮ್ಮಾಯವನು ಎಂಬುದನ್ನು ನಿಮ್ಮ ಮಾಯವನ್ನು ಎಂಬುದಾಗಿ ವಿಭಾಗಮಾಡಿ ಓದಿಕೊಳ್ಳಬೇಕು. ನಿನ್ನಾಯವ ಎಂಬುದನ್ನು ನಿನ್ನ ಆಯ ಎಂಬುದಾಗಿ ಬಿಡಿಸಿಕೊಳ್ಳಬೇಕು. ಆಯ ಎಂಬುದಕ್ಕೆ ಲಾಭ, ಪ್ರಯೋಜನ ಎಂದು ಅರ್ಥ. ಶ್ರೀಹರಿಗೆ ಯಾವುದರಿಂದಲೂ ಸಹ ಯಾವ ಕಾಲಕ್ಕೂ ಯಾವುದೇ ರೀತಿಯಲ್ಲೂ ಪ್ರಯೋಜನ ಎಷ್ಟುಮಾತ್ರಕ್ಕೂ ಆಗುವುದಿಲ್ಲ ಎಂಬುದು ಶಾಸ್ತ್ರಸಿದ್ಧವಾದ ಮಹಾಪ್ರಮೇಯಗಳಲ್ಲೊಂದು. **ನ ಪ್ರಯೋಜನವತ್ವಾತ್**-(ಬ್ರಹ್ಮಸೂತ್ರ); **ಈಶ್ವರಪ್ರವೃತ್ತೇಃ ಸರ್ವತ್ರ ಸ್ವಪ್ರಯೋಜನಹೀನತ್ವಾತ್** - (ವಿಷ್ಣುತತ್ತ್ವವಿನಿರ್ಣಯ ಟೀಕಾ). ಆದ್ದರಿಂದ ಈ ರೀತಿಯ ಕಾರ್ಯದಿಂದ ಆಗಬೇಕಾದ ಪ್ರಯೋಜನ ಯಾವುದೂ ಇಲ್ಲ. ಆದರೂ ಸಹ ಈ ರೀತಿ ಅವನು ಮಾಡುವುದು ಮೇಲೆ ಹೇಳಿದಂತೆ ಅಸುರರನ್ನು ನಿಗ್ರಹಿಸುವ ಬಗೆಬಗೆಯ ಸಾಮರ್ಥ್ಯವನ್ನು ನಿರೂಪಿಸಿಕೊಡಲು ಮಾತ್ರ.

೧೦. ಬೇರೆ ರೀತಿಯಲ್ಲಿ ಈ ಕಾರ್ಯವನ್ನು ಅವನು ಮಾಡಲು ಸಮರ್ಥನಾದರೂ, ಹಾಗೆ ಮಾಡದೆ, ಇದೇ ತೆರನಾಗಿ ಮಾಡುವಲ್ಲಿ ಯಾವ ಪ್ರಯೋಜನವೂ ಇಲ್ಲ ಎಂಬುದನ್ನು

ಪ್ರಯೋಜನವನ್ನು ತಿಳಿದವರು ಇರುವರೆ? ಶ್ರೀಹರಿಯೇ! ನೀನು ನಮ್ಮನ್ನು ಸದಾ ರಕ್ಷಿಸು.

ವಿ.: ೧. ಶ್ರೀಹರಿಯ ವಿಶಿಷ್ಟ ಸಂಹಾರ ಸಾಮರ್ಥ್ಯದ ವಿವರಣೆ ಇದರಲ್ಲಿ ಬಂದಿದೆ.

೨. ಈ ಶ್ರುತಾಯುಧನ ಮರಣಪ್ರಸಂಗ ಮಹಾಭಾರತದ ದ್ರೋಣಪರ್ವದಲ್ಲಿ ಬಂದಿದೆ. ದ್ರೋಣರ ಸೇನಾಪತ್ಯದ ನಾಲ್ಕನೆಯ ದಿವಸ ಎಂದರೆ ಕುರುಪಾಂಡವರ ಯುದ್ಧದ ಹದಿನಾಲ್ಕನೆಯ ದಿವಸ ನಡೆದ ಪ್ರಸಂಗ ಇದಾಗಿದೆ.

೩. ಶ್ರುತಾಯುಧನು ವರುಣನಿಂದ ಪರ್ಣಾಶಾ[1] ಎಂಬ ನದಿಯಲ್ಲಿ ಜನಿಸಿದ ಪುತ್ರ. ಅವನಿಗೆ ವರುಣ ಅಮೋಘವಾದ ಗದೆಯೊಂದನ್ನು ನೀಡಿ, ಅದನ್ನು ಯುದ್ಧಮಾಡದವರ ಮೇಲೆ ಪ್ರಯೋಗಿಸಿದಲ್ಲಿ ಅದು ಅವನಿಗೇ ಮಾರಕವಾಗುವುದು ಎಂಬ ಎಚ್ಚರಿಕೆಯನ್ನೂ ನೀಡಿದ್ದ. ಅರ್ಜುನನು ಸೈಂಧವನ ಸಂಹಾರಕ್ಕೆಂದು ಘೋರ ಪ್ರತಿಜ್ಞೆ ಮಾಡಿ ದ್ರೋಣರಿಂದ ನಿರ್ಮಿತವಾಗಿದ್ದ ಶಕಟಾಬ್ಜ ಚಕ್ರ ಎಂಬ ವ್ಯೂಹದೊಳಗೆ ನುಗ್ಗಿದಾಗ ಅವನನ್ನು ಎದುರಿಸಿ ಬಂದ ಕೌರವಪಕ್ಷದ ಪ್ರಧಾನವೀರರಲ್ಲಿ ಈ ಶ್ರುತಾಯುಧನೂ ಒಬ್ಬನು. ಅರ್ಜುನನಿಂದ ತನ್ನ ಸಾರಥಿ, ರಥ, ಮೊದಲಾದವುಗಳನ್ನು ಕಳೆದುಕೊಂಡ ಅವನು ಕೋಪದಿಂದ ಗದೆಯನ್ನು ಕೈಯಲ್ಲಿ ಹಿಡಿದುಕೊಂಡು ಅರ್ಜುನನ ರಥವನ್ನೇರಿ ಶ್ರೀಕೃಷ್ಣನ ತಲೆಯ ಮೇಲೆ ಅದನ್ನು ಅಪ್ಪಳಿಸಿದ. ಕೂಡಲೇ ವರುಣ ನೀಡಿದ ಮಾತು ಸತ್ಯವಾಗಿ, ಅದು ಅವನನ್ನೇ ಅಪ್ಪಳಿಸಿ ಕೊಂದುಹಾಕಿತು[2]. ಹೀಗೆ ವರವೇ ಶಾಪವಾದ ವಿಚಿತ್ರಪ್ರಸಂಗಗಳಲ್ಲಿ ಇದೂ ಒಂದಾಯಿತು.

೪. ಶ್ರುತಾಯುಧನು ವರುಣನು ತಿಳಿಸಿದ ಎಚ್ಚರಿಕೆಯನ್ನು ಮರೆತು ಹಾಗೆ ಆತ್ಮಘಾತಕವಾಗಿ ನಡೆದುಕೊಂಡದ್ದು ಶ್ರೀಹರಿಯ ಮಾಯೆಯೇ ಎಂಬುದು ಇಲ್ಲಿಯ ಮುಖ್ಯವಾದ ಅಂಶ. ಇದರಿಂದ ತನಗಾಗುವ ಅನರ್ಥವನ್ನು ಸಹ ಗಮನಿಸದೆ, ಅವನು ಹಾಗೆ ಮಡಿದದ್ದು

---

೧. ಪರ್ಣಾಶಾ ಜನನೀ ಯಸ್ಯ ಶೀತತೋಯಾ ಮಹಾನದಿ – ಮಹಾಭಾರತ (ದ್ರೋ. ಪ. ೯೨/೪೫)

೨. ಶ್ರುತಾಯುಧಂ ನದೀಜಾತಂ ವರುಣಾದಾಸಸಾದ ಹ।
ಯಸ್ಮಾದಾದ್ವರುಣೋ ದಿವ್ಯಾಮಮೋಘಾಂ ಮಹತೀಂ ಗದಾಮ್ ॥
ಸ ತು ತೇನ ಶರೈಸ್ತೀಕ್ಷ್ಣೈರರ್ಪಿತೋ ವಿರಥಂ ಕ್ಷಣಾತ್ ।
ಚಕಾರ ಪಾರ್ಥಸ್ಯ ರಥಮಾರುಹ್ಯಾರಿಧರಾಯ ತಾಮ್ ॥
ಗದಾಂ ಚಿಕ್ಷೇಪ ಸಾ ತಸ್ಯ ವಾರುಣೇಃ ಶಿರ ಏವ ತು।
ಬಿಭೇದ ಶತಧಾ ಶೀರ್ಣಮಸ್ತಿಷ್ಕಃ ಸೋऽಪತದ್ಭುವಿ ॥
ಅಯುಧ್ಯಂತಂ ಸ್ವಗದಯಾ ಯದಿ ತಾಡಯಸಿ ಸ್ವಯಮ್ ।
ತಯಾ ವಿಶೀರ್ಣಮಸ್ತಿಷ್ಕೋ ಮರಿಷ್ಯಸಿ ನ ಸಂಶಯಃ।
ಅಮೋಘಾ ಚಾನ್ಯಥಾ ಸೇಯಂ ಗದಾ ತವ ಭವಿಷ್ಯತಿ ॥
ಇತ್ಯಬ್ರವೀತ್ ತಂ ವರುಣಃ ಪುರಾ ತೇನ ಸ ಕೇಶವೇ।
ಅಯುಧ್ಯತಿ ಗದಾಕ್ಷೇಪಾತ್ ತಯಾ ಶೀರ್ಣಶಿರಾ ಅಭೂತ್ ॥ – ಮ.ಭಾ.ತಾ.ನಿ. (೨೬/೬೨-೬೬)

ಶ್ರೀಹರಿಯ ಮಾಯಾಶಕ್ತಿ ಎಂಬುದು ಮಹಾಭಾರತತಾತ್ಪರ್ಯನಿರ್ಣಯದ ವಿವರಗಳಿಂದ ತಿಳಿಯುವುದು.

೫. ಈ ಮೂಲಕವಾಗಿ ಶ್ರೀಕೃಷ್ಣ ಎಂತಹ ಅಪೂರ್ವ ಆಯುಧಗಳು ಸಹ ದುಷ್ಟರ ಪಕ್ಷಕ್ಕೆ ಸೇರಿ ಸಜ್ಜನರ ವಿರುದ್ಧವಾಗಿ ನಿಂತಾಗ ಆತ್ಮಘಾತಕವಾಗುವವು ಎಂಬ ತತ್ತ್ವವು ಸೂಚಿತವಾಗುವುದು. ದುರ್ಯೋಧನನ ಪಕ್ಷದ ಹೆಚ್ಚಿನ ಮಹಾವೀರರುಗಳು ಈ ರೀತಿಯ ವರ, ಆಯುಧ ಮೊದಲಾದ ಹಿರಿಮೆಗಳನ್ನು ಹೊಂದಿದ್ದರೂ ಸಹ ಅವುಗಳಿಂದ ಸೂಕ್ತಪ್ರಯೋಜನವನ್ನು ಪಡೆಯಲಾಗದೆ, ನಾಶಹೊಂದಿದ ಇಂತಹ ಎಲ್ಲ ಘಟನೆಗಳಿಗೂ ಸಹ ಅನ್ವಯಿಸುವ ಮಾತು ಇದಾಗಿದೆ ಎಂದು ತಿಳಿಯಬೇಕು.

೬. ಶ್ರೀಕೃಷ್ಣನಿಗೆ ಯಾವುದೇ ರೀತಿಯಲ್ಲೂ ಸಹ ಅಪಾಯವನ್ನು ಮಾಡುವ ಶಕ್ತಿ ಆ ಗದೆಗಿರಲಿ, ಅದನ್ನು ನೀಡಿದ ವರುಣನಿಗೂ ಸಹ ಸರ್ವಥಾ ಇಲ್ಲ ಎಂಬುದು ಮುಖ್ಯವಾದ ಅಂಶ. ಆದರೂ ಶ್ರೀಕೃಷ್ಣ ಹಾಗೆ ಮಾಡುವ ಮೂಲಕ ವರುಣನ ವರವನ್ನು ಸತ್ಯಮಾಡಿ, ಅವನಿಗೆ ಅನುಗ್ರಹವನ್ನು ಸಹ ಮಾಡಿದ ಎಂದು ತಿಳಿಯಬೇಕು.

೭. ಜರಾಸಂಧ ಪ್ರಯೋಗಿಸಿದ ಶಿವದತ್ತವಾಗಿದ್ದ ಗದೆಯು ಸಹ ಅವನ ತಾಯಿಯನ್ನೇ ಸಂಹರಿಸಿ, ಕೈಲಾಸಕ್ಕೆ ಮರಳಿದ ಮಹಾಭಾರತ ಹಾಗೂ ಅದರ ತಾತ್ಪರ್ಯನಿರ್ಣಯದ ಮತ್ತೊಂದು ವಿವರವೂ ಸಹ ಇದೇ ಬಗೆಯದು ಎಂಬುದು ಗಮನಿಸಬೇಕಾದ ಅಂಶ.

೮. ಬವರ ಎಂದರೆ ಯುದ್ಧ; ಖತಿ ಎಂದರೆ ಖೇದ, ದುಃಖ, ನೋವು ಎಂದರ್ಥ; ಶ್ರುತಾಯುಧ ಎಂಬುದಕ್ಕೆ ವಿಖ್ಯಾತಿ ಪಡೆದಿದ್ದ ಆಯುಧವನ್ನು ಹೊಂದಿದವನು ಎಂಬ ಅರ್ಥದಲ್ಲಿ ಅವನಿಗೆ ಸಾರ್ಥಕವಾಗಿದ್ದ ಪದ.

೯. ನಿಮ್ಮಾಯವನು ಎಂಬುದನ್ನು ನಿಮ್ಮ ಮಾಯವನ್ನು ಎಂಬುದಾಗಿ ವಿಭಾಗಮಾಡಿ ಓದಿಕೊಳ್ಳಬೇಕು. ನಿನ್ನಾಯವ ಎಂಬುದನ್ನು ನಿನ್ನ ಆಯ ಎಂಬುದಾಗಿ ಬಿಡಿಸಿಕೊಳ್ಳಬೇಕು. ಆಯ ಎಂಬುದಕ್ಕೆ ಲಾಭ, ಪ್ರಯೋಜನ ಎಂದು ಅರ್ಥ. ಶ್ರೀಹರಿಗೆ ಯಾವುದರಿಂದಲೂ ಸಹ ಯಾವ ಕಾಲಕ್ಕೂ ಯಾವುದೇ ರೀತಿಯಲ್ಲೂ ಪ್ರಯೋಜನ ಎಷ್ಟುಮಾತ್ರಕ್ಕೂ ಆಗುವುದಿಲ್ಲ ಎಂಬುದು ಶಾಸ್ತ್ರಸಿದ್ಧವಾದ ಮಹಾಪ್ರಮೇಯಗಳಲ್ಲೊಂದು. **ನ ಪ್ರಯೋಜನವತ್ತ್ವಾತ್**-(ಬ್ರಹ್ಮಸೂತ್ರ); **ಈಶ್ವರಪ್ರವೃತ್ತೇಃ ಸರ್ವತ್ರ ಸ್ವಪ್ರಯೋಜನಹೀನತ್ವಾತ್** - (ವಿಷ್ಣುತತ್ತ್ವವಿನಿರ್ಣಯ ಟೀಕಾ). ಆದ್ದರಿಂದ ಈ ರೀತಿಯ ಕಾರ್ಯದಿಂದ ಆಗಬೇಕಾದ ಪ್ರಯೋಜನ ಯಾವುದೂ ಇಲ್ಲ. ಆದರೂ ಸಹ ಈ ರೀತಿ ಅವನು ಮಾಡುವುದು ಮೇಲೆ ಹೇಳಿದಂತೆ ಅಸುರರನ್ನು ನಿಗ್ರಹಿಸುವ ಬಗೆಬಗೆಯ ಸಾಮರ್ಥ್ಯವನ್ನು ನಿರೂಪಿಸಿಕೊಡಲು ಮಾತ್ರ.

೧೦. ಬೇರೆ ರೀತಿಯಲ್ಲಿ ಈ ಕಾರ್ಯವನ್ನು ಅವನು ಮಾಡಲು ಸಮರ್ಥನಾದರೂ, ಹಾಗೆ ಮಾಡದೆ, ಇದೇ ತೆರನಾಗಿ ಮಾಡುವಲ್ಲಿ ಯಾವ ಪ್ರಯೋಜನವೂ ಇಲ್ಲ ಎಂಬುದನ್ನು

ಬಲ್ಲವರುಂಟೆ? ಎಂಬ ಪ್ರಶ್ನೆಯ ರೂಪದಲ್ಲಿ ಅರ್ಥ ಮಾಡಿಕೊಂಡಾಗ ಶ್ರೀಕನಕದಾಸರ ಕೌಶಲ ತಿಳಿಯುವುದು. ಒಂದರ್ಥದಲ್ಲಿ ಇದು ಕಾಕಸ್ವರದ ನಿರೂಪಣೆಯೂ ಆಗಿದೆ.

೧೧. ಶ್ರೀಹರಿಗೆ ವಿಶಿಷ್ಟರೀತಿಯಲ್ಲಿ ಹಾಗೆ ವರ್ತಿಸುವ ಅಗತ್ಯವಿಲ್ಲದಿದ್ದರೂ ಹಾಗೆ ಮಾಡುವ ಹಿನ್ನೆಲೆಯನ್ನು ಅರ್ಥಮಾಡಿಕೊಳ್ಳುವುದು ಮಾತ್ರ ಎಲ್ಲ ಸಂದರ್ಭದಲ್ಲೂ ಯಾರಿಗೂ ಆಗದ ಅತ್ಯಂತ ಸೂಕ್ಷ್ಮವಾದ ವಿಚಾರ ಎಂಬ ಮತ್ತೊಂದು ಪ್ರಮೇಯವು ಸಹ ಇಲ್ಲಿ ನಿರೂಪಿತವಾಗಿದೆ: ಪರಪ್ರಯೋಜನನಾನಿ ತು ಸೂಕ್ಷ್ಮಾಣ್ಯುತ್ಪ್ರೇಕ್ಷಿತುಂ ವಯಂ ನ ಪ್ರಭವಾಮಃ (ವಿಷ್ಣುತತ್ತ್ವವಿನಿರ್ಣಯಟೀಕಾ); ಆಯ – ಲಾಭ, ಮರ್ಮ.

*****

## ೩೬. ಬಾಂಧವರೊಳಗೆ ಕೀರ್ತಿಯ ಪಡೆದೆ ರಕ್ಷಿಸು

ಇಳೆಗೆ ಪತಿಯಾದವನು ಯಾದವ-
ರೊಳಗೆ ಬಾಂಧವ ನಿನಗೆ ಸೋದರ-
ಅಳಿಯನಾದಭಿಮನ್ಯುವನು ಕೊಲ್ಲಿಸಿದೆ ಕೊಳಗುಳದಿ।
ಅಳಲಿನಬ್ಧಿಯೊಳದ್ದಿ ತಂಗಿಯ
ಬಳಲಿಸಿದೆ ಕುಲಗೋತ್ರಬಾಂಧವ -
ರೊಳಗೆ ಕೀರ್ತಿಯ ಪಡೆದೆ ರಕ್ಷಿಸು ನಮ್ಮನನವರತ ॥ ೩೬ ॥

ಅ: ನೀನು ಭೂಮಿಗೆ ಒಡೆಯನಾದವನು, ಯಾದವರ ಬಾಂಧವನು; ಆದರೆ ನಿನಗೆ ಸೋದರಳಿಯನಾದ ಅಭಿಮನ್ಯುವನ್ನು ಯುದ್ಧದಲ್ಲಿ ಕೊಲ್ಲಿಸಿದೆ. ನಿನ್ನ ತಂಗಿಯಾದ ಸುಭದ್ರೆಯನ್ನು ಶೋಕಸಾಗರದಲ್ಲಿ ಮುಳುಗಿಸಿ ನೋಯಿಸಿದೆ; ಕುಲ, ಗೋತ್ರಗಳಿಗೆ ಸೇರಿದ ಬಾಂಧವರೊಳಗೆ ಕೀರ್ತಿಯನ್ನು ಸಂಪಾದಿಸಿದೆ; ಇಂತಹ ಶ್ರೀಹರಿಯೇ! ನೀನು ನಮ್ಮನ್ನು ಸದಾ ರಕ್ಷಿಸು.

ವಿ.: ೧. ಅಭಿಮನ್ಯುವನ್ನು ಕೊಲ್ಲಿಸುವ ಮೂಲಕ ಶ್ರೀಕೃಷ್ಣ ತೋರಿದ ಮತ್ತೊಂದು ಬಗೆಯ ಹಿರಿಮೆಯನ್ನು ಇಲ್ಲಿ ತಿಳಿಸಿರುವರು; ಇಳೆ – ಭೂಮಿ, ಅಳಲು– ಶೋಕ.

೨. ಹದಿಮೂರನೆಯ ದಿನದ ಯುದ್ಧದಲ್ಲಿ ಪದ್ಮವ್ಯೂಹದಲ್ಲಿ ಅಭಿಮನ್ಯು ಹತನಾದ ವಿವರ ಸುಪ್ರಸಿದ್ಧವಾದುದು. ಅವನು ಶ್ರೀಕೃಷ್ಣನ ತಂಗಿಯಾದ ಸುಭದ್ರೆಯ ಪುತ್ರ; ಎಂದರೆ ತನ್ನ ಪ್ರಿಯಭಕ್ತನಾದ ಅರ್ಜುನನಿಗೆ ಪುತ್ರ. ಆದರೆ ಅವನು ಪದ್ಮವ್ಯೂಹದಲ್ಲಿ ಏಕಾಂಗಿಯಾಗಿ ಹೋರಾಡಿ ಆರು ಮಹಾರಥರ ಒಟ್ಟು ಪ್ರಯತ್ನಕ್ಕೆ ಮಡಿಯುವಂತಾಯಿತು. ತನಗೆ ಅತ್ಯಂತ ಹತ್ತಿರದ ಬಂಧುವಾದ ಅವನನ್ನು ಉಳಿಸುವುದು ಕೃಷ್ಣನಿಗೆ ಯಾವುದೇ ರೀತಿಯಲ್ಲೂ

ಅಸಾಧ್ಯವಾದ ಕಾರ್ಯವಾಗಿರಲಿಲ್ಲ. ಆದರೂ ಅವನನ್ನು ಸಂರಕ್ಷಿಸದೆ, ಕೈಬಿಟ್ಟದ್ದು ಸೋಜಿಗದ ಸಂಗತಿ. ಇದು ಶ್ರೀಕೃಷ್ಣನು ಅವರವರ ಸಾಧನೆಗೆ ತಕ್ಕಂತೆ ಅವರನ್ನು ಪಾಲಿಸುವನು ಎಂಬ ತತ್ತ್ವಕ್ಕೆ ನಿದರ್ಶನ. ಇದರಿಂದಾಗಿಯೇ **ಸಮಃ** ಎಂಬ ಅವನ ಹೆಸರು ಸಾರ್ಥಕವೆನ್ನಿಸುವುದು.

೩. ಸತ್ತವನು ಹೀಗೆ ಸೋದರಳಿಯನಾದ ಅಭಿಮನ್ಯುವಾದರೆ, ಅದಕ್ಕಾಗಿ ಅಪಾರ ಶೋಕಕ್ಕೆ ತುತ್ತಾದವಳು ತಂಗಿಯಾದ ಸುಭದ್ರೆ ಹಾಗೂ ಅರ್ಜುನ ಮೊದಲಾದ ಇತರರು. ತನಗೆ ಪ್ರಿಯರಾದ ಅವರು ಸಹ ಹಾಗೆ ದುಃಖಕ್ಕೊಳಗಾಗುವ ಪ್ರಾರಬ್ಧವನ್ನು ಹೊಂದಿದ್ದವರು ಅದಕ್ಕೆಂದೇ ಶ್ರೀಕೃಷ್ಣ ಅವರಿಗೆ ಅದರ ಅನುಭವವನ್ನು ನೀಡುವ ಮೂಲಕವೂ ತಾನು ''ಸಮ'' ಎಂಬುದನ್ನು ನಿರೂಪಿಸಿದ ಎಂದು ತಿಳಿಯಬೇಕು.

೪. **ಅಬ್ಧಿ** ಎಂದರೆ ಸಮುದ್ರ; **ಕೊಳಗುಳ** ಎಂದರೆ ಯುದ್ಧ; ಯುದ್ಧದಲ್ಲಿ ಅಭಿಮನ್ಯು ಸಾಯುವಂತೆ ಮಾಡುವ ಮೂಲಕ ಅವನಗೆ ಉತ್ತಮ ಲೋಕಗಳು ದೊರಕುವಂತಾಯಿತು. ಎಂಬಲ್ಲಿ ಅವನ ಮೇಲೆ ಮಾಡಿದ ಅನುಗ್ರಹದ ಮುಖವೂ ಸಹ ವ್ಯಕ್ತವಾಗುವುದು. ಸುಭದ್ರೆಯು ಅಳಲಿನ ಅಬ್ಧಿಯಲ್ಲಿ ಮುಳುಗುವಂತಾಯಿತು ಎಂಬ ಮಾತಿನಲ್ಲಿ ಪ್ರಾರಬ್ಧವು ಯಾರಿಗೂ ಬಿಡದು ಎಂಬ ಪ್ರಮೇಯವು ನಿರೂಪಿತವಾಗಿದೆ.

೫. ಹೀಗೆ ಮೇಲ್ನೋಟಕ್ಕೆ ಕಾಣುವಂತೆಯೇ ಈ ಕಾರ್ಯವು ಶ್ರೀಕೃಷ್ಣನ ಅಪಾರವಾದ ಹಿರಿಮೆಗೆ ಕಾರಣವಾಯಿತು ಎಂಬುದು ವಿಶೇಷ. ಕುಲ, ಗೋತ್ರಗಳಲ್ಲಿ ಕೀರ್ತಿ ಹರಡಿತು ಎಂಬ ಮಾತಿನಲ್ಲಿ ಅವನ ಭಕ್ತಜನತೆ ಈ ಪ್ರಸಂಗವನ್ನು ಅವನ ಸತ್ಯಸಂಕಲ್ಪತ್ವ, ಸಮತ್ವಗಳಿಗೆ ನಿದರ್ಶನವನ್ನಾಗಿ ತಿಳಿಯಿತೇ ಹೊರತು, ಯಾವುದೇ ಬಗೆಯ ದೋಷಚಿಂತನೆಗೆ ಅಲ್ಲ ಎಂಬ ಇಲ್ಲಿಯ ಮತ್ತೊಂದು ಮಾತು ಶ್ರೀಹರಿಯು ದೋಷದೂರ ಎಂಬ ತತ್ತ್ವಕ್ಕೂ ನಿದರ್ಶನ.

೬. ಇಂತಹ ಶ್ರೀಹರಿಯ ಅಪೂರ್ವ ಕೌಶಲವನ್ನು ತೋರುವ ಇಂತಹ ಅನೇಕ ಪ್ರಸಂಗಗಳನ್ನು ಶ್ರೀಕನಕದಾಸರು ನೀಡಿರುವ ಪದ್ಯ ಹೀಗಿದೆ:

ನೀನಾವ ಬಾಂಧವನೊ ನಿಖಿಳ ಯಾದವರೊಳಗೆ
ಮಾನಾಭಿಮಾನ ಇನಿತಿಲ್ಲ ನಿನ್ನೊಳಗೆ ॥ ಪ ॥
ದೇವಕೀದೇವಿಯುದರದಿ ಜನಿಸಿ ಬಾಲ್ಯದಲಿ
ಓವಿ ಮೊಲೆ ಕುಡಿಸಿದವಳಸುವ ಸೆಳೆದೆ
ಮಾವ ಕಂಸನ ಕೊಂದು ಮನುಜವೇಷದಲಿ ಗಾಂ-
ಡೀವಿಯಾ ರಥದ ಬಂಡಿಯ ಬೋವನಾದೆ ॥ ೧ ॥
ಸುರನದಿಯ ಸುತನು ಪಾಂಡವರಿಗಾಪ್ತನು ನಿನಗೆ
ಪರಮಭಕ್ತನು ಸ್ವ-ಇಚ್ಛಾ ಮರಣೆಯು
ಧುರದೊಳಗೆ ಪೂರ್ವವೈರಿಯ ಶಿಖಂಡಿಯ ತೋರಿ
ಸರಳಮಂಚದ ಮೇಲುಪಾಯದಲಿ ಮಲಗಿಸಿದೆ ॥ ೨ ॥

ಸೋದರತ್ತೆಯ ಸೊಸೆಯ ಮಗ ನಿನಗೆ ಭಾವಿಸಲು
ಸೋದರಳಿಯನು ಮೂರು ಲೋಕವರಿಯೆ
ಸಾಧಿಸುವಸಮ ಚಕ್ರವ್ಯೂಹನೆ ಬಲಿದು ರಿಪು-
ಸಾಧಕರ ಷಡುರಥರ ಕೈಲಿ ಕೊಲ್ಲಿಸಿದೆ ॥ ೩ ॥
ಕುರುಪತಿಯ ಮೈದುನನ ಕೊಲ್ಲ ಬಗೆದವನ ಸಂ-
ಗರದಲೇರಿಸಿದ ನುಡಿಯನ್ನೆ ಕೇಳ್ದು
ಓರಿದು ರವಿಮಂಡಲವ ಮರೆಯ ಚಕ್ರವ ಮಾಡಿ
ನರನ ಕೈಯಿಂದ ಸೈಂಧವನ ಕೊಲ್ಲಿಸಿದೆ ॥ ೪ ॥
ಶಪಥದಲಿ ರಣದೊಳರಸನ ಹಿಡಿವನೆಂದು ಬಲು
ತಪಸಿಗಳ ಕಳುಹಿ ತತ್ತ್ವವ ಬೋಧಿಸಿ
ಕಪಟವರಿಯದ ನೃಪನ ಕೈಯೊಳನೃತವ ನುಡಿಸಿ
ಉಪಮೆಯಲಿ ಶಸ್ತ್ರಪಂಡಿತನ ಕೊಲ್ಲಿಸಿದೆ ॥ ೫ ॥
ಮರಳಿ ಬಾಣವ ತೊಡೆನು ಎಂದು ಮಾತೆಗೆ ಕರ್ಣ
ಭರವಸೆಯನಿತ್ತು ಸಂಗ್ರಾಮದೊಳಗೆ
ಧರಣಿ ಕೀಲಿಸಿದ ರಥವನು ನೆಗಹುತಿರೆ ಸಹೋ-
ದರನ ಕೈಯಿಂದೆ ನಿರ್ದಯದಿ ಕೊಲ್ಲಿಸಿದೆ ॥ ೬ ॥
ಯಮಳರನು ಪಡೆದ ತಾಯಿಗೆ ಸಹೋದರನು ಭೂ-
ರಮಣರೊಳಗಗ್ಗಳನು ಅತಿಧೈರ್ಯನು
ಸಮರದಲಿ ರವಿಸುತನ ರಥಕೆ ಸೂತನ ಮಾಡಿ
ಯಮಸುತನ ಕೈಲಿ ಮಾವನನು ಕೊಲ್ಲಿಸಿದೆ ॥ ೭ ॥
ಜನವರಿಯದಂತೆ ಜೀವನದೊಳಡಗಿದ್ದವನ
ಮನವ ಖತಿಗೊಳಿಸಿ ಕಾತರಿಸೆ ನುಡಿಸಿ
ಅನುವರದೊಳಾಯವನು ತೊಡೆಯ ಸನ್ನೆಯ ಮಾಡಿ
ಅನಿಲಜನ ಕೈಲಿ ಕೌರವನ ಕೊಲ್ಲಿಸಿದೆ ॥ ೮ ॥
ಉರಿಯೊಳಗೆ ಜನಿಸಿದಂಗನೆಯ ನಿಜಸುತರು ಮಂ-
ದಿರದೊಳೈವರು ನಿದ್ರೆಗೈಯುತಿರಲು
ವರವೃಕೋದರ ಧರ್ಮನಂದನರಗಲಿಸಿಯೆ
ಗುರುಸುತನ ಕೈಲಿ ಬಾಲಕರ ಕೊಲ್ಲಿಸಿದೆ ॥ ೯ ॥
ಈ ವಿಧದೊಳವರ ಸುರಲೋಕದೊಳು ನೆಲೆಗೊಳಿಸಿ
ಭಾವಮೈದುನರೈವರನು ರಕ್ಷಿಸಿ
ಭೂವಲಯದೊಳು ಕೀರ್ತಿಪಡೆದು ಸಲಹಿದ ನಮ್ಮ
ದೇವವರ ಕಾಗಿನೆಲೆಯಾದಿಕೇಶವರಾಯ ॥ ೧೦ ॥

*****

## ೩೭. ನಿನ್ನಾಯವನು ನೀ ಬಲ್ಲೆ ರಕ್ಷಿಸು

ತಾಯನಗಲಿದ [೧]ತನಯನಾ ರಾ-
ಧೇಯನೊಳಗೆ ರಹಸ್ಯದಲಿ ಕುಲ -
ದಾಯವನು ನೆರೆ ತಿಳುಹಿ ಅರ್ಜುನನಿಂದ ಕೊಲ್ಲಿಸಿದೆ ।
ಮಾಯಮಂತ್ರದ ಕುಟಿಲಗುಣವ-
ನ್ಯಾಯವೋ ಸುನ್ಯಾಯವೋ [೨]ನಿ-
ನ್ನಾಯವನು ನೀ ಬಲ್ಲೆ ರಕ್ಷಿಸು ನಮ್ಮನನವರತ ॥ ೩೭ ॥

ಅ: ತನ್ನ ತಾಯಿಯನ್ನು ಅಗಲಿದ ಅವಳ ಪುತ್ರನಾದ ರಾಧೇಯನಾದ ಕರ್ಣನನ್ನು ನೀನು ಏಕಾಂತದಲ್ಲಿ ಕಂಡು ಅವನಿಗೆ ಅವನ ಹುಟ್ಟಿನ ವಿಷಯವನ್ನು ತಿಳಿಸಿ, ಮುಂದೆ ಅವನನ್ನು ಅರ್ಜುನನಿಂದ ಕೊಲ್ಲಿಸಿದೆ. ಮಾಯಾ-ಮಂತ್ರದ ಕುಟಿಲಗುಣದಂತೆ ತೋರುವ ಅದು ನ್ಯಾಯವೋ ಅಥವಾ ಅನ್ಯಾಯವೋ ಎಂಬುದನ್ನು, ಅದರಿಂದ ನಿನಗಾದ ಲಾಭದ ಮರ್ಮವನ್ನು ನೀನೇ ಬಲ್ಲೆ. ಅಂತಹ ಶ್ರೀಹರಿಯೇ! ನೀನು ನಮ್ಮನ್ನು ಸದಾ ರಕ್ಷಿಸು.

ವಿ.: ೧. ಕುರುಕ್ಷೇತ್ರಸಮರದಲ್ಲಿ ಅರ್ಜುನನಿಂದ ಕರ್ಣನನ್ನು ಸಂಹರಿಸಿದ ಶ್ರೀಕೃಷ್ಣನ ವಿಶೇಷವಾದ ಕಾರ್ಯದ ಬಗ್ಗೆ ಇದರಲ್ಲಿ ಸೂಕ್ಷ್ಮವಾದ ವಿವೇಚನೆ ಬಂದಿದೆ.

೨. ಕರ್ಣ - ಕುಂತೀಪುತ್ರ. ಅವಳು ಇನ್ನೂ ಕನ್ಯಾವಸ್ಥೆಯಲ್ಲಿದ್ದಾಗಲೇ ಸೂರ್ಯನಿಂದ ಜನಿಸಿದವನು. ಲೋಕಾಪವಾದಕ್ಕೆ ಅಂಜಿದ ಕುಂತಿಯು ಜನಿಸಿದ ಕೂಡಲೇ ಅವನನ್ನು ರತ್ನ ತುಂಬಿದ ಮಂಜೂಷೆಯೊಂದರಲ್ಲಿರಿಸಿ, ಅಶ್ವನದಿಯ ಮೂಲಕ ಕಳುಹಿಸಿಕೊಡುವಳು. ಮುಂದೆ ಅದು ಅಧಿರಥ ಮತ್ತು ರಾಧೆ ಎಂಬ ದಂಪತಿಗಳ ಕೈಗೆ ಸಿಕ್ಕಿ ರಾಧೇಯ ಎಂಬುದಾಗಿ ಪ್ರಸಿದ್ಧನಾಗುವನು. ವಸುಷೇಣ ಎಂಬುದು ಅವನಿಗೆ ತಂದೆ-ತಾಯಿಗಳು ಇರಿಸಿದ ಹೆಸರು. ಕರ್ಣ ಎಂಬುದು ಅವನ ಕರ್ಣಕುಂಡಲಗಳಿಂದಾಗಿ ಬಂದಿದ್ದ ಹೆಸರು. ನಿಜಕ್ಕೂ ಹೀಗೆ ಕ್ಷತ್ರಿಯ ಪುತ್ರನಾಗಿ ಹುಟ್ಟಿದ ಅವನು ಸೂತಪುತ್ರನೆನಿಸಿದ್ದು ವಿಧಿವಿಲಾಸ. ದುರ್ಯೋಧನನ ಸಂಗದಿಂದಾಗಿ ಪಾಂಡವ ದ್ವೇಷಿಯಾಗಿ ಬೆಳೆದದ್ದು ಕರ್ಣನ ಮತ್ತೊಂದು ದೌರ್ಭಾಗ್ಯ. ಉದ್ಯೋಗಪರ್ವದ ಕೊನೆಯಲ್ಲಿ ರಾಯಭಾರದ ಉತ್ತರಭಾಗವಾಗಿ ಶ್ರೀಕೃಷ್ಣನು ಕರ್ಣನನ್ನು ಏಕಾಂತದಲ್ಲಿ ಕರೆದು ಅವನ ಜನ್ಮರಹಸ್ಯವನ್ನು ತಿಳಿಸುವನು ಹಾಗೂ ಪಾಂಡವರೊಂದಿಗೆ ಸೇರಿ ರಾಜ್ಯಾದಿಗಳನ್ನು ಪಡೆಯಲೂ ಸಹ ತಿಳಿಸುವನು. ಆದರೆ, ಕರ್ಣ ಅದಕ್ಕೆ ಒಪ್ಪದೆ, ಪಾಂಡವರಿಗೇ ಖಚಿತವಾದ ಜಯ ಎಂಬುದಾಗಿ ಸಾರಿ, ಕೌರವರೊಂದಿಗೆ ಉಳಿಯಲು ಬಯಸುವನು ಎಂಬುದು ಮಹಾಭಾರತದಲ್ಲಿ ವಿವರವಾಗಿ ನಿರೂಪಿತವಾಗಿದೆ.

---

೧. ತನಯನೀ ರಾಧೇಯನೊಳಗೆ (ಪಾ.)

೨. ನಿನ್ನಾಯವನು (ಪಾ.)

೩. ಮೇಲ್ನೋಟಕ್ಕೆ ಶ್ರೀಕೃಷ್ಣನು ಹಾಗೆ ಅವನ ಜನ್ಮರಹಸ್ಯವನ್ನು ತಿಳಿಸುವ ಮೂಲಕ ಕರ್ಣನ ಮನಸ್ಸಿನಲ್ಲಿದ್ದ ಪಾಂಡವರ ಬಗೆಗಿನ, ಅದರಲ್ಲೂ ಅರ್ಜುನನ ಬಗೆಗಿನ ಮಾತ್ಸರ್ಯವನ್ನು ಕುಂದಿಸುವನು ಎಂಬಂತೆ ಕಾಣುವುದು. ಅದರಂತೆ, ಅಂತಹ ಸೂಕ್ಷ್ಮಪ್ರಸಂಗದಲ್ಲಿ ಅವನ ಜನ್ಮರಹಸ್ಯವನ್ನು ತಿಳಿಸುವ ಮೂಲಕ ಕರ್ಣನ ಅಂತಃಶಕ್ತಿಯನ್ನು ಕುಂದಿಸಿ ಅವನ ಪರಾಭವಕ್ಕೂ ಕಾರಣನಾದಂತೆ ಕಾಣುವುದು. ಇದರಿಂದಾಗಿ ಜನರ ಮನಸ್ಸಿನಲ್ಲಿ ಶ್ರೀಕೃಷ್ಣ ಹಾಗೆ ಮಾಡಿದ್ದು ಅನ್ಯಾಯವೆಂಬಂತೆ ತೋರುವುದು. ಇದರ ಬಗ್ಗೆ ಶಾಸ್ತ್ರೀಯ ಹಿನ್ನೆಲೆಯಲ್ಲಿ ವಿಚಾರಿಸಿದಾಗ, ವಾಸ್ತವವಾಗಿ ಶ್ರೀಕೃಷ್ಣನು ಕರ್ಣನಿಗೆ ಆ ಮೂಲಕ ಮಾಡಿದ್ದು ಕಪಟ-ವಂಚನೆಗಳಾಗಿರದೇ ಅನುಗ್ರಹವೇ ಆಗಿದ್ದಿತು ಎಂಬ ಪ್ರಮೇಯ ತಿಳಿಯುವುದು.

೪. ತನ್ನಿಂದ ಹಾಗೂ ಭೀಮಸೇನನಿಂದ ರಕ್ಷಿತನಾದ ಅರ್ಜುನನಿಗೆ ಕರ್ಣನಿಂದ ಯಾವುದೇ ರೀತಿಯ ಭಯಕ್ಕೂ ಸರ್ವಥಾ ಅವಕಾಶವಿರಲಿಲ್ಲ. ಆದರೂ ಹಾಗೆ ಶ್ರೀಕೃಷ್ಣ ತಿಳಿಸಲು ಮುಖ್ಯವಾದ ಕಾರಣ, ಪಾಂಡವರ ಬಗ್ಗೆ ಅವನಿಗಿದ್ದ ನಿಷ್ಕಾರಣವಾದ ದ್ವೇಷಭಾವವನ್ನು ಅಳಿಸಿಹಾಕುವುದೇ ಆಗಿದ್ದಿತು. ಭೀಮಾರ್ಜುನರಂತಹ ಮಹನೀಯರ ಬಗ್ಗೆ ಅವನು ತಾಳುವ ವೈರಭಾವ ಸ್ವೋತ್ತಮದ್ರೋಹವೆನಿಸಿ, ಹೆಚ್ಚಿನ ಅಧಃಪತನಕ್ಕೆ ಕಾರಣವಾಗುತ್ತಿದ್ದಿತು. ಜನ್ಮರಹಸ್ಯವನ್ನು ತಿಳಿಸುವ ಮೂಲಕ ಕರ್ಣನು ಸ್ವಭಾವತಃ ಮಾತ್ರವಲ್ಲದೆ, ಸಂಬಂಧದಲ್ಲಿಯೂ ಸಹ ಪಾಂಡವರಿಗೆ ಹಿರಿಯ ಸೋದರ ಎಂಬ ತತ್ತ್ವ ತಿಳಿಯುವಂತಾಗಿ ಅವನಲ್ಲಿದ್ದ ದ್ವೇಷಭಾವ ಅಳಿದು, ನಿಜ ಅರ್ಥದ ಪ್ರೀತಿ ಮೂಡುವಂತಾಗಿ ಹೆಚ್ಚಿನ ಅಪಚಾರ ಅವನಿಂದ ಆಗದಂತೆ ಆಯಿತು. ಇದನ್ನು ಮಾಡಿದ ಹಿರಿಮೆ ಶ್ರೀಕೃಷ್ಣನದು.

೫. ಕರ್ಣನು ಕೌರವಪಕ್ಷವನ್ನು ತೊರೆಯನು, ಪಾಂಡವಪಕ್ಷಕ್ಕೆ ಸೇರನು ಎಂಬುದು ಸರ್ವಜ್ಞನಾದ ಶ್ರೀಕೃಷ್ಣನಿಗೆ ತಿಳಿಯದ ವಿಷಯವೇನಲ್ಲ. ಹಾಗಿದ್ದೂ ಅವನು ಹಾಗೆ ತಿಳಿಸುವಲ್ಲಿ ಮುಖ್ಯ ಕಾರಣ, ಸ್ವಭಾವತಃ ಸೂರ್ಯನಂತಹ ದೇವತೆಯ ಅವತಾರನಾದ ಅವನಲ್ಲಿ ಅನುಗ್ರಹ ಮಾಡುವುದೇ ಆಗಿದ್ದಿತು. ಇದರಿಂದಾಗಿ ಅರ್ಜುನನಿಂದ ಮಡಿದ ಕರ್ಣ ಮುಂದೆ ಯಾವುದೇ ಅನರ್ಥಕ್ಕೂ ಗುರಿಯಾಗದೇ ತನ್ನ ಮೂಲರೂಪವನ್ನು ಸೇರಿಕೊಳ್ಳಲು ಸಾಧ್ಯವಾಯಿತು.

೬. ಶ್ರೀಕೃಷ್ಣನು ಭಗವಂತನಾದ ಸಾಕ್ಷಾತ್ ಶ್ರೀಹರಿ. ಅವನು ಸಕಲಗುಣಪೂರ್ಣನಾಗಿರುವಂತೆ, ಸಕಲದೋಷದೂರನೂ ಆಗಿರುವನು ಎಂಬ ತತ್ತ್ವವನ್ನು ತಿಳಿದವರಿಗೆ ಅವನಿಂದ ಅನ್ಯಾಯವಾಗುವುದು ಸರ್ವಥಾ ಅಶಕ್ಯ ಎಂಬ ಪ್ರಮೇಯ ಖಚಿತವಾಗುವುದು. ಆದ್ದರಿಂದ, ಮೇಲ್ನೋಟಕ್ಕೆ ಅನ್ಯಾಯವೆಂಬಂತೆ ಕಾಣುವ ಈ ಪ್ರಸಂಗ ನಿಜ ಅರ್ಥದಲ್ಲಿ ಸುನ್ಯಾಯವೇ ಆಗಿದೆ ಎಂಬುದು ಶ್ರೀಕನಕದಾಸರು ಇಲ್ಲಿ ಸಾರಿರುವ ತತ್ತ್ವ.

೭. ಇದನ್ನು "ನಿನ್ನಾಯವನು ನೀ ಬಲ್ಲೆ" ಎಂದು ತಿಳಿಸುವ ಮೂಲಕ ಸಕಲ ಸದ್ಭಕ್ತರಿಗೂ ಸಹ ಶ್ರೀಹರಿಯ ಪ್ರತಿಯೊಂದು ಕಾರ್ಯವನ್ನೂ ಸಹ ಅವನ ಮಾಹಾತ್ಮ್ಯದ್ಯೋತಕ ಎಂದು ತಿಳಿಯುವುದೇ ಮುಖ್ಯ ಕರ್ತವ್ಯವಾಗಿದೆ ಎಂಬ ಸಂದೇಶ ಇಲ್ಲಿ ಸೂಚಿತ. ಶ್ರೀಹರಿಗೆ

ಯಾವುದರಿಂದಲೂ ಯಾವುದೇ ರೀತಿಯ ಪ್ರಯೋಜನವೂ ಯಾವ ಕಾಲಕ್ಕೂ ಸರ್ವಥಾ ಇಲ್ಲ ಎಂಬ ಮುಖ್ಯ ತತ್ತ್ವವು ಇಲ್ಲಿ ಸೂಚಿತ. ಇದನ್ನೆಲ್ಲ ಶ್ರೀಕೃಷ್ಣ ತನ್ನ ವ್ಯಾಸರೂಪದಿಂದ ತಿಳಿಸಿದ್ದರಿಂದ ಅವನ ಮರ್ಮವನ್ನು ಅವನೇ ಬಲ್ಲ ಎಂಬ ವಿವರಣೆ ಸಮುಚಿತವೆನ್ನಿಸುವುದು.

೮. ಹೀಗೆ ಕರ್ಣನನ್ನು ಉದ್ಧರಿಸಿದ ಶ್ರೀಕೃಷ್ಣ ನಮ್ಮನ್ನೂ ಸಹ ಸ್ವೋತ್ತಮದ್ರೋಹಾದಿ ಅಪಚಾರಗಳು ಸರ್ವಥಾ ನಡೆಯದಂತೆ ಅನುಗ್ರಹಿಸಲಿ ಎಂಬುದು ಇಲ್ಲಿಯ ರಕ್ಷಿಸು ನಮ್ಮನನವರತ ಎಂಬ ಪ್ರಾರ್ಥನೆಯ ಹಿನ್ನೆಲೆ ಎಂದು ತಿಳಿಯಬೇಕು.

೯. ಶ್ರೀಹರಿಯ ವ್ಯಾಪಾರವು ಚಿಂತನೆಗೆ ಎಟಕದ್ದು ಎಂಬುದನ್ನು ತಿಳಿಸುವ ಶ್ರೀಕನಕದಾಸರ ಒಂದು ಪದ್ಯ ಹೀಗಿದೆ:

ಬಂದಿದೆ ದೂರು ಬರಿದೆ ಪಾಂಡವರಿಗೆ ಕಾದಿ
ಕೊಂದರು ಕೌರವರನೆಂಬಪಕೀರ್ತಿ ॥ ಪ ॥
ಹಗೆಯರು ಮುನ್ನಿನ ಪೂರ್ವದ್ವೇಷವ ತಾಳಿ
ಮಿಗೆ ಸ್ನೇಹ ಮೆಚ್ಚಿಸಿ ಕುರುಪತಿಗೆ
ಬಗೆಯಿಂದ ಜೂಜಲಿ ಸೋಲಿಸಿ ರಾಯನ
ಬಗೆದು ಕೊಂದವನು ಶಕುನಿಯೊ ಪಾಂಡವರೊ ॥ ೧ ॥
ಮರಣ ತನ್ನಿಚ್ಛೆಯೊಳಾದ ಗಾಂಗೇಯನು
ಧುರದೊಳು ಷಂಡನ ನೆವದಿಂದಲಿ
ಸರಳ ಮಂಚದ ಮೇಲೆ ಮಲಗಿ ಪ್ರಾಣವ ಬಿಟ್ಟ
ಕುರುಪನ ಕೊಂದವ ಭೀಷ್ಮನೊ ಪಾಂಡವರೊ ॥ ೨ ॥
ಮಗನ ನೆವದಿ ಕಾಳಗವ ಬಿಸುಟು ಸುರ-
ನಗರಿಗೈದಿದನು ವೈರಾಗ್ಯದಿಂದ
ಜಗವರಿಯಲು ಕುರುವಂಶಕ್ಕೆ ಕೇಡನು
ಬಗೆದು ಕೊಂದವನು ದ್ರೋಣನೊ ಪಾಂಡವರೊ ॥ ೩ ॥
ತೊಟ್ಟ ಬಾಣವ ತೊಡಲೊಲ್ಲದೆ ತಾಯಿಗೆ
ಕೊಟ್ಟ ಭಾಷೆಗೆ ಐವರ ಕೊಲ್ಲದೆ
ನೆಟ್ಟನೆ ರಣದೊಳು ಕಾದದೆ ಪ್ರಾಣವ
ಬಿಟ್ಟು ಕೊಂದವನು ಕರ್ಣನೊ ಪಾಂಡವರೊ ॥ ೪ ॥
ಮಥನಿಸಿ ಸೂತನ ನೆವಮಾಡಿ ಕುಲವನು
ಅತಿಹೀನಗಳೆದ ಕಾರಣ ಸೂತನ
ರಥದಿಂದಿಳಿದು ಪೋಗಿ ಕುರುವಂಶ ಸವರಿದ
ಹಿತಶತ್ರುವಾರು ಶಲ್ಯನೊ ಪಾಂಡವರೊ ॥ ೫ ॥
ಜಲದೊಳು ಮುಳುಗಿ ತಪವ ಮಾಡಿ ಕುಲವನು
ಛಲದಿಂದೆಬ್ಬಿಸಿ ಕಾದುವೆನೆನುತ

ಕಲಿ ಭೀಮಸೇನನ ನುಡಿ ಕೇಳಿ ಪೊರಮಟ್ಟು
ಕುಲವ ಕೊಂದವನು ಕೌರವನೊ ಪಾಂಡವರೊ ॥ ೬ ॥
ಕವುರವ ಪಾಂಡವರೊಳು ಭೇದವನಿಕ್ಕಿ
ಘವುಜೊಡ್ಡಿ ಕುರುಕ್ಷೇತ್ರದಲಿ ಕಾದುತ
ಸವುಶಯವಿಲ್ಲದೆ ಕುರುವಂಶ ಸವರಿದ
ಹಿವುಸಕನಾದಿಕೇಶವನೊ ಪಾಂಡವರೊ ॥ ೭ ॥

೧೦. ಶ್ರೀಹರಿಯ ಮಾಯೆಯ ವೈಭವವನ್ನು ತಿಳಿಸುವ ಶ್ರೀಕನಕದಾಸರ ಪದ್ಯ ಹೀಗಿದೆ:

ನೀ ಮಾಯೆಯೊಳಗೊ ನಿನ್ನೊಳು ಮಾಯೆಯೊ ॥ ಪ ॥
ಬಯಲು ಆಲಯದೊಳಗೊ ಆಲಯದೊಳಗೆ ಬಯಲೊ
ಬಯಲು ಆಲಯವೆರಡು ನಯನದೊಳಗೊ
ನಯನ ಬುದ್ಧಿಯ ಒಳಗೊ ಬುದ್ಧಿ ನಯನದ ಒಳಗೊ
ನಯನ ಬುದ್ಧಿಗಳೆರಡು ನಿನ್ನೊಳಗೊ ಹರಿಯೆ ॥ ೧ ॥
ಸವಿಯು ಸಕ್ಕರೆಯೊಳಗೊ ಸಕ್ಕರೆಯು ಸವಿಯೊಳಗೊ
ಸವಿಯು ಸಕ್ಕರೆಯೆರಡು ಜಿಹ್ವೆಯೊಳಗೊ
ಜಿಹ್ವೆ ಬುದ್ಧಿಯ ಒಳಗೊ ಬುದ್ಧಿ ಜಿಹ್ವೆಯ ಒಳಗೊ
ಜಿಹ್ವೆ ಬುದ್ಧಿಗಳೆರಡು ನಿನ್ನೊಳಗೊ ಹರಿಯೆ ॥ ೨ ॥
ಕುಸುಮದೊಳು ಗಂಧವೋ ಗಂಧದೊಳು ಕುಸುಮವೋ
ಕುಸುಮ ಗಂಧಗಳೆರಡು ಘ್ರಾಣದೊಳಗೊ
ಅಸಮಭವ ಕಾಗಿನೆಲೆಯಾದಿಕೇಶವರಾಯ
ಉಸುರಲೆನ್ನಳವಲ್ಲ ಎಲ್ಲ ನಿನ್ನೊಳಗೊ ॥ ೩ ॥

*****

## ೩೮. ಲೋಕದೊಳೆಲ್ಲರೂ ಸರಿ ನಿನಗೆ ರಕ್ಷಿಸು

ಕೊಲ್ಲ ಬಗೆದವನಾಗಿ ನೀ ಹಗೆ-
ಯಲ್ಲಿ ಸಖ್ಯವ ಬೆಳೆಸಲದು ಹಿತ-
ವಲ್ಲ ನಿನ್ನಯ ಗುಣವ ಬಲ್ಲವರಿಲ್ಲ ಯದುಕುಲದಿ ।
ಗೊಲ್ಲನಾರಿಯರೊಳು ಪ್ರವರ್ತಕ-
ನಲ್ಲವೇ ಭಾವಿಸಲು ಲೋಕದೊ-
ಳೆಲ್ಲರೂ ಸರಿ ನಿನಗೆ ರಕ್ಷಿಸು ನಮ್ಮನನವರತ ॥ ೩೮ ॥

**ಅ: ಸಂಹರಿಸಲು ನಿಶ್ಚಯಿಸಿದವನಾದ ನೀನು ನಿನ್ನ ಹಗೆಗಳಲ್ಲಿ ಸಖ್ಯವನ್ನು ಬೆಳೆಸುವುದು ಹಿತಕ್ಕೆ ಕಾರಣವಾಗದು. ಯದುಕುಲದಲ್ಲಿ ನಿನ್ನ ಗುಣಗಳನ್ನು ಪೂರ್ಣವಾಗಿ ಅರ್ಥ ಮಾಡಿಕೊಂಡವರು ಇಲ್ಲ. ನೀನು ಗೊಲ್ಲ ಸ್ತ್ರೀಯರೊಳಗೆ ಸಂಪರ್ಕವನ್ನು ಹೊಂದಿದ್ದವನು. ಸರಿಯಾಗಿ ಯೋಚಿಸಿದಲ್ಲಿ ಲೋಕದೊಳಗೆ ನಿನಗೆ ಎಲ್ಲರೂ ಸಹ ಸಮಾನರು. ಅಂತಹ ಶ್ರೀಹರಿಯೇ! ನೀನು ನಮ್ಮನ್ನು ರಕ್ಷಿಸು.**

ವಿವರಣೆ: ೧. ಶ್ರೀಕೃಷ್ಣನ ಅವತಾರಗಳ ಮುಖ್ಯ ಉದ್ದೇಶಗಳಲ್ಲಿ ಒಂದು ಶಿಷ್ಟರ ರಕ್ಷಣೆಯಾದರೆ ಮತ್ತೊಂದು ದುಷ್ಟರ ವಿನಾಶ. ಶಿಷ್ಟರನ್ನು ನಿಯಮೇನ ರಕ್ಷಿಸುವ ಅವನು ಅದರಂತೆ ದುಷ್ಟರನ್ನು ತಪ್ಪದೇ ಶಿಕ್ಷಿಸುವನು. ಅವನು ಎಂದೂ ಸಹ ತನ್ನ ಹಗೆಗಳಲ್ಲಿ ಸಖ್ಯಭಾವವನ್ನು ಹೊಂದಲಾರನು. ಇದರಿಂದ ಶ್ರೀಹರಿಯು ಜಗನ್ನಿಯಾಮಕನಾಗಿ ಸರ್ವರಲ್ಲೂ ಸಹ ಸಮನಾಗಿ ವರ್ತಿಸುವವನಾಗಿರುವುದು ನಿಶ್ಚಿತ. ಆದರೆ ಆ ವರ್ತನೆ ಹಿಂದೆಯೂ ಸಹ ದುಷ್ಟರಿಗೆ ತಪ್ಪದೇ ಶಿಕ್ಷೆ ನೀಡುವಂತಹ ಉದ್ದೇಶ ಇರುವುದು ಎಂದು ಭಾವ.

೨. ಶ್ರೀಕೃಷ್ಣನು ಅದರಂತೆ ವರ್ತಿಸುವುದು ಮೇಲ್ನೋಟಕ್ಕೆ ಎಲ್ಲರಿಗೂ ಅರ್ಥವಾಗುವಂತಹುದಲ್ಲ. ಅವರಿವರಿಗಿರಲಿ ಅವನನ್ನು ಬಂಧುಗಳಾಗಿ ಹತ್ತಿರದಿಂದ ಕಾಣುವ ಅವಕಾಶವನ್ನು ಹೊಂದಿರುವ ಯಾದವರಿಗೂ ಸಹ ಅವನನ್ನು ಪೂರ್ಣವಾಗಿ ಅರ್ಥ ಮಾಡಿಕೊಳ್ಳುವುದು ಸರ್ವಥಾ ಅಸಾಧ್ಯವಾದ ವಿಚಾರ. ಎಂದರೆ ಅವನು ವರ್ತಿಸುವ ಹಿನ್ನೆಲೆ ಅವರಿಗೂ ಸಹ ತಿಳಿಯುವಂತಹುದಲ್ಲ. ಸುಭದ್ರೆಯನ್ನು ದುರ್ಯೋಧನನಿಗೆ ನೀಡುವಂತಹ ಬಲರಾಮನ ಸಂಕಲ್ಪವನ್ನು ಅವನಿಗೆ ಸುಳಿವು ಸಹ ಸಿಗದಂತೆ ಶ್ರೀಕೃಷ್ಣ ತಪ್ಪಿಸಿ ಅರ್ಜುನನು ಸುಭದ್ರೆಯನ್ನು ಕೈಹಿಡಿಯುವಂತೆ ಮಾಡುವ ಪ್ರಸಂಗ ಇದಕ್ಕೆ ಒಂದು ನಿದರ್ಶನ.

೩. ಸರ್ವೋತ್ತಮ ಪರದೇವತೆಯಾದ ಶ್ರೀಕೃಷ್ಣನು ಬಾಲ್ಯದಲ್ಲಿ ಗೋಕುಲದಲ್ಲಿ ಕೆಲವು ಕಾಲ ನೆಲೆಸಿ ಅಲ್ಲಿ ಗೋಪಿಯರೊಂದಿಗೆ ಬಗೆಬಗೆಯ ರೀತಿಯಲ್ಲಿ ವಿಹಾರ ಮಾಡಿದ ವಿವರ ಶ್ರೀಮದ್ಭಾಗವತಾದಿಗಳಲ್ಲಿ ಬಂದಿದೆ. ಮೇಲ್ನೋಟಕ್ಕೆ ಗೋಪಿಯರು ಮುಗ್ಧೆಯರ ಸಾಲಿಗೆ ಸೇರುವ ಗೊಲ್ಲತಿಯರು. ಶ್ರೀಕೃಷ್ಣನಾದರೋ ಸಾಕ್ಷಾತ್ ಶ್ರೀಹರಿ. ಅಂತಹ ಅವನು ಅವರೊಂದಿಗೆ ವಿಹಾರ ಮಾಡಿದ್ದು ಅವರು ತನ್ನ ಭಕ್ತರು ಎಂಬ ಕಾರಣದಿಂದ ಮಾತ್ರ. ಇದರಿಂದ ಅವನು ಇತರ ವಿಷಯಗಳನ್ನು ಗಮನಿಸದೇ ಭಕ್ತಿಯನ್ನು ಮಾತ್ರ ಗಮನಿಸುವಂತಹ ಕರುಣಾಳು ಎಂಬ ವಿವರ ತಿಳಿಯುವುದು.

೪. ಶ್ರೀಹರಿಗೆ ಲೋಕದಲ್ಲಿ ಎಲ್ಲರೂ ಸಮಾನರು. ಸಮಾನರು ಎಂದರೆ ಅವನಿಗೆ ವೈಯಕ್ತಿಕವಾದ ಪ್ರೀತಿ ಅಥವಾ ದ್ವೇಷಗಳು ಯಾರ ಬಗೆಯು ಸರ್ವಥಾ ಇರುವುದಿಲ್ಲವೆಂದರ್ಥ. ಹಾಗಿದ್ದರೆ ಅವನು ದೇವತೆಗಳಿಗೆ ಅನುಗ್ರಹಿಸುವುದಾಗಲಿ ದೈತ್ಯರಿಗೆ ಮುನಿಯುವುದಾಗಲಿ ಏಕೆ ಮಾಡುವನು ಎಂಬುದು ಪ್ರಶ್ನೆ. ಅದಕ್ಕೆ ಉತ್ತರ ಇದರಲ್ಲಿದೆ.

ಎಂದರೆ ಅವನು ಹಾಗೆ ವರ್ತಿಸುವುದು ಅವರ ಸ್ವಾಭಾವಿಕವಾದ ಯೋಗ್ಯತೆಗೆ ಅನುಗುಣ-ವಾಗಿಯೇ ಹೊರತು ಬಾಂಧವ್ಯ ಅಂತಸ್ತು ಮೊದಲಾದ ಇತರ ಕಾರಣಗಳಿಂದಾಗಿ ಅಲ್ಲ ಎಂದು ತಿಳಿಯಬೇಕು.

೫. ಬ್ರಹ್ಮಸೂತ್ರಗಳಲ್ಲಿ ಭಗವಂತನಿಗೆ ವೈಯಕ್ತಿಕವಾದ ದ್ವೇಷ, ಕ್ರೌರ್ಯ ಮೊದಲಾದವುಗಳು ಇಲ್ಲ ಎಂಬುದನ್ನು ವಿಶೇಷವಾಗಿ ನಿರೂಪಿಸಲಾಗಿದೆ. ಅದರ ಹಿನ್ನೆಲೆಯಲ್ಲಿ ಇದರ ಭಾವ ಅತ್ಯಂತ ಗಮನಾರ್ಹವೆನಿಸುವಂತಹುದು. ಜಾತಿ, ಆಶ್ರಮ, ಮೇಲು, ಕೀಳು ಮೊದಲಾದ ಲೋಕದ ಜನರ ಅಳತೆಗೋಲುಗಳು ಯಾವುವೂ ಭಗವಂತನಿಗೆ ಅನ್ವಯಿಸುವುದಿಲ್ಲ ಎಂದರ್ಥ. ಅವನು ಸದಾ ಗಮನಿಸುವುದು ನಿಷ್ಕಲ್ಮಷವಾದ ಭಕ್ತಿಯನ್ನು ಮಾತ್ರ. ಅದೊಂದು ಇದ್ದಲ್ಲಿ ಅವನು ಎಂತಹವರನ್ನೂ ಅನುಗ್ರಹಿಸುವನು. ಅದೊಂದು ಇಲ್ಲದಿದ್ದಲ್ಲಿ ಅವರು ಯಾರೇ ಆಗಿದ್ದರೂ ಅವರನ್ನು ಸ್ವೀಕರಿಸಲಾರ. ಅವನು ನಿಷ್ಪಕ್ಷಪಾತಿ ಎಂದು ತಾತ್ಪರ್ಯ.

*****

## ೩೯. ಜಗಕೆ ಪಾವನನಾದೆ ರಕ್ಷಿಸು

ಮಗನ ಕೊಂದವನಾಳುವಂತಹ
ಸುಗುಣೆಯರು ಹದಿನಾರುಸಾವಿರ
ಸೊಗಸುಗಾತಿಯರವರ ಮೋಹದ ಬಲೆಗೆ ವಿಟನಾಗಿ ।
ಬಗೆಬಗೆಯ ರತಿಕಲೆಗಳಲಿ ಕೂ-
ರುಗುರ ನಾಟಿಸಿ ಮೆರೆದು ನೀ
ಜಗಕೆ ಪಾವನನಾದೆ ರಕ್ಷಿಸು ನಮ್ಮನನವರತ ॥ ೩೯ ॥

ಅ: ನೀನು ಮಗನಾದ ನರಕಾಸುರನನ್ನು ಕೊಂದವನು ನೀನು; ಆಳುವಂತಹ, ಗುಣವತಿಯರಾದ ಸೊಬಗಿನ ಸ್ತ್ರೀಯರು ಹದಿನಾರು ಸಾವಿರ. ಅವರ ಮೋಹದ ಬಯಕೆಗೆ ನೀನು ವಿಟನಾದೆ. ಬಗೆಬಗೆಯ ರತಿಕ್ರೀಡೆಗಳ ಕಲೆಗಳಲ್ಲಿ ತೀಕ್ಷ್ಣವಾದ ಉಗುರಗಳನ್ನು ನಾಟಿಸಿ ಮೆರೆದು ನೀನು ಲೋಕಕ್ಕೆ ಪವಿತ್ರನೆನ್ನಿಸಿದವನು. ಇಂತಹ ಶ್ರೀಹರಿಯೇ! ನೀನು ನಮ್ಮನ್ನು ಸದಾ ರಕ್ಷಿಸು.

ವಿ: ೧. ಶ್ರೀಕೃಷ್ಣನು ಹದಿನಾರುಸಾವಿರದ ನೂರಾ ಎಂಟು ಪತ್ನಿಯರನ್ನು ಹೊಂದಿದ್ದ ವಿವರ ಶ್ರೀಮದ್ಭಾಗವತಾದಿಗಳಲ್ಲಿ ಸುಪ್ರಸಿದ್ಧ. ಅದರ ಪ್ರಸ್ತಾಪವನ್ನು ಈ ಪದ್ಯದಲ್ಲಿ ಮಾಡುತ್ತಾ ಅದು ಭಗವಂತನಾದ ಅವನಿಗೆ ಭೂಷಣವೇ ಹೊರತು, ದೂಷಣವಲ್ಲ ಎಂಬ ವಿಶೇಷಾಂಶವನ್ನು ನಿರೂಪಿಸಿರುವರು.

೨. ಇಲ್ಲಿ **ಮಗ** ಎಂದರೆ ನರಕಾಸುರ ಎಂದು ತಿಳಿಯಬೇಕು. ಅವನು ಶ್ರೀಹರಿಯ ವರಾಹ ರೂಪದ ಮಗ. ಭಗವಂತನ ರೂಪರೂಪಗಳಿಗೆ ಭೇದವಿಲ್ಲವಾದ್ದರಿಂದ ಅವನು ಕೃಷ್ಣರೂಪಕ್ಕೂ ಮಗನೇ ಎಂದಾಗುವುದು. ಆದ್ದರಿಂದ ಅವನು ಮಗನನ್ನು ಕೊಂದವನು ಎಂದರೆ ಸೂಕ್ತವೆನ್ನಿಸುವುದು. ಇದು ಭಗವಂತನಿಗೆ ಪುತ್ರವ್ಯಾಮೋಹಾದಿ ಯಾವ ದೋಷಗಳೂ ಸಹ ಸರ್ವಥಾ ಇಲ್ಲ ಎಂಬ ವಿಶೇಷಾಂಶಕ್ಕೂ ಸೂಚಕ.

೩. ಇಲ್ಲಿ ಹದಿನಾರು ಸಾವಿರ ಸ್ತ್ರೀಯರು ಎಂದು ಉಲ್ಲೇಖವಿದ್ದರೂ ಹದಿನಾರುಸಾವಿರದ ನೂರಾಎಂಟು ಎಂದೇ ಇದರ ಭಾವ; ಶ್ರೀಕೃಷ್ಣಾಷ್ಟೋತ್ತರಶತನಾಮಸ್ತೋತ್ರದ '**ಷೋಡಶ-ಸ್ತ್ರೀಸಹಸ್ರೇಶಃ**' ಎಂಬ ಶ್ರೀಕೃಷ್ಣಾಷ್ಟೋತ್ತರ ಶತನಾಮ ಸ್ತೋತ್ರದ ಉಲ್ಲೇಖವನ್ನು ಆಧರಿಸಿ ದಾಸರು ಹೀಗೆ ತಿಳಿಸಿರುವರು ಎಂದು ಭಾವಿಸಬಹುದು.

೪. ಶ್ರೀಕೃಷ್ಣನು ಹಾಗೆ ಬಹುಪತ್ನಿಯರನ್ನು ಹೊಂದಿದ್ದುದು ಮೇಲ್ನೋಟಕ್ಕೆ ದೋಷವೆಂಬಂತೆ ಕಾಣುವುದು. ಆದರೆ, ಅದು ವಾಸ್ತವವಾಗಿ ಗುಣವೇ ಆಗಿದೆ ಎಂಬುದು ಇಲ್ಲಿಯ ನಿರೂಪಣೆ.

೫. ಹದಿನಾರು ಸಾವಿರದ ನೂರಾಎಂಟು ಜನ ಪತ್ನಿಯರಲ್ಲಿ ಅಷ್ಟಮಹಾಮಹಿಷಿಯರನ್ನು ಹೊರತುಪಡಿಸಿ ಇತರ ಹದಿನಾರುಸಾವಿರದ ನೂರು ಜನರು ವಾಸ್ತವವಾಗಿ ಸ್ತ್ರೀಯರೇ ಅಲ್ಲ; ಅವರು ಮೂಲತಃ ಅಗ್ನಿ ಪುತ್ರರು. ಶ್ರೀಹರಿಯ ಅಂಗಸಂಗವನ್ನು ಬಯಸಿ ಮೊದಲಿಗೆ ವಾಯುದೇವರನ್ನು ಕುರಿತು ದೀರ್ಘ ಕಾಲ ತಪಸ್ಸನ್ನಾಚರಿಸಿ ಅವರ ವರವನ್ನು ಪಡೆದು ಹೀಗೆ ಸ್ತ್ರೀಯರಾಗಿ ಜನಿಸಿದರು. ಅವರು ನರಕಾಸುರನ ಬಂದಿಗಳಾಗಿದ್ದಾಗ ಶ್ರೀಕೃಷ್ಣ ಆ ಅಸುರನನ್ನು ಸಂಹರಿಸಿ ಅವರನ್ನು ವಿವಾಹವಾದ. ಶ್ರೀಕೃಷ್ಣ ಹೀಗೆ ಅವರನ್ನು ವಿವಾಹವಾದದ್ದು ಅವರ ಕೋರಿಕೆಯನ್ನು ಮನ್ನಿಸಲೇ ಹೊರತು ತಾನು ಅವರನ್ನು ಬಯಸಿ ಎಂದಲ್ಲ. ಇದು ಅವನ ಭಕ್ತವಾತ್ಸಲ್ಯವೆಂಬ ಗುಣವನ್ನು ಪ್ರಕಾಶನಪಡಿಸುವ ಶ್ರೇಷ್ಠ ಕಾರ್ಯವೇ ಹೊರತು ಸರ್ವಥಾ ದೋಷವಲ್ಲ ಎಂದು ತಿಳಿಯಬೇಕು.

೬. ಶ್ರೀಕೃಷ್ಣನ ಈ ಕಾರ್ಯ ಕೇವಲ ಸಾಮಾನ್ಯ ಪವಿತ್ರಕಾರ್ಯವಾಗಿರದೇ ಲೋಕಕ್ಕೆ ಪಾವನವೆನಿಸುವ ಮಹಾಪವಿತ್ರವಾದ ಕಾರ್ಯ ಎಂಬುದನ್ನು ಜಗಕೆ ಪಾವನವಾಗಿ ಎಂಬ ಪದದಿಂದ ಸೂಚಿಸಿರುವರು.

೭. ಇನ್ನೊಂದು ರೀತಿಯಲ್ಲಿ ಶ್ರೀಕೃಷ್ಣನು ಗೋಕುಲದಲ್ಲಿದ್ದಾಗ ಗೋಪಿಜನ ಜಾರ ಎನ್ನಿಸಿದ್ದು ಸಹ ಇದೇ ರೀತಿಯಲ್ಲಿ ಅವನ ಪಾವಿತ್ರ್ಯವನ್ನು ಸಾರುವ ಮಹತ್ಕಾರ್ಯವೇ ಹೊರತು ಲೋಕದ ಜಾರತ್ವದಂತೆ ನಿಂದ್ಯವಾದುದಲ್ಲ ಎಂಬುದನ್ನು ಸಹ ವಿವರಿಸುವ ಪದ್ಯ ಎಂದು ತಿಳಿಯಬಹುದು; **ವಿಟ** – ಜಾರ.

೮. ತನ್ನ ಆರಾಧ್ಯದೈವನಾದ ಶ್ರೀಹರಿಯು ಹೀಗೆ ಸರ್ವದೋಷದೂರನಾಗಿದ್ದು ಸರ್ವಥಾ ಸರ್ವವಂದ್ಯನಾಗಿರುವನು, ಆದ್ದರಿಂದಲೇ ಅವನು ಸಕಲ ಲೋಕವನ್ನು ರಕ್ಷಿಸುವ ಮಹಾಮಹಿಮ ಎಂಬುದು ಇಲ್ಲಿಯ ಮುಖ್ಯ ಭಾವ.

*****

## ೪೦. ನೀ ಪತಿಕರಿಸೆ ಬಳಿಕಿನ್ನೇನು ಚಿಂತಿಸಲೇಕೆ ರಕ್ಷಿಸು

ಏನು ಮಾಡಿದಡೇನು ಕರ್ಮವ
ನೀನೊಲಿಯದಿನ್ನಿಲ್ಲವಿದಕನು-
ಮಾನವುಂಟೇ ಭ್ರಮರಕೀಟನ್ಯಾಯದಂದದಲಿ ।
ನೀನೊಲಿಯೆ ತೃಣ ಪರ್ವತವು ಪುಸಿ-
ಯೇನು ನೀ ಪತಿಕರಿಸೆ ಬಳಿಕಿ-
ನ್ನೇನು ಚಿಂತಿಸಲೇಕೆ ರಕ್ಷಿಸು ನಮ್ಮನನವರತ ॥ ೪೦ ॥

ಅ: ಯಾವುದೇ ಕರ್ಮವನ್ನು ಯಾವುದೇ ರೀತಿಯಲ್ಲಿ ಮಾಡಿದರು ಸಹ ಅದು ಫಲ ನೀಡುವುದು ನೀನು ಒಲಿದಾಗ ಮಾತ್ರ. ಇಲ್ಲವಾದರೆ ಆ ಕರ್ಮಕ್ಕೆ ಯಾವ ಬೆಲೆಯು ಇರದು. ಈ ಬಗ್ಗೆ ಸಂದೇಹವೇ ಬೇಕಿಲ್ಲ ಇದು ಭ್ರಮರಕೀಟ ನ್ಯಾಯದಂತಹ ನ್ಯಾಯವನ್ನು ಹೋಲುವುದು. ನೀನು ಒಲಿದರೆ ಪರ್ವತವು ತೃಣಪ್ರಾಯವೆನ್ನಿಸುವುದು. ನೀನು ಒಲಿದಾಗ ಚಿಂತೆಗೆ ಅನಗತ್ಯ. ಅಂತಹ ಶ್ರೀಹರಿಯೇ! ನಮ್ಮನ್ನು ಸದಾ ರಕ್ಷಿಸಲಿ.

ವಿ: ೧. ಶ್ರೀ ಹರಿಯ ಅನುಗ್ರಹದ ಹಿರಿಮೆಯನ್ನು ಇಲ್ಲಿ ವಿವರಿಸಿರುವರು.

೨. ಸಾಮಾನ್ಯವಾಗಿ ನಾವು ಮಾಡುವ ಕರ್ಮ ನಮ್ಮ ಒಳಿತು ಕಡುಕಿಗೆ ಕಾರಣವೆಂಬುದು ಎಲ್ಲರ ತಿಳುವಳಿಕೆ. ನಾ ಮಾಡಿದ ಕರ್ಮ ಬಲವಂತವಾದರೆ ಎಂಬ ಮಾತು ಇದಕ್ಕೆ ನಿದರ್ಶನ. ಮೀಮಾಂಸಕ ಮತವಂತೂ ಕರ್ಮಕ್ಕೆ ಸಕಲ ವಿಧವಾದ ಪ್ರಾಧಾನ್ಯವನ್ನು ನೀಡಿದೆ. ಸಕಲವೂ ನಡೆಯುವುದು ಕರ್ಮಕ್ಕನುಗುಣವಾಗಿ. ಅವರಿವರಿರಲಿ ಬ್ರಹ್ಮ ವಿಷ್ಣು ಮಹೇಶ್ವರಾದಿಗಳು ಸಹ ಈ ಕರ್ಮದ ಬಂಧನಕ್ಕೆ ಒಳಗಾದವರು ಎಂಬುದು ಅವರ ಕಲ್ಪನೆ. ಆದರೆ ಅದು ಸರ್ವಥಾ ಸರಿಯಲ್ಲ. ಜಡಪದಾರ್ಥವಾದ ಕರ್ಮ ಚೇತನರನ್ನು ತಾನಾಗಿಯೇ ಎಂದೂ ನಿಯಂತ್ರಿಸಲಾರದು. ಕರ್ಮ ಮೊದಲಾದ ಸಕಲಕ್ಕೂ ಮುಖ್ಯ ಪ್ರೇರಕನೂ, ನಿಯಮಾಕನು ಶ್ರೀಹರಿ ಎಂಬುದು ವೇದಾಂತದ ನಿರೂಪಣೆ. ಅದನ್ನು ಈ ಪದ್ಯದಲ್ಲಿ ಸ್ಫುಟಪಡಿಸಲಾಗಿದೆ.

೩. ಕರ್ಮವು ಎಂತಹುದೇ ಆಗಿರಬಹುದು, ಅದನ್ನು ಎಂತಹ ಉತ್ತಮ ಮಟ್ಟದಲ್ಲಿಯೇ ಆಚರಿಸಿರಬಹುದು, ಆದರೂ ಸಹ ಅದು ಶ್ರೀಹರಿಯ ಒಲುಮೆಗೆ ಪಾತ್ರವಾಗದಿದ್ದಲ್ಲಿ

ಆದರಿಂದ ಏನೂ ನಡೆಯದು ಎಂದರ್ಥ. ಬ್ರಹ್ಮಸೂತ್ರಗಳ ಮೇಲೆ ಭಾಷ್ಯ ರಚಿಸಿದ ಹೆಚ್ಚಿನವರು ಮೀಮಾಂಸಕರಂತೆ ವಾದ ಮಂಡಿಸಿದವರೇ. ಕರ್ಮಕ್ಕೆ ಪ್ರಾಧಾನ್ಯ ನೀಡಿದ್ದು ಮೀಮಾಂಸಕರಾದರೆ, ಜ್ಞಾನಕ್ಕೆ ಪ್ರಾಧಾನ್ಯ ನೀಡಿದ್ದು ವೇದಾಂತದ ಇತರ ಭಾಷ್ಯಕಾರರು. ಜ್ಞಾನವು ಪ್ರಧಾನವಾದುದು, ಅದೂ ಸಹ ಶ್ರೀಹರಿಯ ಅನುಗ್ರಹದಿಂದ ಮಾತ್ರವೇ ವರ ನೀಡುವಂತಹುದು ಎಂಬುದು ಮಧ್ವಭಾಷ್ಯದಿಂದ ಅನಾವರಣಗೊಂಡ ಪ್ರಮೇಯ. ಜ್ಞಾನಕ್ಕೆ ಪ್ರಾಧಾನ್ಯ ನೀಡುವ ವೇದಾಂತಹ ಆಶಯ ಶ್ರೀಹರಿಯ ಒಲುಮೆಗೆ ಅದು ಪ್ರಧಾನ ಕಾರಣ ಎಂಬ ಅರ್ಥದಲ್ಲಿಯೇ ಹೊರತು ಜ್ಞಾನವು ತನ್ನಷ್ಟಕ್ಕೆ ಮುಕ್ತಿಗೆ ಕಾರಣವಾಗುವುದು ಎಂಬರ್ಥದಲ್ಲಿ ಅಲ್ಲ ಎಂಬುದನ್ನು ಶ್ರೀಮದಾಚಾರ್ಯರು ಸಾಧಾರವಾಗಿ ನಿರೂಪಿಸಿರುವರು: ಜಿಜ್ಞಾಸೋತ್ಥಜ್ಞಾನಜಾತ್ ತತ್ಪ್ರಸಾದಾದೇವ ಮುಚ್ಯತೇ.

೪. ಸಾಮಾನ್ಯವಾಗಿ ಕರ್ಮವು ಅಪರಿಹಾರ್ಯ ಎಂಬುದಾಗಿ ಶಾಸ್ತ್ರವು ತಿಳಿಸಿದೆ. ಇದು ಸ್ವಲ್ಪಮಟ್ಟಿಗೆ ವಾಸ್ತವವೂ ಹೌದು. ಇದನ್ನು ಹೀಗೆ ಅರ್ಥಮಾಡಿಕೊಳ್ಳುವ ಜನ ಉದ್ಧಾರದ ಹಾದಿಗೆ ಸಾಗಲು ಪ್ರಯತ್ನಿಸುವುದನ್ನು ಬಿಟ್ಟು ಕರ್ಮದ ಮೇಲೆ ಭಾರ ಹಾಕಿ ನಿರಾಶಾವಾದಿಗಳಾಗುವುದು ಸರಿಯಲ್ಲ ಎಂಬುದು ಇಲ್ಲಿಯ ಆಶಯ. ಮೀಮಾಂಸಕರು ಕರ್ಮವು ಎಲ್ಲದಕ್ಕಿಂತ ಮಿಗಿಲು ಎಂದು ಭಾವಿಸಿ ದೈವವೂ ಕರ್ಮಕ್ಕೆ ಅಧೀನ ಎಂಬ ತೀರ್ಮಾನಕ್ಕೆ ಬಂದವರು. ಆದರೆ, ಅದು ಸರಿಯಲ್ಲ ಎಂಬ ಅಂಶವೂ ಇದರಲ್ಲಿದೆ. ಕರ್ಮವು ಎಷ್ಟೇ ಪ್ರಬಲವಾಗಿದ್ದರೂ ಅದು ಜಡ; ಜಡಕ್ಕೆ ಸ್ವತಃ ಕರ್ತೃತ್ವಾದಿ ಗುಣಗಳು ಸರ್ವಥಾ ಇಲ್ಲ. ಶ್ರೀಹರಿಯು ಸರ್ವತಂತ್ರಸ್ವತಂತ್ರನಾದ ಪರದೇವತೆ. ಅವನು ಒಲಿದಾಗ ಯಾವ ಕರ್ಮವೂ ಸಾಧನೆಗೆ ಅಡ್ಡಿಯಾಗದು ಎಂಬುದು ಇಲ್ಲಿಯ ಸಂದೇಶ. ಶ್ರೀಹರಿಯ ದರ್ಶನವಾಗುತ್ತಲೇ ಸಂಚಿತಕರ್ಮದ ರಾಶಿ ಸುಟ್ಟು ಬೂದಿಯಾಗುವುದು. ಆಗಾಮಿ ಕರ್ಮಗಳಿಗೆ ಕರ್ಮಗಳ ಲೇಪ ಒದಗದು. ಶ್ರೀಹರಿಯ ಸಾಮರ್ಥ್ಯ ಇಂತಹುದು. ಪ್ರಾರಬ್ಧ ಕರ್ಮವು ಮಾತ್ರ ಉಳಿದುಕೊಳ್ಳುವುದು. ಅದನ್ನು ಸಹ ನಾಶಮಾಡುವ ಸಾಮರ್ಥ್ಯ ಶ್ರೀಹರಿಗೆ ಇದ್ದರೂ, ಅವನು ಅದನ್ನು ಅನುಭವಿಸುವ ಅವಕಾಶವನ್ನು ಜ್ಞಾನಿಗಳಿಗೆ ನೀಡಿ ಆ ಮೂಲಕ ಅವರ ಸಾಧನೆಗೆ ಇನ್ನಷ್ಟು ಮೆರಗು ಬರುವಂತೆ ಮಾಡಿ ಮೋಕ್ಷದಲ್ಲಿ ಆನಂದಾತಿಶಯವನ್ನು ನೀಡಿ ಅನುಗ್ರಹಿಸುವನು ಎಂಬುದು ಬ್ರಹ್ಮಸೂತ್ರ ಮೊದಲಾದ ಆಕರ ಗ್ರಂಥಗಳಲ್ಲಿ ನಿರೂಪಿತವಾಗಿರುವ ವಿಷಯ. ಈ ಹಿನ್ನೆಲೆಯಲ್ಲಿ ಶ್ರೀಕನಕದಾಸರ ಈ ಮಾತು ತುಂಬಾ ಮೌಲಿಕವಾದುದು.

೫. ಶ್ರೀಕನಕದಾಸರು ಶ್ರೀವ್ಯಾಸರಾಜರು ಹಾಗೂ ಶ್ರೀವಾದಿರಾಜರ ಶಿಷ್ಯತ್ವ ವಹಿಸಿ ಮಧ್ವಸಿದ್ಧಾಂತವನ್ನು ಅಂಗೀಕರಿಸಿ ಬಾಳಿದವರು. ಅದಕ್ಕನುಗುಣವಾಗಿ ಇಲ್ಲಿ ಶ್ರೀಹರಿಯ ಪ್ರಸಾದವೇ ಜ್ಞಾನ ಕರ್ಮ ಮೊದಲಾದ ಎಲ್ಲಕ್ಕಿಂತ ಮಿಗಿಲಾದ ಮೋಕ್ಷ ಸಾಧನ ಎಂಬುದನ್ನು ಹೀಗೆ ನಿರೂಪಿಸಿರುವರು.

೬. ಪಾಂಡವರ ರಾಜಸೂಯಯಾಗ ಲೋಕೋತ್ತರವೆನ್ನಿಸಲು ಅದು ಶ್ರೀಕೃಷ್ಣನ ಹಾಗೂ ಶ್ರೀವೇದವ್ಯಾಸರ ಅನುಗ್ರಹಕ್ಕೆ ಪಾತ್ರವಾದುದು ಮುಖ್ಯ ಕಾರಣ. ಸ್ವತಃ ಶ್ರೀಕೃಷ್ಣ ಶ್ರೀವೇದವ್ಯಾಸ ಹಾಗೂ ಶ್ರೀಪರಶುರಾಮ ಎಂಬ ಮೂರು ರೂಪದಿಂದ ಆ ಯಾಗದ ಕಾಲದಲ್ಲಿ ಉಪಸ್ಥಿತನಿದ್ದು ಶ್ರೀಹರಿ ಅವರನ್ನು ಅನುಗ್ರಹಿಸಿದ. ಅಂತಹುದೇ ಯಾಗವನ್ನು ದುರ್ಯೋಧನ ಮಾಡಿದ, ಪೌಂಡರೀಕ ಎಂದು ಅದರ ಹೆಸರು. ಆದರೆ, ಅದನ್ನು ಮಾಡಿ ಒಂದು ವರ್ಷದಲ್ಲಿ ಅವನು ಸರ್ವಬಗೆಯ ವಿನಾಶವನ್ನು ಕಂಡ. ಅದಕ್ಕೆ ಕಾರಣ ಅವನು ಅದನ್ನು ಶ್ರೀಹರಿಯ ಒಲುಮೆಗಾಗಿ ಮಾಡದೇ ಪಾಂಡವರ ಮೇಲಿನ ಅಸೂಯೆಯಿಂದ ಮಾಡಿದ್ದು. ಅದು ಪುಂಡರೀಕಾಕ್ಷನಾದ ಶ್ರೀಹರಿಯ ಅನುಗ್ರಹಕ್ಕೆ ಕಾರಣವಾಗದೇ ಆಗ್ರಹಕ್ಕೆ ಕಾರಣವಾಯಿತು. ಇದು ಶ್ರೀಹರಿಯ ಅನುಗ್ರಹವೇ ಕರ್ಮ ಮೊದಲಾದವುಗಳಿಗಿಂತ ಪ್ರಧಾನ ಎಂಬುದಕ್ಕೆ ಉತ್ತಮ ನಿದರ್ಶನ.

೭. ಮಧ್ವಸಿದ್ಧಾಂತದ ಪರಮ ಪ್ರಮೇಯವನ್ನು ಶ್ರೀದಾಸರು ಇಲ್ಲಿ ವಿಶಿಷ್ಟರೀತಿಯಲ್ಲಿ ನಿರೂಪಿಸಿರುವರು.

೮. ಇದಕ್ಕೆ ದಾಸರು ಶ್ರೀಹರಿಯು ಕೃಪೆಮಾಡಿದಾಗ ಒಂದು ಪರ್ವತದಷ್ಟು ಆಪತ್ತು ಸಹ ಹುಲ್ಲುಕಡ್ಡಿಯಷ್ಟು ಹಗುರವೆನ್ನಿಸುವುದು. ಅವನು ಒಲಿದರೆ ಎಂತಹ ಪಾಪವು ಬಂಧಕವೆನ್ನಿಸಿದೇ ಮೋಚಕವೇ ಆಗುವುದು ಎಂದು ಭಾವ. ಇಲ್ಲಿಯ ತೃಣಪರ್ವತವು ಎಂಬುದನ್ನು ಪರ್ವತವು ತೃಣ ಎಂದು ಅನ್ವಯಿಸಿಕೊಂಡಾಗ ಈ ಅರ್ಥ ಲಭಿಸುವುದು. '**ಗುಡ್ಡದಂತಹ ಆಪತ್ತು ಕಡ್ಡಿಯಂತೆ ಪರಿಹಾರವಾಯಿತು**' ಎಂಬ ಲೋಕದ ಮಾತು ಇದಕ್ಕೆ ಸಂವಾದಿಯಾಗಿದೆ.

೯. ಇದರಲ್ಲಿ ತೃಣವು ಪರ್ವತದಷ್ಟು ಭಾರವಾಗುವುದು ಎಂಬ ಅರ್ಥದಲ್ಲೂ ತೃಣ-ಪರ್ವತವು ಎಂಬುದನ್ನು ತಿಳಿಯಬಹುದು. ಇದು ತಲವಕಾರೋಪನಿಷತ್ತಿನಲ್ಲಿ ಬರುವ ಪ್ರಸಂಗವನ್ನು ಕುರಿತಾದುದು. ಶ್ರೀಹರಿಯ ಅನುಗ್ರಹದಿಂದ ಆದ ತಮ್ಮ ವಿಜಯವನ್ನು ಕೆಲವು ದೇವತೆಗಳು ತಮ್ಮ ಸ್ವಂತ ಸಾಮರ್ಥ್ಯದ ಸಿದ್ಧಿ ಎಂದು ಭ್ರಮಿಸಿ ಅಹಂಕಾರಕ್ಕೊಳಗಾದಾಗ ಯಕ್ಷ ರೂಪದಿಂದ ಕಾಣಿಸಿಕೊಂಡ ಶ್ರೀಹರಿಯು ಒಂದು ಹುಲ್ಲುಕಡ್ಡಿಯನ್ನು ಮುಂದಿರಿಸಿ ಅದನ್ನು ಸುಡಲು ಅಗ್ನಿಗೆ ಹೇಳುವನು; ಅದಕ್ಕೆ ಪ್ರಯತ್ನಿಸಿ ಅಗ್ನಿ ವಿಫಲನಾಗಿ ಮರಳುವನು. ಅದರಂತೆ ಅದನ್ನು ಹಾರಿಸಲಾಗದೇ ನಾಸಿಕ್ಯ ವಾಯು ಸಹ ಮರಳುವನು. ಇದು ಶ್ರಿಹರಿಯ ಒಲುಮೆ ತಪ್ಪಿದಾಗ ಸಾಮಾನ್ಯರಿರಲಿ ಆಯಾ ಕಾರ್ಯಗಳನ್ನು ಮಾಡಲು ಸಮರ್ಥರೆನ್ನಿಸಿದ ದೇವತೆಗಳಿಗೆ ತೀರಾ ಸಾಮಾನ್ಯವೆನ್ನಿಸುವ ಕಾರ್ಯವು ಸಹ ಸರ್ವಥಾ ಅಶಕ್ಯವೆನ್ನಿಸುವುದು ಎಂಬುದಕ್ಕೆ ನಿದರ್ಶನ.

೧೦. ಇಲ್ಲಿ ಬಂದಿರುವ [೧]ಭ್ರಮರ-ಕೀಟ ನ್ಯಾಯದ ಪ್ರಸ್ತಾಪದ ವಿವರ ಹೀಗಿದೆ:

---

೧. ಕೀಟಃ ಪೇಶಸ್ಕರಂ ಧ್ಯಾಯನ್ ಕುಡ್ಯಾಂ ತೇನ ಪ್ರವೇಶಿತಃ।
ಯಾತಿ ತತ್ಸಮತಾಂ ರಾಜನ್ ಪೂರ್ವರೂಪಮಸಂತ್ಯಜನ್ ॥ — ಭಾಗವತ (೧೧/೯/೨೩)

ಭ್ರಮರದಿಂದ ಹಿಡಿದು ಗೂಡಿನಲ್ಲಿ ಬಂಧಿತವಾಗಿ ಪೋಷಿತವಾಗುವ ಕೀಟವು ಸತತ ಅದನ್ನೇ ಚಿಂತಿಸುತ್ತಾ ಮುಂದೆ ಭ್ರಮರವಾಗಿ ಮಾರ್ಪಡುವುದು ಸೃಷ್ಟಿಯ ವೈಶಿಷ್ಟ್ಯಗಳಲ್ಲೊಂದು. ಇದರಂತೆ ಭಗವಂತನನ್ನು ಭಕ್ತಿಯಿಂದ ಚಿಂತಿಸುವ ಜೀವನು ಅವನೊಂದಿಗೆ ಮರಳಿ ಹುಟ್ಟು ಸಾವುಗಳಿಲ್ಲದಂತಹ ಸಾಮ್ಯವನ್ನು ಹೊಂದುವನು ಎಂಬುದು ಇದರ ಭಾವ. ಕೆಲವರು ಇದನ್ನು ಭಗವಂತನನ್ನು ಚಿಂತಿಸುವ ಜೀವ ಭಗವಂತನೇ ಆಗಿಬಿಡುವನು ಎಂಬುದಕ್ಕೆ ನಿದರ್ಶನ ಎಂದು ಭಾವಿಸುವುದುಂಟು. ಅದು ಸರಿಯಲ್ಲ, ಭ್ರಮರವನ್ನು ಚಿಂತಿಸುವ ಭ್ರಮರ ಅದೇ ಭ್ರಮರವಾಗದೇ ಅಂತಹುದೇ ಭ್ರಮರವಾಗುವುದು. ಅದರಂತೆ ಇಲ್ಲಿ ನಿರೂಪಿತವಾಗಿರುವುದು ಒಂದು ರೀತಿಯ ಸಾಮ್ಯವೇ ಹೊರತು ಐಕ್ಯವಾಗಲಿ ಸರ್ವಸಾಮ್ಯವಾಗಲಿ ಅಲ್ಲ ಎಂದು ತಿಳಿಯಬೇಕು. ಸಜ್ಜನರ ಸಹವಾಸ ಮಾಡುವುದರಿಂದ ಸಜ್ಜನರಾಗುವುದು, ದುರ್ಜನರ ಸಹವಾಸದಿಂದ ದುರ್ಜನರಾಗುವುದು ಸಹ ಈ ನ್ಯಾಯದಿಂದ ಸೂಚಿತ ಎಂದು ತಿಳಿಯಬಹುದು; ಭ್ರಮರ – ದುಂಬಿ, ಪುಸಿ – ಸುಳ್ಳು.

೧೧. ಶ್ರೀಹರಿಯ ಒಲುಮೆ ಇಲ್ಲದ ಸಕಲ ಕರ್ಮಗಳು ನಿರರ್ಥಕ ಎಂದು ತಿಳಿಸುವ ಶ್ರೀಕನಕದಾಸರ ಪದ್ಯ ಹೀಗಿದೆ:

ಜಪವ ಮಾಡಿದರೇನು ತಪವ ಮಾಡಿದರೇನು
ವಿಪರೀತ ಕಪಟಗುಣ ಕಲುಷವಿದ್ದವರು ॥ ಪ ॥
ಆದಿಗುರುವರಿಯದೆ ಅತ್ತಲಿತ್ತಲು ತೊಳಲಿ
ವೇದಶಾಸ್ತ್ರವನೋದಿ ಬಾಯಾರಲು
ಹಾದಿಯನು ಕಾಣದಂತಿರುತಿರ್ದು ಹಲವೆಂಟು
ವಾದ ತರ್ಕದೊಳಿದ್ದ ಭೇದವಾದಿಗಳು ॥ ೧ ॥
ನುಡಿ ನಡೆವ ಕಾಲದಲಿ ದಾನ ಮಾಡದೆ ಇರಲು
ಅಡವಿಯೊಳು ಕೆರೆ ತುಂಬಿ ಬತ್ತಿದಂತೆ
ಮಡದಿ ಮಕ್ಕಳಿಗೆಂದು ಒಡವೆ ವಸ್ತ್ರವ ಗಳಿಸೆ
ಹಿಡಿಯಲಾ ಯಮನವರ ಕಟ್ಟಿಗೊಳಗಾಗಿ ॥ ೨ ॥

---

ಸತ್ಯಪ್ಯತ್ಯಲ್ಪವಿದ್ವೇಷೇ ಭೋಜನಂ ದಾಸ್ಯತೀತಿ ತು ।
ಸ್ನೇಹಬಾಹುಲ್ಯತಃ ಕೀಟಃ ಪೇಶಸ್ಕಾರಿಸಮೋ ಭವೇತ್ ।
ದ್ವೇಷೇ ಸರ್ವಾತ್ಮನಾ ನಷ್ಟೇ ಸ್ನೇಹೇ ಚೈವ ವಿವರ್ಧತಿ ।
ಸರೂಪತಾ ತದೈವ ಸ್ಯಾತ್ ಕೀಟಸ್ಯೈವಂ ಹರೇರಪಿ ।
ಅತ್ಯಲ್ಪೋಽಪಿ ಹರೇರ್ದ್ವೇಷಃ ಸ್ನೇಹಸ್ಯಾನುದಯಂಕರಃ ।
ಸೋಽಯಂ ವಿಶೇಷೋ ನಾನ್ಯಸ್ಯ ಫಲದಾತಾ ಹಿ ಕೇಶವಃ ।
ನ ಹಿ ಪೇಶಸ್ಕೃತಃ ಕಿಂಚಿತ್ ಫಲದಾತೃತ್ವಮಿಷ್ಯತೇ ।
ಸ್ವಾತಂತ್ರ್ಯಾದ್ವಿದ್ವಿಷಾಂ ಚೈವ ಕೇಶವೋ ನ ಸುಖಪ್ರದಃ ॥ ಇತಿ ಸ್ವಾತಂತ್ರ್ಯವಿವೇಕೇ
– ಭಾ.ತಾ. (೧೧/೯/೨೩)

ಚಳಿಮಳೆಯು ಅತಿ ಕಾರುಗತ್ತಲೆಯೊಳಗೆ ಎದ್ದು
ಹೊಳೆಯೊಳಗೆ ಮುಳುಗಿ ಜಪ ತಪವ ಮಾಡಿ
ಕಳವಳಿಸಿ ನೂರೆಂಟು ಹಲುಬಿ ಬಳಲಲು ಬೇಡ
ನಳಿನಾಕ್ಷ ಆದಿಕೇಶವನ ನೆನೆ ಮನವೇ ॥ ೩ ॥

*****

## ೪೧. ಇಷ್ಟಬಾಂಧವ ನೀನು ರಕ್ಷಿಸು

ಎಷ್ಟು ಮಾಡಲು ಮುನ್ನ ತಾ ಪಡೆ-
ದಷ್ಟೆ ಎಂಬುದ ಲೋಕದೊಳು ಮತಿ-
ಗೆಟ್ಟ ಮಾನವರಾಡುತಿಹರಾ ಮಾತದಂತಿರಲಿ ।
ಪಟ್ಟವಾರಿಂದಾಯ್ತು ಧ್ರುವನಿಗೆ
ಕೊಟ್ಟ ವರ ತಪ್ಪಿತೆ ಕುಚೇಲನಿ-
ಗಿಷ್ಟಬಾಂಧವ ನೀನು ರಕ್ಷಿಸು ನಮ್ಮನನವರತ ॥ ೪೧ ॥

ಅ: ಎಷ್ಟೇ ಪ್ರಯತ್ನ ಪಟ್ಟರೂ ಸಹ ಫಲ ದೊರೆಯುವುದು ಅವನ ಯೋಗ್ಯತೆಗನುಗುಣವಾಗಿಯೇ ಹೊರತು ಹೆಚ್ಚಿನದಲ್ಲ ಎಂಬುದು ಲೋಕದಲ್ಲಿ ಬುದ್ಧಿಹೀನರಾದ ಮಾನವರು ಆಡುತ್ತಿರುವ ಮಾತು. ಅದಕ್ಕೆ ಮಹತ್ವವಿಲ್ಲ. ಧ್ರುವನಿಗೆ ಪಟ್ಟವಾದದ್ದು ಯಾರಿಂದ? ಕುಚೇಲನಿಗೆ ಶ್ರೀಕೃಷ್ಣ ನೀಡಿದ ವರವು ತಪ್ಪಿತೇನು? ಆದ್ದರಿಂದ, ಶ್ರೀಹರಿಯೇ! ಇಷ್ಟವನ್ನು ಪೂರೈಸುವ ಬಾಂಧವನಾದ ನೀನು ನನ್ನನ್ನು ಸದಾ ರಕ್ಷಿಸಬೇಕು.

ವಿ.: ೧. ಹಿಂದಿನ ಪದ್ಯದಲ್ಲಿ ಕರ್ಮದ ಇತಿಮಿತಿಗಳನ್ನು ನಿರೂಪಿಸಿದರೆ ಈ ಪದ್ಯದಲ್ಲಿ ಶ್ರೀಹರಿಯ ಒಲುಮೆಯಾದಾಗ ಸಾಮಾನ್ಯ ಕರ್ಮವೂ ಸಹ ಅಸಾಮಾನ್ಯ ಫಲ ನೀಡುವುದು ಎಂಬುದನ್ನು ದೃಷ್ಟಾಂತಪೂರ್ವಕವಾಗಿ ವಿವರಿಸಲಾಗಿದೆ.

೨. ಸಾಮಾನ್ಯವಾಗಿ ಕರ್ಮಕ್ಕೆ ತಕ್ಕಂತೆ ಫಲ ಎಂಬುದು ಲೋಕದ ನಿಯಮ. ಆದರೆ ಮುಖ್ಯಫಲದಾಯಕನಾದ ಶ್ರೀಹರಿಯು ಒಲಿದಾಗ ಸಾಮಾನ್ಯ ಕರ್ಮವೂ ಸಹ ಅಸಾಮಾನ್ಯ ಫಲ ನೀಡುವುದು. ಆದ್ದರಿಂದ ಕರ್ಮಕ್ಕಿಂತ ಮುಖ್ಯವಾಗಿ ಶ್ರೀಹರಿಯ ಒಲುಮೆಯೇ ಪ್ರಧಾನವೆಂದು ಇಲ್ಲಿ ಪ್ರತಿಪಾದಿಸಲಾಗಿದೆ.

೩. ಧ್ರುವನ ವಯಸ್ಸು ಕೇವಲ ಐದು ವರ್ಷ; ಅವನು ಮಾಡಿದ ಸಾಧನೆ ಕೇವಲ ಆರು ತಿಂಗಳುಗಳು ಮಾತ್ರ. ಅವನು ಜಪಿಸಿದ ಮಂತ್ರ ವಾಸುದೇವ ದ್ವಾದಶಾಕ್ಷರ ಮಂತ್ರ. ಆದರೆ,

ಅವನಿಗೆ ಲಭಿಸಿದ ಸಿದ್ಧಿ ೩೬ಸಾವಿರ ವರ್ಷಗಳಷ್ಟು ದೀರ್ಘಕಾಲದ ಸಮಗ್ರ ಭೂಲೋಕದ ಆಧಿಪತ್ಯ, ಕೋಟ್ಯಂತರ ವರ್ಷಗಳ ಧ್ರುವನಕ್ಷತ್ರದ ಒಡೆತನ ಹಾಗೂ ಶಾಶ್ವತವಾಗಿ ವಿಷ್ಣುಲೋಕದಲ್ಲಿ ವಾಸ. ಮೇಲ್ನೋಟಕ್ಕೆ ಅಲ್ಪವೆನ್ನಿಸುವ ಸಾಧನೆಗೆ ಅತ್ಯಂತ ಮಹತ್ತರವಾದ ಫಲ ದೊರಕಿದ ನಿದರ್ಶನ ಇದು. ಇದಕ್ಕೆ ಕಾರಣವಾದದ್ದು ಶ್ರೀಹರಿಯ ಅನುಗ್ರಹ ಆದ್ದರಿಂದ ಅವನ ಅನುಗ್ರಹಕ್ಕಿರುವ ಮಹತ್ವ ಬೇರಾವುದಕ್ಕೂ ಸಹ ಸರ್ವಥಾ ಇಲ್ಲ ಎಂದು ಭಾವ.

೪. ಕುಚೇಲನದು ಮತ್ತೊಂದು ನಿದರ್ಶನ. ಅವನು ಒಬ್ಬ ಬಡ ಬ್ರಾಹ್ಮಣ. ಊಟಲು ಸರಿಯಾಗಿ ಬಟ್ಟೆ ಇಲ್ಲದಿದ್ದ ದರಿದ್ರ; ಶ್ರೀಕೃಷ್ಣನಿಗೆ ಸಮರ್ಪಿಸಲು ಅವನು ಒಯ್ದದ್ದು ಒಂದು ಹಿಡಿ ಅವಲಕ್ಕಿ ಮಾತ್ರ. ಆದರೆ, ಅವನಿಗೆ ಲಭಿಸಿದ್ದು ಮಾತ್ರ ಅಖಂಡ ಐಶ್ವರ್ಯ. ಇದು ಸಹ ಧ್ರುವ ಚರಿತ್ರೆಯಂತಹುದೇ. ಮೇಲ್ನೋಟಕ್ಕೆ ಅತ್ಯಲ್ಪವೆನ್ನಿಸುವ ಸಾಧನೆ. ಸಿದ್ಧಿ ಮಾತ್ರ ಊಹೆಗೂ ನಿಲುಕದಷ್ಟು ಅಪಾರ, ಇದಕ್ಕೂ ಸಹ ಮುಖ್ಯ ಕಾರಣವಾದದ್ದು ಶ್ರೀಕೃಷ್ಣನ ಅನುಗ್ರಹ. ಇದಕ್ಕೆ ವಿರುದ್ಧವಾಗಿ ದುರ್ಯೋಧನ ಸಕಲ ಭೋಜ್ಯ ಪದಾರ್ಥಗಳನ್ನು ಸಿದ್ಧಪಡಿಸಿ ನೀಡಿದರೂ ಸಹ ಶ್ರೀಕೃಷ್ಣ ಅವುಗಳನ್ನು ಕಣ್ಣೆತ್ತಿಯೂ ನೋಡದ ಪ್ರಸಂಗ ನಡೆಯಿತು. ಅದಕ್ಕೆ, ಶ್ರೀಕೃಷ್ಣನು ದುರ್ಯೋಧನನಿಗೆ ಒಲಿಯದಿದ್ದುದೇ ಕಾರಣ; **ಕುಚೇಲ** – ಸುಧಾಮ.

೫. ಹೀಗೆ ಶ್ರೀಹರಿಯ ಅನುಗ್ರಹವೊಂದಿದ್ದಲ್ಲಿ ಸಾಧನೆ ಅಲ್ಪವಿದ್ದರೂ ಸಹ ಮಹತ್ತರವಾದ ಫಲ ಲಭಿಸುವುದು. ಇಲ್ಲವಾದಲ್ಲಿ ಮಹತ್ತರ ಸಾಧನೆಯೂ ಸಹ ನಿಷ್ಫಲವೆನ್ನಿಸುವುದು, ಅನರ್ಥಕರವೂ ಆಗುವುದು ಎಂದು ತಿಳಿಯುವುದು.

೬. ಧ್ರುವನು ತನ್ನ ಹಿಂದಿನ ಜನ್ಮದಲ್ಲಿ ಕೇವಲ ಆರು ತಿಂಗಳ ಕಾಲದಷ್ಟು ಸಾಧನೆ ಮಾತ್ರವೇ ಬಾಕಿ ಉಳಿದಿದ್ದ ಒಬ್ಬ ಬ್ರಾಹ್ಮಣನ ಮಗ ಎಂಬ ಉಲ್ಲೇಖ ವಿಷ್ಣು ಪುರಾಣದಲ್ಲಿದೆ. ಆದರೂ ಸಹ ಅದಕ್ಕೂ ಸಹ ಶ್ರೀಹರಿಯ ಒಲುಮೆಯೇ ಕಾರಣವಾದ್ದರಿಂದ ಧ್ರುವನ ಉದ್ಧಾರಕ್ಕೆ ಮುಖ್ಯವಾಗಿ ಕಾರಣವಾದದ್ದು ಕರ್ಮವಾಗಿರದೇ ಶ್ರೀಹರಿಯ ಅನುಗ್ರಹವಾಗಿತ್ತು ಎಂದು ತಿಳಿಯಬೇಕು ಎಂದು ಭಾವ.

೭. '**ಇಷ್ಟಬಾಂಧವ ನೀನು**' ಎಂಬ ಈ ಮಾತು ಈ ಕೆಳಗಿನ ಶ್ಲೋಕದ ಒಟ್ಟು ಭಾವವಾಗಿದೆ:

> **ತ್ವಮೇವ ಮಾತಾ ಚ ಪಿತಾ ತ್ವಮೇವ ತ್ವಮೇವ ಬಂಧುಶ್ಚ ಸಖಾ ತ್ವಮೇವ ।**
> **ತ್ವಮೇವ ವಿದ್ಯಾ ದ್ರವಿಣಂ ತ್ವಮೇವ ತ್ವಮೇವ ಸರ್ವಂ ಮಮ ದೇವ ದೇವ**[೧] **॥**

೮. ಶ್ರೀಕನಕದಾಸರ ಬ್ರಹ್ಮಲಿಖಿತವ ಮೀರಿ ಬಾಳ್ವರುಂಟು ಎಂಬ ಪದದಲ್ಲಿ ಈ ಬಗ್ಗೆ ಹೆಚ್ಚಿನ ವಿವರಗಳು ದೊರೆಯುವವು:

---

೧. ನಾರಾಯಣಹೃದಯಸ್ತೋತ್ರ (ಶ್ಲೋ. ೧೦)

ಬ್ರಹ್ಮ ಲಿಖಿತವ ಮೀರಿ ಬಾಳ್ವರುಂಟು
ನಿರ್ಮಳದಿ ವೈಷ್ಣವರ ಮನಮುಟ್ಟಿ ಭಜಿಸಿ ॥ ಪ ॥
ಪಾಪಕೆ ಹೇಸದ ಶಬರ ಬಟ್ಟೆಯನು ಕಾದಿರಲು
ಆ ಪಥಕೆ ಸಲೆ ವೈಷ್ಣವನು ಬರಲು
ಪಾಪವನು ತಪ್ಪಿಸಿ ರಾಮನಾಮವ ಕೊಡಲು
ಕಾಪಥಕ ವಾಲ್ಮೀಕಿ ಮುನಿಯಾಗಲಿಲ್ಲವೆ ? ॥ ೧ ॥
ಪಂಚಮಹಾಪಾತಕವ ಮಾಡಿದ ಅಜಾಮಿಳನ
ವಂಚಿಸಿ ಯಮದೂತರೆಳೆದೊಯ್ಯುತಿರಲು
ಕಿಂಚಿತ್ತು ಹರಿನಾಮಾಮೃತ ನೆನೆಯಲು
ಅಂಚೆಕೆಳೆದೊಯ್ದವರು ವಿಷ್ಣುದೂತರಲ್ಲವೆ ? ॥ ೨ ॥
ಬಾಲಕ ತನ್ನ ತಾಯ್ತಂದೆಯೊಳ್ ಮುನಿದು ಹಲ-
ಕಾಲ ವನದೊಳು ತಪವನು ಮಾಡಲು
ನೀಲಮೇಘಶ್ಯಾಮ ಮೆಚ್ಚಿ ಬಾಲಕನಿಗೆ
ಮೇಲಾದ ಪದವಿಯನು ಕೊಡಲಿಲ್ಲವೆ ? ॥ ೩ ॥
ದಶಕಂಠನನುಜನು ಜಾನಕಿಯ ಬಿಡ ಹೇಳೆ
ಅಸುರ ಕೋಪವ ತಾಳಿ ಅಟ್ಟಲಾಗ
ಪೆಸರಗೊಳುತ ಬಂದು ಮೊರೆಹೊಕ್ಕ ವಿಭೀಷಣಗೆ
ಶಶಿರವಿ ಪರ್ಯಂತ ಪಟ್ಟಗಟ್ಟಲಿಲ್ಲವೆ ? ॥ ೪ ॥
ಕಲಿಗೆ ಬೆದರುವರಲ್ಲ ಕಾಲನ ಬಾಧೆಗಳಿಲ್ಲ
ಸಲೆ ನರಳಿ ಪುಟ್ಟುವ ಗಸಣೆಯಿಲ್ಲ
ಒಲಿದವರು ಕಾಗಿನೆಲೆಯಾದಿಕೇಶವರಾಯನ
ಸಲೆ ನಂಬಿದವರಿಗೆ ಮುಕುತಿಯಿತ್ತುದಿಲ್ಲವೆ ? ॥ ೫ ॥

*****

## ೪೨. ನೀನೊಲಿದ ಬಳಿಕಿನ್ನು ಪಾತಕವುಂಟೆ ರಕ್ಷಿಸು

ತನ್ನ ದೇಹಾತುರದಲಡವಿಯೊ-
ಳನ್ಯರನು ಸಂಹರಿಸುತಿರುತಿರೆ
ನಿನ್ನ ನಾಮದೊಳಧಿಕವೆರಡಕ್ಷರವ ಬಣ್ಣಿಸುತ ।
ಧನ್ಯನಾದನು ಮುನಿಕುಲದಿ ಸಂ-
ಪನ್ನನಾದನು ನೀನೊಲಿದ ಬಳಿ-
ಕಿನ್ನು ಪಾತಕವುಂಟೆ ರಕ್ಷಿಸು ನಮ್ಮನನವರತ ॥ ೪೨ ॥

**ಅ: ವಾಲ್ಮೀಕಿಯು ತನ್ನ ದೇಹದ ಪೋಷಣೆಯ ಮೇಲಿನ ಬಯಕೆಯಿಂದಾಗಿ ಅಡವಿಯಲ್ಲಿ ಇತರರನ್ನು ಸಂಹರಿಸಿ ಬದುಕುತ್ತಿದ್ದಾಗ ಅವನು ನಿನ್ನ ನಾಮದಲ್ಲಿನ ಎರಡಕ್ಷರವನ್ನು ಬಣ್ಣಿಸುತ್ತಾ ಧನ್ಯನಾದನು. ಮುನಿಕುಲದಲ್ಲಿ ಸೇರಿದವನಾದನು. ನೀನು ಒಲಿದ ಮೇಲೆ ಯಾವ ಪಾತಕವಾದರೂ ಉಳಿಯಬಲ್ಲುದೇ. ಇಂತಹ ಶ್ರೀಹರಿಯೇ! ನೀನು ನಮ್ಮನ್ನು ಅನವರತ ಸಂರಕ್ಷಿಸು.**

ವಿ.: ೧. ಶ್ರೀಹರಿಯ ನಾಮದ ಮಹಿಮೆಯನ್ನು ಇದರಲ್ಲಿ ವರ್ಣಿಸಲಾಗಿದೆ.

೨. ರತ್ನಾಕರ ಎಂಬುವವನು ವರುಣನ ಮಗ. ದುಷ್ಟರ ಸಹವಾಸದಿಂದಾಗಿ ಕುಮಾರ್ಗವನ್ನು ಹಿಡಿದು ಬೇಟೆಗಾರ ಎನ್ನಿಸಿದ. ತನ್ನ ಜೀವನ ನಿರ್ವಹಣೆಗಾಗಿ ಇತರರನ್ನು ಸುಲಿಗೆ ಮಾಡುತ್ತಾ ಬದುಕಿದ. ಮುಂದೆ ಮುನಿಗಳ ಸಂಪರ್ಕದಿಂದಾಗಿ ತನ್ನ ತಪ್ಪನ್ನು ಅರಿತುಕೊಂಡು ಸನ್ಮಾರ್ಗಕ್ಕೆ ಬದಲಾದ. ಅವರು ಉಪದೇಶಿಸಿದಂತೆ ರಾಮ ಎಂಬ ಶ್ರೀಹರಿಯ ನಾಮವನ್ನು ಸಾವಿರಾರು ವರ್ಷಗಳ ಕಾಲ ನಿರಂತರವಾಗಿ ಜಪಿಸುತ್ತಾ ಸುದೀರ್ಘವಾದ ತಪಸ್ಸಿನಲ್ಲಿ ತೊಡಗಿದ. ಅವನ ತಪಸ್ಸಿಗೆ ಮೆಚ್ಚಿ ಬ್ರಹ್ಮದೇವರು ದರ್ಶನವಿತ್ತು ಉದ್ಧರಿಸಿದರು. ಆ ವೇಳೆಗೆ ಅವನ ಮೇಲೆ ಹುತ್ತ (ವಲ್ಮೀಕ) ಕಟ್ಟಿತ್ತು. ಆ ಕಾರಣದಿಂದಾಗಿ ಅವನು ವಾಲ್ಮೀಕಿ ಮುನಿ ಎನ್ನಿಸಿದ. ರಾಮಾಯಣವನ್ನು ರಚಿಸಿ ಅಮರನಾದ. ಅವನಿಗಿರಲಿ ಅವನು ರಚಿಸಿದ ರಾಮಾಯಣದ ಪಠನೆಯು ಸಹ ಪಾಪನಾಶಕ ಎನ್ನಿಸಿತು. ಇದು ರಾಮ ಎಂಬ ಎರಡಕ್ಷರದ ಮಹಿಮೆ; **ಆತುರ** – ಬಲವಾದ ಆಸೆ, ಬಯಕೆ, ಉತ್ಕಟವಾದ ಇಚ್ಛೆ

೩. ಇದು ಲೋಕೋತ್ತರ ಮಹರ್ಷಿಗಳಲ್ಲಿ ಒಬ್ಬನಾಗಿ ಪರಿಗಣಿತನಾದ ವಾಲ್ಮೀಕಿ ಮುನಿಯ ಸಾಧನೆಯ ಕಥೆಯನ್ನು ತಿಳಿಸುವ ಪದ್ಯ. ಶ್ರೀಮದ್ಭಾಗವತದ ಅಜಾಮಿಳನಂತೆ ಪ್ರಾರಬ್ಧವಶಾತ್ ದುಷ್ಟರ ಸಂಗಕ್ಕೆ ಒಳಗಾಗಿ ಕ್ರೂರಕಾರ್ಯದಲ್ಲಿ ತೊಡಗಿ ಮಹಾಪಾತಕಿ ಎನ್ನಿಸಿದ್ದ ಅವನಿಗೆ ರಾಮನಾಮದ ಜಪ ತಾರಕವೆನ್ನಿಸಿತು. ಹೀಗೆ ಭಗವಂತನ ನಾಮೋಚ್ಚಾರಣೆಯು ಪಾಪಪರಿಹಾರಕವಾದ್ದರಿಂದ ಹರಿನಾಮಸ್ಮರಣೆಯನ್ನು ಸತತ ಮಾಡುತ್ತಿರಬೇಕು ಎಂಬುದು ಇಲ್ಲಿಯ ಸಂದೇಶ.

೪. ಶ್ರೀಹರಿಯ ಸ್ಮರಣೆ ಮಾಡುವವರಿಗೆ ಪಾಪ ತಟ್ಟದು. ಒದಗಿದ್ದ ಮುಂಚಿನ ಪಾಪಗಳು ಸಹ ಪರಿಹಾರವಾಗುವುವು ಎಂದರ್ಥ.

೫. '**ನಿನ್ನ ನಾಮದೊಳೆರಡಧಿಕವಕ್ಷರವ**' ಎಂದರೆ ನಿನ್ನ ನಾಮಗಳಲ್ಲಿ ಶ್ರೇಷ್ಠವೆನ್ನಿಸಿದ ಎರಡಕ್ಷರದ ರಾಮ ಎಂಬ ಮಂತ್ರವನ್ನು ಉಚ್ಚರಿಸಿದಾಗ ಎಂದರ್ಥ. ವಾಲ್ಮೀಕಿಯ ಉದ್ಧಾರಕ್ಕೆ ರಾಮನಾಮದ ಜಪ ಕಾರಣವಾಯಿತು ಎಂಬುದು ಸುಪ್ರಸಿದ್ಧ.

೬. ಹರಿಕಥಾಮೃತಸಾರದ ಈ ಕೆಳಗಿನ ಪದ್ಯದಲ್ಲೂ ಈ ವಾಲ್ಮೀಕಿಯ ಕಥೆ ಹೀಗೆಯೇ ವಿಶ್ಲೇಷಿಸಲ್ಪಟ್ಟಿದೆ:

**ಏನು ಕರುಣವೊ ತನ್ನವರಲಿ ದಯಾನಿಧಿಗೆ ಸದ್ಭಕ್ತಜನರತಿ**
**ಹೀನಕರ್ಮವ ಮಾಡಿದರು ಸರಿ ಸ್ವೀಕರಿಸಿ ಪೊರೆವ ।**
**ಪ್ರಾಣಹಿಂಸಕ ಲುಬ್ಧಕಗೆ ಸುಜ್ಞಾನ ಪಾಲಿಸಿ ತನ್ನ ಮಹಿಮೆ ಪು-**
**ರಾಣರೂಪದಿ ಪೇಳಿಸಿದ ರಘುಸೂನು ಸುಚರಿತ್ರ ॥**

– ಇದು ಹರಿಕಥಾಮೃತಸಾರದ ಮೇಲೆ ಹರಿಭಕ್ತಿಸಾರದ ಪ್ರಭಾವವನ್ನು ಸೂಚಿಸುವುದು:

ರಾಮ ಎನ್ನುವ ಎರಡು ಅಕ್ಷರದ ಮಹಿಮೆಯನು ।
ಪಾಮರರು ತಾವೇನ ಬಲ್ಲರಯ್ಯ ॥ ಪ ॥
ರಾಯೆಂದ ಮಾತ್ರದೊಳು ರಕ್ತ ಮಾಂಸದೊಳಿದ್ದ
ಆಯಸ್ಥಿಗತವಾದ ಅತಿಪಾಪವನ್ನು
ಮಾಯವನು ಮಾಡಿ ಮಹಾರಾಯ ಮುಕ್ತಿಯ ಕೊಡುವ
ದಾಯವನು ವಾಲ್ಮೀಕಿ ಮುನಿರಾಯ ಬಲ್ಲ ॥ ೧ ॥
ಮತ್ತೆ ಮ ಎಂದೆನಲು ಹೊರಬಿದ್ದ ಪಾಪಗಳು
ಒತ್ತಿ ಒಳ ಪೊಗದಂತೆಯೆ ಕವಾಟವಾಗಿ
ಚಿತ್ತ ಕಾಯಗಳ ಸುಪವಿತ್ರ ಮಾಡುವ ಪರಿಯ
ಭಕ್ತವರ ಹನುಮಂತ ತಾನೊಬ್ಬ ಬಲ್ಲ ॥ ೨ ॥
ಧರೆಯೊಳೀ ನಾಮಕ್ಕೆ ಸರಿಮಿಗಿಲು ಇಲ್ಲೆಂದು
ಪರಮ ವೇದಗಳೆಲ್ಲ ಪೊಗಳುತಿಹವು
ಸಿರಿಯರಸ ಶ್ರೀಪುರಂದರವಿಠಲ ರಾಮನನು
ವರ ಕಾಶಿಯೊಳಗಿಪ್ಪ ಶಿವನು ತಾ ಬಲ್ಲ ॥ ೩ ॥

**

ರಾಮನಾಮವ ನೆನೆ ಮನವೆ ॥ ಪ ॥
ರಾಮ ಎಂದವನೆ ಧನ್ಯನೆಂದು
ಶ್ರುತಿತತಿಗಳು ಪೊಗಳುತಿರೆ ॥ ಅ.ಪ. ॥
ತರುಣತನದಿ ದಿನ ದಾಟಿತು ಸುಮ್ಮನೆ
ಶರೀರದೊಳು ಸ್ವರವಾಡುತಲೆ
ತರುಣಿ ಸುತರು ಸಂಸಾರವೆಂಬ
ಶರಧಿಯೊಳಗೆ ಮುಳುಗಿರದೆ ಮನವೆ ॥ ೧ ॥
ಬಗೆಬಗೆ ಜನ್ಮದಿ ಜನಿಸಿದೆ ನಾಳೆಗೆ
ಸಿಗುವುದೆ ನಿಜದಿಂ ಈ ಸಮಯ
ಮುಗುಧನಾಗಿ ಮತ್ತೆ ಜನಿಸಿ ಬರುವುದು
ಸೊಗಸು ಕಾಣುವುದೆ ಛಿ ಮನವೆ ॥ ೨ ॥

ಚಿಂತೆಯನೆಲ್ಲ ಒತ್ತಟ್ಟಿಗಿಟ್ಟು
ಅಂತರಂಗದಲಿ ಧ್ಯಾನಿಸುತ
ಕಂತುಪಿತ ಕನಕಾದಿಕೇಶವನ
ಎಂತಾದರೂ ನೀ ಬಿಡಬೇಡ ಮನವೆ ॥ ೩ ॥

**

ರಾಮರಾಮಾಯೆಂಬ ನಾಮವನು ಅನವರತ
ತಾಮಸವ ಬಿಟ್ಟು ನೆನೆಯಿರೊ ಮನುಜರು ॥ ಪ ॥
ಕಾಷಾಯಾಂಬರ ಧರಿಸಿ ಕೊಡೆ ಕಮಂಡಲ ಪಿಡಿದು
ವೇಷಧಾರಕನಾಗಿ ತಿರುಗಬೇಡ
ದೇಶದೊಳಗುಳ್ಳ ತೀರ್ಥಂಗಳಲಿ ಮುಳುಗಿ ನಿ
ರ್ದೋಷಿಯಾದೆನೆಂಬ ನೇಮ ಬೇಡ
ಆಶೆಯಿಂದಲಿ ಪರರ ಮನೆಯ ಬಾಗಿಲು ಕಾಯ್ದು
ಕ್ಲೇಶಪಡಿಸಲಿಬೇಡ ಬರಿದೆ ತನುವ
ಬೇಸರದೆ ಹಗಲಿರುಳು ಜಗದೀಶ ರಾಘವನ್ನ ನೆನೆಯಿರೊ ॥ ೧ ॥
ತನುವ ದಂಡಿಸಬೇಡ ನಿರಶನವ್ರತದಿಂದ
ವನಿತೆಯನು ಬಿಟ್ಟು ತಪವಿರಲು ಬೇಡ
ವನದೊಳಗೆ ಕಂದಮೂಲಾಹಾರಗಳ ತಿಂದು
ದಿನವ ಕಳೆದೆನೆಂಬೊ ನೆನಹು ಬೇಡ
ಧನವ ವಿಪ್ರರಿಗಿತ್ತು ಧನ್ಯತೆಯ ಪಡೆವ ಭಾವ ಬೇಡ
ಅನಲಮುಖದಿಂದ ಕರ್ಮವನು ಕಳೆದು
ಅನಿಮಿಷತ್ವವ ಪಡೆದ ಮುಕ್ತರಾರೊ ॥ ೨ ॥
ನಿಷ್ಕ್ರಿಯಾದೆನೆಂಬ ನೇಮ ಬೇಡ
ಅಷ್ಟಕರೇಣೆಂದ್ರಿಯಗಳು ಜಪತಪಹೋಮ
ನೈಷ್ಠಿಕ ಬ್ರಹ್ಮಚರ್ಯವನು ಅನುಸರಿಸಿ ಭೂ
ಸೃಷ್ಟಿಯೆಲ್ಲವ ತೊಳಲಿ ಬಳಲ ಬೇಡ
ಶ್ರೇಷ್ಠವಹ ಪಂಚಯಜ್ಞಂಗಳಿಂ ಭೂತ
ತುಷ್ಟಿಪಡಿಪೆನೆಂಬ ಚೇಷ್ಟೆ ಬೇಡ ಈ
ಕಷ್ಟ ಸಂಸಾರವನು ದಾಂಟುವರೆ ಪರ –
ಮೇಷ್ಠಿಪಿತನಂಘ್ರಿಯನು ಭಜಿಸಿರೊ ॥ ೩ ॥
ಒಮ್ಮೆ ಹರಿಯೆಂದು ಸ್ಮರಿಸಲು ಅಶ್ವಮೇಧ ಫಲ ಮ–
ತ್ತೊಮ್ಮೆ ನೆನೆವುದರಿಂದ ಕೋಟಿಫಲವು

**ಏನು ಕರುಣವೊ ತನ್ನವರಲಿ ದಯಾನಿಧಿಗೆ ಸದ್ಭಕ್ತಜನರತಿ**
**ಹೀನಕರ್ಮವ ಮಾಡಿದರು ಸರಿ ಸ್ವೀಕರಿಸಿ ಪೊರೆವ।**
**ಪ್ರಾಣಹಿಂಸಕ ಲುಬ್ಧಕಗೆ ಸುಜ್ಞಾನ ಪಾಲಿಸಿ ತನ್ನ ಮಹಿಮೆ ಪು-**
**ರಾಣರೂಪದಿ ಪೇಳಿಸಿದ ರಘುಸೂನು ಸುಚರಿತ್ರ ॥**

- ಇದು ಹರಿಕಥಾಮೃತಸಾರದ ಮೇಲೆ ಹರಿಭಕ್ತಿಸಾರದ ಪ್ರಭಾವವನ್ನು ಸೂಚಿಸುವುದು:

ರಾಮ ಎನ್ನುವ ಎರಡು ಅಕ್ಷರದ ಮಹಿಮೆಯನು।
ಪಾಮರರು ತಾವೇನ ಬಲ್ಲರಯ್ಯ ॥ ಪ ॥
ರಾಯೆಂದ ಮಾತ್ರದೊಳು ರಕ್ತ ಮಾಂಸದೊಳಿದ್ದ
ಆಯಸ್ಥಿಗತವಾದ ಅತಿಪಾಪವನ್ನು
ಮಾಯವನು ಮಾಡಿ ಮಹಾರಾಯ ಮುಕ್ತಿಯ ಕೊಡುವ
ದಾಯವನು ವಾಲ್ಮೀಕಿ ಮುನಿರಾಯ ಬಲ್ಲ ॥ ೧ ॥
ಮತ್ತೆ ಮ ಎಂದೆನಲು ಹೊರಬಿದ್ದ ಪಾಪಗಳು
ಒತ್ತಿ ಒಳ ಪೊಗದಂತೆಯೆ ಕವಾಟವಾಗಿ
ಚಿತ್ತ ಕಾಯಗಳ ಸುಪವಿತ್ರ ಮಾಡುವ ಪರಿಯ
ಭಕ್ತವರ ಹನುಮಂತ ತಾನೊಬ್ಬ ಬಲ್ಲ ॥ ೨ ॥
ಧರೆಯೊಳೀ ನಾಮಕ್ಕೆ ಸರಿಮಿಗಿಲು ಇಲ್ಲೆಂದು
ಪರಮ ವೇದಗಳೆಲ್ಲ ಪೊಗಳುತಿಹವು
ಸಿರಿಯರಸ ಶ್ರೀಪುರಂದರವಿಠಲ ರಾಮನನು
ವರ ಕಾಶಿಯೊಳಗಿಪ್ಪ ಶಿವನು ತಾ ಬಲ್ಲ ॥ ೩ ॥

**

ರಾಮನಾಮವ ನೆನೆ ಮನವೆ ॥ ಪ ॥
ರಾಮ ಎಂದವನೆ ಧನ್ಯನೆಂದು
ಶ್ರುತಿತತಿಗಳು ಪೊಗಳುತಿರೆ ॥ ಅ.ಪ. ॥
ತರುಣತನದಿ ದಿನ ದಾಟಿತು ಸುಮ್ಮನೆ
ಶರೀರದೊಳು ಸ್ವರವಾಡುತಲೆ
ತರುಣಿ ಸುತರು ಸಂಸಾರವೆಂಬ
ಶರಧಿಯೊಳಗೆ ಮುಳುಗಿರದೆ ಮನವೆ ॥ ೧ ॥
ಬಗೆಬಗೆ ಜನ್ಮದಿ ಜನಿಸಿದೆ ನಾಳೆಗೆ
ಸಿಗುವುದೆ ನಿಜದಿಂ ಈ ಸಮಯ
ಮುಗುಧನಾಗಿ ಮತ್ತೆ ಜನಿಸಿ ಬರುವುದು
ಸೊಗಸು ಕಾಣುವುದೆ ಛಿ ಮನವೆ ॥ ೨ ॥

ಚಿಂತೆಯನೆಲ್ಲ ಒತ್ತಟ್ಟಿಗಿಟ್ಟು
ಅಂತರಂಗದಲಿ ಧ್ಯಾನಿಸುತ
ಕಂತುಪಿತ ಕನಕಾದಿಕೇಶವನ
ಎಂತಾದರೂ ನೀ ಬಿಡಬೇಡ ಮನವೆ ॥ ೩ ॥

**

ರಾಮರಾಮಾಯೆಂಬ ನಾಮವನು ಅನವರತ
ತಾಮಸವ ಬಿಟ್ಟು ನೆನೆಯಿರೊ ಮನುಜರು ॥ ಪ ॥
ಕಾಷಾಯಾಂಬರ ಧರಿಸಿ ಕೊಡೆ ಕಮಂಡಲ ಪಿಡಿದು
ವೇಷಧಾರಕನಾಗಿ ತಿರುಗಬೇಡ
ದೇಶದೊಳಗುಳ್ಳ ತೀರ್ಥಂಗಳಲಿ ಮುಳುಗಿ ನಿ
ರ್ದೋಷಿಯಾದೆನೆಂಬ ನೇಮ ಬೇಡ
ಆಶೆಯಿಂದಲಿ ಪರರ ಮನೆಯ ಬಾಗಿಲು ಕಾಯ್ದು
ಕ್ಲೇಶಪಡಿಸಲಿಬೇಡ ಬರಿದೆ ತನುವ
ಬೇಸರದೆ ಹಗಲಿರುಳು ಜಗದೀಶ ರಾಘವನ್ನ ನೆನೆಯಿರೊ ॥ ೧ ॥
ತನುವ ದಂಡಿಸಬೇಡ ನಿರಶನವ್ರತದಿಂದ
ವನಿತೆಯನು ಬಿಟ್ಟು ತಪವಿರಲು ಬೇಡ
ವನದೊಳಗೆ ಕಂದಮೂಲಾಹಾರಗಳ ತಿಂದು
ದಿನವ ಕಳೆದೆನೆಂಬೊ ನೆನಹು ಬೇಡ
ಧನವ ವಿಪ್ರರಿಗಿತ್ತು ಧನ್ಯತೆಯ ಪಡೆವ ಭಾವ ಬೇಡ
ಅನಲಮುಖದಿಂದ ಕರ್ಮವನು ಕಳೆದು
ಅನಿಮಿಷತ್ವವ ಪಡೆದ ಮುಕ್ತರಾರೊ ॥ ೨ ॥
ನಿಷ್ಕ್ರಿಯಾದೆನೆಂಬ ನೇಮ ಬೇಡ
ಅಷ್ಟಕರೇಣಂದ್ರಿಯಗಳು ಜಪತಪಹೋಮ
ನೈಷ್ಠಿಕ ಬ್ರಹ್ಮಚರ್ಯವನು ಅನುಸರಿಸಿ ಭೂ
ಸೃಷ್ಟಿಯೆಲ್ಲವ ತೊಳಲಿ ಬಳಲ ಬೇಡ
ಶ್ರೇಷ್ಠವಹ ಪಂಚಯಜ್ಞಂಗಳಿಂ ಭೂತ
ತುಷ್ಟಿಪಡಿಪೆನೆಂಬ ಚೇಷ್ಟೆ ಬೇಡ ಈ
ಕಷ್ಟಸಂಸಾರವನು ದಾಂಟುವರೆ ಪರ –
ಮೇಷ್ಠಿಪಿತನಂಘ್ರಿಯನು ಭಜಿಸಿರೊ ॥ ೩ ॥
ಒಮ್ಮೆ ಹರಿಯೆಂದು ಸ್ಮರಿಸಲು ಅಶ್ವಮೇಧ ಫಲ ಮ–
ತ್ತೊಮ್ಮೆ ನೆನೆವುದರಿಂದ ಕೋಟಿಫಲವು

ಕ್ರಮದಿಂದ ಬ್ರಹ್ಮಾದಿ ಭೋಗಗಳನು ಬಯಸಿ
ದುರ್ಮತಿಗಳಾಗಿ ತಾ ತಿರುಗಿಬಹರು
ನಿರ್ಮಲಾಂತಃಕರಣನಾಗಿ ಅಕ್ಷರವೆರಡ
ಸುಮ್ಮಾನದಿಂದ ಉಚ್ಚರಿಸುತಿಹರ ಕರ್ಮಬಂಧನ
ವಿಮೋಚನವಾಗಿ ಮನದೊಳಿಹ ಹಮ್ಮು
ಮಮತೆಯನಳಿದು ಮುಕ್ತರಹರು || ೪ ||
ರಾಮನಾಮವೆ ಸಕಲ ಸುಕೃತಫಲ ಪಾಪಹರ
ರಾಮನಾಮವೆ ಸಕಲ ಶಾಸ್ತ್ರಸಿದ್ಧ
ರಾಮನಾಮವೆ ಭವಾಂಬುಧಿಗೆ ಬಡಬಾನಲ
ರಾಮನಾಮವೆ ಕರೆವ ಕಾಮಧೇನು
ರಾಮನಾಮವೆ ಇಹಪರ ಸಾಧನ
ಸಾಮಜನ ಪೊರೆದ ವೇಲಾಪುರಾಧೀಶ್ವರನ
ರಾಮಾದಿಕೇಶವನ ಚರಣವನು ಭಜಿಸಿರೊ || ೫ ||

೭. ಶ್ರೀಕನಕದಾಸರ ಬ್ರಹ್ಮಲಿಖಿತವ ಮೀರಿ ಬಾಳ್ವರುಂಟೆ ಎಂಬ ಕೃತಿಯಲ್ಲಿನ ಈ ಕೆಳಗಿನ ಮಾತು ಇದರ ವಿವರಣೆಯಂತಿದೆ:

ಪಾಪಕೆ ಹೇಸದ ಶಬರ ಬಟ್ಟೆಯನು ಕಾದಿರಲು
ಆ ಪಥಕೆ ಸಲೆ ವೈಷ್ಣವನು ಬರಲು
ಪಾಪವನು ತಪ್ಪಿಸಿ ರಾಮನಾಮವ ಕೊಡಲು
ಕಾಪಥಕ ವಾಲ್ಮೀಕಿ ಮುನಿಯಾಗಲಿಲ್ಲವೆ ? ||

*****

## ೪೩. ಸದ್ಗುಣರನ್ನ ಸಿರಿಸಂಪನ್ನ ರಕ್ಷಿಸು

ನಿನ್ನ ಸತಿಗಳುಪಿದ ದುರಾತ್ಮನ
ಬೆನ್ನಿನಲಿ ಬಂದವನ ಕರುಣದಿ
ಮನ್ನಿಸಿದ ಕಾರಣ ದಯಾಪರಮೂರ್ತಿಯೆಂದೆನುತ ।
ನಿನ್ನ ಭಜಿಸಿದ ಸಾರ್ವಭೌಮರಿ-
ಗಿನ್ನು ಇಹಪರವುಂಟು ಸದ್ಗುಣ-
ರನ್ನ ಸಿರಿಸಂಪನ್ನ ರಕ್ಷಿಸು ನಮ್ಮನನವರತ || ೪೩ ||

ಅ: ನಿನ್ನ ಪತ್ನಿಯಾದ ಸೀತೆಯನ್ನು ಕೆಣಕಿದವನು ದುರಾತ್ಮನಾದ ರಾವಣ. ಅವನ ಅನುಜನಾಗಿ ಜನಿಸಿದ್ದವನು ವಿಭೀಷಣ. ಅವನು ಶರಣಾಗತನಾಗಿ ಬಂದಾಗ

**ಕರುಣೆಯಿಂದ ಅವನನ್ನು ಸ್ವೀಕರಿಸಿದ ಕಾರಣದಿಂದಾಗಿ ನೀನು ದಯಾಪರಮೂರ್ತಿ ಎಂದು ನುಡಿಯುತ್ತಾ, ನಿನ್ನನ್ನು ಭಜಿಸಿದ ಸಾರ್ವಭೌಮರಿಗೆ ಇಹ ಹಾಗೂ ಪರ ಎರಡೂ ಉಂಟು. ನೀನು ಸದ್ಗುಣಗಳ ಖಣಿ. ಲಕ್ಷ್ಮೀಸಂಪನ್ನನಾದವನು; ಅಂತಹ ಶ್ರೀಹರಿಯೇ! ನೀನು ನಮ್ಮನ್ನು ಸದಾ ರಕ್ಷಿಸು.**

ವಿ.: ೧. ಶ್ರೀಹರಿಯು ಕ್ಷಮಾಸಮುದ್ರ ಎಂಬುದನ್ನು ನಿರೂಪಿಸುವ ಪದ್ಯ ಇದಾಗಿದೆ.

೨. ಶ್ರೀರಾಮ ರೂಪದ ಶ್ರೀಹರಿಯ ಪತ್ನಿ ಎಂದರೆ ಸೀತಾದೇವಿ, ಹಿರಣ್ಯಕಶಿಪು ಎಂಬ ಅಸುರನ ಆವೇಶವಿದ್ದ ರಾವಣನು ಸೀತೆಯನ್ನು ಪಡೆಯಲು ಬಯಸಿದ. ತನ್ನ ಅಶೋಕವನದಲ್ಲಿ ಇರಿಸಿಕೊಂಡು ಮೆಚ್ಚಿಸಲೆಂದು ಬಗೆಬಗೆಯ ಪ್ರಯತ್ನವನ್ನು ಮಾಡಿದ. ಕೊನೆಗೆ ಶ್ರೀರಾಮ ಲಂಕೆಯನ್ನು ಆಕ್ರಮಿಸಿ ಅವನನ್ನು ಸಂಹರಿಸಿದ, ಎಂಬುದು ಜಗತ್ಪ್ರಸಿದ್ಧವಾದ ಕಥೆ.

೩. ಇಂತಹ ಪರಮಪಾತಕಿ ಎನ್ನಿಸಿದ ರಾವಣನ ತಮ್ಮ ವಿಭೀಷಣ. ಪರಮಸಾತ್ವಿಕ-ನಾಗಿದ್ದ ಅವನು ರಾವಣನ ತಪ್ಪನ್ನು ತಿದ್ದಲು ಪರಿಪರಿಯಾಗಿ ಪ್ರಯತ್ನಿಸಿದ. ಅವನ ಪ್ರಯತ್ನವೆಲ್ಲ ವಿಫಲವಾದ ಮೇಲೆ ಅವನನ್ನು ತೊರೆದು ಶ್ರೀರಾಮನನ್ನೇ ಶರಣು ಹೊಂದಿದ. ಅವನು ತನ್ನ ಪತ್ನಿಯನ್ನು ಕೆಣಕಿದಂತಹ ಶತ್ರುವಿನ ಸ್ವಂತ ತಮ್ಮನೆಂದು ತಿಳಿದೂ ಸಹ ಶ್ರೀರಾಮ ಅವನ ಭಕ್ತಿಗೆ ಮೆಚ್ಚಿ ಅವನನ್ನು ಸ್ವೀಕರಿಸಿದ. ಇದು ಅವನ ಕ್ಷಮಾಗುಣಕ್ಕೆ ಪರಮಕಾರುಣ್ಯಕ್ಕೆ ಶ್ರೇಷ್ಠ ನಿದರ್ಶನ.

೪. ಸಾಮಾನ್ಯವಾಗಿ ಶತ್ರುಗಳಂತೆ ಅವನ ಬಂಧುಗಳನ್ನೂ ಸಹ ಶತ್ರುಗಳನ್ನಾಗಿಯೇ ಕಾಣುವುದು ಲೋಕದ ಪದ್ಧತಿ. ವಿಭೀಷಣನಂತೂ ರಾವಣನಿಗೆ ಸಾಮಾನ್ಯ ಬಂಧುವಾಗಿರದೇ ಸ್ವಂತ ತಮ್ಮನೇ ಆಗಿದ್ದ. ರಾವಣನು ಕೇವಲ ಶತ್ರುವಾಗಿರದೇ ಹೆಂಡತಿಯ ಮೇಲೆ ಕಣ್ಣು ಹಾಕಿದ ಪರಮಶತ್ರುವಾಗಿದ್ದ. ಆದರೆ ಶ್ರೀರಾಮ ವಿಭೀಷಣನನ್ನು ಅವನ ತಮ್ಮ ಎಂದು ದೂರಮಾಡಲಿಲ್ಲ. ಬದಲಿಗೆ ಅವನು ಗುಣವಂತನಾದ ತನ್ನ ಭಕ್ತ ಎಂಬುದನ್ನು ಗಮನಿಸಿ ಅವನನ್ನು ಸ್ವೀಕರಿಸಿ ಉದ್ಧರಿಸಿದ. ಶ್ರೀಹರಿಗೆ ಯಾವುದೇ ಕಾರಣಕ್ಕೂ ಪಕ್ಷಪಾತಾದಿ ದೋಷಗಳು ಸರ್ವಥಾ ಇರುವುದಿಲ್ಲ ಎಂಬುದಕ್ಕೆ ಇದೊಂದು ಶ್ರೇಷ್ಠ ನಿದರ್ಶನ. ಎಂಬುದನ್ನು ಶ್ರೀಕನಕದಾಸರು ಇಲ್ಲಿ ವಿಮರ್ಶೆ ಮಾಡಿ ತೋರಿಸಿರುವರು.

೫. ಕೇವಲ ತಪ್ಪನ್ನು ಮಾತ್ರ ಮನ್ನಿಸದೇ ಅವನನ್ನು ತನ್ನ ಭಕ್ತನನ್ನಾಗಿಯೇ ಸ್ವೀಕರಿಸಿದ ಶ್ರೀರಾಮ ಅವನಿಗೆ ಆ ಕೂಡಲೇ ರಾಕ್ಷಸರಾಜ್ಯದ ಆಧಿಪತ್ಯವನ್ನು ನೀಡಿದ. ರಾವಣನ ಮರಣಾನಂತರ ಅವನಿಗೆ ಪಟ್ಟ ಕಟ್ಟಿದ. ಅನಂತರವೂ ಅವನು ಸುಖದಿಂದಿರುವಂತೆ ನೋಡಿಕೊಂಡ. ಅವನಿಗೆ ಕಲ್ಪಾಯುಷ್ಯವನ್ನು ನೀಡಿ ಚಿರಂಜೀವಿಯನ್ನಾಗಿ ಮಾಡಿದ. ಹೀಗೆ ರಾಮ ಮಾಡಿದ ಅನುಗ್ರಹ ಅವನ ಐಹಿಕ ಹಾಗೂ ಪಾರತ್ರಿಕ ಸುಖಕ್ಕೆ ಸಾಧನವಾಯಿತು. ಶ್ರೀರಾಮನ ಭಕ್ತವಾತ್ಸಲ್ಯ ಹೀಗೆ ಮತ್ತಷ್ಟು ಸ್ಫುಟವಾಗುವ ಅಪೂರ್ವ ಪ್ರಸಂಗವಿದು.

೬. ಹೀಗೆ ಭಕ್ತರ ಗುಣವನ್ನು ಗ್ರಹಿಸುವ ಶ್ರೀರಾಮ ಸದ್ಗುಣಗಳ ಖಣಿ ಎಂಬುದಕ್ಕೆ ನಿದರ್ಶನ. ಶ್ರೀಹರಿಯು ಗುಣಪೂರ್ಣ ಎಂಬುದು ಇದರ ಭಾವ. ಇದು ಶ್ರೀಮದಾಚಾರ್ಯರು ನಿರೂಪಿಸಿರುವಂತೆ ಬ್ರಹ್ಮಸೂತ್ರಾದಿ ಸಕಲ ಶಾಸ್ತ್ರಗಳ ಸಾರ. ಅವನು ಗುಣಪೂರ್ಣ ಎಂದರೆ ಸಕಲದೋಷದೂರ ಎಂದೂ ಅರ್ಥ.

೭. '**ಶರಣಾಗತರನ್ನು ಸ್ವೀಕರಿಸಿ ಪೊರೆಯುವುದು ನನ್ನ ವ್ರತ**[1]' ಎಂಬ ಶ್ರೀರಾಮ ವ್ರತ ಲೋಕವಿಲಕ್ಷಣವಾದುದು. ಅದು ಅವನ ಭಕ್ತಾಪರಾಧಸಹಿಷ್ಣುತೆಗೆ, ಅಪಾರ ಕಾರುಣ್ಯಕ್ಕೆ ಅತ್ಯುತ್ತಮ ನಿದರ್ಶನ. ಇದು ಶ್ರೀರಾಮನು ವಿಭೀಷಣನನ್ನು ಸ್ವೀಕರಿಸಿದ ಪ್ರಸಂಗಕ್ಕೆ ಮಾತ್ರವಲ್ಲದೇ ಗುಹ, ಶರಭಂಗ, ಶಬರಿ ಇವರೇ ಮೊದಲಾದವರನ್ನು, ಕೊನೆಗೆ ಒಂದು ನಾಯಿಯನ್ನೂ ಸಹ ಸ್ವೀಕರಿಸಿ ಅವರ ಕೋರಿಕೆಯನ್ನು ಈಡೇರಿಸುವ ಮೂಲಕ ಉದ್ಧರಿಸಿದ ಇತರ ಸಕಲ ಪ್ರಸಂಗಗಳಿಗೂ ಶ್ರೀಕನಕದಾಸರು ನೀಡಿದ ಶಾಸ್ತ್ರೀಯವಾದ ವಿವರಣೆ ಎಂದು ತಿಳಿಯಬಹುದು.

೮. ಅವರಿವರನ್ನಿರಲಿ ಕೊನೆಗೆ ತನ್ನ ತಪ್ಪನ್ನು ಒಪ್ಪಿಕೊಂಡು ಶರಣಾದಲ್ಲಿ ರಾವಣನನ್ನೂ ಸಹ ಕ್ಷಮಿಸಲು ತಾನು ಸಿದ್ಧ ಎಂಬ ಶ್ರೀರಾಮ ಕಾರುಣ್ಯ ಅವನನ್ನು ಸರ್ವೋತ್ತಮಪರದೇವತೆ ಎಂದು ತಿಳಿಸಿಕೊಡುವ ಮತ್ತೊಂದು ಘಟ್ಟ[2].

೯. ಇಲ್ಲಿ ಶ್ರೀರಾಮನನ್ನು 'ಸಿರಿಸಂಪನ್ನ' ಎನ್ನುವ ಮೂಲಕ ಮತ್ತೊಂದು ಅಪೂರ್ವ ಪ್ರಮೇಯವನ್ನು ದಾಸರು ತಿಳಿಸಿರುವರು. ಸೀತಾದೇವಿಯು ಸಾಕ್ಷಾತ್ ಮಹಾಲಕ್ಷ್ಮಿ ಅವತಾರ. ಮಹಾಲಕ್ಷ್ಮಿ ಸದಾ ನಾರಾಯಣನ ಜೊತೆಗೆ ಸಕಲ ಕಾಲದಲ್ಲೂ ಸಕಲ ಸ್ಥಳದಲ್ಲೂ ಇರುವವಳು. ಅದಕ್ಕಾಗಿಯೇ ಸುಮನ ಎಂಬುದಾಗಿ ಪ್ರಸಿದ್ಧಳಾದವಳು. ಅಂತಹ ಅವಳನ್ನು ರಾವಣ ಅಪಹರಿಸುವುದು ಸರ್ವಥಾ ಅಸಾಧ್ಯ. ಲಕ್ಷ್ಮೀನಾರಾಯಣರಿಗೆ ವಿಯೋಗ ಸರ್ವಥಾ ಅಸಾಧ್ಯ. ಆದ್ದರಿಂದ ರಾವಣ ಅಪಹರಿಸಿದ್ದು ಸಾಕ್ಷಾತ್ ಸೀತೆಯನ್ನಲ್ಲದೇ ಮಾಯಾಸೀತೆಯನ್ನು. ಸೀತೆಯನ್ನು ಹೋಲುತ್ತಿದ್ದ ಆಕೃತಿಯಲ್ಲಿ ನೆಲೆಸಿದ್ದು ಇಂದ್ರನೇ ಹೊರತು ಮಹಾಲಕ್ಷ್ಮಿಯಲ್ಲ. ಅಲ್ಲಿ ನೆಲೆಸಿದ್ದುದು ಮಹಾಲಕ್ಷ್ಮಿ ಸನ್ನಿಧಾನ ಮಾತ್ರ ಎಂಬ ಮಹಾಭಾರತ ತಾತ್ಪರ್ಯನಿರ್ಣಯದ ವಿಶೇಷ ಪ್ರಮೇಯವನ್ನು 'ಸಿರಿಸಂಪನ್ನ' ಎಂಬ ಪದದಿಂದ ದಾಸರು ಸೂಚಿಸಿರುವರು.

೧೦. ಹೀಗೆ ರಾಮಾಯಣದ ಕಥೆಯನ್ನು ಶ್ರೀಹರಿಯ ಕಾರುಣ್ಯಾದಿ ಗುಣಗಳ ಚಿಂತನೆಗೆ ಅಳವಡಿಸಿಕೊಳ್ಳುವ ಕ್ರಮವನ್ನು ತೋರಿಸಿಕೊಡುವುದು ಹರಿಭಕ್ತಿಸಾರದ ಕೊಡುಗೆಗಳಲ್ಲೊಂದು.

*****

---

೧. ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ವಾದಿನೇ।
ಅಭಯಂ ಸರ್ವಭೂತೇಭ್ಯಃ ದದಾಮ್ಯೇತತ್ ವ್ರತಂ ಮಮ ॥ - ವಾಲ್ಮೀಕಿರಾಮಾಯಣ(೬/೧೮/೩೩)

೨. ಆನಯೈನಂ ಹರಿಶ್ರೇಷ್ಠ ದತ್ತಮಸ್ಯಾಭಯಮಂ ಮಯಾ।
ವಿಭೀಷಣೋ ವಾ ಸುಗ್ರೀವ ಯದಿ ವಾ ರಾವಣಃ ಸ್ವಯಮ್ ॥ - ವಾಲ್ಮೀಕಿರಾಮಾಯಣ (೬/೧೮/೩೪)

## ೪೪. ನಿನ್ನಂತೆ ಕೊಡುವ ಉದಾರಿಯಾವನು ರಕ್ಷಿಸು

ವೀರರಾವಣನೊಡನೆ ಹೋರಿದ
ವೀರರಗ್ಗದ ಕಪಿಗಳವರೊಳು
ಮಾರುತನ ಮಗನೇನು ಧನ್ಯನೊ ಬ್ರಹ್ಮಪಟ್ಟದಲಿ।
ಸೇರಿಸಿದೆ ನಿನ್ನಂತೆ ಕೊಡುವ ಉ-
ದಾರಿಯಾವನು ತ್ರಿಜಗದೊಳಗಾ-
ಕಾರಣದಿ ನಂಬಿದೆನು ರಕ್ಷಿಸು ನಮ್ಮನನವರತ ॥ ೪೪ ॥

**ಅ: ವೀರನಾದ ರಾವಣನೊಂದಿಗೆ ಹೋರಾಡಿದ ವೀರರು ಅಸಾಮಾನ್ಯರೆನಿಸಿದ ಕಪಿಗಳು; ಅವರಲ್ಲಿವಾಯುಪುತ್ರನಾದ ಹನುಮಂತನು ಎಷ್ಟು ಧನ್ಯನೋ ಹೇಳಲಾಗದು. ಅದರಿಂದಾಗಿ ಅವನನ್ನು ಬ್ರಹ್ಮಪಟ್ಟಕ್ಕೆ ಬರುವಂತೆ ಮಾಡಿದೆ. ನಿನ್ನಂತೆ ನೀಡುವ ಉದಾರಿ ಈ ಮೂರು ಲೋಕದೊಳು ಬೇರೆ ಯಾರು ತಾನೇ ಇರುವರು. ಆ ಕಾರಣದಿಂದ ನಾನು ನಿನ್ನನ್ನು ನಂಬಿರುವೆನು. ಅಂತಹ ಶ್ರೀಹರಿಯೇ! ನೀನು ನಮ್ಮನ್ನು ಸದಾ ರಕ್ಷಿಸು.**

ವಿ.: ೧. ರಾಮಾಯಣದಲ್ಲಿ ಕಪಿಗಳ ಸಾಧನೆಯನ್ನು ವರ್ಣಿಸುತ್ತಾ ಅದರಲ್ಲಿ ಹನುಮಂತನ ಪಾತ್ರದ ಹಿರಿಮೆಯನ್ನು ನಿರೂಪಿಸುವ ಪದ್ಯ ಇದು.

೨. ರಾವಣನಾದರೋ ಮಹಾವೀರ, ಬ್ರಹ್ಮವರ, ಶಿವವರಗಳಿಂದ ಕೂಡಿದ್ದವನು. ಆದರೆ ಶ್ರೀರಾಮನ ಹಿಂದೆ ಅವನ ಮೇಲೆ ಕಾದಾಟಕ್ಕೆಂದು ತೆರಳಿದವರು ಅಸಾಮಾನ್ಯ ಕಪಿಗಳು. ಆದರೆ, ಅವರಾರಿಗೂ ಸಹ ರಾವಣನಂತೆ ಬ್ರಹ್ಮವರ, ಶಿವವರಗಳು ಇರಲಿಲ್ಲ ಎಂಬ ಅರ್ಥದಲ್ಲೂ ಸಹ. ಆದರೂ ಆ ಕಪಿಗಳು ಅದನ್ನು ಗಮನಕ್ಕೆ ತಾರದೇ ಅವನೊಂದಿಗೆ ಹೋರಾಡಿದರು ಎಂಬಲ್ಲಿ ಆ ರಾಮಭಕ್ತಿ ಪ್ರಕಟವಾಗಿದೆ. ಇದರಿಂದ ನಾವು ಶ್ರೀಹರಿಯ ಸೇವೆಗೆಂದು ಬದ್ಧಕಂಕಣರಾದಾಗ ಎದುರಾಳಿಯು ಯಾರೇ ಆಗಿದ್ದರೂ ನಾವು ನಮ್ಮ ಕಾರ್ಯದಿಂದ ವಿಮುಖರಾಗದೆ ಯಶಸ್ವಿಯಾಗಲು ಪ್ರಯತ್ನಿಸಬೇಕು ಎಂಬ ಸಂದೇಶ ಸೂಚಿತ.

೩. ಇನ್ನು ಹಾಗೆ ರಾವಣನೊಂದಿಗೆ ಹೋರಾಟಕ್ಕೆ ತೊಡಗಿದ ಶ್ರೇಷ್ಠ ಕಪಿಗಳ ಸಂಖ್ಯೆಯೇ ಹಲವು ಕೋಟಿಗಳಷ್ಟು ದೊಡ್ಡದು. ಆದರೆ, ಅವರಲ್ಲಿ ಪ್ರಧಾನ ಪಾತ್ರ ಹನುಮಂತನದು. ಅದಕ್ಕೆ ಕಾರಣ ಅವನು ವಾಯುದೇವರ ಅವತಾರ ಎಂಬುದೇ ಆಗಿದೆ. ವಾಯುದೇವರ ಅವತಾರವಾದ್ದರಿಂದಲೇ ಹನುಮಂತ ಕಪಿಗಳಲ್ಲಿ ಅಗ್ರೇಸರನೆನ್ನಿಸಿದ. ಜೀವೋತ್ತಮನಾದ ಆತ ವಾನರೋತ್ತಮನೆನ್ನಿಸಿ ಸೇವೆ ಸಲ್ಲಿಸಿದ. ಸ್ವರೂಪದಲ್ಲಿ ಹೇಗೋ ಹಾಗೆ ಇಲ್ಲೂ ಸಹ ಪರಮಭಾಗವತ ಅಗ್ರೇಸರನಾಗಿಯೇ ಸಾಧನೆಗೈದ ಎಂದರ್ಥ; **ಅಗ್ಗ** - ಶ್ರೇಷ್ಠ. ಅಗ್ಗ ಎಂಬುದಕ್ಕೆ ಹಗುರ, ಅಲ್ಪ ಎಂಬ ಅರ್ಥವಿದ್ದರೂ ಸಹ, ಇಲ್ಲಿ ಶ್ರೇಷ್ಠ ಎಂಬ ಅರ್ಥವೇ ಹೆಚ್ಚು ಉಚಿತವಾದುದು.

೪. **ಮಾರುತನ ಮಗ** ಎಂದರೆ ಮಾರುತ ಎಂದೇ ಅರ್ಥ. ದೇವತೆಗಳು ಸಾಮಾನ್ಯವಾಗಿ ತಮ್ಮ ಮಗನಾಗಿ ತಾವೇ ಅವತರಿಸಿದರು ಎಂದು ಇತಿಹಾಸ ಪರಾಣಗಳಲ್ಲಿ ಕಂಡುಬಂದಿರುವ ವಿವರ: '**ಆತ್ಮಾ ವೈ ಪುತ್ರನಾಮಾಸಿ**'.

೫. ಹನುಮಂತನು ಸಲ್ಲಿಸಿದ ಸೇವೆ ಇತರ ಎಲ್ಲ ಕಪಿಗಳ ಸೇವೆಯನ್ನು ಮೀರಿಸಿದ್ದ ಸರ್ವೋತ್ತಮ ಸೇವೆಯಾಗಿತ್ತು ಎಂಬ ಕಾರಣದಿಂದ ಶ್ರೀರಾಮ ಅವನಿಗೆ ಸರ್ವೋತ್ಕೃಷ್ಟ ಪದವಿ ಎನ್ನಿಸಿದ ಬ್ರಹ್ಮಪದವಿಯನ್ನೇ ನೀಡಿದ. ಸೇವೆಗೆ ತಕ್ಕ ಫಲ ಎಂಬುದು ಭಗವಂತನ ನಿಯಮ: '**ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಮ್**' (ಗೀತಾ ೪/೧೧); **ಯಥಾ ಯಥಾ ವಿಷ್ಣುಪರಶ್ಚಿದಾತ್ಮಾ ತಥಾ ತಥಾ ಹ್ಯಸ್ಯ ಗತಿಃ ಪರತ್ರ** (ಮ.ಭಾ.ತಾ.ನಿ ೧೧/೧೭), ಇದರಿಂದ ಶ್ರೀರಾಮ ಇತರ ಕಪಿಗಳಿಗೆ ನೀಡದ ವಿಶೇಷ ಫಲವನ್ನು ಹನುಮಂತನಿಗೆ ನೀಡಿದ ಎಂಬುದು ಅತ್ಯಂತ ಸಮುಚಿತ ಎಂಬ ಭಾವ ಸೂಚಿತ.

೬. ತನ್ನ ಸಾರ್ಥಕ ಸೇವೆಗೆ ಹೀಗೆ ಬ್ರಹ್ಮ ಪದವಿಯಂತಹ ಅತ್ಯುತ್ತಮ ಪದವಿಯನ್ನು ಪಡೆದ ಹನುಮಂತ ನಿಜಕ್ಕೂ ಧನ್ಯ ಎಂಬುದು ಇಲ್ಲಿಯ ಮತ್ತೊಂದು ವಿವರ. ಇದು ಹನುಮಂತ ಹಾಗೆ ಬ್ರಹ್ಮಪದವಿಯನ್ನು ಪಡೆದಿದ್ದರಿಂದ ಇನ್ನೂ ಹೆಚ್ಚಾಗಿ ಶ್ರೀಹರಿಯ ಸೇವೆ ಸಲ್ಲಿಸುವ ಅವಕಾಶವನ್ನು ಪಡೆಯಲು ಸಾಧನವಾಯಿತು. ಆ ಕಾರಣದಿಂದಲೇ ಹೀಗೆ ಧನ್ಯ ಎಂಬ ಪದ ಸಾರ್ಥಕವೆನ್ನಿಸಿದೆ. ಇದರಿಂದ ಹನುಮಂತನಿಗೆ ಧನ್ಯತೆ ಒದಗಿದ್ದು ಕೇವಲ ಪದವಿ ಎಂಬ ಕಾರಣದಿಂದಲ್ಲ, ಅದು ಶ್ರೀಹರಿಯ ಸೇವೆಗೆ ದೊರೆತ ವಿಶೇಷ ಅವಕಾಶ ಎಂಬ ವಿಶೇಷಾಂಶ ಸೂಚಿತ.

೭. ಹನುಮಂತನು ಶ್ರೀರಾಮನ ಅನುಗ್ರಹದಿಂದ ಬ್ರಹ್ಮ ಪದವಿಯನ್ನು ಪಡೆದ ವಿವರ ವಾಲ್ಮೀಕಿ ರಾಮಾಯಣದಲ್ಲಿ ನಿರೂಪಿತವಾಗಿದೆ. '**ಸೋಽಯಂ ನವವ್ಯಾಕರಣಾರ್ಥವೇತ್ತಾ ಬ್ರಹ್ಮಾ ಭವಿಷ್ಯತ್ಯಪಿ ತೇ ಪ್ರಸಾದಾತ್**' (೭/೩೬/೪೭).

೮. ಶ್ರೀಹನುಮಂತನು ಸಮುದ್ರವನ್ನು ಲಂಘಿಸಿದ್ದು, ಸೀತೆಗೆ ಅಂಗುಲಿಯಕವನ್ನು ನೀಡಿ, ಅವಳು ನೀಡಿದ ಚೂಡಾಮಣಿಯನ್ನು ಶ್ರೀರಾಮನಿಗೆ ಸಮರ್ಪಿಸಲು ಸ್ವೀಕರಿಸಿದ್ದು ಅಶೋಕವನ ನಾಶಪಡಿಸಿದ್ದು ಅಕ್ಷಕುಮಾರನನ್ನು ಸಂಹರಿಸಿದ್ದು ಬ್ರಹ್ಮಾಸ್ತ್ರಕ್ಕೆ ಸಿಕ್ಕಂತೆ ವರ್ತಿಸುತ್ತಾ ರಾವಣನನ್ನು ಸಂದರ್ಶಿಸಿ ಅವನಿಗೆ ರಾಮನ ಸಂದೇಶವನ್ನು ತಿಳಿಸಿದ್ದು ಲಂಕೆಯನ್ನು ದಹನ ಮಾಡಿದ್ದು ಪುನಃ ಸಾಗರವನ್ನು ಹಾರಿ ರಾಮನ ಬಳಿಗೆ ತೆರಳಿ ಚೂಡಾಮಣಿಯನ್ನು ಅವನ ಪಾದಗಳಿಗೆ ಒಪ್ಪಿಸಿ ನಮಸ್ಕರಿಸಿದ್ದು ಇತರ ಕಪಿಗಳಿಂದ ಮಾಡಲಾಗದಿದ್ದ ಅಸಾಮಾನ್ಯವಾದ ಸಾಧನೆ. ಅದಕ್ಕಿಂತ ಮಿಗಿಲಾದದ್ದು ಶ್ರೀರಾಮನು ಅಯೋಧ್ಯೆಗೆ ಮರಳಿದ ಮೇಲೆ ಇತರ ಕಪಿಗಳಿಗೆಲ್ಲ ಮುಕ್ತಿಯನ್ನು ಕರುಣಿಸುವುದಾಗಿ ತಿಳಿಸಿ ಹನುಮಂತನಿಗೆ ಮಾತ್ರ ಏನು ನೀಡಿದರೂ ಅಲ್ಪವೇ, ಅವನು ಮಾಡಿದ ಉಪಕಾರ ಅಪಾರ ಎಂದು ಪ್ರಶಂಸಿಸಿದ್ದು

ಹನುಮಂತನ ಸೇವೆಯನ್ನು ಶ್ರೀರಾಮ ಗುರುತಿಸಿದ್ದರ ಶ್ರೇಷ್ಠ ಸಂಕೇತ[೧]. ಅದಕ್ಕಿಂತ ಮಿಗಿಲಾಗಿ ಶ್ರೀರಾಮನು ಬಯಸಿದ ವರವನ್ನು ಕೇಳಿಕೊಳ್ಳಲು ಹನುಮಂತನಿಗೆ ತಿಳಿಸಿದಾಗ, ಹನುಮಂತ ಬೇಡಿದ ವರ ಲೋಕೋತ್ತರವಾಗಿತ್ತು. ಶ್ರೀರಾಮನಲ್ಲಿ ನಿರ್ವ್ಯಾಜವಾದ ಭಕ್ತಿ ಹಾಗೂ ಅವನ ಪೂರ್ಣಾನುಗ್ರಹದ ಹೊರತು ತನಗೆ ಬೇರೇನೂ ಬೇಕಿಲ್ಲ ಎಂಬ ಹನುಮಂತನ ಕೋರಿಕೆ ಅವನ ವ್ಯಕ್ತಿತ್ವದ ಔನತ್ಯಕ್ಕೆ ಹಿಡಿದ ಕನ್ನಡಿಯಾಗಿದೆ[೨]. ಅಂತಹ ಅಪಾರ ಸಾಧನೆಯನ್ನು ಮಾಡಿಯು ಪ್ರತಿಫಲವನ್ನಾಗಿ ಬೇರೇನನ್ನೂ ಬಯಸದೇ, ಕೇವಲ ಜ್ಞಾನಭಕ್ತಿಗಳನ್ನು ಮಾತ್ರ ಬಯಸಿದ ಹನುಮಂತನ ನಿಷ್ಕಾಮಕರ್ಮಯೋಗ ಊಹೆಗೆ ನಿಲುಕದ್ದು. ಆ ಎತ್ತರಕ್ಕೆ ಬೇರಾರು ಏರಲಿಲ್ಲ ಎಂಬಲ್ಲಿ ಅವನ ಅಪಾರ ಹಿರಿಮೆ ತೆರೆದುಕೊಳ್ಳುವುದು. ಇಂತಹ ಹಿರಿಮೆಯನ್ನು ಗುರುತಿಸಿಯೇ ಸರ್ವೋತ್ಕೃಷ್ಟ ಪದವಿ ಎನ್ನಿಸಿದ ಬ್ರಹ್ಮಪದವಿಯನ್ನು ಶ್ರೀರಾಮ ಅವನಿಗೆ ನೀಡಿದ ಎಂಬುದು ಇಲ್ಲಿಯ ಒಟ್ಟು ಭಾವ.

೯. ಶ್ರೀರಾಮನು ಹಾಗೆ ಹನುಮಂತನಿಗೆ ಬ್ರಹ್ಮಪದವಿಯನ್ನು ನೀಡುವ ಮೂಲಕ ಅವನ ಹಿರಿಮೆಯನ್ನು ಸಾರಿದರೆ, ತನ್ನ ಪ್ರಿಯ ಸೇವಕರಲ್ಲಿ ಅತ್ಯುತ್ತಮನೆನ್ನಿಸಿದವನಿಗೆ ನೀಡಲೆಂದು ಶ್ರೀರಾಮ ಸೀತೆಯ ಕೈಗಿತ್ತ ರತ್ನಮಾಲೆಯನ್ನು ಅವಳು ಹನುಮಂತನ ಕೊರಳಿಗೆ ಕಟ್ಟುವ ಮೂಲಕ ಶ್ರೀರಾಮನ ಕಾರ್ಯವನ್ನು ಅನುಮೋದಿಸಿದ್ದು ಸೀತೆಯಿಂದಾದ ಹನುಮಂತನ ಪ್ರಶಂಸೆ[೩].

---

೧. ಏಕೈಕ ಶೋಪಕಾರಸ್ಯ ಪ್ರಾಣಾನ್ ದಾಸ್ಯೇ ಹಿ ಕೇವಲಮ್ ।
ಶೇಷಸ್ಯೇಹೋಪಕಾರಾಣಾಂ ಭವಾಮ ಋಣಿನೋ ವಯಮ್ ॥ -ವಾ. ರಾ. (೫/೪೦/೨೨)

೨. ಪ್ರವರ್ಧತಾಂ ಭಕ್ತಿರಲಂ ಕ್ಷಣೇ ಕ್ಷಣೇ ತ್ವಯೀಶ ಮೇ ಹ್ರಾಸವಿವರ್ಜಿತಾ ಸದಾ ।
ಅನುಗ್ರಹಸ್ತೇ ಮಯಿ ಚೈವಮೇವ ನಿರೂಪಧೌ ತೌ ಮಮ ಸರ್ವಕಾಮಃ ॥
- ಮ.ಭಾ.ತಾ.ನಿ (೮/೨೪೭)

೩. ಅವೇಕ್ಷಮಾಣಾ ವೈದೇಹೀ ಪ್ರದದೌ ವಾಯುಸೂನವೇ ।
ಅವಮುಚ್ಯಾತ್ಮನಃ ಕಂಠಾದ್ಧಾರಂ ಜನಕನಂದಿನೀ ॥
ಅವೈಕ್ಷತ ಹರೀನ್ ಸರ್ವಾನ್ ಭರ್ತಾರಂ ಚ ಮುಹುರ್ಮುಹುಃ ।
ತಾಮಿಂಗಿತಜ್ಞಃ ಸಂಪ್ರೇಕ್ಷ್ಯ ಬಭಾಷೇ ಜನಕಾತ್ಮಜಾಮ್ ॥
ಪ್ರದೇಹಿ ಸುಭಗೇ ಹಾರಂ ಯಸ್ಯ ತುಷ್ಟಾಸಿ ಭಾಮಿನಿ ।
ತೇಜೋ ಧೃತಿರ್ಯಶೋ ದಾಕ್ಷ್ಯಂ ಸಾಮರ್ಥ್ಯಂ ವಿನಯೋ ನಯಃ ॥
ಪೌರುಷಂ ವಿಕ್ರಮೋ ಬುದ್ಧಿರ್ಯಸ್ಮಿನ್ನೇತಾನಿ ನಿತ್ಯದಾ ।
ದದೌ ಸ ವಾಯುಪುತ್ರಾಯ ತಂ ಹಾರಮಸಿತೇಕ್ಷಣಾ ।
ಹನೂಮಾಂಸ್ತೇನ ಹಾರೇಣ ಶುಶುಭೇ ವಾನರರ್ಷಭಃ ॥
-ವಾಲ್ಮೀಕಿರಾಮಾಯಣ (೬/೧೩೧/೭೯-೮೩)

ರತ್ನಾನ್ಯನರ್ಘ್ಯಾಣಿ ವರಾಂಬರಾಣಿ ಹಾರಾನ್ ಪರಾರ್ಘ್ಯಾಂಶ್ಚ ವಿಭೂಷಣಾನಿ ।
ದದೌ ಸ ದೇವೋ ಜನಕಾತ್ಮಜಾಯೈ ತೇಭ್ಯಶ್ಚ ಕಾಮಾನ್ ಕಪಿರಾಕ್ಷಸೇಭ್ಯಃ ॥
ವಿಭೂಷಣೈಸ್ತೈಃ ಪರಿಭೂಷಿತಾಂಗೀ ಸೀತಾ ವರಿಷ್ಠಾಂ ವರಹಾರಮಾಲಾಮ್ ।

೧೦. ಹನುಮಂತನ ಸೇವೆಯ ವೈಖರಿ ಹೀಗೆ ಅನುಪಮ ಎನ್ನಿಸಿದ್ದು ಒಂದು ವಿಶೇಷವಾದರೆ, ಸೇವೆಗೆ ತಕ್ಕ ಫಲ ನೀಡಿದ ಶ್ರೀರಾಮನ ಹಿರಿಮೆ ಮತ್ತೊಂದು ಬಗೆಯ ವಿಶೇಷ. ಎಷ್ಟೋ ಜನರು ಜನರಿಂದ ಸೇವೆ ಪಡೆದರೂ ಸಹ ಅವರ ಸೇವೆಗೆ ತಕ್ಕ ಫಲವನ್ನು ನೀಡದೇ ವಂಚಿಸುವುದುಂಟು. ಎಂದರೆ ಸೇವೆಯ ಯೋಗ್ಯತೆಯನ್ನು ಗುರುತಿಸುವುದು ಸಹ ಎಲ್ಲರಿಗೂ ಸಾಧ್ಯವಾಗುವಂತಹ ಕಾರ್ಯವೇನಲ್ಲ. ಕಡಿಮೆ ಸೇವೆ ಮಾಡಿದವರಿಗೆ ಹೆಚ್ಚು ಫಲ, ಹೆಚ್ಚು ಸೇವೆ ಮಾಡಿದವರಿಗೆ ಕಡಿಮೆ ಫಲ ಎಂಬ ತಾರತಮ್ಯ ನೀತಿ ಒಡೆಯನೆನ್ನಿಸಿದವರಿಗೆ ಶೋಭೆ ನೀಡುವಂತಹುದಲ್ಲ. ಆದರೆ, ಶ್ರೀರಾಮ ಹೀಗಲ್ಲ. ಪ್ರತಿಯೊಬ್ಬರ ಸೇವೆಯನ್ನು ಸಹ ಸರಿಯಾಗಿ ಗುರುತಿಸಿ ಅವರ ಯೋಗ್ಯತೆಗೆ ತಕ್ಕಂತೆ ಫಲ ನೀಡುವ ನಿಷ್ಪಕ್ಷಪಾತ ಧೋರಣೆ, ಸಂಪೂರ್ಣ ಗುಣಗ್ರಾಹಿತನ ಅವನದು. ಅದಕ್ಕೆ ಅವನು ಸಕಲ ದೋಷದೂರನು, ಸರ್ವಗುಸಂಪನ್ನನು ಆದ ಭಗವಂತನೇ ಆಗಿರುವುದು ಕಾರಣ. ಅವನಂತೆ ಎಲ್ಲರಿಗೂ ಸಾಧ್ಯವಾಗುವ ಸಂಗತಿಯೇನಲ್ಲ ಎಂಬುದನ್ನು '**ನಿನ್ನಂತೆ ಕೊಡುವ ಉದಾರಿಯಾವನು ಮೂರು ಲೋಕದೊಳು**' ಎಂದಿರುವರು. ಶ್ರೀರಾಮನ ಹಿರಿಮೆ ಒಂದು ಕಾಲಕ್ಕೆ ಸೀಮಿತ ಅಥವಾ ಒಂದೆರಡು ಸ್ಥಳಗಳಿಗೆ ಮಾತ್ರ ಸೀಮಿತವೆನ್ನಿಸಿದ ಸಾಮಾನ್ಯ ಹಿರಿಮೆಯಾಗಿರದೇ ಮೂರು ಲೋಕದೊಳು ಸಹ ಅಪಾರ ಹಿರಿಮೆ ಎಂಬುದಲ್ಲಿ '**ಮೂರು ಲೋಕದೊಳು**' ಎಂಬ ಪದದಿಂದ ಸೂಚಿಸಿರುವರು.

---

ಉನ್ಮುಚ್ಯ ಕಂಠಾದವಲೋಕಯಂತೀ ದದರ್ಶ ದೇವಸ್ಯ ಮುಖೇಂದುಬಿಂಬಮ್ ॥
ಮುಹುರ್ಮುಖೇಂದುಂ ನಿಜಮೀಕ್ಷಮಾಣಾಂ ಮುಹುಶ್ಚ ಮುಕ್ತಾಸ್ರಜಮೀಕ್ಷಮಾಣಾಮ್ ।
ಶುಚಿಸ್ಮಿತಾಂ ತಾಂ ಪತಿರಿಂಗಿತಜ್ಞಃ ಪಶ್ಯನ್ನಪಾಂಗೇನ ಜಗಾದ ರಾಮಃ ॥
ವಿದ್ಯಾವಿಶೇಷೇಷು ವಿಶಿಷ್ಟಮೇಕಂ ಸಬ್ರಹ್ಮಚರ್ಯಾದಿಷು ವಾ ಗುಣೇಷು ।
ಯಂ ಮನ್ಯಸೇ ಧನ್ಯತಮಂ ತ್ರಿಲೋಕ್ಯಾಂ ಮುಕ್ತಾಕಲಾಪಂ ಸತಿ ದೇಹಿ ತಸ್ಮೈ ॥
ಅತಿಕ್ರಮಂ ಯಸ್ಯ ಪರಾಕ್ರಮಾಣಾಂ ನ ಕೋಽಪಿ ಕುರ್ಯಾದುಚಿತಕ್ರಮಾಣಾಮ್ ।
ಅತಿಕ್ರಮೀ ಯೋಽನ್ಯಪರಾಕ್ರಮಾಣಾಂ ತಸ್ಮೈ ಶುಭೇ ತ್ವಂ ದಿಶ ವೇತನಾರ್ಥಮ್ ॥
ಮಮ ಪ್ರಿಯಂ ಯಂ ಭುವನೇಷು ವೇತ್ಥ ತವ ಪ್ರಿಯೋ ಯೋಽಸ್ಮದುಪಾಸಕೇಷು ।
ಸರ್ವೇಷ್ವಸಂಗೋ ಮಯಿ ಯೋಽತಿಸಂಗೀ ಸಂಪ್ರೀತಿದೇಯಂ ಸತಿ ದೇಹಿ ತಸ್ಮೈ ॥
ಏವಂ ಬ್ರುವಾಣೇ ಜಗದೇಕನಾಥೇ ಸೀತಾ ಹನೂಮಂತಮವೇಕ್ಷ್ಯ ಹೃಷ್ಟಾ ।
ಅನನ್ಯಲಭ್ಯಾಂ ಸ್ವಯಮಾಮುಮೋಚ ತಾಂ ಹಾರಮಾಲಾಮಮಲಾಂ ತದಂಸೇ ॥
ಸುಧಾಸುಧಾರಾಸಿತಯಾ ತಯಾಽಲಂ ಸುವರ್ಣವರ್ಣೋಽಥ ಬಭಾರ ಶೋಭಮ್ ।
ಹಾರಸ್ರಜಾಽಸೌ ಹನುಮಾನ್ ಮಹಾತ್ಮಾ ಯಥಾ ಮಹಾಮೇರುರಮರ್ತ್ಯನದ್ಯಾ ॥
ಏಷಾಂ ಗುಣಾನಾಮತಿದುರ್ಲಭಾಣಾಂ ಪಾತ್ರಂ ಪ್ರಿಯೋ ಯೋ ನನು ದೇವದೇವ್ಯೋಃ ।
ಬ್ರಹ್ಮೈವ ನೂನಂ ಭಗವಾನ್ ಹನೂಮಾನಿತ್ಯೇವ ವಾಣೀ ವವೃಧೇ ತ್ರಿಲೋಕ್ಯಾಮ್ ॥
-ಸಂಗ್ರಹ ರಾಮಾಯಣ (ಯುದ್ಧಕಾಂಡ ೧೬/೧೫-೨೩)

ರಾಜ್ಯಾಭಿಷೇಕೇಽವಸಿತೇಽತ್ರ ಸೀತಾ ಪ್ರೇಷ್ಠಾಯ ನಸ್ತಾಂ ಭಜತಾಂ ದಿಶೇತಿ ।
ರಾಮಸ್ಯ ವಾಣ್ಯಾ ಮಣಿಮಂಜುಮಾಲಾವ್ಯಾಜೇನ ದೀರ್ಘಾಂ ಕರುಣಾಂ ಬಬಂಧ ॥
- ಸುಮಧ್ವವಿಜಯ (೧/೨೨)

೧೧. ಹನುಮಂತನ ಹಿರಿಮೆಯನ್ನು ಶ್ರೀಕನಕದಾಸರು ಬೇರೊಂದು ಪದ್ಯದಲ್ಲಿ ವಿವರವಾಗಿ ತಿಳಿಸಿರುವರು:

ಪರಮಪದವಿಯನೀವ ಗುರುಮುಖ್ಯಪ್ರಾಣನ
ಧರೆಯೊಳಗುಳ್ಳ ಮಾನವರೆಲ್ಲ ಭಜಿಸಿರೊ ॥ ಪ ॥
ಅಂದು ತ್ರೇತೆಯಲಿ ಹನುಮನಾಗಿ ಅವತರಿಸಿ
ಬಂದು ದಾಶರಥಿಯ ಪಾದಕೆರಗಿ
ಸಿಂಧುವನು ದಾಟಿ ಮುದ್ರಿಕೆಯಿತ್ತು ದಾನವರ
ವೃಂದಪುರ ದಹಿಸಿ ಚೂಡಾಮಣಿಯ ತಂದವನ ॥ ೧ ॥
ದ್ವಾಪರಯುಗದಲಿ ಭೀಮಸೇನೆನಿಸಿ
ಶ್ರೀಪತಿಯ ಪಾದ ಕಡು ಭಜಕನಾಗಿ
ಕೋಪಾವೇಶದಲಿ ದುಶ್ಶಾಸನನನು ಸೀಳಿ
ಭೂಪರ ಬಲದೊಳಗೆ ಜರೆ ಜರೆದು ಕರೆದವನ ॥ ೨ ॥
ಕಲಿಯುಗದಲಿ ತುರೀಯಾಶ್ರಮವನೆ ಧರಿಸಿ
ಕಲುಷದ ಮಾಯಿಗಳನು ಸೋಲಿಸಿ
ಖಿಲವಾದ ಮಧ್ವಮತವನು ಬಲಿದೆನಿಸಿ ಕಾಗಿ
ನೆಲೆಯಾದಿಕೇಶವ ಪರದೈವನೆಂದೆನಿಸುವನ ॥ ೩ ॥

*****

## ೪೫. ಮಿಕ್ಕಾದವರಿಗುಂಟೇ ಕರುಣ ರಕ್ಷಿಸು

**ಶಿವಶಿವಾ ನೀ ಮಾಡಿದುಪಕಾ-**
**ರವನು ಮರೆತವರುಂಟೆ ಪಾಪದಿ**
**[೧]ನವೆದಜಾಮಿಳಗೊಲಿದು ಪ್ರಾಣವಿಯೋಗಕಾಲದಲಿ।**
**ಜವನವರ ಕೈಗೊಪ್ಪಿಸದೆ ಕಾ-**
**ಯ್ದವನು ನೀ ಮಾಧವನು ಮಿಕ್ಕಾ-**
**ದವರಿಗುಂಟೇ ಕರುಣ ರಕ್ಷಿಸು ನಮ್ಮನನವರತ ॥ ೪೫ ॥**

**ಅ: ಅಬ್ಬ ಎಂತಹ ಆಶ್ಚರ್ಯ, ನೀನು ಮಾಡಿದ ಉಪಕಾರವನ್ನು ಮರೆಯುವುದು ಸಾಧ್ಯವೇ? ಪಾಪದಿಂದ ಬಸವಳಿದ ಅಜಾಮಿಳನಿಗೆ ನೀನು ಒಲಿದೆ; ಅವನು ಪ್ರಾಣ ತೊರೆಯುವ ಸಮಯದಲ್ಲಿ ಅವನನ್ನು ಯಮನಾಳುಗಳಿಗೆ ಒಪ್ಪಿಸದೇ ಕಾಯ್ದವನು**

೧. ನೆನೆದಜಾಮಿಳಗೊಲಿದು (ಪಾ.); ಈ ಪದ್ಯದುದ್ದಕ್ಕೂ ವಕಾರದ ದ್ವಿತೀಯಾಕ್ಷರ ಪ್ರಾಸವಿದ್ದು ಈ ಪಾಠದಂತೆ ನಕಾರವು ಬರುವುದರಿಂದ ಇದು ಅಪಪಾಠವೇ ಸರಿ.

**ನೀನು. ನೀನು ಲಕ್ಷ್ಮೀಪತಿಯೇ ಆದಂತಹ ಸರ್ವೋತ್ತಮ; ಬೇರೆ ಯಾರಿಗೂ ಸಹ ಇಂತಹ ಕರುಣೆ ಇರುವುದು ಸಾಧ್ಯವಿಲ್ಲ. ಅಂತಹ ಶ್ರೀಹರಿಯೇ! ನೀನು ಸದಾ ನಮ್ಮನ್ನು ರಕ್ಷಿಸು.**

ವಿ.: ೧. ಶ್ರೀಹರಿಯ ಕಾರುಣ್ಯವನ್ನು ಅಜಾಮಿಳನ ಪ್ರಸಂಗದ ನಿದರ್ಶನದ ಮೂಲಕ ಇಲ್ಲ ವರ್ಣಿಸಿರುವರು.

೨. ಶಿವ ಶಿವ ಎಂಬುದು ಒಂದು ವಾಗ್ರೂಢಿ. ಇದು ಶಿವನ ಹೆಸರನ್ನು ಉಲ್ಲೇಖಿಸುವ ಪದವಲ್ಲ. ಆಶ್ಚರ್ಯ, ಅದ್ಭುತ ಮೊದಲಾದ ಭಾವವನ್ನು ಸೂಚಿಸುವ ವಾಗ್ರೂಢಿ ಮಾತ್ರ. **'ಹರಹರ ಮಹಾದೇವ'** ಎಂಬಲ್ಲಿ ಹೇಗೋ ಹಾಗೆ. ಇದನ್ನು ಗಮನಿಸದ ಕೆಲವರು ಶಿವ ಶಿವ ಎಂಬ ಈ ಮಾತಿನಿಂದ ಶ್ರೀಕನಕದಾಸರು ಶಿವ ಪಾರಮ್ಯವನ್ನು ಸಹ ಒಪ್ಪಿದ್ದರು ಎಂದು ತಪ್ಪಾಗಿ ವ್ಯಾಖ್ಯಾನಿಸಿರುವುದುಂಟು. ಅದು ಸರಿಯಲ್ಲ. ಶಿವ ಲಯಕಾರಕ ದೇವತೆ, ಆ ಹೆಸರಿನ ಉಚ್ಚಾರಣೆಯ ಮೂಲಕ ಅದ್ಭುತವನ್ನು ಸೂಚಿಸುವ ರೂಢಿಯಾಗಿ ಈ ಪದ ಬಳಕೆಯಲ್ಲಿದೆ.

೩. ಅಜಾಮಿಳ ತನ್ನ ಯೌವನಕಾಲದಿಂದ ಪ್ರಾರಂಭಿಸಿ ದೇಹ ಬಿಡುವವರೆಗಿನ ಜೀವನವನ್ನು ಅಗಮ್ಯಾಗಮನಾದಿ ಪಾತಕಗಳನ್ನು ಮಾಡುತ್ತಲೇ ಕಳೆದಿದ್ದವನು. ಆದರೆ, ಅಂತ್ಯ ಕಾಲದಲ್ಲಿ ಯಮದೂತರು ಕರೆದೊಯ್ಯಲು ಬಂದಾಗ ಭೀತನಾಗಿ ತನ್ನ ಮಗನನ್ನು ಕರೆಯ ಹೊರಟು 'ನಾರಾಯಣ' ಎಂಬುದಾಗಿ ಆರ್ತತೆಯಿಂದ ಸ್ತುತಿಸಿದವನು. ಶ್ರೀಹರಿಯು ಕೂಡಲೇ ತನ್ನ ದೂತರನ್ನು ಅವನ ಬಳಿಗೆ ಕಳುಹಿಸಿ ಯಮದೂತರಿಂದ ಅವನನ್ನು ಬಿಡುಗಡೆ ಮಾಡಿಸಿ ಉದ್ಧರಿಸಿದ ಕಥೆ ಶ್ರೀಮದ್ಭಾಗವತದಲ್ಲಿ ಸುಪ್ರಸಿದ್ಧ; ನವೆ – ಕೊರಗು, ದುಃಖ.

೪. ಈ ರೀತಿಯಾದ ವಿಶೇಷ ಸಂರಕ್ಷಕತ್ವ ಬೇರಾರಿಗೂ ಸಾಧ್ಯವಾಗದ ಹಿರಿಮೆ. ಇದಕ್ಕೆ ಶ್ರೀಹರಿಯು ಸಾಕ್ಷಾತ್ ಲಕ್ಷ್ಮೀಪತಿಯಾಗಿರುವುದೇ ಕಾರಣ. ಮಹಾಲಕ್ಷ್ಮಿಯು ಬ್ರಹ್ಮಾದಿ ದೇವತೆಗಳಿಗಿಂತ ಅತ್ಯಂತ ಮಿಗಿಲು; ಅವಳಿಗೂ ಪತಿ ಎಂಬುದು ಶ್ರೀಹರಿಯ ಮಹಿಮೆ. ಆದರಿಂದಾಗಿಯೇ ಅವನಿಗೆ ಇಂತಹ ಅಪೂರ್ವ ಸಾಮರ್ಥ್ಯ ಎಂಬುದು ಇಲ್ಲಿಯ ಭಾವ.

೫. ಜವ ಎಂದರೆ ಯಮ, ಇದು ಯಮ ಎಂಬುದರ ತದ್ಭವ. ಜವನಾಳುಗಳು ಎಂದರೆ ಯಮದೂತರು ಎಂದರ್ಥ.

೬. ಹೀಗೆ ಪರಮಪಾಪಿಯನ್ನೂ ಸಹ ತನ್ನ ನಾಮಸ್ಮರಣೆ ಮಾತ್ರದಿಂದಲೇ ಉದ್ಧರಿಸಿದ ಹಿರಿಮೆ ಶ್ರೀಹರಿಯದು; ಅದು ಅವನ ಪರಮಕಾರುಣ್ಯಕ್ಕೆ ದ್ಯೋತಕ.

೭. ಇದು ಒಂದು ರೀತಿಯಲ್ಲಿ ಶ್ರೀಜಗನ್ನಾಥದಾಸರ ಹರಿಕಥಾಮೃತಸಾರದ ಕರುಣಾ ಸಂಧಿ ಎಂಬ ಸಂಧಿಗೆ ಪ್ರವೇಶಿಕೆಯಂತಿರುವ ಪದ್ಯ ಎಂದು ತಿಳಿಯಬಹುದು.

*****

## ೪೬. ನೆರದವಗಿತ್ತೆ ಕೈವಲ್ಯವನು ರಕ್ಷಿಸು

ಹೆತ್ತ ಮಗಳನು ಮದುವೆಯಾದವ-
ನುತ್ತಮನು ಗುರುಪತ್ನಿಗಳುಪಿದ
ಚಿತ್ತಜನ ಮಾವ ಕೃತಘ್ನನು ನಿನಗೆ ಮೈದುನನು ।
ಹೊತ್ತು ತಪ್ಪಿಸಿ ಕಾಮದಲಿ ಮುನಿ-
ಪೋತ್ತಮನ ಮಡದಿಯನು ನೆರದವ-
ಗಿತ್ತೆ ಕೈವಲ್ಯವನು ರಕ್ಷಿಸು ನಮ್ಮನನವರತ ॥ ೪೬ ॥

ಅ: ಹೆತ್ತ ಮಗಳನ್ನು ಮದುವೆಯಾದಂತಹ ಬ್ರಹ್ಮದೇವರು ಉತ್ತಮರೆನಿಸಿರುವರು. ಗುರುಪತ್ನಿಯಾದ ತಾರೆಯೊಂದಿಗೆ ಒಡಗೂಡಿದ ಚಂದ್ರನು ಮಾವನಾದ ದಕ್ಷಪ್ರಜಾಪತಿಗೆ ಕೃತಘ್ನನೂ ಆದವನು; ಮಾವನಾದ ದಕ್ಷನಿಗೆ ಕೃತಘ್ನನಾದ ಶಿವನಂತೆ ಇವನೂ ನಿನಗೆ ಮೈದುನ; ಮುನಿ ಶ್ರೇಷ್ಠನಾದ ಗೌತಮನ ಪತ್ನಿಯಾದ ಅಹಲ್ಯೆಯನ್ನು ಅವೇಳೆಯಲ್ಲಿ ಕಾಮದಲ್ಲಿ ಕೂಡಿದಂತಹ ಇಂದ್ರನಿಗೆ ಕೈವಲ್ಯ ಪದವಿಯನ್ನು ನೀನು ನೀಡಿದೆ. ಅಂತಹ ಶ್ರೀಹರಿಯೇ! ನೀನು ನಮ್ಮನ್ನು ಸದಾ ರಕ್ಷಿಸು.

ವಿ.: ೧: ಈ ಪದ್ಯದಲ್ಲಿ ಶ್ರೀಹರಿಯು ತನ್ನ ಭಕ್ತರಾದವರು ಮಾಡುವ ಪಾಪಗಳನ್ನು ಮನ್ನಿಸಿ ಉತ್ತಮ ಗತಿಗಳನ್ನು ನೀಡುವ ಅವನ ಅಗಾಧ ಕಾರುಣ್ಯವನ್ನು ವರ್ಣಿಸಿರುವರು.

೨. 'ಹೆತ್ತಮಗಳನ್ನು ಮದುವೆಯಾದವರು' ಅಂದರೆ ಬ್ರಹ್ಮದೇವರು ಎಂದರ್ಥ. ಈ ಪ್ರಸಂಗ ಶ್ರೀಮದ್ಭಾಗವತ ತೃತೀಯ ಸ್ಕಂಧದಲ್ಲಿ ಬಂದಿದೆ. ಬ್ರಹ್ಮದೇವರು ಒಬ್ಬ ಸ್ತ್ರೀಯನ್ನು ಸೃಷ್ಟಿಸಿದರೆಂದೂ, ಅವಳೇ ಸರಸ್ವತಿಯೆಂದೂ, ಹಾಗೆ ಸೃಷ್ಟಿಸಿದ ಅವಳನ್ನು ತಾವೇ ವಿವಾಹವಾದರೆಂದು, ಅವಳನ್ನು ಹಿಂಬಾಲಿಸಿ ಧಾವಿಸಿದರೆಂದೂ ಮೇಲ್ನೋಟಕ್ಕೆ ಕಾಣುವುದು. ವಾಸ್ತವ ಸಂಗತಿ ಅದಲ್ಲ, ಬ್ರಹ್ಮದೇವರು ಸೃಷ್ಟಿಸಿದ ಆ ಸ್ತ್ರೀ ನಿಜವಾದ ಸರಸ್ವತಿ ಅಲ್ಲವೇ ಅಲ್ಲ. ಬ್ರಹ್ಮದೇವರು ಅವಳನ್ನು ವಿವಾಹವಾಗಲೂ ಇಲ್ಲ. ಅವರು ಹಾಗೆ ವರ್ತಿಸಿದ್ದು ಕೇವಲ ಅಸುರಮೋಹನಕ್ಕಾಗಿ ಮಾತ್ರ. ಆದರೆ ವಸ್ತುಸ್ಥಿತಿಯನ್ನು ತಿಳಿಯದರು ಹಾಗೆ ಅರ್ಥ ಮಾಡಿಕೊಳ್ಳುವುದುಂಟು[೧]. ಆ ಅರ್ಥದಲ್ಲಿ ಸಹ ಶ್ರೀಹರಿಯು ಅವರನ್ನು ಜೀವೋತ್ತಮ

---

೧. ವಾಚಂ ದುಹಿತರಂ ತನ್ವೀಂ ಸ್ವಯಂಭೂರ್ಹರತೀಂ ಮನಃ।
ಅಕಾಮಾಂ ಚಕಮೇ ಕ್ಷತ್ತಃ ಸಕಾಮ ಇತಿ ನಃ ಶ್ರುತಮ್ ॥ - ಭಾಗವತ (೩/೧೩/೨೮)
ಯಾಂ ತತ್ಯಾಜ ವಿಭುರ್ಬ್ರಹ್ಮಾ ಮಾನುಷೀ ವಾಕ್ ಚ ಸಾ ಸ್ಮೃತಾ।
ಸರಸ್ವತೀ ನಿಜಾ ಭಾರ್ಯಾ ದೈವೀಂ ವಾಚಂ ತು ತಾಂ ವಿದುಃ॥ ಇತಿ ಚ। - ಭಾ.ತಾ (೩/೧೩/೨೮)
ಜನಿಷ್ಯತಾಂ ಜನಾನಾಂ ತು ಸ್ವಭಾವಾನಾಂ ಪ್ರಸಿದ್ಧಯೇ।
ಜ್ಞಾನಾದಿಗುಣಪೂರ್ಣಸ್ಯ ಬ್ರಹ್ಮಣೋಽಪಿ ಕ್ಷಣಾರ್ಧಗಾಃ।

ಎಂಬ ಗೌರವಕ್ಕೆ ಪಾತ್ರರಾಗಿ ಮಾಡಿದ್ದು ಅವನ ಕರುಣಕ್ಕೆ ಸಂಕೇತ ಎಂದು ಭಾವ. ಇದರ ನಿಜವಾದ ಹಿನ್ನಲೆಯನ್ನು ತಿಳಿಯದ ಜನ ಬ್ರಹ್ಮದೇವರನ್ನು ಹೆತ್ತ ಮಗಳನ್ನೇ ಕಾಮಿಸಿ ಮದುವೆಯಾದವರೆಂದು ತಪ್ಪಾಗಿ ತಿಳಿಯುವುದುಂಟು.

೩. ಬ್ರಹ್ಮದೇವರು ನಿಜವಾಗಲೂ ಮದುವೆಯಾದದ್ದು ಸರಸ್ವತಿಯನ್ನು. ಸರಸ್ವತಿ ಬ್ರಹ್ಮದೇವರ ಮಗಳಲ್ಲ. ಕೃತಿ ರೂಪದ ಮಹಾಲಕ್ಷ್ಮೀ ಹಾಗೂ ಪ್ರದ್ಯುಮ್ನ ರೂಪದ ಶ್ರೀಹರಿ ಇವರಿಬ್ಬರ ಪುತ್ರಿಯರು ಸರಸ್ವತಿ, ಭಾರತಿಯರು. ಬ್ರಹ್ಮದೇವರು ಸರಸ್ವತಿಪತಿಯಾದರೆ ವಾಯುದೇವರು ಭಾರತೀಪತಿಯಾಗಿರುವರು: ''ಕೃತಿರಮಣಪ್ರದ್ಯುಮ್ನನಂದನೆ'' (ಹರಿಕಥಾಮೃತಸಾರ ೧-೬)

೪. ಇಲ್ಲಿ '**ಉತ್ತಮನು**' ಎಂದರೆ ಜೀವೋತ್ತಮ ಎಂದರ್ಥ. ಶ್ರೀಹರಿಯು ಸರ್ವೋ-ತ್ತಮನಾದರೆ ವಾಯುದೇವರು ಜೀವೋತ್ತಮರು ಎಂದು ಮಧ್ವಮತದ ಮುಖ್ಯ-ಪ್ರಮೇಯಗಳಲ್ಲೊಂದು. ಅದನ್ನು ದಾಸರು ಹೀಗೆ ತಿಳಿಸಿರುವರು.

೫. '**ಚಿತ್ತಜ**' ಎಂದರೆ ಶ್ರೀಹರಿಯ ಮನಸ್ಸಿನಿಂದ ಜನಿಸಿದ ಚಂದ್ರ ಎಂದರ್ಥ: ಚಂದ್ರಮಾ ಮನಸೋ ಜಾತಃ. ಚಂದ್ರನು ಗುರುಪತ್ನಿಯಾದ ತಾರೆಯೊಂದಿಗೆ ಕೂಡಿ ಬುಧನನ್ನು ಮಗನನ್ನಾಗಿ ಪಡೆದ ಕಥೆ ಶ್ರೀಮದ್ಭಾಗವತಾದಿಗಳಲ್ಲಿ ಪ್ರಸಿದ್ಧ. ಇದರಿಂದ ಚಂದ್ರನಿಗೆ ಗುರುಪತ್ನೀಗಮನರೂಪ ದೋಷವು ತಟ್ಟಿತು. ಅದರಂತೆ ಚಂದ್ರನು ದಕ್ಷಪುತ್ರಿಯರಾದ ಅಶ್ವಿನಿ ಮೊದಲಾದ ಪುತ್ರಿಯರನ್ನು ವಿವಾಹವಾಗಿ ಅವರಲ್ಲಿ ಒಬ್ಬಳಾದ ರೋಹಿಣಿಯ ಮೇಲೆ ವಿಶೇಷವಾದ ಪಕ್ಷಪಾತ ತೋರಿಸಿದ್ದರಿಂದ ಮಾವನಿಗೆ ಕೃತಘ್ನ ಎನಿಸಿ ದೋಷಿಯಾದ. ಹೀಗೆ ದೋಷಿಯೆನಿಸಿದ ಚಂದ್ರನನ್ನು ಚಂದ್ರನ ಸಹೋದರಿ ಮಹಾಲಕ್ಷ್ಮಿಯ ಪತಿ ಶ್ರೀ ಹರಿ. ಇದರಿಂದ ಚಂದ್ರನು ಶ್ರೀಹರಿಗೆ ಮೈದುನ ಎಂದಾಗುವುದು. ಚಂದ್ರನನ್ನು ತನ್ನ ಮೈದುನನನ್ನಾಗಿ ಮಾಡಿಕೊಂಡ ಶ್ರೀಹರಿ ಕರುಣಾಳು ಎಂದರ್ಥ; **ಗುರು** – ಬೃಹಸ್ಪತಿ. ಗುರು ಎಂಬ ಅರ್ಥದೊಂದಿಗೆ ಬೃಹಸ್ಪತಿ ಎಂಬ ಅರ್ಥವೂ ವಿವಕ್ಷಿತ (ಶ್ಲೇಷಾಲಂಕಾರ). ಚಂದ್ರನಿಗಿಂತ ಉತ್ತಮರಾದ ಬೃಹಸ್ಪತ್ಯಾಚಾರ್ಯರು ಅವನಿಗೆ ಗುರುಗಳೂ ಆಗಿರುವರು.

೬. ಇಲ್ಲಿ **ಚಿತ್ತಜನ** ಎಂದರೆ, ಮನಸ್ಸಿನಿಂದ ಹುಟ್ಟಿದ ಚಂದ್ರ ಎಂದರ್ಥ: **ಚಂದ್ರ ಮಾ ಮನಸೋ ಜಾತಃ** (ಪುರಷಸೂಕ್ತ).

---

ಭಯಾದಿಕಾ ಭವಂತೀವ ಕಥಂ ತಸ್ಮಿನ್ ಸ್ಥಿರಾಲಯಾಃ ॥ ಇತಿ ಚ ।
ಭಗವತ್ಪ್ರೀತಯೇ ನಿತ್ಯಂ ಬ್ರಹ್ಮಣೋ ಯೇ ಭಯಾದಯಃ ।
ನ ವೃಥಾ ತಸ್ಯ ಭಾವಃ ಸ್ಯಾತ್ ಕಶ್ಚಿತ್ ತೇಽಪಿ ಕ್ಷಣಾರ್ಧಗಾಃ ।
ಅಜ್ಞಾನಂ ಚ ಚತುರ್ವಾರಂ ದ್ವಿವಾರಂ ಭಯಮೇವ ಚ ।
ಶೋಕೋಽಪಿ ತಾವಾನ್ನಾನ್ಯತ್ರ ಕದಾಚಿದ್ಬ್ರಹ್ಮಣೋ ಭವೇತ್ ।
ತತ್ರಾಪಿ ಭಗವತ್ಪ್ರೀತ್ಯಾ ಉನ್ನತ್ಯೈ ಚಾಸ್ಯ ತದ್ಭವೇತ್ ॥ ಇತಿ ಬ್ರಹ್ಮತರ್ಕೇ । – ಭಾ.ತಾ (೬/೯/೨೩)

೭. ಮುಂದಿನ ಪ್ರಸಂಗ ಇಂದ್ರನದು. ಚಂದ್ರನು ಗುರುಪತ್ನಿಗೆ ಹುಟ್ಟಿದವನಾದರೆ ಇಂದ್ರ ಮುನಿಪತ್ನಿಗೆಳುಪಿದವನು. ಇಂದ್ರ ಅಹಲ್ಯೆಯನ್ನು ಕೂಡಿದ ವಿವರ ವಾಲ್ಮೀಕಿರಾಮಾಯಣದಲ್ಲಿ ಸುಪ್ರಸಿದ್ಧ. ಪತಿಯಾದ ಗೌತಮರ ಶಾಪದಿಂದ ಶಿಲೆಯಂತಾಗಿದ್ದ ಅಹಲ್ಯೆಯನ್ನು ಶ್ರೀರಾಮದೇವರು ಉದ್ಧಾರ ಮಾಡಿದ ಕಥೆ ಲೋಕವಿದಿತ.

೮. '**ಹೊತ್ತು ತಪ್ಪಿಸಿ**' ಎಂಬ ಪದದಿಂದ ಗೌತಮರು ಸ್ನಾನಕ್ಕೆಂದು ತೆರಳಿದ್ದ ಅಕಾಲದಲ್ಲಿ ಇಂದ್ರ ಗೌತಮರ ರೂಪದಲ್ಲಿ ಬಂದು ಅಹಲ್ಯಾಗಮನ ಮಾಡಿದ ವಿವರ ಸೂಚಿತ. ಇಂದ್ರ ಹಾಗೆ ಮಾಡಿದ್ದು ಕಾಮದಿಂದ ಎಂಬುದು ಮೇಲ್ನೋಟಕ್ಕೆ ತೋರುವ ಸಂಗತಿ. ವಾಸ್ತವವಾಗಿ ಅಲ್ಲಿ ಕಾರಣವಾಗಿದ್ದು ಕಾಮವಾಗಿರದೆ ಗೌತಮಮುನಿಯ ಮೇಲಿರುವ ಪ್ರೇಮ ಎಂಬುದು ವಾಲ್ಮೀಕಿ ರಾಮಾಯಣ[೧], ಸಂಗ್ರಹರಾಮಾಯಣ ಹಾಗೂ ಮ.ಭಾ.ತಾ.ನಿ.ಗಳಿಂದ ತಿಳಿದುಬರುವ ವಿವರವಾಗಿದೆ. ಇಂದ್ರನ ಕಾರ್ಯ ಹೀಗೆ ಲೋಕಕಲ್ಯಾಣ ಉದ್ದೇಶಗೊಂಡಿದ್ದರಿಂದ ಶ್ರೀಹರಿ ಅವರಿಗೆ ಕೈವಲ್ಯ ನೀಡಿ ಉದ್ಧರಿಸಿದ ಎಂದರ್ಥ.

೯. ಗೌತಮರನ್ನು '**ಮುನಿಪೋತ್ತಮ**' ಎಂದು ಕರೆಯುವ ಮೂಲಕ ಅವರು ಕೇವಲ ವೇಷದಲ್ಲಿ ಮಾತ್ರ ಮುನಿಯಾಗಿರದೆ ನಿಜಕ್ಕೂ ಸಹ ಶ್ರೇಷ್ಠ ಮುನಿಗಳ ಸಾಲಿಗೆ ಸೇರುವ ಮಹಾಮುನಿ ಎಂಬ ವಿಶೇಷಾಂಶವನ್ನು ಸೂಚಿಸಿರುವರು. ತಮಗೆ ಸಲ್ಲದ ಗುರಿಯ ಪ್ರಾಪ್ತಿಗಾಗಿ ತಪಸ್ಸಿಗೆ ತೊಡಗಿದ್ದ ಆ ಮುನಿಯ ಅಧಿಕ ಪುಣ್ಯವನ್ನು ಪರಿಹರಿಸಲೆಂದು ದೇವಸಭೆಯಲ್ಲಿ ನಡೆದ ತೀರ್ಮಾನದಂತೆ ಇಂದ್ರ ಹಾಗೆ ಅಹಲ್ಯಾಗಮನದ ಕಾರ್ಯಕ್ಕೆ ತೊಡಗುವಂತಾಯಿತು ಎಂದು ರಾಮಾಯಣದಲ್ಲಿ ಬಂದಿದೆ.

೧೦. ಬ್ರಹ್ಮ, ಚಂದ್ರ, ಇಂದ್ರ ಈ ಮೂವರೂ ಹೀಗೆ ಕಾಮನೆಗೊಳಗಾದವರಂತೆ ಪುರಾಣಗಳಲ್ಲಿ ಕಾಣುವುದು. ಈ ಮೂವರಲ್ಲಿ ಬ್ರಹ್ಮದೇವರು ಸಂಪೂರ್ಣವಾಗಿ ನಿರ್ದೋಷರು. ಅವರು ಮಾಡಿದ ಕಾರ್ಯ ಕೇವಲ ಅಸುರಮೋಹನವಾದ್ದರಿಂದ ಅದು ಅವರ ಜೀವೋತ್ತಮತ್ವಕ್ಕೆ ಭಂಗವನ್ನು ಉಂಟುಮಾಡಲಿಲ್ಲ. ಚಂದ್ರ ಮಾಡಿದ್ದು ದೋಷವೇ. ಅದರಿಂದಾಗಿ ಅವನಿಗೆ ಮುಂದೆ ಮುಕ್ತಿಯಲ್ಲಿ ವಿಶೇಷವಾದ ಆನಂದಾತಿಶಯ ಲಭಿಸುವ ಯೋಗ ತಪ್ಪಿತು. ಇಂದ್ರ ಮಾಡಿದ್ದು ಸದುದ್ದೇಶದಿಂದಾದ್ದರಿಂದ ಆವರಿಗೆ ಆನಂದಾತಿಶಯದಿಂದ ಕೂಡಿದ ಮುಕ್ತಿಯೇ ಲಭಿಸಿತು.

೧೧. ಈ ಎಲ್ಲಾ ಪ್ರಸಂಗಗಳಲ್ಲಿಯೂ ಸಹ ಶ್ರೀಹರಿಯ ಕಾರುಣ್ಯ ಎದ್ದು ಕಾಣುವುದು. ಇದನ್ನು ವಿಶ್ಲೇಷಿಸುವ ಮೂಲಕ ಪುರಾಣಪ್ರಸಂಗಗಳಲ್ಲಿ ಶ್ರೀಹರಿಯ ಕಾರುಣ್ಯ ಮುಂತಾದ ಗುಣಗಳನ್ನು ಚಿಂತನೆ ಮಾಡುವ ಕ್ರಮವನ್ನು ದಾಸರು ತಿಳಿಸಿರುವರು.

---

೧. ಕುರ್ವತಾ ತಪಸೋ ವಿಘ್ನಂ ಗೌತಮಸ್ಯ ಮಹಾತ್ಮನಃ।
ಕ್ರೋಧಮುತ್ಪಾದ್ಯ ಹಿ ಮಯಾ ಸುರಕಾರ್ಯಮಿದಂ ಕೃತಂ। – ವಾ.ರಾ.(೧/೪೯/೨)
ಅತಿರಿಕ್ತಂ ತಪೋ ಹರ್ತುಂ ಗೌತಮಸ್ಯಾಶ್ರಮೇ ರಹಃ।
ಸುರಕಾರ್ಯಂ ಸುರಪತಿಃ ಕುರ್ವನ್ ಭಾರ್ಯಾಂ ಸಮಸ್ಪೃಶತ್ ॥ – ಸಂ.ರಾ.(೧/೬/೧೮)

೧೨. ಶ್ರೀಜಗನ್ನಾಥದಾಸರ ಹರಿಕಥಾಮೃತಸಾರ(೨/೧೯)ದಲ್ಲಿನ ಈ ಕೆಳಗಿನ ಪದ್ಯವು ಇದಕ್ಕೆ ಪೂರಕವೆನ್ನಿಸುವಂತಿರುವುದು ಗಮನಾರ್ಹ:

**ಪಾಪಕರ್ಮವ ಸಹಿಸುವರೆ ಲಕ್ಷ್ಮೀಪತಿಗೆ ಸಮನಾದ ದಿವಿಜರ**
**ನೀಪಯೋಜಭವಾಂಡದೊಳಗಾವಲ್ಲಿ ನಾ ಕಾಣೆ ।**
**ಗೋಪಗುರುವಿನ ಮಡದಿ ಭೃಗುನಗಚಾಪ ಮೊದಲಾದವರು ಮಾಳ್ದ ಮ-**
**ಹಾಪರಾಧಗಳೆಣಿಸಿದನೆ ಕರುಣಾಸಮುದ್ರ ಹರಿ ॥**

೧೩. ಇಲ್ಲಿ ಪ್ರಸ್ತಾಪಿತರಾಗಿರುವ ಬ್ರಹ್ಮ ಚಂದ್ರ, ಇಂದ್ರ ಮೊದಲಾದವರೆಲ್ಲ ಮುಖ್ಯವಾಗಿ ದಿವ್ಯ ಅಪರೋಕ್ಷಜ್ಞಾನಿಗಳು. ಅಪರೋಕ್ಷಜ್ಞಾನಿಗಳಿಗೆ ಮಾತ್ರವೇ ಇಂತಹ ಪಾಪಕರ್ಮಗಳು ಬಾಧಕವಾಗದಿರುವುದು ಎಂಬುದು ಶಾಸ್ತ್ರಗಳ ನಿರ್ಣಯ. ಆದ್ದರಿಂದ ಇದು ಸಾಮಾನ್ಯರಿಗೆ ಅನ್ವಯಿಸುವ ಮಾತಲ್ಲ. ಇದನ್ನು ಅರಿಯದೆ, ಎಂತಹ ಪಾಪವನ್ನು ಸಹ ಶ್ರೀಹರಿಯು ಲೆಕ್ಕಿಸದೆ ಅನುಗ್ರಹಿಸುವನು ಎಂದು ಅಪಾರ್ಥಮಾಡಿಕೊಂಡು ಪಾಪಕಾರ್ಯಕ್ಕೆ ತೊಡಗುವ ಅವಿವೇಕವನ್ನು ಸರ್ವಥಾ ಮಾಡಕೂಡದು.

೧೪. ಈ ಪದ್ಯಕ್ಕೆ ಇನ್ನಷ್ಟು ವಿವರ ನೀಡುವ ಶ್ರೀಕನಕದಾಸರ ಇನ್ನೊಂದು ಪದ್ಯ ಹೀಗಿದೆ:

ಆವುದೊಳ್ಳೆಯದೊ ನಿನ್ನಂಗ – ಚೆಲುವ
ದೇವ ಬಂಕಾಪುರದ ಲಕುಮಿ ನರಸಿಂಗ ॥ ಪ ॥
ಜಗದೊಳಗೆ ತಾನು ತಂದೆಯ ಮಾತು ಕೇಳದಾ
ಮಗನು ಇಹ ಪರಕೆ ಸಲುವನೆ ಪ್ರಾಜ್ಞನೆ ?
ಬಗೆಗೊಳಿಸಿ ಪ್ರಹ್ಲಾದ ಪಿತನೊಡಲ ನಿನ್ನ ಕೂ-
ರುಗುರಿನಿಂ ಬಗೆಗಿಸಿದಾತಂಗೆ ಮುಕುತಿಯನೀವೆ ॥ ೧ ॥
ಪೊಡವಿಯೊಳು ಅಣ್ಣನಾಜ್ಞೆಯ ಮೀರಿ ನಡೆಯುತಿಹ
ಒಡಹುಟ್ಟಿದವಗೆ ಕೈವಲ್ಯವುಂಟೆ ?
ದೃಢದಲಿ ವಿಭೀಷಣಾಗ್ರಜನನ್ನು ಬಾಣದಲಿ
ಕೆಡಹಿಸಿದ ಬಳಿಕವಗೆ ಸ್ಥಿರಪಟ್ಟ ಕಟ್ಟುವುದು ॥ ೨ ॥
ರೂಢಿಯಲಿ ಗುರುದ್ರೋಹವನು ಮಾಡಿದವನ ಮೊಗ
ನೋಡಿದಾಗಲೆ ಪ್ರಾಯಶ್ಚಿತ್ತವುಂಟೆ
ನೋಡಿದಾಗಲೆ ಬೃಹಸ್ಪತಿಸತಿಗೆ ಅಳುಪಿದನ
ಸೂಡಿದಾತನ ಸ್ನೇಹವನು ಮಾಡಿಕೊಂಡಿರ್ಪೆ ॥ ೩ ॥
ದೇಶದೊಳು ವಂಶಕಂಟಕರೆನಿಸಿದವರೊಳಗೆ
ಭಾಷಣವ ಮಾಡಬಪ್ಪುದೆ ಪ್ರಾಜ್ಞರು ?
ಬೇಸರಿಸದೆ ಕೌರವರ ಕೊಂದ ಪಾಂಡವರ ಸಂತೋ-
ಷದಲಿ ಪಕ್ಷಿಕರ ಮಾಡಿಕೊಂಡಿರ್ಪೆ ॥ ೪ ॥

ಪೊಡವಿಪತಿ ಕೇಳು ಶ್ರೀ ಆದಿಕೇಶವನೆ ಹಿಂ-
ಗಡೆಯಲ್ಲಿ ಮನೆಯ ಕಟ್ಟಿಸಬಾರದೆ ?
ಬಿಡೆಯವಿಲ್ಲದೆ ಸಭಾಮಧ್ಯದಲಿ ಹೆಂಡತಿಯ
ತೊಡೆಯ ಮೇಲ್ಕುಳ್ಳಿರಿಸಿಕೊಂಡಿರ್ಪ ಹಿರಿಯತನ ॥ ೫ ॥

*****

## ೪೭. ಕುಜನರಿಗಿಲ್ಲ ಸದ್ಗತಿ ನೋಡಿ ರಕ್ಷಿಸು

ಇಲ್ಲಿಹನು ಅಲ್ಲಿಲ್ಲವೆಂಬೀ
ಸೊಲ್ಲು ಸಲ್ಲದು ಹೊರಗೊಳಗೆ ನೀ-
ನಿಲ್ಲದಿಲ್ಲನ್ಯತ್ರವೆಂಬುದನೆಲ್ಲ ಕೆಲಕೆಲರು ।
ಬಲ್ಲರಿಳೆಯೊಳು ಭಾಗವತರಾ -
ದೆಲ್ಲರಿಗೆ ವಂದಿಸದ ಕುಜನರಿ-
ಗಿಲ್ಲ ಸದ್ಗತಿ ನೋಡಿ ರಕ್ಷಿಸು ನಮ್ಮನನವರತ ॥ ೪೭ ॥

ಅ: ಶ್ರೀಹರಿಯು ಇಲ್ಲಿ ಮಾತ್ರ ಇರುವನು ಅಲ್ಲಿ ಇಲ್ಲ ಎಂಬ ಈ ಮಾತು ಸರಿಯಾದುದಲ್ಲ. ಒಳಗೆ ಹೊರಗೆ ನೀನು ಇಲ್ಲದೆ ಇರುವಂತಹ ಬೇರೊಂದು ಸ್ಥಳ ಇಲ್ಲವೇ ಇಲ್ಲ ಎಂಬ ಈ ತತ್ತ್ವವನ್ನು ಎಲ್ಲೋ ಕೆಲವರು ಮಾತ್ರ ಬಲ್ಲರು. ಈ ಭೂಮಿಯಲ್ಲಿ ಭಾಗವತರಾದ ಎಲ್ಲರಿಗೂ ವಂದಿಸದೇ ಇರುವವರು ದುರ್ಜನರು. ಅವರಿಗೆ ಸದ್ಗತಿ ಲಭಿಸದು. ಶ್ರೀಹರಿಯೇ! ಇದನ್ನು ನೀನು ಗಮನಿಸಿ ನಮ್ಮನ್ನು ಸದಾ ರಕ್ಷಿಸು.

ವಿ.: ೧. ಶ್ರೀಹರಿಯು ಸರ್ವತ್ರ ವ್ಯಾಪ್ತ ಎಂಬ ಪ್ರಮೇಯವನ್ನು ಇದರಲ್ಲಿ ತಿಳಿಸಿರುವರು.

೨. ಶ್ರೀ ಹರಿಯು ಇಲ್ಲಿ ಇರುವನು ಅಲ್ಲಿ ಇಲ್ಲ ಎಂದರೆ ಒಂದು ಸ್ಥಳದಲ್ಲಿ ಮಾತ್ರ ಇರುವನು ಬೇರೊಂದು ಸ್ಥಳದಲ್ಲಿ ಇರನು ಎಂಬ ಮಾತು ಸರಿಯಾದುದಲ್ಲ. ಅವನು ಸರ್ವತ್ರ ಇರುವವನು. ಶ್ರೀಹರಿಯು ಒಂದು ಕಾಲದಲ್ಲಿ ಇರುವನು ಮತ್ತೊಂದು ಕಾಲದಲ್ಲಿ ಇರನು ಎಂಬ ಮಾತೂ ಸಹ ಇದರಂತೆ ತಪ್ಪೇ ಆದುದು. ಅವನು ಎಲ್ಲಾ ಕಾಲದಲ್ಲೂ ಒಂದೇ ತೆರನಾಗಿ ಇರುವಂತಹ ಮಹಾಮಹಿಮ. ಶ್ರೀಹರಿಯು ದೇಶತಃ ಕಾಲತಃ ವ್ಯಾಪ್ತನಾದವನು ಎಂದು ಇದರ ಭಾವ. ಅದರಂತೆ ಅವನಲ್ಲಿ ಒಂದು ಗುಣ ಇದೆ, ಇನ್ನೊಂದು ಗುಣ ಇಲ್ಲ ಎಂಬುದೂ ಸಹ ಶಾಸ್ತ್ರಸಮ್ಮತವಾದ ಮಾತಲ್ಲ. ಅವನು ಸಕಲ ಗುಣಗಳಿಂದ ಸದಾ ಪರಿಪೂರ್ಣನಾದವನು ಎಂಬುದೂ ಸಹ ಇದರಿಂದ ಸೂಚಿತವಾದ ಮತ್ತೊಂದು ಪ್ರಮೇಯ. ಒಟ್ಟಾಗಿ ಶ್ರೀಹರಿಯು ದೇಶತಃ ಕಾಲತಃ ಗುಣತಃ ಸರ್ವತ್ರ ವ್ಯಾಪ್ತನಾದ ಸರ್ವಸ್ವತಂತ್ರನಾದ ಪರದೇವತೆ ಎಂದು ತಿಳಿಯಬೇಕು.

೩. ಶ್ರೀಹರಿಯು ಹೊರಗೆ ಮಾತ್ರವಲ್ಲದೇ ಒಳಗೂ ಸಹ ಇರುವನು. ಇಲ್ಲಿ ಒಳಗೆ ಎಂದರೆ ಸಕಲ ಜೀವರ ಒಳಗೆ ಪ್ರತಿಯೊಬ್ಬರ ಒಳಗೆ ಹಾಗೂ ದೇಹದ ಸರ್ವಭಾಗಗಳೊಳಗೆ ಸರ್ವ ರೀತಿಯಲ್ಲೂ ಸಹ ವ್ಯಾಪ್ತನಾದವನು ಎಂದರ್ಥ:

**ಯಚ್ಚ ಕಿಂಚಿತ್ ಜಗತ್ ಸರ್ವಂ ದೃಶ್ಯತೇ ಶ್ರೂಯತೇಽಪಿ ವಾ ।**
**ಅಂತರ್ಬಹಿಶ್ಚ ತತ್ ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ॥**

ಹರಿಕಥಾಮೃತಸಾರದ '**ಹಿಂದೆ ಮುಂದೆಡಬಲದಿ ಒಳಹೊರಗಿಂದಿರೇಶನು ತನ್ನವರನೆಂದೆಂದು ಸಲಹುವನಾಗಸದವೋಲೆತ್ತ ನೋಡಿದರು**' ಎಂಬ ಮಾತು ಇದರ ವಿವರಣೆಯಂತಿದೆ.

೪. ಶ್ರೀಹರಿಯ ಇಂತಹ ಮಹಾಮಹಿಮೆಯನ್ನು ಎಲ್ಲರೂ ತಿಳಿದಿಲ್ಲ. ಭೂಮಿಯೊಳಗೆಲ್ಲೋ ಕೆಲವರು ಮಾತ್ರ ತಿಳಿದವರು. ಹಾಗೆ ತಿಳಿದವರೆಲ್ಲ ಸಜ್ಜನರು. ತಿಳಿಯದವರು ದುರ್ಜನರು. ಶ್ರೀಹರಿಯು ಸರ್ವಸಂರಕ್ಷಕನಾಗಿರುವುದರಿಂದ ಅವನನ್ನು ತಿಳಿಯದೇ ಇರುವುದು ದೊಡ್ಡ ಅಪರಾಧ. ಆದ್ದರಿಂದಾಗಿ ಅವನ ಮಹಿಮೆಯನ್ನು ತಿಳಿಯದವರು ದುರ್ಜನರು ಎಂಬ ಮಾತು ಅರ್ಥವತ್ತಾದುದು.

೫. ಶ್ರೀಹರಿಯನ್ನು ಎಲ್ಲರೂ ತಿಳಿಯರೆಂಬ ಈ ಮಾತಿಗೆ ಶ್ರೀ ಕನಕದಾಸರ ಕೆಳಗಿನ ಪದ್ಯವು ವಿವರಣೆಯಂತಿದೆ:

ಬಲ್ಲವರೆ ಬಲ್ಲರು ಎಲ್ಲವರರಿಯರು ।
ಫುಲ್ಲಲೋಚನ ಪರಬ್ರಹ್ಮನೆಂಬುದನು ॥ ಪ ॥
ಅಜನು ಅಧಿಕ ಬಲ್ಲ ಅನಲಸ್ನೇಹಿತ ಬಲ್ಲ ।
ಗಜಚರ್ಮಾಂಬರ ಬಲ್ಲ ಗರುಡ ಬಲ್ಲ ।
ಭುಜಗೇಶ್ವರನು ಬಲ್ಲ ಭೂರಿಲೋಚನ ಬಲ್ಲ ।
ತ್ರಿಜಗಾಧಿಪತಿ ತ್ರಿವಿಕ್ರಮನೆಂಬುದನು ॥ ೧ ॥
ಅಂಬರೀಷನು ಬಲ್ಲ ಅತ್ರಿ ಋಷಿಯು ಬಲ್ಲ ।
ಸಂಭ್ರಮದಿ ಭೀಮನು ಬಲ್ಲ ಸಹದೇವ ಬಲ್ಲ ।
ಬೆಂಬಿಡದುದ್ಧವ ಬಲ್ಲ ಬೇಡಿದ ಧ್ರುವ ಬಲ್ಲ ।
ಕಂಬುಚಕ್ರಧರ ಸರ್ವೋತ್ತಮನೆಂಬುದನು ॥ ೨ ॥
ಶುಕಯೋಗೀಶ್ವರ ಬಲ್ಲ ಸುಗುಣ ನಾರದ ಬಲ್ಲ ।
ಭಕುತಪ್ರಹ್ಲಾದ ಬಲ್ಲ ಬಲಿಯು ಬಲ್ಲ ।
ರುಕುಮಾಂಗದನು ಬಲ್ಲ ಋಷಿ ಪರಾಶರ ಬಲ್ಲ ।
ಮಕರಕುಂಡಲಧರ ಪರಾತ್ಪರನೆಂಬುದನು ॥ ೩ ॥
ವಸಿಷ್ಠ ಮುನಿ ಬಲ್ಲ ವರ ವಿಭೀಷಣ ಬಲ್ಲ ।
ವಿಶಿಖಶಯನ ಬಲ್ಲ ವಿದುರ ಬಲ್ಲ ।

ವಸುಭೀಷ್ಮನು ಬಲ್ಲ ಆ ಪರೀಕ್ಷಿತ ಬಲ್ಲ।
ಶಶಿಮಿತ್ರಸಖನೇತ್ರ ಸರ್ವೋತ್ತಮನೆಂಬುದನು ॥ ೪ ॥
ಯೋಗೀಂದ್ರ ಅಕ್ರೂರ ಬಲ್ಲ ವಕ್ತೃಶೌನಕ ಬಲ್ಲ।
ಯೋಗಿಕಪಿಲ ಬಲ್ಲ ಭೃಗು ಬಲ್ಲನು।
ತ್ಯಾಗಿ ಧರ್ಮಜ ಬಲ್ಲ ರಣದೊಳರ್ಜುನ ಬಲ್ಲ।
ಕಾಗಿನೆಲೆಯಾದಿಕೇಶವನೆ ಕೈವಲ್ಯವೆಂಬುದನು ॥ ೫ ॥

೬. ಭಗವದ್ಗೀತೆಯ ಹಾಗೂ ಶ್ರೀಮದ್ಭಾಗವತಪುರಾಣದ ಮಾತುಗಳ ಭಾವವೂ ಇದರಲ್ಲಿ ಬಂದಿದೆ:

**ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ ಯತತಿ ಸಿದ್ಧಯೇ।**
**ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ॥** – ಗೀತಾ
**ಮುಕ್ತಾನಾಮಪಿ ಸಿದ್ಧಾನಾಂ ನಾರಾಯಣಪರಾಯಣಃ।**
**ಸುದುರ್ಲಭಃ ಪ್ರಶಾಂತಾತ್ಮಾ ಕೋಟಿಷ್ವಪಿ ಮಹಾಮತೇ॥** – ಭಾಗವತ

೭. ಈ ರೀತಿಯಾಗಿ ಶ್ರೀಹರಿಯ ಮಹಿಮೆಯನ್ನು ತಿಳಿದ ಭಾಗವತರನ್ನು ವಂದಿಸುವುದು ಸಕಲ ಸಜ್ಜನರ ಕರ್ತವ್ಯ. ಹಾಗೆ ವಂದಿಸದವರು ದುರ್ಜನರೇ ಸರಿ. ಶ್ರೀಹರಿಯನ್ನು ವಂದಿಸದವರು ಹೇಗೋ ಹಾಗೆ ಅವನ ಭಕ್ತರನ್ನು ವಂದಿಸದವರು ಸಹ ದುರ್ಜನರ ಸಾಲಿಗೆ ಸೇರುವವರು ಎಂದು ಭಾವ. ಇದು, '**ತದ್ಭಕ್ತದ್ವೇಷ ಏವ ಚ**'[೧] ಎಂಬ ನವವಿಧದ್ವೇಷಗಳಲ್ಲಿ ಒಂದಾದ ಹರಿದ್ವೇಷಕ್ಕೆ ಸೇರುವ ಭಕ್ತಿದೋಷ ಎಂದು ತಿಳಿಯಬೇಕು: **ಭಕ್ತಿದೋಷೋ ಹ್ಯಸೌ ಯನ್ನ ತದ್ಭಕ್ತೇಷ್ವಪಿ ಭಕ್ತಿಮಾನ್**(ಅನುವ್ಯಾಖ್ಯಾನ).

೮. ಶ್ರೀ ಜಗನ್ನಾಥದಾಸರ ಈ ಕೆಳಗಿನ ಮಾತು ಇದರ ವಿವರಣೆಯಂತಿದೆ:

**ಕಂಸಮರ್ದನ ದಾಸರಿಗೆ ನಿಃ**
**ಸಂಶಯದಿ ವಂದಿಸದೆ ನಾ ವಿ**
**ದ್ವಾಂಸನೆಂದಹಂಕರಿಸೆ ಭವಗುಣದಿ ಬಂಧಿಸುವ** – **ಹರಿಕಥಾಮೃತಸಾರ**

೯.ಶ್ರೀಹರಿಯ ವ್ಯಾಪ್ತಿಯನ್ನು ತಿಳಿದು ಅವನು ಸರ್ವಸಂರಕ್ಷಕನೆಂದು ಭಾವಿಸುವುದು ಸಕಲ ಬಗೆಯ ಸಂರಕ್ಷಣೆಯ ಮಹಾಸಾಧನ ಎಂಬುದು ಇಲ್ಲಿಯ ಒಟ್ಟು ಭಾವ.

೧೦. ಹರಿಕಥಾಮೃತಸಾರ (೧/೧೩) ದಲ್ಲಿನ ಮೊದಲ ಸಂಧಿಯ ಕೊನೆಯಲ್ಲಿ ಬಂದಿರುವ ಮಾತು ಇದರ ವಿವರಣೆಯಂತಿದೆ:

---

೧. ಜೀವಾಭೇದೋ ನಿರ್ಗುಣತ್ವಮಪೂರ್ಣಗುಣತಾ ತಥಾ।
ಸಾಮ್ಯಾಧಿಕ್ಯೇ ತದನ್ಯೇಷಾಂ ಭೇದಸ್ತದ್ಗತ ಏವ ಚ॥
ಪ್ರಾದುರ್ಭಾವವಿಪರ್ಯಾಸಸ್ತದ್ಭಕ್ತದ್ವೇಷ ಏವ ಚ।
ತತ್ಪ್ರಮಾಣಸ್ಯ ನಿಂದಾ ಚ ದ್ವೇಷಾ ಏತೇಽಖಿಲಾ ಮತಾಃ॥ ಮ.ಭಾ.ತಾ.ನಿ (೧/೧೧೦,೧೧೧)

**ಇರುತಿಹ ಜಗನ್ನಾಥವಿಠಲನ ಕರುಣೆ ಪಡೆವ ಮುಮುಕ್ಷು ಜೀವರು**
**ಪರಮಭಾಗವತರನು ಕೊಂಡಾಡುವುದು ಪ್ರತಿದಿನವು ॥**

೧೧. ಪರಮಭಾಗವತರ ಕೆಲವು ಪಟ್ಟಿಯನ್ನು ಶ್ರೀಕನಕದಾಸರು ತಮ್ಮ ಪದವೊಂದರಲ್ಲಿ ಅತ್ಯಂತ ರೋಚಕವಾಗಿ ನೀಡಿರುವರು[೧].

೧೨. ಸಜ್ಜನರ ಸಂಗದ ಮಹಿಮೆಯನ್ನು ತೆರತೆರನಾಗಿ ತಿಳಿಸುವ ಶ್ರೀಕನಕದಾಸರ ಕೆಲವು ಕೃತಿಗಳು ಹೀಗಿವೆ:

ಸತ್ಯವಂತರ ಸಂಗವಿರಲು ತೀರ್ಥವೇತಕೆ
ನಿತ್ಯ ಜ್ಞಾನಿಯಾದ ಮೇಲೆ ಚಿಂತೆಯಾತಕೆ ॥ ಪ ॥
ಗುರುಹಿರಿಯರ ಅರಿಯದವನ ಅರಿವದೇತಕೆ
ಪರಹಿತಾರ್ಥಕಿಲ್ಲದವನ ಶರೀರವೇತಕೆ

---

೧. ಶೇಷಶಯನ ನಿನ್ನ ಭಾಗವತರ ಸಹ-
ವಾಸದೊಳಿರಿಸು ಕಂಡೆಯ ಎನ್ನನು ॥ ಪ ॥
ಬೇಸರಿಸದೆ ನಿನ್ನ ಹೃದಯಾಬ್ಜದೊಳಗಿಡುವ
ದಾಸರೊಳಿರಿಸು ಕಂಡೆಯ ಎನ್ನನು ॥ ಅ ॥
ತಂದೆಯೊಡಲನು ಸೀಳಿಸಿದವರೊಳು ದೇ-
ವೇಂದ್ರನ ತಲೆಗೆ ತಂದವರೊಳು ದು-
ರ್ಗಂಧ ಪೆಣ್ಣಿಗೆ ಚಂದನದ ಕಂಪನಿತ್ತಂಥ
ಬಾಂಧವರೊಳಗಿರಿಸು ಕಂಡೆಯ ಎನ್ನನು ॥ ೧ ॥
ತೋಯಜವೆಂಬ ಪುಷ್ಪದ ಪೆಸರವರೊಳು
ತಾಯ ಸೊಸೆಗೆ ಮಕ್ಕಳಿತ್ತವರೊಳು
ಆಯದಿ ದ್ವಾದಶಿ ವ್ರತವ ಸಾಧಿಸಿದಂಥ
ರಾಯರೊಳಿರಿಸು ಕಂಡೆಯ ಎನ್ನನು ॥ ೨ ॥
ಗಿಳಿನಾಯಿಯ ಪೆಸರಿನವರೊಳು ಮುಗಿಲ
ಹೊಳೆಯ ಹೊಟ್ಟೆಯಲಿ ಪುಟ್ಟಿದವರೊಳು
ಕೆಳದಿಯ ಜರಿದು ಶ್ರೀಹರಿದಿನ ಗೆದ್ದಂಥ
ಹಳಬರೊಳಿರಿಸು ಕಂಡೆಯ ಎನ್ನನು ॥ ೩ ॥
ಅಂಕಕೆ ರಥವ ನಡೆಸಿದವರೊಳು ನಿಃ-
ಶಂಕ ಧರ್ಮವ ಗೆದ್ದ ಹಿರಿಯರೊಳು
ಲಂಕೆಯ ಅನುದಿನ ಸ್ಥಿರರಾಜ್ಯವಾಳಿದ
ಕಿಂಕರರೊಳಿರಿಸು ಕಂಡೆಯ ಎನ್ನನು ॥ ೪ ॥
ಕಾಟಿಗೆ ಕಾಸು ಕಾಣದರು ರಾಯರ ಪಂಕ್ತಿ-
ಯೂಟವ ಬಯಸಿದಂತೆ ನಾ ಬೇಡಿದೆ
ನಾಟಕಧರ ಕಾಗಿನೆಲೆಯಾದಿಕೇಶವ, ನಿ-
ನ್ನಾಟದೊಳಿರಿಸು ಕಂಡೆಯ ಎನ್ನನು ॥ ೫ ॥

ಹರಿಯ ಪೂಜೆ ಮಾಡದವನ ಜನುಮವೇತಕೆ
ಸೇರಿದವರ ಹೊರೆಯದಂಥ ದೊರೆಯು ಏತಕೆ ॥ ೧ ॥
ಮಾತು ಕೇಳದೆ ಮಲೆತು ನಡೆವ ಮಕ್ಕಳೇತಕೆ
ಭೀತನಾಗಿ ಓಡಿ ಬರುವ ಬಂಟನೇತಕೆ
ಪ್ರೀತಿಯಿಂದ ಎಡೆಯನಿಕ್ಕದ ಊಟವೇತಕೆ
ಸೋತ ಹೆಣ್ಣಿಗೆ ಇದಿರು ನಡೆವ ಸುಗುಣನೇತಕೆ ॥ ೨ ॥
ತಾನು ಉಣ್ಣದ ಪರರಿಗಿಕ್ಕದ ಧನವಿದ್ದೇತಕೆ
ಮಾನಹೀನನಾಗಿ ಬಾಳ್ವ ಮನುಜನೇತಕೆ
ನ್ಯೂನ ಹೆಚ್ಚು ನೋಡುವಲ್ಲಿ ಇರುವುದೇತಕೆ
ತನ್ನ ಬಳಗವೆರಸಿ ಉಣ್ಣದ ಭಾಗ್ಯವೇತಕೆ ॥ ೩ ॥
ತಾನು ತನ್ನನರಿಯದಂಥ ಪ್ರೌಢನೇತಕೆ
ಸ್ನಾನಸಂಧ್ಯಾನವಿಲ್ಲದ ಶೀಲವೇತಕೆ
ಜ್ಞಾನವಿಲ್ಲದೆ ನೂರುಕಾಲ ಬದುಕಲೇತಕೆ
ಧ್ಯಾನದೊಳಗೆ ಕೃಷ್ಣನಿರದ ತನುವಿದ್ದೇತಕೆ ॥ ೪ ॥
ಸನ್ನೆಯರಿತು ನಡೆಯದಿರುವ ಸತಿಯಿದ್ದೇತಕೆ
ಭಿನ್ನವರಿತು ನಡೆಯದಂಥ ಸ್ನೇಹವೇತಕೆ
ಮುನ್ನ ಕೊಟ್ಟು ಹುಟ್ಟಲಿಲ್ಲ ಬಯಸಲೇತಕೆ
ಚೆನ್ನ ಆದಿಕೇಶವನಿರಲು ದೈವವೇತಕೆ ॥ ೫ ॥

**

ಸಾಧು ಸಜ್ಜನ ಸತ್ಯಗುಣಕಿದಿರುಂಟೆ
ಆದಿಕೇಶವನಲ್ಲದೆ ದೈವವುಂಟೆ ॥ ಪ ॥
ಸತ್ಯವ್ರತವುಳ್ಳವಗೆ ಮೃತ್ಯುವಿನ ಭಯವುಂಟೆ
ಚಿತ್ತಶುದ್ಧಿಯುಳ್ಳವಗೆ ಮತ್ತೆ ಜನ್ಮವುಂಟೆ
ವಿತ್ತವನರಸುವಂಗೆ ಮುಕ್ತಿಯೆಂಬುದುಂಟೆ
ಉತ್ತಮರ ಸಂಗದಿಂದ ಅಧಿಕ ಧರ್ಮವುಂಟೆ ॥ ೧ ॥
ಸುತಲಾಭದಿಂದ ಅಧಿಕ ಲಾಭವುಂಟೆ
ಸತಿಯಿಲ್ಲದವಗೆ ಸಂಪನ್ನತೆಯುಂಟೆ
ಪತಿಸೇವೆಗಿಂತ ಸತಿಗೆ ಸೇವೆಯುಂಟೆ
ಮತಿಹೀನನೊಳು ಚತುರತೆಯೆಂಬುದುಂಟೆ ॥ ೨ ॥
ಧನಲಾಭದಿಂದ ಅಧಿಕಲಾಭವುಂಟೆ
ಮನವ ವಂಚಿಪ ಕಪಟಿಗೆ ಮೇಲೋಕವುಂಟೆ
ಸನುಮಾನಿಸುವ ಒಡೆಯಗೆ ಸರಿಯುಂಟೆ
ವಿನಯವಾಗಿಹ ಸಂಗದೊಳು ಭಂಗವುಂಟೆ ॥ ೩ ॥

ಪಿಸುಣನಿಗಿಂತ ಅಧಿಕ ಹೀನರುಂಟೆ
ವ್ಯಸನಿಯಾಗಿಹ ನೃಪಗೆ ನೀತಿಯುಂಟೆ
ಅಶನವ ತೊರೆದ ಯೋಗಿಗೆ ಭಯವುಂಟೆ
ವಸುಧೆಯೊಳನ್ನದಾನಕೆ ಸರಿಯುಂಟೆ ॥ ೪ ॥
ಹರಿಭಕ್ತಿಯಿಲ್ಲದವಗೆ ಪರಲೋಕವುಂಟೆ
ಪರಮಸಾತ್ತ್ವಿಕರ ಗುಣಕೆ ಸರಿಯುಂಟೆ
ಪರನಿಂದೆಗಿಂತ ಪಾತಕ ಎಂಬುದುಂಟೆ
ವರದಾದಿಕೇಶವನಲ್ಲದೆ ದೈವವು ಉಂಟೆ ॥ ೫ ॥

೧೩. ಭಾಗವತರನ್ನು ಗೌರವಿಸಬೇಕೆಂದು ತಿಳಿಸಿರುವ ಶ್ರೀಕನಕದಾಸರು ಯೋಗ್ಯ ಗುರುಗಳ ಸೇವೆಯ ಭಾಗ್ಯ ದೊರಕುವುದು ಶ್ರೀಹರಿಯ ಪರಮಾನುಗ್ರಹದ ಫಲ ಎಂದು ತಿಳಿಸಿರುವ ಪದ ಹೀಗಿದೆ:

ಹರಿ ನಿನ್ನ ಪರಮಾರ್ಥ ನಿರುತದಿಂದಲಿ ಎನಗೆ
ದೊರೆಯತೀ ಗುರುಪಾದ ಹರಿಯೆ ॥ ಪ ॥
ಗುರುಮಂತ್ರ ಮೂಲ ಸದ್ಗುರು ಮೂರ್ತಿ ನೀನಾಗಿ
ಕರೆಯ ಸೇರಿಸಿದೆನ್ನ ಹರಿಯೆ ॥ ಅಪ ॥
ದೊರೆತನವ ಬಿಡಿಸಿ ಸುಸ್ಥಿರ ಮಾರ್ಗ ತೋರಿಸಿದೆ
ನರಮಾತ್ರದವನೆನದೆ ಹರಿಯೆ
ಗರುವದೆಲ್ಲಿಹೆನೆಂಬುದರಿತೆನ್ನ ನಿನ್ನ ದಾ-
ಸರಿಗೆ ಮಾರಿದೆಯೊ ಹರಿಯೆ
ಧುರದಲ್ಲಿ ನಾಲ್ಕು ಸಾವಿರನಿಲ್ಲದೆನದೆಸೆಗೆ
ಪರಹರಿಸಿದೆಯೆಲೊ ಶ್ರೀಹರಿಯೆ
ಪರಬಲವ ನೋಡಿದರೆ ಉರಿದುರಿದು ಬೀಳ್ವ ಮನ
ಸೆರೆ ಹಾಕಿ ನಿಲಿಸಿದೆಯೊ ಹರಿಯೆ ॥ ೧ ॥
ಕನಕ ದಳದಲಿ ಬಂದು ಕಲೆತನೆಂದರೆ ಫೌಜು
ಕನಕುಮನಕಾಗುವುದು ಹರಿಯೆ
ಧ್ವನಿಮುಖಾರ್ಭಟ ಮನಸಿಗಾನಂದವಪ್ಪ ದು-
ರ್ಗುಣವನೆಲ್ಲವ ಕಳೆದೆ ಹರಿಯೆ
ಮನಸಿನೊಳಗೆರಡಿಲ್ಲ ಮದದಾನೆ ಮೇಲ್ಕಡಿವ
ಮನವ ಹಿಮ್ಮೆಟ್ಟಿಸಿದೆ ಹರಿಯೆ
ಮೊನೆಗಾರ ಧಣಿಯೆಂಬ ಧೈರ್ಯವ ಬಿಡಿಸಿ ಸೇವ-
ಕನ ಮಾಡಿಸಿದೆಯೊ ಹರಿಯೆ ॥ ೨ ॥

ಶರದಿಷುಖ್ಯಾತಿ ಪೌರುಷ ಲೋಭ ಬಹುಜನರ
ಉರುವೀಶರನ್ನು ಕೈಪಿಡಿದೆ ಹರಿಯೆ
ಮರೆವು ತಾಮಸ ಅಹಂಕಾರದುರ್ಮತಿಯೆಂಬ
ದುರಿತವನು ಹೊರಡಿಸಿದೆ ಹರಿಯೆ
ಪರಮ ಮೂರ್ಖನು ನಿನ್ನ ಅರಿವಿದ್ದ ದಾಸರಿಗೆ
ಶರಣೆನದ ರಾಜಸವೊ ಹರಿಯೆ
ಸಿರಿ ಬಿಡಿಸಿ ಹರಿಯೆ ಹರಸುರರಿಗಳವಲ್ಲದಿಹ
ಸ್ಮರಣೆ ಜಿಹ್ವೆಗೆ ಬರೆದೆಯೊ ಹರಿಯೆ ॥ ೩ ॥
ಮೊದಲು ನಿನ್ನುಪದೇಶ ಸದರು ಮಾಡದೆ ತಿರುಗು
ವುದನೆಲ್ಲ ಉದುರಿಸಿದೆ ಹರಿಯೆ
ಇದು ರಹಸ್ಯವು ಎಂದು ಹಿತವು ತೋರಿತು ಇಂದು
ಪದವ ಜಯಿಸಿದೆ ನಾನು ಹರಿಯೆ
ಮದವೆಲ್ಲ ಬಿಡಿಸಿ ಸನ್ಮೃದು ರೂಪವನು ಧರಿಸಿ
ಹೃದಯದಲಿ ನೀನಿದ್ದೆ ಹರಿಯೆ
ಮುದದಿ ನಿನ್ನಯ ನಾಮ ಸದರದೋರಿತು ಎನಗೆ
ಬದುಕಿದೆನು ಬದುಕಿದೆನು ಹರಿಯೆ ॥ ೪ ॥
ಸ್ವಾರಿ ಹೊರಟರೆ ಛತ್ರ ಭೇರಿಯು ನಗಾರಿಗಳು
ಭೋರೆಂಬ ಪೊಂಗಹಳೆ ಹರಿಯೆ
ಧೀರ ರಾಹುತರಾಣ್ಯ ಪರಿವಾರಲಂಕಾರ
ಭಾರವನು ತೆಗೆದೆಯೊ ತೊರೆದೆ ಹರಿಯೆ
ನೀರ ಸಂಗವ ಬಿಟ್ಟು ಆಣಿ ಮುತ್ತಾದ ಕ್ರಿಯೆ
ಸೇರಿಸಿದೆನೊ ನಿನ್ನ ಪಾದ ಹರಿಯೆ
ಆರಿಗಂಜೆನೊ ನಾನು ಅಧಿಕಪುರಿ ಕಾಗಿನೆಲೆ
ಯಾದಿಕೇಶವರಾಯ ಹರಿಯೆ ॥ ೫ ॥

೧೪. ದುರ್ಜನರ ಸಹವಾಸವು ಎಲ್ಲ ವಿಧದ ಕೆಡುಕಿಗೆ ಕಾರಣ ಎಂಬುದನ್ನು ಬಗೆಬಗೆಯಾಗಿ ವಿವರಿಸುವ ಅವರ ಕೀರ್ತನೆಯೊಂದು ಹೀಗಿದೆ:

ದುರ್ಜನರ ಸಂಗವನು ಎಂದಿಗೊಲ್ಲೆನು ಇಂಥ
ಸಜ್ಜನರ ಸಂಗದೊಳಗಿರಿಸೆನ್ನ ರಂಗ ॥ ಪ ॥
ಉಂಡಮನೆಗೆರಡನ್ನು ಎಣಿಸುವಾತನ ಸಂಗ
ಕೊಂಡೆಯವ ಪೇಳಿ ಕಾದಿಸುವವನ ಸಂಗ
ತಂದೆ ತಾಯನು ಬೈದು ಬಾಧಿಸುವವನ ಸಂಗ
ನಿಂದಕರ ಸಂಗ ಬಹು ಭಂಗ ರಂಗ ॥ ೧ ॥

ನಂಬಿದ ಠಾವಿನಲಿ ಕೇಡನೆಣಿಪನ ಸಂಗ
ಸಂಭ್ರಮದಿ ಜಗಳವಾಡುವನ ಸಂಗ
ಹಂಬಲಿಸಿ ಭವದ ಸುಖ ಮೆಚ್ಚಿದಾತನ ಸಂಗ
ರಂಭೆಯರ ನೋಡಿ ಮೋಹಿಪನ ಸಂಗ ॥ ೨ ॥
ಕುಳಿತ ಸಭೆಯೊಳು ಕುಹಕ ಮಾಡುವಾತನ ಸಂಗ
ಬಲು ಬೇಡೆ ಕೊಡದಿರುವ ಲೋಭಿ ಸಂಗ
ಕುಲಹೀನರ ಕೂಡೆ ಸ್ನೇಹ ಬೆಳೆಪನ ಸಂಗ
ಹಲವು ಮಾತಾಡಿ ಆಚರಿಸದನ ಸಂಗ ॥ ೩ ॥
ಗುರುಸತಿಗೆ ಪರಸತಿಗೆ ಎರಡು ಎಣಿಪನ ಸಂಗ
ಗುರುನಿಂದೆ ಪರನಿಂದೆ ಮಾಡುವನ ಸಂಗ
ಪರಹಿತಾರ್ಥದ ಧರ್ಮ ಪಡೆಯದಾತನ ಸಂಗ
ಪರಮಪಾಮರಸಂಗ ಬಹುಭಂಗ ರಂಗ ॥ ೪ ॥
ಆಗಮಮಹಾತ್ಮ್ಯವನು ಅರಿಯದಾತನ ಸಂಗ
ಯೋಗಿಜನಗುರುಗಳನು ನಿಂದಿಪನ ಸಂಗ
ರಾಗದ್ವೇಷಾದಿಯಲಿ ಮುಳುಗೇಳುವನ ಸಂಗ
ಕಾಗಿನೆಲೆಯಾದಿಕೇಶವ ಬಿಡಿಸು ಈ ಭಂಗ ॥ ೫ ॥

*****

## ೪೮. ಬಿರುದ ಬಿಡುವರೆ ತಂದೆ ರಕ್ಷಿಸು

ಸಿರಿಯ ಸಂಪತ್ತಿನಲಿ ನೀ ಮೈ-
ಮರೆದು ಮದಗರ್ವದಲಿ ದೀನರ
ಕರುಣದಿಂದೀಕ್ಷಿಸದೆ ಕಡೆಗಣ್ಣಿಂದ ನೋಡುವರೆ ।
ಹರಹರನಾಥರನು ಪಾಲಿಸಿ
ವರವ ಕೊಡುವ ಉದಾರಿಯೆಂಬೀ
ಬಿರುದ ಬಿಡುವರೆ ತಂದೆ ರಕ್ಷಿಸು ನಮ್ಮನನವರತ ॥ ೪೮ ॥

ಅ: ಮಹಾಲಕ್ಷ್ಮಿಯು ನಿನ್ನೊಡನೆ ಇರುವ ಭಾವದಿಂದ ಮರೆತು ಮದ ಹಾಗೂ ಗರ್ವಗಳಿಗೆ ಒಳಗಾಗಿ ದೀನರಾದ ಭಕ್ತಜನರನ್ನು ಕೃಪೆಯಿಂದ ನೋಡದೆ ಕಡೆಗಣ್ಣಿಂದ ನೋಡಿ ಉದಾಸೀನ ಮಾಡಿದರೆ ಗತಿಯೇನು? ಅಯ್ಯೋ ಅನಾಥರನ್ನು ಪರಿಪಾಲಿಸಿ ವರವನ್ನು ನೀಡುವ ಉದಾರಿಯೆಂಬುದು ನಿನ್ನ ಬಿರುದು, ಅದನ್ನು ಈ ರೀತಿಯಾಗಿ

**ಬಿಡುವುದು ಉಚಿತವೆನಿಸೀತೆ? ನೀನು ಎಲ್ಲರಿಗೂ ತಂದೆಯಾದವನು ನೀನು ನಮ್ಮನ್ನು ಸದಾ ರಕ್ಷಿಸು.**

ವಿ.: ೧.ಶ್ರೀಹರಿಯು ಅನಾಥರನ್ನು ಪಾಲಿಸಿ ಬೇಡಿದ್ದನ್ನು ಕರುಣಿಸುವ ಮಹಾ ಉದಾರಿ ಎಂಬುದನ್ನು ಇಲ್ಲಿ ನಿಂದಾಸ್ತುತಿಯ ರೂಪದಲ್ಲಿ ವರ್ಣಿಸಲಾಗಿದೆ.

೨. ಸಾಮಾನ್ಯವಾಗಿ ಜನರು ಸಂಪತ್ತಿನ ಮದಕ್ಕೆ ಒಳಗಾಗಿ ತನ್ನವರನ್ನು ಮರೆಯುವುದುಂಟು. ಶ್ರೀಹರಿಯಂತೂ ಸಂಪತ್ತಿಗೆ ಅಭಿಮಾನಿ ದೇವತೆಯಾದ ಮಹಾಲಕ್ಷ್ಮಿಗೇ ಪತಿಯಾದ ಪರದೇವತೆ. ಅಂಥವನಿಗೆ ಭಾರೀ ಹೆಚ್ಚಿನ ಮದ ಹಾಗೂ ಗರ್ವಗಳು ಬಂದರೆ ಆಶ್ಚರ್ಯವೇನಿಲ್ಲ. ಆದರಿಂದಾಗಿ ಅವನು ಭಕ್ತ ಜನರನ್ನು ಉದಾಸೀನ ಮಾಡುವ ಸಂಭವವಿದೆ ಎಂಬ ಸಮಸ್ಯೆಗೆ ಇಲ್ಲಿ ಉತ್ತರವಿದೆ. ಆದರೆ ಅವನು ಅತ್ಯಂತ ಕರುಣಾಮಯಿ, ಭಕ್ತವತ್ಸಲ. ಭಕ್ತರನ್ನು ಪ್ರೀತಿಯಿಂದ ಸದಾಕಾಲ ಸಂರಕ್ಷಿಸುವವನು ಎಂಬುದೇ ಅವನ ಬಿರುದು; ಎಂದ ಮೇಲೆ ಅವನು ಸರ್ವಥಾ ಭಕ್ತರನ್ನು ಕೈಬಿಡನು ಎಂದರ್ಥ; **ಹರಹರನಾಥರನು** ಎಂಬಲ್ಲಿ ಹರಹರ ಅನಾಥರನು ಎಂಬುದಾಗಿ ಬಿಡಿಸಿ ಓದಿಕೊಳ್ಳಬೇಕು.

೩. ಸಂಪತ್ತು ಮೊದಲಾದವುಗಳಿಂದ ಮದಕ್ಕೆ ಒಳಗಾಗುವವರು ದೋಷಿಗಳಾದ ಸಾಮಾನ್ಯ ಜನರು ಮಾತ್ರ. ಶ್ರೀಹರಿಯು ಸಕಲ ದೋಷದೂರನಾದ ಭಗವಂತ; ಅವನು ಸಂಪತ್ತಿನ ಮದ ಮೊದಲಾದ ಯಾವುದೇ ದೋಷಕ್ಕೂ ಒಳಗಾಗುವವನಲ್ಲ; ಆದ್ದರಿಂದ ತನ್ನವರನ್ನು ಮರೆಯುವವನು ಅಲ್ಲ.

೪. ಇಲ್ಲಿ ತಂದೆ ಎಂದರೆ ಸೃಷ್ಟಿ ಮಾಡುವವನು ಎಂದರ್ಥ. ಇಲ್ಲಿ ಶ್ರೀಹರಿಯು ಲೋಕದ ಸೃಷ್ಟಿಕರ್ತ. ಆದರಂತೆ ಸ್ಥಿತಿ, ಲಯ, ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳನ್ನೂ ಸಹ ಸಕಲರಿಗೂ ಮಾಡುವ ಪರದೇವತೆ. ತಂದೆಯಾದವನು ಮಕ್ಕಳನ್ನು ಸಲಹುವುದು ಸಹಜ. ಲೋಕದ ತಂದೆಯಾದ ಶ್ರೀಹರಿ ಜಗತ್ತನ್ನು ಸಲಹುವುದು ಅತ್ಯಂತ ಸಹಜ ಎಂಬುದು ಇಲ್ಲಿಯ ಒಟ್ಟು ಸಂದೇಶ.

೫. ಇಲ್ಲಿಯ ಹರಹರ ಎಂಬುದನ್ನು ಹಿಂದೆ ತಿಳಿಸಿದಂತೆ ಆಶ್ಚರ್ಯವನ್ನು ಸೂಚಿಸುವ ವಾಗ್ರೂಢಿಯನ್ನಾಗಿ ಅರ್ಥಮಾಡಿಕೊಳ್ಳಬೇಕು.

೬. ಈ ಪದ್ಯದ ಭಾವದಂತಿರುವ ಶ್ರೀಕನಕದಾಸರ ಕೆಲವು ಕೃತಿಗಳು ಹೀಗಿವೆ:

ಆವ ಸಿರಿಯಲಿ ನೀನು ಎನ್ನ ಮರೆತೆ
ದೇವ ಜಾನಕೀರಮಣ ಪೇಳು ರಘುಪತಿಯೆ ॥ ಪ ॥

ಸುರರ ಸೆರೆಯನು ಬಿಡಿಸಿ ಬಂದೆನೆಂಬಾ ಸಿರಿಯೆ
ಕರಿ ಮೊರೆಯ ಲಾಲಿಸಿದೆನೆಂಬ ಸಿರಿಯೆ

ಶರಧಿಗೆ ಸೇತುವೆಯಗಟ್ಟಿದೆನೆನ್ನುವಾ ಸಿರಿಯೆ
ಸ್ಥಿರವಾಗಿ ಹೇಳೆನಗೆ ಹೇಳು ರಘುಪತಿಯೆ ॥ ೧ ॥

ಕಡಲೊಳಗೆ ಮನೆಮಾಡಿ ಮಲಗಿದೆನೆಂಬಾ ಸಿರಿಯೆ
ಮೃಡ ನಿನ್ನ ಸಖನಾದನೆಂಬ ಸಿರಿಯೆ
ಬಿಡದೆ ದ್ರೌಪದಿ ಮಾನ ಕಾಯ್ದೆನೆಂಬ ಸಿರಿಯೆ
ದೃಢವಾಗಿ ಹೇಳೆನಗೆ ದೇವಕೀಸುತನೆ ॥ ೨ ॥

ಭೂಮಿಯನು ಮೂರಡಿಯ ಮಾಡಿದೆನೆಂಬ ಸಿರಿಯೆ
ಕಾಮ ನಿನ್ನ ಸುತನಾದನೆಂಬ ಸಿರಿಯೆ
ಆ ಮಹಾಲಕುಮಿ ನಿನ್ನ ಸತಿಯಾದಳೆಂಬ ಸಿರಿಯೆ
ಪ್ರೇಮದಲಿ ಹೇಳೆನಗೆ ಸ್ವಾಮಿ ಅಚ್ಯುತನೆ ॥ ೩ ॥

ಮನುಜರೆಲ್ಲರು ನಿನ್ನ ಸ್ತುತಿಸುವರೆಂಬ ಸಿರಿಯೆ
ಹನುಮ ನಿನ್ನ ಬಂಟನಾದನೆಂಬ ಸಿರಿಯೆ
ಬಿನುಗು ದೈವಗಳು ನಿನಗೆಣೆಯಿಲ್ಲವೆಂಬ ಸಿರಿಯೆ
ಅನುಮಾನ ಮಾಡದೆ ಪೇಳೊ ನರಹರಿಯೆ ॥ ೪ ॥

ಇಂತು ಸಿರಿಯಲಿ ನೀನು ಎನ್ನ ಮರೆತರೆ ಸ್ವಾಮಿ
ಪಂಥವೇ ನಿನಗಿದು ಆವ ನಡತೆ
ಕಂತುಪಿತ ಕಾಗಿನೆಲೆಯಾದಿಕೇಶವ ರಂಗ
ಚಿಂತೆಯನು ಬಿಡಿಸಿ ಸಂತೋಷವನು ಪಡಿಸೊ ॥ ೫ ॥

**

ಸಿರಿಯ ಮದವೆ ಮುಕುಂದ – ನಿನ್ನ
ಚರಣ ಸೇವಕನ ಬಿನ್ನಹ ಪರಾಕೆಲೊ ದೇವ ॥ ಪ ॥

ಸಕಲೈಶ್ವರ್ಯದ ಶ್ರೀದೇವಿ ನಿನ್ನರಸಿ ಬಹು–
ಮುಕುತಿಯಿಂದಲಿ ಲೋಕ ಪುಟ್ಟಿಸುವ
ಶಕುತ ನಿನ್ನ ಹಿರಿಯ ಮಗನು ಪ್ರಾಣಿಗಳ ಮೋ–
ಹಕದಿ ಮರುಳುಮಾಳ್ಪ ಕಿರಿಯ ಮಗ ನಿನಗಿಹನು ॥ ೧ ॥

ಶೇಷನ ಹಾಸಿಗೆ ಗರುಡ ತುರಗವು ಪೀತ–
ವಾಸದುಡುಗೆಯು ಕೊರಳಲಿ ವೈಜಯಂತಿ
ಮೀಸಲಳಿಯದ ಪುಷ್ಪಮಾಲೆ ಧರಿಸಿ ಜಗ–
ದೀಶನೆಂಬ ಬಿರುದ ಪೊಗಳಿಸಿಕೊಳುತಿಪ್ಪೆ ॥ ೨ ॥

ಅಷ್ಟದಿಕ್ಪಾಲಕರ ಮಧ್ಯದಲಿ ವೈಕುಂಠ–
ಪಟ್ಟಣದ ಐಶ್ವರ್ಯದೋಲಗವು ನಿತ್ಯ

ಇಷ್ಟ ಓಲೈಸುವ ಗಾಯನದಲಿ ನಿಂತು
ಗಟ್ಟಿ ಪಾಡುವ ತುಂಬುರ ನಾರದರ ಸಂಭ್ರಮದಿ ॥ ೩ ॥
ಬಲ್ಲಿದರಿಗೆ ಬಲ್ಲಿದನೆಂಬ ಅರಿಯ-
ದಲ್ಲಣನೆಂಬ ಧೈರ್ಯವು ಸಾಹಸ
ಇಲ್ಲ ನಿನಗಾರು ಸರಿಯೆಂಬ ಗರ್ವದಿ ಎನ್ನ
ಸೊಲ್ಲು ಕಿವಿ ಕೇಳದಂತಾಯಿತೆ ಹರಿಯೆ ॥ ೪ ॥
ಭಕುತವತ್ಸಲನೆಂಬ ಬಿರುದು ಬೇಕಾದಡೆ
ಶಕುತ ಸುಮ್ಮನೆ ಕಾಯೊ ಸುಲಭದಿಂದ
ಸುಕೃತಶರಣರು ನಿಮ್ಮ ನೆನೆವರ್ರೆ ಶೇಷಗಿರಿ-
ಪ್ರಕಟವಾಸಾದಿಕೇಶವ ವೇಂಕಟೇಶ ॥ ೫ ॥

*****

## ೪೯. ನಿನ್ನ ಸಮಾನರುಂಟೇ ದೇವ ರಕ್ಷಿಸು

**ದೀನ ನಾನು ಸಮಸ್ತಲೋಕಕೆ**
**ದಾನಿ ನೀನು ವಿಚಾರಿಸಲು ಮತಿ-**
**ಹೀನ ನಾನು ಮಹಾಮಹಿಮ ಕೈವಲ್ಯಪತಿ ನೀನು ।**
**ಏನ ಬಲ್ಲೆನು ನಾನು ನೆರೆ ಸು-**
**ಜ್ಞಾನಮೂರುತಿ ನೀನು ನಿನ್ನ ಸ-**
**ಮಾನರುಂಟೇ ದೇವ ರಕ್ಷಿಸು ನಮ್ಮನನವರತ ॥ ೪೯ ॥**

**ಅ: ನಾನು ದೀನ; ನೀನು ಸಮಸ್ತ ಲೋಕಕ್ಕೂ ದಾನಿ; ಇನ್ನೂ ವಿಚಾರ ಮಾಡಿದರೆ, ನಾನು ಮತಿಹೀನ;, ನೀನು ಮಹಾಮಹಿಮ; ಕೈವಲ್ಯಕ್ಕೆ ಪತಿ. ನಿನ್ನನ್ನು ನಾನು ಏನು ತಾನೆ ತಿಳಿಯಬಲ್ಲೆ. ನೀನು ಸುಜ್ಞಾನದ ಮೂರ್ತಿ, ನಿನ್ನ ಸಮಾನರು ಇರಲು ಸಾಧ್ಯವೇ? ಎಲೈ! ಶ್ರೀಹರಿಯೇ! ನೀನು ನನ್ನನ್ನು ಸದಾ ರಕ್ಷಿಸು.**

ವಿ೧: ಶ್ರೀಹರಿಯನ್ನು ಭಕ್ತನು ಪರಿಪರಿಯಾಗಿ ಚಿಂತಿಸುವ ಬಗೆಯು ಇಲ್ಲಿ ನಿರೂಪಿತವಾಗಿದೆ.

೨. ಭಕ್ತನಾದವನು ದೀನ, ಸ್ವಾಮಿಯಾದ ಶ್ರೀಹರಿ ದಾನಿ. ಭಕ್ತ ಅಲ್ಪಜ್ಞ, ಶ್ರೀಹರಿ ಸರ್ವಜ್ಞನಾದ ಮಹಾಮಹಿಮ. ಜೀವನು ಮುಕ್ತಿಯನ್ನು ಬಯಸುವ ದೀನ, ಶ್ರೀಹರಿಯು ಮುಕ್ತಿಯನ್ನು ನೀಡುವ ದಾನಿ; ಶ್ರೀಹರಿಯನ್ನು ಅರಿಯಲು ಸರ್ವರಿಗೂ ಅಸಾಧ್ಯ. ಅವನು

ಜ್ಞಾನಮೂರ್ತಿ. ಅವನಿಗೆ ಸಮಾನರಾದವರು ಇರಲು ಸರ್ವಥಾ ಸಾಧ್ಯವಿಲ್ಲ. ದೇವನಾದ ಅವನು ಸರ್ವರನ್ನೂ ರಕ್ಷಿಸಬೇಕು ಎಂಬುದು ಇದರ ಭಾವ.

೩. ದೀನ ಎಂದರೆ ಆರ್ತ ಎಂದರ್ಥ. **ಆರ್ತ** ಎಂದರೆ ನೊಂದವನು. ಭಗವಂತನನ್ನು ಆರಾಧಿಸುವ ನಾಲ್ಕು ಬಗೆಯ ಜನರಲ್ಲಿ ಆರ್ತನೂ ಒಬ್ಬ

**ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನೋಽರ್ಜುನ ।**
**ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ॥** - ಗೀತಾ(೭/೧೬)

ಗಜೇಂದ್ರನು ಸಹ ಆರ್ತನಾಗಿಯೇ ಶ್ರೀಹರಿಯನ್ನು ಮೊರೆಹೊಕ್ಕು ಉದ್ಧಾರವನ್ನು ಕಂಡವನು: **ಅಂಬುಜಹಸ್ತ ಆರ್ತಃ** (ಶ್ರೀಮದ್ಭಾಗವತ)

ಇಲ್ಲಿ ನೋಯುವುದು ಎಂದರೆ ತಾಪತ್ರಯಗಳಿಂದ ನೋಯುವುದು ಎಂದು ತಿಳಿಯಬೇಕು.

೪. ಶ್ರೀಹರಿಯು ಹಾಗಲ್ಲ, ಅವನು ಸರ್ವಥಾ ದೀನನಲ್ಲ. ಮುಕ್ತರಲ್ಲದವರೆಲ್ಲರೂ ದೀನರೆ, ಶ್ರೀಹರಿಯು ನಿತ್ಯಮುಕ್ತನಾದ್ದರಿಂದ ಅವನು ದೀನನಾಗಿರದೇ ದಾನಿಯೇ ಆಗಿರುವನು. ಇಲ್ಲಿ ಭಕ್ತನ ಬಯಕೆ ಸಂಸಾರದಿಂದ ಬಿಡುಗಡೆಯಾಗಿರುವುದರಿಂದ ಇಲ್ಲಿ ವಿವಕ್ಷಿತವಾದ ದಾನ ಮುಕ್ತಿ ಪ್ರದಾನವೇ ಆಗಿದೆ ಎಂದು ತಿಳಿಯಬೇಕು.

೫. ಶ್ರೀಹರಿಯು ಕೆಲವರಿಗೆ ಮಾತ್ರ ದಾನಿಯಾಗಿರದೇ ಬಯಸಿ ಬರುವ ಸಕಲರಿಗೂ ಮೋಕ್ಷನೀಡುವ ಮಹಾ ಉದಾರಿ ಎಂಬುದನ್ನು ಸಮಸ್ತ ಲೋಕಕೆ ಎಂಬ ಪದದಿಂದ ತಿಳಿಸಿರುವರು. ಇದು ಶ್ರೀರಾಮದೇವರು ನುಡಿದ ಈ ಮಾತಿನ ಭಾವದಂತಿದೆ:

**ಸಮಾಯಾತ ಸಮಾಯಾತ ಯೇ ಯೇ ಮೋಕ್ಷಪದೇಚ್ಛವಃ**[೧] **।**

೬. ಮತಿಹೀನ ಎಂದರೆ ಬುದ್ಧಿ ಇಲ್ಲದವ, ಅಜ್ಞಾನಿ ಎಂದರ್ಥ. ಜೀವರೆಲ್ಲರೂ ಎರಡು ಬಗೆಯ ಅಜ್ಞಾನಕ್ಕೊಳಗಾದವರು. ಒಂದು ಬಗೆಯ ಅಜ್ಞಾನ ಭಗವಂತನ ಬಗೆಗಾದರೆ, ಮತ್ತೊಂದು ಅವನ ಹೊರತಾದ ತನ್ನನ್ನು ಒಳಗೊಂಡಂತೆ ಇತರ ಸಕಲ ಜಗತ್ತಿನ ಬಗೆಯದು. ಇಂತಹ ಅಜ್ಞಾನವೇ ಅವನ ಸಂಸಾರಕ್ಕೆ ಕಾರಣವಾಗಿರುವುದು. ಅದನ್ನು ಮತಿಹೀನ ಎಂಬ ಪದದಿಂದ ಸೂಚಿಸಿರುವರು: **ಮಗ್ನಸ್ಯ ಹಿ ಪರೇಽಜ್ಞಾನೇ ಕಿಂ ನ ದುಃಖತರಂ ಭವೇತ್ ।**

೭. ಶ್ರೀಹರಿಯು ಮಹಾಮಹಿಮ ಎಂದರೆ ಅಗಾಧವಾದ ಹಿರಿಮೆಯನ್ನು ಹೊಂದಿದವನು. ಮಹಿಮೆ ಎಂಬುದು ಹಿರಿತನದಿಂದಾಗಿ ಒದಗುವ ಪೂಜ್ಯತೆ. ಶ್ರೀಹರಿಯು ಸರ್ವೋತ್ತಮನಾದುದರಿಂದ ಅವನು ಮಹಾಮಹಿಮ ಎಂದಾಗುವುದು. ಮಹಿಮೆ

೧. ಮಣಿಮಂಜರೀ (೨/೧೯)

ಎಂಬುದು ಯೋಗ; ಅಷ್ಟಸಿದ್ಧಿಗಳಲ್ಲಿ ಒಂದು: **'ಅಣಿಮಾ ಮಹಿಮಾ .....'** ಶ್ರೀಹರಿಯು ಸಹಜಶಕ್ತಿಯಿಂದಲೇ ಸರ್ವತ್ರವ್ಯಾಪ್ತನಾದವನು ಎಂಬ ಅರ್ಥ ಇದರಿಂದ ಸೂಚಿತ: **ಯತ್ರ ಯೋಗೇಶ್ವರಃ ಕೃಷ್ಣಃ** (ಗೀತಾ)

೮. **ಕೈವಲ್ಯಪತಿ** ಎಂದರೆ ಮೋಕ್ಷಕ್ಕೆ ಒಡೆಯನಾದವನು ಎಂದರ್ಥ. ಕೈವಲ್ಯ ಎಂದರೆ ಕೇವಲ ತನ್ನ ಸ್ವರೂಪದ ಪೂರ್ಣಾಭಿವ್ಯಕ್ತಿ. ನೈಜಸುಖಾನುಭೂತಿ ಎಂದರ್ಥ: **ಮುಕ್ತಿರ್ಹಿತ್ವಾನ್ಯಥಾರೂಪಂ ಸ್ವರೂಪೇಣ ವ್ಯವಸ್ಥಿತಿಃ**[೧]; ಅಂತಹ ಕೈವಲ್ಯವನ್ನು ನೀಡುವ ಸಾಮರ್ಥ್ಯ ಶ್ರೀಹರಿಯದು ಮಾತ್ರ ಎಂಬುದು **'ಕೈವಲ್ಯಪತಿ'** ಎಂಬ ಪದದಿಂದ ಸೂಚಿತ. ಹರಿಕಥಾಮೃತಸಾರದ ಮೊದಲಪದ್ಯದಲ್ಲಿ **''ಕೈವಲ್ಯದಾಯಕ''** (ಹ.ಕ.ಸಾರ ೧/೧) ಎಂಬುದಾಗಿ ಶ್ರೀನರಸಿಂಹರೂಪದ ಶ್ರೀಹರಿಯನ್ನು ಸ್ತುತಿಸಿರುವುದನ್ನು ಇಲ್ಲಿ ಗಮನಿಸಬಹುದು. ಇತರ ಸರ್ವರು ಕೈವಲ್ಯವನ್ನು ಬಯಸುವವರಾದರೆ, ಶ್ರೀಹರಿಯು ಕೈವಲ್ಯವನ್ನು ನೀಡುವ ಮಹಾಸ್ವಾಮಿ ಎಂಬುದು ಇಲ್ಲಿಯ ಭಾವ. ಮಹಾಲಕ್ಷ್ಮಿಯು ಸಹ ನಿತ್ಯಮುಕ್ತಳೇ ಆದರೂ ಶ್ರೀಹರಿಯ ಆಧಿಪತ್ಯಕ್ಕೆ ಒಳಪಟ್ಟವಳಾದ್ದರಿಂದ ಮುಖ್ಯವಾಗಿ ಕೈವಲ್ಯಪತಿ ಎನ್ನಿಸುವುದು ಶ್ರೀಹರಿ ಒಬ್ಬನೇ ಎಂಬುದು ವಿಶೇಷ.

೯. ಅಂತಹ ಶ್ರೀಹರಿಯನ್ನು ಅರಿಯುವುದು ಇತರ ಯಾರಿಗೂ ಸಹ ಪೂರ್ಣವಾಗಿ ಶಕ್ಯವಾಗದು. ಅವನು ಮಾತ್ರವೇ ತನ್ನನ್ನು ತಾನು ಪೂರ್ಣವಾಗಿ ತಿಳಿಯಬಲ್ಲ. ಶ್ರೀಹರಿಯನ್ನು ತಿಳಿಯುವುದು ಮುಕ್ತಿಗೆ ಸಾಧನವಾದರೂ, ಅವನ ಬಗ್ಗೆ ಪೂರ್ಣತಿಳುವಳಿಕೆ ಮಾತ್ರ ಸರ್ವಥಾ ಅಸಾಧ್ಯ. ಆದ್ದರಿಂದ ಅವನನ್ನು ಜಿಜ್ಞಾಸುವಾದವನು ತನ್ನ ಯೋಗ್ಯತೆಗೆ ಎಟುಕುವಷ್ಟು ಉತ್ತಮ ರೀತಿಯಲ್ಲಿ ತಿಳಿದು ಉದ್ಧಾರವಾಗಬೇಕು.

೧೦. **'ಸುಜ್ಞಾನಮೂರುತಿ'** ಎಂದರೆ ಜ್ಞಾನಮಯ ಶರೀರ ಎಂದರ್ಥ. ಇದರಿಂದ ಶ್ರೀಹರಿಯು ಜ್ಞಾನಾನಂದಾದಿ ಅನಂತ ಗುಣಾತ್ಮಕವಾದ ಅಪ್ರಾಕೃತ ಶರೀರ ಉಳ್ಳವನು ಎಂದು ತಿಳಿಯುವುದು. ದೇವರು ನಿರಾಕಾರ ಎಂಬುದನ್ನು ಒಪ್ಪದ ದ್ವೈತವೇದಾಂತವನ್ನು ಅನುಸರಿಸಿದ ಶ್ರೀಕನಕದಾಸರು ಅದಕ್ಕನುಗುಣವಾಗಿಯೇ ಶ್ರೀಹರಿಯನ್ನು ಸುಜ್ಞಾನಮೂರುತಿ ಎಂದು ಸ್ತುತಿಸಿರುವುದು ಗಮನಾರ್ಹ.

೧೧. **'ನಿನ್ನ ಸಮಾನರುಂಟೇ'** ಎಂಬ ಮಾತಿನಿಂದ ಶ್ರೀಹರಿಗೆ ಸಮಾನರಾದವರು ಭೂತಭವಿಷ್ಯದ್ವರ್ತಮಾನಗಳಲ್ಲಿ ಯಾರೂ ಇಲ್ಲ ಎಂದರೆ ಅವನು ಸರ್ವೋತ್ತಮ ಎಂದರ್ಥ ಸೂಚಿತ. ಅವನಿಗೆ ಸಮಾನರೇ ಇಲ್ಲವೆಂದ ಮೇಲೆ ಉತ್ತಮರು ಇರುವುದು ಸರ್ವಥಾ ಅಸಾಧ್ಯ ಎಂದೂ ಭಾವ. ಇದು ಶ್ರೀಮದಾಚಾರ್ಯರ ನಖಸ್ತುತಿಯ ಈ ಕೆಳಗಿನ ಶ್ಲೋಕದ ಭಾವವಾಗಿದೆ:

---

೧. ಶ್ರೀಮದ್ಭಾಗವತ (೨/೧೦/೬)

**ಲಕ್ಷ್ಮೀಕಾಂತ ಸಮಂತತೋ ವಿಕಲಯನ್ನೈವೇಶಿತುಸ್ತೇ ಸಮಂ**
**ಪಶ್ಯಾಮ್ಯುತ್ತಮವಸ್ತು ದೂರತರತೋಽಪಾಸ್ತಂ ರಸೋ ಯೋಽಷ್ಟಮಃ।**

೧೨. ದೇವ ಎಂಬ ಪದದಿಂದ ಶ್ರೀಹರಿಯು ಕ್ರೀಡಾದಿಗುಣವಿಶಿಷ್ಟ ಎಂಬ ಅರ್ಥವೂ ಸೂಚಿತ. ಇದರಿಂದ ಮೋಕ್ಷ ನೀಡುವುದು ಮೊದಲಾದ ಸಕಲ ಕಾರ್ಯಗಳೂ ಸಹ ಶ್ರೀಹರಿಗೆ ಕೇವಲ ಲೀಲೆ ಮಾತ್ರ. ಅದರಿಂದ ಅವನಿಗೆ ಶ್ರಮವಾಗಲಿ, ಬೇರೆ ಯಾವುದೇ ಪ್ರಯೋಜನವಾಗಲಿ ಸರ್ವಥಾ ಇಲ್ಲ ಎಂಬ ವಿಶೇಷಾಂಶ ಸೂಚಿತ.

೧೩. ಶ್ರೀದಾಸರು ಈ ಕೆಳಗಿನ ಪದ್ಯಗಳಲ್ಲೂ ಜೀವಾತ್ಮ-ಪರಮಾತ್ಮರಿಗಿರುವ ಅಂತರವನ್ನು ಮತ್ತೊಂದು ಬಗೆಯಲ್ಲಿ ತಿಳಿಸಿರುವರು:

ಆವ ಪರಿಯಲಿ ನಿಮ್ಮನೊಲಿಸಿ ಮೆಚ್ಚಿಪ ವಿಧವು
ಅಣುಮಾತ್ರ ತೋರದಲ್ಲ ॥ ಪ ॥
ದೇವ ದೇವೇಶ ನೀನೆಂದು ನಂಬಿರಲು ಕೃ-
ಪಾವಲೋಕನದಿ ಸಲಹೊ ದೇವ ॥ ಅಪ ॥
ಫಣಿರಾಜನಾಸನದಿ ಮಲಗಿದವಗೆ ಅರಿವೆಯಾ-
ಸನವ ನಾನೆಂತು ಹಾಸಲಿ
ಘನವಾದ ಗಂಗೆಯನು ಪಡೆದವಗೆ ಕಲಶ ನೀ-
ರನದೆಂತು ಮೈಗೆರೆಯಲಿ
ತನುವಿನಾ ಪರಿಮಳವು ಘಮಘಮಿಪನಿಗೆ ಸುಚಂ-
ದನವದೆಂತು ನಾ ಪೂಸಲಿ
ಅನವರತ ನಾಭಿಯೊಳು ಶತಪತ್ರವಿಹಗೆ ಮಿ-
ಕ್ಕಿನ ಪೂವ ಮುಡಿಸಲೆಂತೈ ದೇವ ॥ ೧ ॥
ಸುರುಚಿರೋಜ್ವಲ ಪೀತವಾಸನಿಗೆ ಉಡುಗೊರೆಯ
ಅರಿವೆ ಏನನು ಪೊದಿಸಲಿ
ವರ ಕೌಸ್ತುಭವು ಕೊರಳೊಳಗೆ ಇಪ್ಪವಗೆ ಆ-
ಭರಣವಾವುದ ತೊಡಿಸಲಿ
ತರಣಿ ಶತಕೋಟಿತೇಜನ ಮುಂದೆ ಹೇಗೆ ನಾ
ಪೆರತೊಂದು ದೀಪವಿಡಲಿ
ನೆರಹಿದಾ ಫಣಿಪತಿಯ ಸ್ತೋತ್ರದೂರನ ನಾನು
ಸ್ಮರಿಪೆನೆಂತಯ್ಯ ದೇವ ದೇವ ॥ ೨ ॥
ವನಜಜಾಂಡ ಕೋಟಿಯುದರಂಗೆ ಆವುದನು
ಉಣಿಸಿ ತೃಪ್ತಿಯ ಮಾಡಲಿ

ಅನಿಮಿಷರಿಗಮೃತವನ್ನೆರೆದವನ ತೃಷೆಯ ನೀರಿ-
ನೊಳೆಂತು ಸಂತವಿಡಲಿ
ವಿನತೆಯಾತ್ಮಜ ಪಕ್ಷದನಿಲನಿರೆ ಬೇರೆ ಬೀ-
ಸಣಿಗೆಯನ್ನೇಂ ಬೀಸಲಿ
ಅಣುರೇಣು ಪರಿಪೂರ್ಣ ಮೂರುತಿಗೆ ನಾ ಪ್ರದ-
ಕ್ಷಿಣೆಯೆಂತು ಸುತ್ತಿಬರಲಿ ದೇವ ॥ ೩ ॥
ಮಿಗೆ ಫಣಿಯ ಫಣದಾತಪತ್ರವಿರುವಂಗೆ ನೆರ-
ಳಿಗೆ ಕೊಡೆಯನೇಂ ಪಿಡಿಯಲಿ
ಪಗಲಿರುಳು ಸಾಮಗಾನಪ್ರಿಯನ ಮುಂದೆ ಗೀ-
ತಗಳ ನಾನೇಂ ಪಾಡಲಿ
ಜಗವರಿಯೆ ಲಕ್ಷ್ಮೀದೇವಿಪತಿಗೆ ಎಷ್ಟು ಹೊ-
ನ್ನುಗಳ ದಕ್ಷಿಣೆಯ ಕೊಡಲಿ
ನಿಗಮತತಿ ಕಾಣದ ಮಹಾಮಹಿಮನನು ನಮಿಪ
ಬಗೆಯ ನಾನರಿವೆನೆಂತೈ ದೇವ ॥ ೪ ॥
ಒಲಿಸುವುದನರಿಯೆ ಮೆಚ್ಚಿಸುವ ಬಗೆಯರಿಯೆ ಹೊ-
ಗಳುವ ಹೊಲಬನ್ನರಿಯೆನು
ತಿಳಿದುದಿಲ್ಲವು ಷೋಡಶೋಪಚಾರದ ಪೂಜೆ-
ಗಳಲೊಂದು ಪರಿಯಾದರೂ
ನೆಲೆಯ ಕಾಣೆನು ನಿಗಮಶಾಸ್ತ್ರ ನವವಿಧ ಭಕ್ತಿ-
ಯೊಳಗೊಂದು ಬಗೆಯಾದರೂ
ಅಖಿಲಸೇವೆಯನೊಪ್ಪಿಸಿಕೊಂಡು ಸಲಹೈ
ನೆಲೆಯಾದಿ ಕೇಶವನೆ ಸ್ವಾಮೀ – ಪ್ರೇಮೀ ॥ ೫ ॥

**

ಏನೆಂದು ಕೊಂಡಾಡಿ ಸ್ತುತಿಸುವೆನೊ ದೇವ
ನಾನೇನು ಬಲ್ಲೆ ನಿಮ್ಮ ಮಹಿಮೆಗಳ ಮಾಧವ ॥ ಪ ॥
ಹರಿಮುಕುಂದನು ನೀನು ನರಜನ್ಮ ಹುಳು ನಾನು
ಪರಮಾತ್ಮನು ನೀನು ಪಾಮರನು ನಾನು
ಗರುಡಗಮನನು ನೀನು ಮರುಳು ಪಾಪಿಯು ನಾನು
ಪರಮಜ್ಯೋತಿಯು ನೀನು ದುರುಳ ತಿರುಕನು ನಾನು ॥ ೧ ॥
ಅಣುರೇಣುತೃಣಗಳಲಿ ಪರಿಪೂರ್ಣನೈ ನೀನು
ಕ್ಷಣಕ್ಷಣಕೆ ಅವಗುಣದ ಕರ್ಮಿ ನಾನು
ವಾಣಿಯರಸನ ಪೆತ್ತ ವೈಕುಂಠಪತಿ ನೀನು
ತನುನಿತ್ಯವಲ್ಲದಾ ಬೊಂಬೆ ನಾನು ॥ ೨ ॥

ಕಂಬದಲಿ ಬಂದ ಆನಂದಮೂರುತಿ ನೀನು
ನಂಬಿಕೆಗೆಯು ಇಲ್ಲದ ಪ್ರಪಂಚಕನು ನಾನು
ಅಂಬರೀಷಗೆ ಒಲಿದ ಅಕ್ರೂರಸಖ ನೀನು
ಡಂಬಕರ್ಮಿಯು ನಾನು ನಿರ್ಜಿತನು ನೀನು ॥ ೩ ॥
ವಾರಿಧಿಶಯನನಾದ ಕಾರುಣ್ಯನಿಧಿ ನೀನು
ಘೋರದಿಂದಿಹ ಕಾಮಿ ಕ್ರೋಧಿ ನಾನು
ಈರೇಳು ಭುವನದೊಳು ಇರುವ ಮೂರುತಿ ನೀನು
ದೂರಿ ನಿನ್ನನು ಬೈವ ದುಷ್ಟನಾನು ॥ ೪ ॥
ತಿರುಪತಿಯ ವಾಸ ಶ್ರೀವೇಂಕಟೇಶನೆ ನಿನ್ನ
ಚರಣಸೇವಕರ ಸೇವಕನು ನಾನು
ಬಿರುದುಳ್ಳವನು ನೀನು ಮೊರೆಹೊಕ್ಕೆನೈ ನಾನು
ಸಿರಿ ಕಾಗಿನೆಲೆಯಾದಿಕೇಶವನು ನೀನು ॥ ೫ ॥

*****

## ೫೦. ಪಾಪವ ಕಳೆದು ರಕ್ಷಿಸು

ತರಳತನದಲಿ ಕೆಲವುದಿನ ದುರು-
ಭರದ ಗರ್ವದಿ ಕೆಲವುದಿನ ಮೈ-
ಮರೆದು ನಿಮ್ಮಡಿಗೆರಗದಾದೆನು ವಿಷಯಕೇಳಿಯಲಿ।
ನರಕಭಾಜನನಾಗಿ ಕಾಮಾ-
ತುರದಿ ಪರಧನ ಪರಸತಿಗೆ ಮನ
ಹರಿದ ಪಾಪವ ಕಳೆದು ರಕ್ಷಿಸು ನಮ್ಮನನವರತ ॥ ೫೦ ॥

ಅ: ಬಾಲ್ಯದಲ್ಲಿ ಕೆಲವು ದಿನಗಳ ಕಾಲ ಭರಿಸಲಾಗದಂತಹ ಸೊಕ್ಕಿಗೆ ಒಳಗಾಗಿ ಮೈಮೇಲೆ ಪ್ರಜ್ಞೆ ಇಲ್ಲದೇ ಶ್ರೀಹರಿಯ ಪಾದಗಳಿಗೆ ನಾನು ಎರಗದವನಾದೆನು. ಮುಂದಿನ ದಿನಗಳಲ್ಲಿ ವಿಷಯ ಕೇಳಿಯಲ್ಲಿ ಮೈಮರೆತು ಶ್ರೀಹರಿಯ ಪಾದಗಳ ಸ್ಮರಣೆ ಮಾಡದಂತಾಯಿತು. ಅದರಿಂದಾಗಿ ನರಕವನ್ನು ಸಹ ಸೇರುವಂತಾಯಿತು. ಕಾಮದ ಪೀಡೆಯಿಂದಾಗಿ ಪರಧನ, ಪರಸತಿಗೆ ಮನಸ್ಸು ಹರಿಯತೊಡಗುವುದು. ಶ್ರೀಹರಿಯೇ! ಅಂತಹ ಪಾಪವನ್ನು ಪರಿಹರಿಸಿ ನೀನು ನಮ್ಮನ್ನು ಸದಾ ರಕ್ಷಿಸು.

ವಿ. ೧: ಶ್ರೀಹರಿಯನ್ನು ಭಜಿಸುವುದೊಂದೇ ಮುಕ್ತಿಯ ದಾರಿಯಾದರೂ, ಆ ರೀತಿ ಭಜಿಸುವ ವಿವೇಕವನ್ನು ಜನರು ಹೊಂದುವುದಿಲ್ಲ; ಅದಕ್ಕೆ ಕಾರಣಗಳನ್ನು ಈ ಪದ್ಯದಲ್ಲಿ ತಿಳಿಸಿರುವರು.

೨. ಮಾನವನ ಮೊದಲ ಹಂತ ಬಾಲ್ಯ. ಜಗತ್ತಿನ ಬಗ್ಗೆ ಸಾಮಾನ್ಯ ತಿಳುವಳಿಕೆಯೂ ಇರದ ಅವಸ್ಥೆ ಅದು. ಇನ್ನು ಜಗನ್ನಾಥನ ಬಗ್ಗೆ ತಿಳಿಯುವುದಂತೂ ದೂರದ ಮಾತು. ಅನಂತರದ ಕಾಲ ಯೌವನ, ಅದರಲ್ಲಿ ಇರುವ ಅಪಾಯಗಳು ಎರಡು, ಒಂದು ಯೌವನ ಮದವಾದರೆ ಮತ್ತೊಂದು ವಿಷಯಾಸಕ್ತಿ. ಯೌವನ ಮದವು ಇತರರ ಮಾತನ್ನು ಕೇಳದಂತೆ ಮಾಡಿದರೆ, ವಿಷಯಾಸಕ್ತಿ ಇರುವ ವಿವೇಕವನ್ನೂ ಸಹ ಉಪಯೋಗಿಸದಂತೆ ಮಾಡುತ್ತದೆ. ಅದರಿಂದಾಗಿ ಜಗತ್ತಿನ ಆಕರ್ಷಣೆಗೆ ಒಳಗಾಗುವ ಪರಿಸ್ಥಿತಿ ಉಂಟಾಗಿ ದೇವರನ್ನು ತಿಳಿಯುವ ಮಾತು ದೂರವೇ ಉಳಿಯುವುದು ಎಂದರ್ಥ. ಇದು ಈ ಕೆಳಗಿನ ಭಗವದ್ಗೀತೆಯ ಶ್ಲೋಕದ ಭಾವದಂತಿರುವ ಮಾತು:

ಭೋಗೈಶ್ವರ್ಯಪ್ರಸಕ್ತಾನಾಂ ತಯಾಽಪಹೃತಚೇತಸಾಮ್ ।
ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ॥ (ಗೀತಾ ೨/೪೪)

೩. ಹೀಗೆ ದೇವರನ್ನು ಮರೆಯುವುದು ಒಂದು ಅಪಚಾರವಾದರೆ, ಮತ್ತೊಂದು ಕಾಮಾತುರನಾಗಿ ಅಮಾರ್ಗದಲ್ಲಿ ಸಾಗುವುದು ಇನ್ನೊಂದು ಅಪಚಾರ. ಪರಿಣಾಮ, ನರಕಪ್ರಾಪ್ತಿ. ಇದರಿಂದಾಗಿ ಪ್ರಗತಿ ಕಾಣುವ ಬದಲು ಅವನತಿಯನ್ನು ಹೊಂದುವಂತಾಗಿ ಸಾಧನೆ ಸಂಪೂರ್ಣವಾಗಿ ದಾರಿ ತಪ್ಪುವುದು. ಸಾಧನಶರೀರವನ್ನು ಬ್ರಹ್ಮಜ್ಞಾನದ ಪ್ರಾಪ್ತಿಗೆ ವಿನಿಯೋಗಿಸಿದೇ ಹಾಳುಮಾಡಿಕೊಳ್ಳುವ ಜನರ ರೀತಿಯನ್ನು ಶ್ರೀಕನಕದಾಸರು ಇಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ತಿಳಿಸಿರುವರು.

೪. ಇಂತಹ ಅನರ್ಥಗಳಿಂದ ಅವನು ಪಾಠಕಲಿಯುವ ಬದಲು ಮತ್ತಷ್ಟು ಕೆಟ್ಟ ಮಾರ್ಗದಲ್ಲಿ ಸಾಗುವನು. ಪರಧನ, ಪರಸತಿಯರ ಬಯಕೆಯನ್ನು ಹೊಂದುವನು. ಪರಧನವು ಭೋಗಕ್ಕಾದರೆ, ಪರಸತಿಯು ಕಾಮಕ್ಕೆ ಎಂದಾಗಿ ಜೀವನ ಮತ್ತಷ್ಟು ಕಳಂಕಿತವಾಗುತ್ತಾ ಹೋಗುವುದು. ಯಾವುದೋ ಕಾರಣದಿಂದ ಆ ಕೃತ್ಯಗಳನ್ನು ಸಾಕ್ಷಾತ್ತಾಗಿ ಮಾಡದೇ ಹೋದರೂ, ಮನಸ್ಸು ಮಾತ್ರ ಆ ಕಡೆಗೆ ಹರಿಯುವುದು ತಪ್ಪಿದ್ದಲ್ಲ. ಅದು ಸಹ ಗಮನಾರ್ಹವೆನ್ನಿಸುವ ಪಾಪವೇ ಆಗಿದೆ. ಅದನ್ನು ಪರಿಹರಿಸಿ ಶ್ರೀಹರಿಯು ಸದಾ ರಕ್ಷಿಸಬೇಕು ಎಂಬುದು ಇಲ್ಲಿಯ ಪ್ರಾರ್ಥನೆ; ಅಡಿ – ಪಾದ.

೫. ದಾರಿತಪ್ಪದಂತೆ ಬದುಕಲು ಸುಜೀವಿಯಾದವನು ಸರ್ವರೀತಿಯ ಪ್ರಯತ್ನವನ್ನು ಸಹ ತಪ್ಪದೇ ಮಾಡಲೇಬೇಕು. ಅದರೊಂದಿಗೆ ಅದು ಮುಖ್ಯವಾಗಿ ಸಾಧ್ಯವಾಗುವುದು ಶ್ರೀಹರಿಯ ಅನುಗ್ರಹದಿಂದ ಮಾತ್ರ ಎಂಬ ಎಚ್ಚರವನ್ನು ಹೊಂದಿ ಅವನಲ್ಲಿ ಭಕ್ತಿಯನ್ನು ತಪ್ಪದೇ ಮಾಡಬೇಕು ಎಂಬುದು ಇಲ್ಲಿಯ ಮತ್ತೊಂದು ಸಂದೇಶ.

೬. ಇಂದ್ರಿಯಜಯವಿಲ್ಲದ ಜೀವನ ದುರಂತವನ್ನೇ ಕಾಣುವುದು ಎಂಬುದು ಇಲ್ಲಿಯ ಒಟ್ಟು ಭಾವ. ಇದು ಈ ಕೆಳಗಿನ ಶ್ರೀಮದ್ಭಾಗವತಶ್ಲೋಕದ ವಿವರಣೆಯಂತಿದೆ:

**ನಿದ್ರಯಾ ಹ್ರಿಯತೇ ನಕ್ತಂ ವ್ಯವಾಯೇನ ನಯಂ ವಯಃ।**
**ದಿವಾ ಚಾರ್ಥೇಹಯಾ ರಾಜನ್ ಕುಟುಂಬಭರಣೇನ ವಾ ॥** - ೨/೧/೩

೭. ಪರಸತಿಯರನ್ನು ಬಯಸಿ ಸರ್ವನಾಶ ಕಂಡ ಕೆಲವರ ನಿದರ್ಶನವನ್ನು ನೀಡುವ ಶ್ರೀಕನಕದಾಸರ ಪದ್ಯ ಹೀಗಿದೆ:

ನೋಡಿ ಮರುಳಾಗದಿರು ಪರಸತಿಯರ ॥ ಪ ॥
ನಾಡೊಳಗೆ ಕೆಟ್ಟವರ ಪರಿಯ ನೀನರಿತು ॥ ಅ ಪ ॥
ಶತಮುಖವ ಮಾಡಿ ಸುರಸಭೆಗೈದಿ ನಹುಷ ತಾ
ಅತಿಶಯದಿ ಶಚಿಗೆ ಮನಸೋತು ಭ್ರಮಿಸಿ
ಅತಿ ಬೇಗ ಚಲಿಸೆಂದು ಬೆಸಸಲಾ ಮುನಿಯಿಂದ
ಗತಿಗೆಟ್ಟು ಉರಗನಾಗಿರ್ದ ಪರಿಯರಿತು ॥ ೧ ॥
ಸುರಪತಿಯು ಗೌತಮನ ಸತಿಗಾಗಿ ಕಪಟದಲಿ
ಧರಿಸಿ ಮಾಯಾವೇಷ ಧರೆಗೆ ಬಂದ
ಪರಮ ಮುನಿಯ ಶಾಪದಿಂದವನಂಗದಲ್ಲಿ ಸಾ-
ಸಿರ ಕಣ್ಗಳಾಗಿರ್ದ ಪರಿಯ ನೀನರಿತು ॥ ೨ ॥
ಸ್ಮರನ ಶರತಾಪವನು ಪರಿಹರಿಸಲರಿಯದೆ
ದುರುಳಕೀಚಕನು ದ್ರೌಪದಿಯ ತುಡುಕಿ
ಮರುತಸುತ ಭೀಮನಿಂದಿರುಳೊಳಗೆ ಹತನಾಗೆ
ನರಗುರಿಯೆ ನಿನ್ನ ಪಾಡೇನು ಧರೆಯೊಳಗೆ ॥ ೩ ॥
ಹರನ ವರವನು ಪಡೆದು ಶರಧಿ ಮಧ್ಯದೊಳಿದ್ದು
ದುರುಳ ದಶಶಿರನು ಜಾನಕಿಯನೊಯ್ಯೆ
ಧುರದೊಳಗೆ ರಘುವರನನು ಶರದಿಂದ ಈರೈದು
ಶಿರಗಳನೆ ಹೋಗಾಡಿಸಿದ ಪರಿಯನರಿತು ॥ ೪ ॥
ಇಂತಿಂಥವರು ಕೆಟ್ಟು ಹೋದರೆಂಬುದನರಿತು
ಭ್ರಾಂತಿಯನೆ ಬಿಟ್ಟು ಭಯಭಕ್ತಿಯಿಂದ
ಕಂತುಪಿತ ಕಾಗಿನೆಲೆಯಾದಿಕೇಶವನ ನಿ-
ರಂತರದಿ ಭಜಿಸಿ ನೀ ನಿತ್ಯಸುಖಿಯಾಗು ॥ ೫ ॥

*****

## ೫೧. ಮಮತೆಯಲಿ ರಕ್ಷಿಸು

**ಮರೆದೆನಭ್ಯುದಯದಲಿ ನಿಮ್ಮನು**
**ಮರೆಯೆನಾಪತ್ತಿನಲಿ ಪೊರೆಯೆಂ-**
**ದೊರಲುವೆನು ಮನವೇಕಭಾವದೊಳಿಲ್ಲ ನಿಮ್ಮಡಿಯ ।**

**ಮರೆದು ಬಾಹಿರನಾದವನ ನೀ**
**ಮರೆವರೇ ಹಸು ತನ್ನ ಕಂದನ**
**ಮರೆವುದೇ ಮಮತೆಯಲಿ ರಕ್ಷಿಸು ನಮ್ಮನನವರತ ॥ ೫೧ ॥**

**ಅ: ಅಭ್ಯುದಯಕಾಲದಲ್ಲಿ ನಾನು ನಿಮ್ಮನ್ನು ಮರೆತೆನು. ಆಪತ್ತು ಬಂದಾಗ ಮಾತ್ರ ನನ್ನನ್ನು ರಕ್ಷಿಸು ಎಂಬುದಾಗಿ ತಪ್ಪದೇ ಕೇಳಿಕೊಳ್ಳುವೆನು. ನನ್ನ ಮನಸ್ಸು ಏಕಾಗ್ರತೆಯನ್ನು ಎಂದೂ ಹೊಂದಿಲ್ಲ. ನಿಮ್ಮ ಪಾದವನ್ನು ಮರೆತು ನಾನು ನಿನ್ನಿಂದ ದೂರಾದವನಾಗಿರುವೆನು. ಆದರೆ ನೀನು ಮಾತ್ರ ನನ್ನನ್ನು ಮರೆಯಕೂಡದು. ಹಸು ತನ್ನ ಕಂದನನ್ನು ಮರೆಯುವುದೇ? ಶ್ರೀಹರಿಯೇ! ಅದರಂತೆ ಮಮತೆಯಿಂದ ನೀನು ಸದಾ ನಮ್ಮನ್ನು ರಕ್ಷಿಸು.**

ವಿ.: ೧. ದೇವರನ್ನು ಜನರು ಮರೆಯಲು ಮತ್ತಷ್ಟು ಕಾರಣಗಳನ್ನು ಇಲ್ಲಿ ವಿವೇಚಿಸಲಾಗಿದೆ.

೨. ಧನಕನಕಾದಿಗಳ ಅಭ್ಯುದಯ ಒದಗಿದಾಗ ಸಂಭ್ರಮದಿಂದ ಸಾಧನೆ ಮಾಡುವುದು ವಿವೇಕಿಯ ಲಕ್ಷಣ. ಆದರೆ, ಮನುಷ್ಯರ ರೀತಿಯು ಅದಲ್ಲ, ಆ ಕಾಲದಲ್ಲಿ ಧನಕನಕಾದಿಗಳ ಆಕರ್ಷಣೆಗೆ ಒಳಗಾಗುವ ಅವನು ದೇವರನ್ನು ಮರೆತೇ ಬಿಡುವನು. ಆದರೆ, ಆಪತ್ತು ಒದಗಿದಾಗ ಮಾತ್ರ ಅವನನ್ನು ನೆನಪಿಸಿಕೊಂಡು ಓ! ನನ್ನನ್ನು ಕಾಪಾಡು ಎಂದು ಅವನತ್ತ ಧಾವಿಸುವರು. '**ಸಂಕಟ ಬಂದಾಗ ವೆಂಕಟರಮಣ**' ಎಂಬ ಮಾತಿನ ಭಾವ ಇದರಲ್ಲಿದೆ. ಹಾಗೇನಾದರು ಸಂಕಟ ಪರಿಹಾರವಾದರೆ ಮತ್ತೆ ಅವರು ದೇವರನ್ನು ಮರೆತೇ ಬಿಡುವರು. ಹೀಗೆ ನಿಜಾರ್ಥದಲ್ಲಿ ಸದಾ ಸ್ಮರಿಸಬೇಕಾದ ಭಗವಂತನನ್ನು ಎಂದೂ ಸ್ಮರಿಸದಂತಹ ಅವಿವೇಕ ಇವರದಾಗುವುದು ಎಂದರ್ಥ: "**ಭಾಗ್ಯ ಯೌವನ ಮಬ್ಬಿನಲಿ ಮೈಮರೆದವಗೆ ಹರಿಕಥಾಮೃತವು ಸೊಗಸುವುದೇ**" ಎಂಬ ಹರಿಕಥಾಮೃತಸಾರದ ಮಾತು ಇದರ ವಿವರಣೆಯಂತಿದೆ; **ಪೊರೆ** – ಕಾಪಾಡು; **ಬಾಹಿರ** – ಹೊರತಾದವನು, ದೂರಾದವನು.

೩. ಹೀಗೆ ಸಂಕಟ ಬಂದಾಗ ಒಂದು ತೆರ, ಅಭ್ಯುದಯ ಬಂದಾಗ ಮತ್ತೊಂದು ತೆರ ಎಂದಾಗಿ ಮನಸ್ಸು ಹೊಯ್ದಾಟದಲ್ಲಿಯೇ ಉಳಿಯುವುದು. ಏಕಾಗ್ರತೆಯನ್ನು ಸರ್ವಥಾ ಹೊಂದದು. ಇದರಿಂದಾಗಿ ಸಾಧನೆ ಸಂಪೂರ್ಣ ಕುಂಠಿತವಾಗುವುದು ಎಂದರ್ಥ.

೪. ಅಂತೂ, ಹೀಗೆ ಸರ್ವಸ್ವಾಮಿಯಾದ ಶ್ರೀಹರಿಯನ್ನು ಮರೆಯುವುದು ಜೀವನ ಸ್ವಭಾವ ಎಂದಾಗುವುದು. ಆದರೆ, ಶ್ರೀಹರಿಯು ನಿರ್ದೋಷನಾದ ಮಹಾಮಹಿಮ, ಪರಿಪೂರ್ಣಕಾಮ. ಆದ್ದರಿಂದ ಅವನು ಭಕ್ತರನ್ನು ಸರ್ವಥಾ ಮರೆಯನು. ಇದರಿಂದಾಗಿ ಭಕ್ತರು ಅವನನ್ನು ಮರೆತರೂ, ಅವನು ಮಾತ್ರ ಭಕ್ತರನ್ನು ಮರೆಯಲಾರ. ಈ ನಂಬಿಕೆಯಿಂದಾಗಿಯೇ

ಭಕ್ತ ತನ್ನ ಉದ್ಧಾರದ ಹಾದಿಯನ್ನು ನಿರೀಕ್ಷಿಸುವನು ಎಂಬ ಭಾವ ತುಂಬಾ ರೋಚಕವಾದುದು. ಶ್ರೀಜಗನ್ನಾಥದಾಸರ ತತ್ತ್ವಸುವ್ವಾಲಿಯ 'ನಾ ನಿನ್ನ ಮರೆತರೆ ನೀ ನನ್ನ ಮರೆವುದೇ' ಎಂಬ ಮಾತು ಇದರ ವಿವರಣೆಯಂತಿದೆ.

೫. ಇದಕ್ಕೆ ನಿದರ್ಶನವನ್ನಾಗಿ ಹಸುವಿನ ದೃಷ್ಟಾಂತವನ್ನು ನೀಡಿರುವರು. ಕರು ತನ್ನ ಅವಿವೇಕದಿಂದಾಗಿ ತಾಯಿಯಾದ ಹಸುವನ್ನು ಮರೆಯುವುದುಂಟು. ಆದರೆ, ಹಸುವು ಮಾತ್ರ ತನ್ನ ಕರುವನ್ನು ಎಂದೂ ಮರೆಯದು. ಎಲ್ಲ ಬಗೆಯಲ್ಲೂ ಅದರ ಬಗ್ಗೆ ಗಮನವಿರಿಸಿ ಅದನ್ನು ಉದ್ಧರಿಸುವ ಕಾರುಣ್ಯ ಹಸುವಿನದ್ದು. ಈ ದೃಷ್ಟಾಂತವು ತಾಯಿ-ಮಗುವಿಗೂ ಅನ್ವಯಿಸುವಂತಹುದು. ರೋಗಿ-ವೈದ್ಯನಿಗೂ ಸಹ. ಯೋಗ್ಯನಾದವನು ಅವಿವೇಕದ ಕಾರಣದಿಂದಾಗಿ ತನ್ನನ್ನು ಉದ್ಧರಿಸುವವರನ್ನು ಮರೆತರು ಸಹ ವಿವೇಕಿಗಳಾದ ಹಿರಿಯರು, ಹಿತೈಷಿಗಳು ಅವನನ್ನು ತಪ್ಪದೇ ಉದ್ಧರಿಸುವರು ಎಂಬುದು ಇಲ್ಲಿಯ ಭಾವ.

೬. ಶ್ರೀಹರಿಯು ಯಾವುದೇ ಊಹೆಗೂ ಮೀರಿದಂತಹ ಪರಮಕರುಣಾನಿಧಿಯಾದ್ದರಿಂದ, ಸರ್ವಜ್ಞನಾದುದರಿಂದ, ಆಪ್ತಕಾಮನಾದುದರಿಂದ ಅವನು ತನ್ನ ಭಕ್ತರನ್ನು ತಪ್ಪದೇ ಉದ್ಧರಿಸುವನು ಎಂಬ ಭರವಸೆಯಲ್ಲಿ ಭಕ್ತ ನಿಶ್ಚಿಂತೆಯಿಂದ ಬದುಕುವನು ಎಂಬ ಪ್ರಮೇಯ ಇಲ್ಲಿ ಪ್ರತಿಪಾದಿತವಾಗಿದೆ.

೭. ಧನಮದಾದಿಗಳಿಗೆ ಒಳಗಾಗದೆ ಬದುಕುವುದು ದುರ್ಲಭ; ಹಾಗೆ ಮದಾದಿಗಳನ್ನು ಜಯಿಸಿ ಬದುಕುವುದು ಸಾಧ್ಯವಾಗಿದೆ ಎಂದರೆ ಅದಕ್ಕೆ ಶ್ರೀಹರಿಯ ಅನುಗ್ರಹವೇ ಕಾರಣ ಎಂದು ತಿಳಿಯಬೇಕು[೧].

೮. ಮನವೇಕಭಾವದೊಳಿಲ್ಲ ಎಂಬ ಇಲ್ಲಿಯ ಮಾತಿಗೆ ಅವರ ಈ ಕೆಳಗಿನ ಪದ್ಯ ವಿವರಣೆಯಂತಿದೆ:

ಎಳ್ಳು ಕಾಳಿನಷ್ಟು ಭಕ್ತಿ ಎನ್ನೊಳಗಿಲ್ಲ ॥ ಪ ॥
ಕಳ್ಳರಿಗೆ ಕಳ್ಳನಂತೆ ಬೆಳ್ಳಕ್ಕಿಯಂದದಿ ಡಂಭ ॥ ಅ.ಪ. ॥
ಗುಂಡು ಮುಣುಗಿನ ಹಕ್ಕಿಯಂತೆ ಕಂಡ ಕಂಡ ನೀರ ಮುಳುಗಿ
ಮಂಡೆ ಶೂಲೆ ಬಾಹುದೈಸೆ ಗತಿಯ ಕಾಣೆನೊ
ಮಂಡೂಕನಂದದಿ ಕೆರೆಯ ದಂಡೆಯಲ್ಲಿ ಕುಳಿತುಕೊಂಡು
ಮಂಡೆ ಮುಸುಕನಿಟ್ಟು ಮೂಗು ಹಿಡಿವ ಭ್ರಮಿತ ನಾನಯ್ಯ ॥ ೧ ॥
ಗಾಣದೆತ್ತಿನಂತೆ ಕಣ್ಣಮುಚ್ಚಿ ಪ್ರದಕ್ಷಿಣೆಯ ಮಾಡಿ
ಕಾಣದೆ ತಿರುಗುವೆನು ಎರಡು ಕಣ್ಣಿದ್ದು ನಾನು
ಮಾಣಿಕ್ಯದ ರಾಶಿಯಲ್ಲಿ ಅಂಧಕರೈವರು ಕೂಡಿ
ಆಣೆಮುತ್ತ ಹಿಡಿದುಹಿಡಿದು ಬಿಡುವ ಭ್ರಮಿತ ನಾನಯ್ಯ ॥ ೨ ॥

೧. ಜನ್ಮಕರ್ಮವಯೋರೂಪವಿದ್ಯೈಶ್ವರ್ಯಧನಾದಿಭಿಃ।
ಯದ್ಯಸ್ಯ ನ ಭವೇತ್ ಸ್ತಂಭಸ್ತತ್ರಾಯಂ ಮದನುಗ್ರಹಃ॥ - ಶ್ರೀಮದ್ಭಾಗವತ (೮/೨೨/೨೬)

ಇಕ್ಕಳವ ಕೈಯಲ್ಲಿ ಹಿಡಿದ ಕಾದಕಬ್ಬಿಣವನ್ನು ತೆಗೆಸಿ
ಹೊಕ್ಕು ಮುಂದಕೆ ಎಳೆಸಿ ಹೊಮ್ಮುವ ಗತಿ ಕಾಣೊ
ಹೊಕ್ಕುಳಹೂವಿನ ಬಾಡದಾದಿಕೇಶವನ ಮೊರೆ-
ಹೊಕ್ಕೆನಿಂದು ಕಾಯ್ದುಕೊಳ್ಳೊ ದೇವಾಧಿದೇವೋತ್ತಮನೆ ॥ ೩ ॥

*****

## ೫೨. ನಿನ್ನನು ಸೇರಿ ಓಲೈಸುವಳು ರಕ್ಷಿಸು

**ಧಾರಿಣಿಗೆ ವರಚಕ್ರವರ್ತಿಗ-**
**ಳಾರುಮಂದಿ ನೃಪಾಲಕರು ಹದಿ-**
**ನಾರುಮಂದಿಯು ಧರಣಿಯನು ತಾವಾಳ್ದ ನೃಪರೆನಿತೋ ।**
**ವೀರರನು ಮೆಚ್ಚಿದಳೆ ಧರಣೀ**
**ನಾರಿ ಬಹುಮೋಹದೊಳು ನಿನ್ನನು**
**ಸೇರಿ ಓಲೈಸುವಳು ರಕ್ಷಿಸು ನಮ್ಮನನವರತ ॥ ೫೨ ॥**

**ಅ: ಭೂಮಿಯನ್ನು ಆಳಿದ ಶ್ರೇಷ್ಠ ಚಕ್ರವರ್ತಿಗಳು ಆರು ಜನರು. ಅದರಲ್ಲೂ ೧೬ ಜನ ಶ್ರೇಷ್ಠ ರಾಜರು ಎನ್ನಿಸಿದವರು. ಇನ್ನು ಭೂಮಿಯನ್ನು ಆಳಿದ ರಾಜರುಗಳ ಸಂಖ್ಯೆ ಎಷ್ಟೋ ಹೇಳುವಂತಿಲ್ಲ. ಆದರೆ, ಭೂಮಿಯು ಅಂತಹ ಯಾವ ವೀರರನ್ನು ಸಹ ಮೆಚ್ಚಲಿಲ್ಲ. ಭೂದೇವಿಯು ಹೆಚ್ಚಿನ ಮೋಹದಿಂದ ನಿನ್ನನ್ನೇ ಸೇರಿ ಓಲೈಸುವಳು; ಅಂತಹ ಶ್ರೀಹರಿಯೇ! ನೀನು ನಮ್ಮನ್ನು ಸದಾ ರಕ್ಷಿಸು.**

ವಿ.: ೧. ಭೂಮಿಯನ್ನು ಆಳಿದ ಚಕ್ರವರ್ತಿಗಳು ಮೊದಲಾದವರು ಇಂದು ಆ ಪದವಿಯನ್ನು ಅಲಂಕರಿಸಿಲ್ಲ. ಎಂದರೆ, ಅವರೆಲ್ಲ ಗತಿಸಿ ಹೋದವರೇ. ಆ ಕಾಲಕ್ಕೆ ಭೂಪತಿ ಎನ್ನಿಸಿದ ಅವರು ಅನಂತರ ಆ ಪದವಿಯನ್ನು ಉಳಿಸಿಕೊಳ್ಳದವರಾದರು. ಆದರೆ, ಸದಾ ಭೂಪತಿ ಎನ್ನಿಸಿ ಭೂಮಿಯ ಪತಿಯಾದವನು ಸಾಕ್ಷಾತ್ ಭಗವಂತನಾದ ಶ್ರೀಹರಿ ಮಾತ್ರ ಎಂಬುದು ಇಲ್ಲಿಯ ಭಾವ. ಮೋಹ ಎಂದರೆ ಅಧರ್ಮಕಾಮಿತಾ ಎಂದರ್ಥ.

೨. ಚಕ್ರವರ್ತಿಗಳಾಗಿ ರಾಜ್ಯವಾಳಿದವರಲ್ಲಿ ಆರು ಜನ ಪ್ರಮುಖರು, ಅದರಂತೆ ಮಹಾರಾಜರೆನ್ನಿಸಿದವರು ೧೬ ಜನ.

೩. ಇಲ್ಲಿ ಆರು ಜನರು ಎಂದರೆ ಕಲಿಯುಗದಲ್ಲಿ ಶಕಪುರುಷರು ಎಂದು ಖ್ಯಾತರಾದ ಹಸ್ತಿನಾವತಿಯಲ್ಲಿ ಯುಧಿಷ್ಠಿರ, ಉಜ್ಜೈನಿಯಲ್ಲಿ ವಿಕ್ರಮ, ಪ್ರತಿಷ್ಠಾನನಗರದಲ್ಲಿ ಶಾಲಿವಾಹನ, ವೈತರಣೀ ತೀರದಲ್ಲಿ ವಿಜಯಾಭಿನಂದನ, ಕಾವೇರೀ, ನಾಗಾರ್ಜುನ ಹಾಗೂ ಗೌಡದೇಶದಲ್ಲಿ ಕಲ್ಕಿಭೂಪ ಎಂಬ ಆರು ಜನರು ಎಂದು ತಿಳಿಯಬಹುದು.

೪. ಹದಿನಾರು ಜನ ರಾಜರ ವಿವರ ಶ್ರೀಮನ್ಮಹಾಭಾರತದಲ್ಲಿ ಬಂದಿದೆ. ಸೃಂಜಯ, ಸುಹೋತ್ರ, ಪೌರವ, ಶಿಬಿ, ಶ್ರೀರಾಮ, ಭಗೀರಥ, ದಿಲೀಪ, ಮಾಂಧಾತ, ಯಯಾತಿ, ಅಂಬರೀಷ, ಶಶಬಿಂದು, ಗಯ, ರಂತಿದೇವ, ಭರತ, ಪೃಥು ಹಾಗೂ ಪರಶುರಾಮ ಎಂಬುದಾಗಿ ದ್ರೋಣಪರ್ವದಲ್ಲಿ ಶ್ರೀವೇದವ್ಯಾಸರು ಯುಧಿಷ್ಠಿರನಿಗೆ ತಿಳಿಸಿದ ವಿವರ.

೫. ಇನ್ನು ಬರಿ ರಾಜರು ಎನ್ನಿಸಿದವರು ಮಾಂಧಾತ, ನಹುಷ, ಸಗರ, ಭರತ, ಮೊದಲಾದ ಅನೇಕರು. ಆದರೆ, ಅವರಾರು ಇಂದು ಜೀವಂತವಾಗಿಲ್ಲ. ಇನ್ನು ಅಧಿಕಾರದಲ್ಲಂತೂ ಇಲ್ಲವೇ ಇಲ್ಲ. ಹೀಗೆ ರಾಜ ಪದವಿಯಂತಹ ಅಮೋಘಪದವಿಯನ್ನು ಹೊಂದಿದ್ದು ಸಹ ಅವರು ಇಂದು ಭೂಪತಿ ಎನ್ನಿಸಿಲ್ಲ.

೬. ಆದರೆ, ಭೂವರಾಹ ರೂಪದಿಂದ ಭೂಮಿಯನ್ನು ಪ್ರಳಯೋದಕದಿಂದ ಮೇಲೆತ್ತಿದವನು ಶ್ರೀಹರಿ. ವಿಷ್ಣುಕೂರ್ಮ ಎಂಬ ಎರಡು ರೂಪಗಳಿಂದ ಬ್ರಹ್ಮಾಂಡ ಹೊತ್ತವನೂ ಶ್ರೀಹರಿ. ಶ್ರೀಕೃಷ್ಣರಾಮಾದಿ ರೂಪಗಳಿಂದ ಭೂಭಾರವನ್ನು ಪರಿಹರಿಸಿ ಕಾಪಾಡಿದವನೂ ಶ್ರೀಹರಿ. ಇನ್ನು ಆಳುವ ರಾಜರಲ್ಲಿ ಸ್ವತಃ ತಾನು ವಿಭೂತಿ ರೂಪದಿಂದ ನೆಲೆಸಿದ್ದು ನಿಜ ಅರ್ಥದಲ್ಲಿ ಭೂಪತಿಯಾದ ಶ್ರೀಹರಿಯೇ. ಆದ್ದರಿಂದ ನಿಜಕ್ಕೂ ಸಹ ಭೂದೇವಿಯ ಪತಿಯಾಗಿ ಮಾನ್ಯನಾಗಿ ನಿತ್ಯ ಪೂಜ್ಯನಾದವನು ಶ್ರೀಹರಿಯೇ. ಅಂತಹ ಶ್ರೀಹರಿಯು ಸದಾ ನಮ್ಮನ್ನು ಪರಿಪಾಲಿಸಲಿ.

೭. ಶ್ರೀಮದ್ಭಾಗತ ದ್ವಾದಶಸ್ಕಂದದಲ್ಲಿ ತಾವು ಭೂಪತಿಗಳೆಂಬ ರಾಜರ ಭ್ರಮೆ ಹಾಗೂ ನಿಜವಾದ ಭೂಪತಿ ಶ್ರೀಹರಿ ಒಬ್ಬನೇ ಎಂಬ ತಾತ್ತ್ವಿಕ ಸಂಗತಿ ನಿರೂಪಿತವಾಗಿದ್ದು ಶ್ರೀಕನಕದಾಸರ ಈ ಮಾತು ಅದರ ಒಟ್ಟು ಸಾರದಂತಿದೆ[1].

---

೧. ರಾಜನ್ನೇತೇ ಮಯಾ ಪ್ರೋಕ್ತಾ ನರದೇವಾಸ್ತಥಾ ಪರೇ ।
ಭೂಮೌ ಮಮತ್ವಂ ಕೃತ್ವಾಽಂತೇ ಹಿತ್ವೇಮಾಂ ನಿಧನಂ ಗತಾಃ ॥
ಕೃಮಿವಿಡ್ಭಸ್ಮಸಂಜ್ಞಾಂತೇ ರಾಜನಾಮ್ನೋಽಪಿ ಯಸ್ಯ ಚ ।
ಭೂತಧ್ರುಜ್ ಮನುತೇ ಸ್ವಾರ್ಥಂ ಕಿಂ ವೇದ ನಿರಯೋ ಯತಃ ॥
ಕಥಂ ಸೇಯಮಖಂಡಾ ಭೂಃ ಪೂರ್ವೈರ್ಮತ್ಪುರುಷೈರ್ಧೃತಾ ।
ಮತ್ಪುತ್ರಸ್ಯ ಚ ಪೌತ್ರಸ್ಯ ಮತ್ಪೂರ್ವಾ ವಂಶಜಸ್ಯ ಚ ॥
ತೇಜೋಽಬನ್ನಾತ್ಮಕಂ ಕಾಯಂ ಗೃಹೀತ್ವಾಽಽತ್ಮತಯಾ ಮುಧಾ ।
ಮಹೀಂ ಮಮತಯಾ ಚೋಭೌ ಹಿತ್ವಾಽಂತೇಽದರ್ಶನಂ ಗತಾಃ ॥
ಯೇಯೇ ಭೂಪತಯೋ ರಾಜನ್ ಭುಂಜತೇ ಭುವಮೋಜಸಾ ।
ಕಾಲೇನ ತೇ ಕೃತಾಃ ಸರ್ವೇ ಕಥಾಮಾತ್ರಾಃ ಕಥಾಸು ಚ ॥ -(೧೨/೨/೪೦-೪೪)
ದೃಷ್ಟ್ವಾಽಽತ್ಮನಿಜಯವ್ಯಗ್ರಾನ್ ನೃಪಾನ್ ಹಸತಿ ಭೂರಿಯಮ್ ।
ಅಹೋ ಮಾಂ ವಿಜಿಗೀಷಂತಿ ಮೃತ್ಯೋಃ ಕ್ರೀಡನಕಾ ನೃಪಾಃ ॥
ಕಾಮ ಏಷ ನರೇಂದ್ರಾಣಾಂ ಮೋಘಃ ಸ್ಯಾದ್ವಿದುಷಾಮಪಿ ।
ಜಲಫೇನೋಪಮೇ ಪಿಂಡೇ ಯೇ ವಿಸ್ರಂಭಿತಾ ನೃಪಾಃ ॥

## ೫೩. ಜಗದಧ್ಯಕ್ಷ ರಕ್ಷಿಸು

ಭಾರಕರ್ತನು ನೀನು ಬಹು ಸಂ-
ಸಾರಿಯೆಂಬುದ ನಿಗಮತತಿ
ಕೈವಾರಿಸುತ್ತಿದೆ ದಿವಿಜಮನುಜಭುಜಂಗರೊಳಗಿನ್ನು।
ಆರಿಗುಂಟು ಸ್ವತಂತ್ರ ನಿನ್ನಂ-
ತಾರು ಮುಕ್ತಿಯನೀವ ಸದ್ಗುರು-
ವಾರು ಜಗದಧ್ಯಕ್ಷ ರಕ್ಷಿಸು ನಮ್ಮನನವರತ ॥ ೫೩ ॥

ಅ: 'ಭಾರವನ್ನು ಹೊತ್ತವನು, ಭಾರವನ್ನು ಪರಿಹರಿಸುವವನು ನೀನೇ ಆಗಿರುವಿ. ನೀನು ವಿಶ್ವಕುಟುಂಬಿ' ಎಂಬುದನ್ನು ವೇದಗಳ ರಾಶಿ ಹಾಡಿ ಹೊಗಳುತ್ತಿದೆ. ದೇವತೆಗಳಲ್ಲಾಗಲಿ, ಮನುಜರಲ್ಲಾಗಲಿ, ನಾಗಗಳಲ್ಲಾಗಲಿ ಯಾರೂ ಸಹ ಸ್ವಾತಂತ್ರವನ್ನು ಹೊಂದಿದವರಲ್ಲ.

---

ಪೂರ್ವಂ ನಿರ್ಜಿತ್ಯ ಷಡ್ವರ್ಗಂ ಜೇಷ್ಯಾಮೋ ರಾಜಮಂತ್ರಿಣಃ।
ತತಃ ಸಚಿವಪೌರಾಪ್ತಕರೀಂದ್ರಾನಥ ಕಂಟಕಾನ್ ॥
ಏವಂ ಕ್ರಮೇಣ ಜೇಷ್ಯಾಮಃ ಪೃಥ್ವೀಂ ಸಾಗರಮೇಖಲಾಮ್ ।
ಇತ್ಯಾಶಾಬದ್ಧಹೃದಯಾ ನ ಪಶ್ಯಂತ್ಯಂತಿಕೇಽಂತಕಮ್ ॥
ಸಮುದ್ರಾವರಣಾಂ ಜಿತ್ವಾ ಮಾಂ ವಿಶಂತ್ಯಬ್ಧಿಮೋಜಸಾ।
ಕಿಯದಾತ್ಮಜಯಸ್ಯೈತನ್ಮುಕ್ತಿರಾತ್ಮಜಯೇ ಫಲಮ್ ॥
ಯಾಂ ವಿಸೃಜ್ಯೈವ ಮನವಸ್ತತ್ಸುತಾಶ್ಚ ಕುರೂದ್ವಹ।
ಗತಾ ಯಥಾಗತಂ ಯುದ್ಧೇ ತಾಂ ಮಾಂ ಜೇಷ್ಯಂತ್ಯಬುದ್ಧಯಃ॥
ಮತ್ಕೃತೇ ಪಿತೃಪುತ್ರಾಣಾಂ ಭ್ರಾತೃಣಾಂ ಚಾಪಿ ವಿಗ್ರಹಃ।
ಜಾಯತೇ ಹ್ಯಸತಾಂ ರಾಜ್ಯೇ ಮಮತಾಬದ್ಧಚೇತಸಾಮ್ ॥
ಮಮೈವೇಯಂ ಮಹೀ ಕೃತ್ಸ್ನಾ ನ ತೇ ಮೂಢೇತಿ ವಾದಿನಃ।
ಸ್ಪರ್ಧಮಾನಾ ಮಿಥೋ ಘ್ನಂತಿ ಮ್ರಿಯಂತೇ ಮತ್ಕೃತೇ ನೃಪಾಃ॥
ಪೃಥುಃ ಪುರೂರವಾ ಗಾಧಿರ್ಭರತೋ ನಹುಷೋಽರ್ಜುನಃ।
ಮಾಂಧಾತಾ ಸಗರೋ ರಾಮಃ ಖಟ್ವಾಂಗೋ ಧುಂಧುಹಾ ರಘುಃ॥
ತೃಣಬಿಂದುರ್ಯಯಾತಿಶ್ಚ ಶರ್ಯಾತಿಃ ಶಂತನುರ್ಗಯಃ।
ಭಗೀರಥಃ ಕುವಲಯಾಶ್ವಃ ಕಕುತ್ಸ್ಥೋ ನೈಷಧೋ ನೃಪಃ॥
ಹಿರಣ್ಯಕಶಿಪುರ್ವೃತ್ರೋ ರಾವಣೋ ಲೋಕರಾವಣಃ।
ನಮುಚಿಃ ಶಂಬರೋ ಭೌಮೋ ಹಿರಣ್ಯಾಕ್ಷೋಽಥ ತಾರಕಃ॥
ಅನ್ಯೇ ಚ ಬಹವೋ ದೈತ್ಯಾ ರಾಜಾನೋ ಯೇ ಪ್ರಜೇಶ್ವರಾಃ।
ಸರ್ವೇ ಸರ್ವವಿದಃ ಶೂರಾಃ ಸರ್ವೇ ಸರ್ವಜಿತೋಽಜಿತಾಃ॥
ಮಮತಾಂ ಮಯ್ಯವರ್ತನ್ತ ಕೃತ್ವೋಚ್ಚೈರ್ಮರ್ತ್ಯಧರ್ಮಿಣಃ।
ಕಥಾವಶೇಷಾಃ ಕಾಲೇನ ಹ್ಯಕೃತಾರ್ಥಾಃ ಕೃತಾ ಅಹೋ॥ – (೧೨/೩/೧-೧೩)

**ನೀನೊಬ್ಬನೇ ಸ್ವತಂತ್ರನು, ನಿನ್ನಂತೆ ಮುಕ್ತಿಯನ್ನು ಯಾರು ನೀಡುವರು, ಸದ್ಗುರುವಾಗಿ ಯಾರು ಇರುವರು? ಜಗತ್ತಿನ ಅಧ್ಯಕ್ಷನೂ ನೀನೇ. ಅಂತಹ ಶ್ರೀಹರಿಯೇ! ನಮ್ಮನ್ನು ಸದಾ ರಕ್ಷಿಸು.**

ವಿ: ೧. ಶ್ರೀಹರಿಯು ಭಾರಕರ್ತ ಎಂದರೆ, ಮೇಲ್ನೋಟಕ್ಕೆ ಭಾರವನ್ನು ಉಂಟುಮಾಡುವವನು ಎಂದರ್ಥ. ಕೃತಿ ಛೇದನೇ ಎಂಬ ಧಾತುವಿನಿಂದ ಭಾರ ಪರಿಹರಿಸುವನು ಎಂಬ ಮುಖ್ಯಾರ್ಥ ಲಭಿಸುವುದು. ಇದರಿಂದ ಸಂಸಾರದ ಭಾರವನ್ನೇ ಪರಿಹರಿಸುವ ಮಹನೀಯ ಶ್ರೀಹರಿ ಎಂದರ್ಥವಾಗುವುದು.

೨. ಭಾರ ಎಂದರೆ ಸಾರ ಎಂದೂ ಅರ್ಥವಿದೆ. ಮಹಾಭಾರತ ಎಂಬಲ್ಲಿ ಹೇಗೋ ಹಾಗೆ. ಈ ಅರ್ಥದಲ್ಲಿ ಜೀವನಕ್ಕೆ ಭಾರವನ್ನು, ಸಾರವನ್ನು ತೂಕವನ್ನು ತಂದುಕೊಡುವವನು ಭಗವಂತನಾದ ಶ್ರೀಹರಿ ಎಂದು ಅರ್ಥವಾಗುವುದು; ದಿವಿಜ – ದೇವತೆ; ಭುಜಂಗ –ಸರ್ಪ.

೩. ಶ್ರೀಹರಿಯು ಬಹುಸಂಸಾರಿ; ಎಂದರೆ, ವಿಶ್ವಕುಟುಂಬಿ ಎಂದರ್ಥ. ಮಹಾಲಕ್ಷ್ಮೀ ಅವನ ಪತ್ನಿ; ಬ್ರಹ್ಮವಾಯುಗಳು ಅವನ ಪುತ್ರರು. ಶಿವಾದಿ ದೇವತೆಗಳು ಅವನ ಪೌತ್ರರು. ಉಳಿದವರೆಲ್ಲ ಅವನ ಪರಿವಾರ. ಬ್ರಹ್ಮಾಂಡವೇ ಅವನ ಮಂದಿರ. ಹೀಗೆ ಅವನು ವಿಶ್ವಕುಟುಂಬಿಯಾದವನು ಎಂಬುದು ವೇದಾದಿಶಾಸ್ತ್ರಗಳಿಂದ ಸಿದ್ಧವಾಗಿರುವ ವಿಚಾರ. ಈ ಬಗ್ಗೆ ಹೆಚ್ಚಿನ ವಿವರಗಳು: '**ಸಿರಿಯು ಕುಲಸತಿ ಬ್ರಹ್ಮ ಹೆಮ್ಮಗ ರುದ್ರ ಮೊಮ್ಮಗ**' ಎಂಬ ಪದ್ಯದ ವಿವರಣೆಯಲ್ಲಿ ಬಂದಿವೆ.

೪. ಶ್ರೀಹರಿಯ ಹೊರತು ಬೇರೆ ಯಾವುದೇ ದೇವತೆಯಾಗಲಿ, ಇತರ ಯಾರೇ ಆಗಲಿ ಸ್ವತಂತ್ರರಲ್ಲ. ಅವನೊಬ್ಬನೆ ಸ್ವತಂತ್ರನಾದ ಪರದೇವತೆ. ಇದು, '**ಸ್ವತಂತ್ರೋ ಭಗವಾನ್ ವಿಷ್ಣುಃ**' ಎಂಬ ಶ್ರೀಮದಾಚಾರ್ಯರ ತತ್ತ್ವಸಂಖ್ಯಾನದ ಸಾರಭೂತವಾದ ವಿವರ.

೫. ಮುಕ್ತಿ ನೀಡುವ ದೇವತೆಯಂತೂ ಶ್ರೀಹರಿ ಒಬ್ಬನೇ. ಹರಿವಂಶದ ಘಂಟಾಕರ್ಣ, ಕರ್ಣ ಮೊದಲಾದ ಪಿಶಾಚಿಗಳ ಪ್ರಸಂಗದಲ್ಲಿ ಮೋಕ್ಷ ನೀಡುವವನು ಶ್ರೀಹರಿ ಒಬ್ಬನೇ ಎಂಬ ರುದ್ರದೇವರ ಮಾತು: '**ಸರ್ವೇಷಾಂ ಮುಕ್ತಿದಾತಾ ಹಿ ವಿಷ್ಣುರೇವ ನ ಸಂಶಯಃ**' ಹಾಗೂ ಮುಚುಕುಂದರಾಜನ ಪ್ರಸಂಗದಲ್ಲಿನ, **ವರಂ ವೃಣೀಷ್ವ ಭದ್ರಂ ತೇ ಋತೇ ಕೈವಲ್ಯಮಾತ್ಮನಃ। ಏಕ ಏವೇಶ್ವರಸ್ತಸ್ಯ ಭಗವಾನ್ ವಿಷ್ಣುರವ್ಯಯಃ**[೧] ॥ ಎಂಬ ಮಾತು ಮೊದಲಾದ ಅನೇಕ ಆಧಾರಗಳು ಇದನ್ನು ಸಾಧಿಸುವವು.

೬. ಶ್ರೀಹರಿಯು ಸದ್ಗುರು ಎಂದರೆ, ಎಲ್ಲರಿಗೂ ಮುಖ್ಯ ಗುರು, ಉತ್ತಮ ಗುರು ಅವನೇ. ವೇದವ್ಯಾಸಾದಿ ರೂಪಗಳಿಂದ ಮಹಾಭಾರತಾದಿ ಗ್ರಂಥಗಳನ್ನು ರಚಿಸುವವನು.

---

೧. ಶ್ರೀಮದ್ಭಾಗವತ (೧೦/೫೪/೨೦)

ವೇದವಿಭಾಗ ಮಾಡಿದವನು ಆಗಿಯು, ಉಪದೇಶಕರಾದ ದೇವತೆಗಳಿಗೂ ಉಪದೇಶಕನಾದ ಮೂಲಗುರುವಾಗಿಯು ಮತ್ತು ಉಪದೇಶಿಸುವ ಪ್ರತಿಯೊಬ್ಬರೊಳಗು ನೆಲೆಸಿದ್ದು ಮುಖ್ಯ ಗುರುವಾಗಿಯೂ, ಗ್ರಹಿಸುವ ಬುದ್ಧಿಯನ್ನು ಸಹ ಪ್ರೇರಿಸುವ ಮುಖ್ಯ ಪ್ರೇರಕನಾಗಿಯೂ ಶ್ರೀಹರಿಯೇ ಗುರುವಾಗಿರುವವನು ಎಂಬುದು ಇಲ್ಲಿಯ ಇನ್ನೊಂದು ಮುಖ್ಯ ತತ್ತ್ವ. ಸದ್ಗುರು ಎಂಬುದಕ್ಕೆ **'ಸದಿತಿ ಪ್ರಾಣಃ'** ಎಂಬ ಉಪನಿಷತ್ತಿನ ಮಾತಿನ ಹಿನ್ನೆಲೆಯಲ್ಲಿ ಲೋಕಗುರುವಾದ ಮುಖ್ಯಪ್ರಾಣನಿಗೂ ಗುರು ಎಂಬ ಅರ್ಥವೂ ಉಚಿತವೆನ್ನಿಸುವುದು.

೭. ಜಗದಧ್ಯಕ್ಷ ಎಂದರೆ ಜಗತ್ತಿನ ಸಕಲಕಾರ್ಯಗಳನ್ನು ಸಹ ನೇಮಿಸುವವನು. ಪ್ರತಿಯೊಬ್ಬರ ಪ್ರತಿಕಾರ್ಯಕ್ಕೂ ಸಹ ಮುಖ್ಯ ಸಾಕ್ಷಿಯಾದವನು ಎಂದರ್ಥ. ಇದು 'ಮಯಾಽಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್'[೧] ಎಂಬ ಭಗವದ್ಗೀತೆಯ ಅರ್ಥವಾಗಿದೆ.

*****

## ೫೪. ನಿನ್ನನುಮತವಿಡಿದು ನಂಬಿದೆನು ರಕ್ಷಿಸು

**ಗತಿವಿಹೀನರಿಗಾರು ನೀನೇ**
**ಗತಿ ಕಣಾ ಪತಿಕರಿಸಿ ಕೊಡು ಸ-**
**ದ್ಗತಿಯ ನೀನೆಲೆ ದೇವ ನಿನಗಪರಾಧಿ ನಾನಲ್ಲ।**
**ಶ್ರುತಿವಚನವಾಡುವುದು ಶರಣಾ-**
**ಗತರ ಸೇವಕನೆಂದು ನಿನ್ನನು-**
**ಮತವಿಡಿದು ನಂಬಿದೆನು ರಕ್ಷಿಸು ನಮ್ಮನನವರತ ॥ ೫೪ ॥**

**ಅ: ಗತಿ ಇಲ್ಲದವರಿಗೆ ಯಾರು ತಾನೆ ಗತಿ ಎನ್ನಿಸಿಯಾರು; ನೀನೆ ಗತಿ ಅಲ್ಲವೇ? ನೀನು ಕೃಪೆ ತೋರಿ ಸದ್ಗತಿಯನ್ನು ನೀಡು. ನೀನು ದೇವನಾದವನು, ನಾನು ನಿನಗೆ ಅಪರಾಧವೆಸಗಿದವನಲ್ಲ. ಶ್ರುತಿಯ ವಚನ ನಿನ್ನನ್ನು ಶರಣಾಗತರ ಸೇವಕ ಎಂದು ಕೊಂಡಾಡುವುದು. ನಿನಗೆ ಸಮ್ಮತವಾದ ದಾರಿಯನ್ನು ಹಿಡಿದು ನಿನ್ನನ್ನು ನಾನು ನಂಬಿರುವೆನು. ಶ್ರೀಹರಿಯೇ! ನೀನು ಸದಾ ನಮ್ಮನ್ನು ರಕ್ಷಿಸು.**

ವಿ: ೧. ಶ್ರೀಹರಿಯು ಸಕಲರಿಗೂ ಗತಿಯಾದವನು. ತನ್ನ ಭಕ್ತರನ್ನು ಪಾವನಗೊಳಿಸುವವನು. ಸರ್ವಸಮರ್ಥನಾದವನು. ಶರಣಾಗತರನ್ನು ಅನುಸರಿಸಿ ನಡೆಯುವವನು ಎಂಬ ವಿಷಯ ಇದರಲ್ಲಿ ನಿರೂಪಿತವಾಗಿದೆ.

---

೧. ಗೀತಾ (೯/೧೦)

೨. ಗತಿ ಇಲ್ಲದವರಿಗೆ ಶ್ರೀಹರಿಯೇ ಗತಿ, ಎಂದರೆ ಶ್ರೀಹರಿಯನ್ನೇ ಗತಿ ಎಂದು ನಂಬಿದವರನ್ನು ಶ್ರೀಹರಿಯು ನಿಶ್ಚಿತವಾಗಿಯೂ ರಕ್ಷಿಸುವನು ಎಂದರ್ಥ. ಇದು ಶ್ರೀಮದಾಚಾರ್ಯರ '**ಹರಿರೇವ ಜಗತ್ಪಿತೃಮಾತೃಗತಿಃ**' ಎಂಬುದರ ಭಾವವಾಗಿದೆ. ಅದರಂತೆ '**ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ। ತಸ್ಮಾತ್ ಕಾರುಣ್ಯಭಾವೇನ ರಕ್ಷ ರಕ್ಷ ಜನಾರ್ದನ॥**' ಎಂಬ ಪ್ರಾರ್ಥನೆಯ ಭಾವವೂ ಆಗಿದೆ; **ಪತಿಕರಿಸಿ** – ಸ್ವೀಕರಿಸಿ, ಅಂಗೀಕರಿಸಿ, ಕೃಪೆತೋರಿ.

೩. ಸದ್ಗತಿಯನ್ನು ನೀಡುವದು ಶ್ರೀಹರಿಯ ಮಹಾಮಹಿಮೆ. ಇತರ ದೇವತೆಗಳಿಗೆ ಅದರಲ್ಲಿ ಸ್ವಲ್ಪಮಾತ್ರವೂ ಸಹ ಶಕ್ತಿಯಿಲ್ಲ ಎಂಬುದು ವಿಶೇಷ ಪ್ರಮೇಯ:

**ವಿಷ್ಣುರ್ಹಿ ದಾತಾ ಮೋಕ್ಷಸ್ಯ ವಾಯುಶ್ಚ ತದನುಜ್ಞಯಾ।** – ಮ. ಭಾ. ತಾ. ನಿ

**ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್।**
**ಭವಾಮಿ ನ ಚಿರಾತ್ ಪಾರ್ಥ ಮಯ್ಯಾವೇಶಿತಚೇತಸಾಮ್॥** – ಗೀತಾ

೪. ಎಂತಹ ಪಾಪಿಗಳನ್ನೂ ಸಹ ಪಾವನಗೊಳಿಸುವುದು ಶ್ರೀಹರಿಯ ಮತ್ತೊಂದು ಮಹಿಮೆ. ಭಕ್ತರು ಮಾಡುವ ಪಾಪಗಳನ್ನು ಸಹಿಸುವುದು ಸಹ ಅವನ ಹಿರಿಮೆಯೇ! ಎಂಬುದು ಇನ್ನೊಂದು ಪ್ರಮೇಯ:

**ಪಾಪೋಽಹಂ ಪಾಪಕರ್ಮಾಽಹಂ ಪಾಪಾತ್ಮಾ ಪಾಪಸಂಭವಃ।**
**ಪಾಹಿ ಮಾಂ ಕೃಪಯಾ ದೇವ ಶರಣಾಗತವತ್ಸಲ॥**

೫. ಶ್ರೀಹರಿಯು ದೇವ ಎಂದರೆ ಕ್ರೀಡಾದಿಗುಣ ವಿಶಿಷ್ಟನಾದವನು. ಮೋಕ್ಷ ನೀಡುವುದು, ಪಾಪಕಳೆಯುವುದು ಮೊದಲಾದ ಅಸಾಧಾರವಾದ ಸಾಮರ್ಥ್ಯ ಅವನಿಗೆ ಕೇವಲ ಲೀಲೆ ಎಂಬ ಭಾವ ಇದರಿಂದ ಸೂಚಿತ.

೬. 'ನಿನಗಪರಾಧಿ ನಾನಲ್ಲ' ಎಂದರೆ ದೇವರನ್ನು ತಪ್ಪಾಗಿ ತಿಳಿಯುವ ತಪ್ಪನ್ನು ಮಾಡದವನು ಎಂದರ್ಥ. ಇತರ ಎಲ್ಲ ಪಾಪಗಳಿಗಿಂತಲೂ ಮಿಗಿಲಾದದ್ದು ದೇವರ ಬಗ್ಗೆ ತಪ್ಪಾಗಿ ತಿಳಿಯುವುದು. ಅಂತಹ ಪಾಪವನ್ನು ಅಜ್ಞಾನವಶಾತ್ ಹಾಗೆ ತಿಳಿಯುವುದು ಒಂದು ಹಂತದಲ್ಲಿ ಜೀವರು ಮಾಡುವುದು ಸಹಜ. ಆದರೆ, ತಿಳುವಳಿಕೆ ಬರುತ್ತಾ ಹೋದಂತೆ ಆ ತಪ್ಪು ಪರಿಹಾರವಾಗತೊಡಗುವುದು: ಶ್ರೀಪುರಂದರದಾಸರ ''**ಅಪರಾಧಿ ನಾನಲ್ಲ, ಅಪರಾಧ ಎನಗಿಲ್ಲ**'' ಎಂಬ ಕೃತಿಯ ಹಿನ್ನೆಲೆಯಲ್ಲಿ ಇದರ ಭಾವ ಇನ್ನಷ್ಟು ಸ್ಪಷ್ಟವಾಗುವುದು.

೭. ಶ್ರೀಹರಿಯು ಶರಣಾಗತವತ್ಸಲ ಎಂದು ಕೊಂಡಾಡಿರುವುದು ಅವನನ್ನು ಶರಣು ಹೊಂದಲು ಮುಖ್ಯವಾದ ಕಾರಣ. ಪರಿಪೂರ್ಣನಾದ ಅವನಿಗೆ ಬೇರಾರಿಂದಲೂ ಸಹ ಯಾವುದೇ ಕಾರ್ಯ ಆಗಬೇಕಿಲ್ಲ, ಆದರೆ, ಶರಣಾಗತವತ್ಸಲನಾದ ಅವನು ಕೇವಲ ಕರುಣೆಯಿಂದ ತನ್ನ ಭಕ್ತರನ್ನು ಪಾಲಿಸುವನು ಎಂಬುದು ವಿಶೇಷ.

೮. '**ನಿನ್ನ ಅನುಮತವಿಡಿದು**' ಎಂದರೆ ಶ್ರೀಹರಿಗೆ ಸಮ್ಮತವಾದಂತಹ ತತ್ತ್ವವನ್ನು ಅವನು ಉಪದೇಶಿಸಿದ ಭಗವದ್ಗೀತಾದಿ ಗ್ರಂಥಗಳಿಂದ ತಿಳಿದು ಅನುಸರಿಸಿ ನಡೆಯುವುದು ಎಂದರ್ಥ. ಇದು ಈ ಕೆಳಗಿನ ಗೀತಾಶ್ಲೋಕದ ಅರ್ಥವಾಗಿದೆ:

**ಯೇ ಮೇ ಮತಮಿದಂ ನಿತ್ಯಮನುತಿಷ್ಠಂತಿ ಮಾನವಾಃ।**
**ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ತೇಽಪಿ ಕರ್ಮಭಿಃ॥**

**- ಗೀತಾ (೩/೩೧)**

೯. '**ನಿನಗಪರಾಧಿ ನಾನಲ್ಲ**' ಎಂಬ ಇಲ್ಲಿಯ ಮಾತು ಶ್ರೀಪುರಂದರದಾಸರ '**ಅಪರಾಧಿ ನಾನಲ್ಲ ಅಪರಾಧವೆನಗಿಲ್ಲ**' ಎಂಬ ಕೀರ್ತನೆಯ ಸಾರದಂತಿದೆ:

ಅಪರಾಧಿ ನಾನಲ್ಲ ಅಪರಾಧವೆನಗಿಲ್ಲ।
ಕಪಟ ನಾಟಕ ಸೂತ್ರಧಾರಿ ನೀನೆ ॥ ಪ ॥
ನೀನು ಆಡಿಸಲು ಜಡ ಒನಕೆಯಬೊಂಬೆ
ಏನು ಬಲ್ಲದು ಬೇರೆ ಕೃತಿಯನೊಂದ॥
ನೀನಿಟ್ಟ ಸೂತ್ರದಿಂದಲುಗೆ ಕೈಕಾಲುಗಳು।
ನೀನೆ ಮಗ್ಗಿಸಲು ಮಗ್ಗುವ ದೇಹ ತಾನಾಗೆ ॥ ೧ ॥
ಒಂದೆಂಟು ಬಾಗಿಲುಗಳುಳ್ಳ ಪಟ್ಟಣಕೆ ತನ-
ಗೆಂದು ಇಪ್ಪತ್ತಾರು ಮನೆಯಾಳ್ಗಳ॥
ತಂದು ಕಾವಲುನಿಲಿಸಿ ಎನ್ನ ನೀನೊಳಗಿಟ್ಟು
ಮುಂದೆ ಭವಭವದಿ ದಣಿಪುದು ನಿನ್ನದನ್ಯಾಯ ॥ ೨ ॥
ಯಂತ್ರವಾಹಕ ನೀನೆ ಒಳಗೆ ಇದ್ದೂ ಎನ್ನ-ಸ್ವ
ತಂತ್ರನೆಂದೆನಿಸಿ ಕೊಲಿಸುವರೆ ಹೇಳೊ॥
ಕಂತುಪಿತ ಲಕ್ಷ್ಮೀಶ ಎಂತಾದಡಂತಹುದ
ನಂತ ಮೂರುತಿ ನಮ್ಮ ಪುರಂದರವಿಠಲ ॥ ೩ ॥

*****

## ೫೫. ನಿನ್ನ ಸಮಾಗಮವ ಬಯಸುವೆನು ರಕ್ಷಿಸು

**ಈಗಲೋ ಈ ದೇಹವಿನ್ನಾ-**
**ವಾಗಲೋ ನಿಜವಲ್ಲವೆಂಬುದ-**
**ನೀಗ ತಿಳಿಯದೆ ಮಡದಿ ಮನೆ ಮನೆವಾರ್ತೆಯೆಂದೆನುತ।**
**ರಾಗಲೋಭದಿ ಮುಳುಗಿ ಮುಂದಣ**
**ತಾಗುಬಾಗುಗಳರಿಯೆ ನಿನ್ನ ಸ-**
**ಮಾಗಮವ ಬಯಸುವೆನು ರಕ್ಷಿಸು ನಮ್ಮನನವರತ ॥ ೫೫ ॥**

**ಅ. ಈ ದೇಹ ಈಗಲೋ ಇನ್ನಾವಾಗಲೋ ಹೋಗುವಂತಹುದು. ಇದು ಸರ್ವಥಾ ಶಾಶ್ವತವಲ್ಲ ಎಂಬುದನ್ನು ಗಮನಿಸದೇ ಹೆಂಡತಿ, ಮನೆ, ಮನೆ ಕೆಲಸ ಎಂದು ಭಾವಿಸಿ ಕಾಮ, ಲೋಭಗಳಿಗೆ ಒಳಗಾಗಿ ಮುಂದಿನ ಆಗುಹೋಗುಗಳನ್ನು ತಿಳಿಯದವನು ನಾನು; ನಿನ್ನ ಸಮಾಗಮವನ್ನು ಬಯಸಿರುವೆನು. ಶ್ರೀಹರಿಯೇ! ನೀನು ಸದಾ ನಮ್ಮನ್ನು ರಕ್ಷಿಸು.**

ವಿ.: ೧. ದೇಹವು ಅನಿತ್ಯ. ಅದರಂತೆ ದೇಹಕ್ಕೆ ಸಂಬಂಧಿಸಿದ ಪತ್ನಿ ಮೊದಲಾದವರು ಸಹ ಅನಿತ್ಯ. ಶ್ರೀಹರಿಯೊಬ್ಬನೆ ನಿತ್ಯ ಸಂಬಂಧಿಯಾದವನು. ಅವನೊಂದಿಗೆ ಇರುವುದೇ ನಿಜವಾದ ಪುರುಷಾರ್ಥ ಎಂದು ಭಾವ[1]. ಇದು '**ದ್ವಾಸುಪರ್ಣಾ ಸಯುಜಾ ಸಖಾಯಾ**'[2] ಎಂಬ ಉಪನಿಷದ್ವಾಣಿಯ ಭಾವವೂ ಆಗಿದೆ.

೨. ಇಲ್ಲಿ 'ನಿಜವಲ್ಲ' ಎಂಬುದಕ್ಕೆ ಸುಳ್ಳು ಎಂಬ ಅರ್ಥವಲ್ಲ, ಅನಿತ್ಯ, ಅಶಾಶ್ವತ ಎಂದರ್ಥ. ಇದು ಶ್ರೀಮದ್ಭಾಗವತದಲ್ಲಿನ ಅನೇಕ[3] ಮಾತುಗಳ ವಿವರಣೆಯಂತಿರುವ ಪದ.

೩. ಈ ದೇಹ ಹೋಗುವುದು ನಿಶ್ಚಿತ: **ಜಾತಸ್ಯ ಹಿ ಧ್ರುವೋ ಮೃತ್ಯುಃ** (ಗೀತಾ). ಆದರೆ, ಅದು ಈಗಲೋ, ಆಗಲೋ ಎಂಬುದಷ್ಟೆ ಇಲ್ಲಿಯ ಪ್ರಶ್ನೆ. ಇದು ಶ್ರೀವಾದಿರಾಜಸ್ವಾಮಿಗಳ ಈ ಕೆಳಗಿನ ಪದ್ಯದ ವಿವರಣೆಯಂತಿದೆ:

ಈಗಲೋ ಇನ್ನ್ಯಾವಾಗಲೋ ಈ ತನುವು ಪೋಗದಿರದು
ಭೋಗದಾಸೆ ಬಿಡಿಸಯ್ಯ ನಾಗಶಯನ ನಳಿನನಯನ ॥ ಪ ॥
ಎಂಭತ್ತು ನಾಲ್ಕು ಲಕ್ಷ ಯೋನಿಗಳಲ್ಲಿ ಜನಿಸಿ ಬಂದೆ
ಅಂಬುಜಾಕ್ಷ ನೊಂದೆನಯ್ಯ ಅಂದು ಮಾಡಿದ ಅಘದಿಂದ
ಕುಂಭೀಪಾಕ ಮೊದಲಾದ ಕುತ್ಸಿತ ನರಕದಿ ಬಿದ್ದು
ಉಂಬೊ ದುಃಖವ ಬಿಡಿಸಯ್ಯ ಉದಧಿಶಯನ ಪುಣ್ಯಕಥನ ॥ ೧ ॥
ಓದಿ ಮರುಳಾದೆನಯ್ಯ ಓದನ ಮಾತ್ರಕೆ ಸಭೆಯೊಳ್
ವಾದಿಸುವೆ ವೇದಶಾಸ್ತ್ರ ಉಪನ್ಯಾಸಂಗಳನೆ ಮಾಳ್ಪೆ
ಕ್ರೋಧರಹಿತರಾಗಿ ಅವರು ಕೊಡಲು ಕೊಂಡಾಡುವೆನು
ಆದರಿಸದಿದ್ದರವರ ಬೈದು ಬರುವೆ ಖಿನ್ನನಾಗಿ ॥ ೨ ॥

---

೧. ಅನಿತ್ಯಸಂಬಂಧಯುತಾ ಪುತ್ರಾದ್ಯಾ ನಿತ್ಯಯುಗ್ ಹರಿಃ। – ಭಾ.ತಾ. (೬/೧೬/೯)
೨. ಅಥರ್ವಣೋಪನಿಷತ್ (೩/೧)
೩. ಆತ್ಮಸ್ತ್ರ್ಯಪತ್ತಸುಹೃದೋ ಬಲಮೃದ್ಧಕೋಶಮಂತಃಪುರಂ ಪರಿವಿಹಾರಭುವಶ್ಚ ರಮ್ಯಾಃ।
ಭೂಮಂಡಲಂ ಜಲಧಿಮೇಖಲಮಾಕಲಯ್ಯ ಕಾಲೋಪಸೃಷ್ಟಮಿತಿ ಸ ಪ್ರಯಯೌ ವಿಶಾಲಾಮ್ ॥
– ಶ್ರೀಮದ್ಭಾಗವತ (೪/೧೪/೧೬)
ಗೃಹೇಷು ದಾರೇಷು ಸುತೇಷು ಬಂಧುಷು ದ್ವಿಪೋತ್ತಮಸ್ಯಂದನವಾಜಿಪತ್ತಿಷು।
ಅಕ್ಷಯ್ಯರತ್ನಾಭರಣಾಯುಧಾದಿಷ್ವನಂತಭೋಗೇಷ್ವಕರೋದಸನ್ಮತಿಮ್ ॥
– ಶ್ರೀಮದ್ಭಾಗವತ (೯/೬/೧೫)

ದೇಶ ದೇಶಂಗಳಿಗೆ ಧನದಾಸೆಗಾಗಿ ಪೋಗಿ ಪೋಗಿ
ಬೇಸರದೆ ಕಂಡವರ ಕಾಡಿ ಬೇಡಿ ಬಳಲಿಸುವೆ
ಕಾಸಿನ ಲಾಭವನು ಕಾಣೆ ಗಾಸಿಯಾದೆನಯ್ಯೋ ಶ್ರೀನಿ-
ವಾಸ ನಿನ್ನ ಪೂಜಿಸದೆ ಮೋಸಹೋದೆನಯ್ಯ ನಾನು ॥ ೩ ॥
ಸ್ನಾನ ಮೌನಂಗಳನು ಮಾಳ್ಪೆ ಸಕಲ ಜನರ ಮುಂದೆ
ಮಾನವರು ಇಲ್ಲದಾಗ ಮೌನವಿಲ್ಲ ಮಂತ್ರವಿಲ್ಲ
ಜ್ಞಾನ ಪೇಳುವೆ ಪೋಗಿ ಧನವ ಕೊಟ್ಟವರಿಗೆ
ಧ್ಯಾನಿಸದೆ ಪೊಟ್ಟೆಯನ್ನು ನಾನು ಪೊರೆವೆ ನಿನ್ನ ಮರೆವೆ ॥ ೪ ॥
ಹೆಣ್ಣು ಮಣ್ ಹೊನ್ನಾಸೆ ಬಿಡದು ಪುಣ್ಯಕೆ ಮನ ಒಡಂಬಡದು
ಎನ್ನದೆಂಬೊ ಮಮತೆ ತಗ್ಗದು ಧನ್ಯ ಜಗಕೆ ಶಿರವು ಬಗ್ಗದು
ನಿನ್ನ ವಾರ್ತೆಯ ಕರ್ಣ ಕೇಳದು ಅನ್ಯವಾರ್ತೆಗೆ ಹೊತ್ತು ಸಾಲದು
ಇನ್ನು ಹೇಸಿಕೆ ಮನಕೆ ಬಾರದು ಮುಂದಿನ ಗತಿ ಎನಗೆ ತೋರದು ॥ ೫ ॥
ನಂಬಿ ಕೆಟ್ಟೆನೊ ನಾರಿಯರ ಕುಟುಂಬಿಗಳ ಸಲಹಲೋಸುಗ
ತಿಂಬೆ ಹೀನರ ಮನೆಯೊಳನ್ನವ ನಂಬದೆ ನಿನ್ನ ಚರಣವನ್ನು
ಹಂಬಲಿಸಿ ವಿಷಯಗಳಿಗೆ ಡಂಭನಾಗಿ ವ್ಯರ್ಥ ಕೆಟ್ಟೆ
ಕುಂಭಿಣಿಗೆ ಭಾರನಾದೆ ಕಂಬುಕಂಧರ ನಿನ್ನ ಮರೆದೆ ॥ ೬ ॥
ವೃದ್ಧನಾದೆನು ಪಲ್ಗಳೆಲ್ಲ ಬಿದ್ದವು ಕಣ್ಣು ಕಾಣಲಾರವು
ಎದ್ದು ನಿಲ್ಲಲಾರೆನಯ್ಯ ಉದ್ಧರಿಸೊ ಹಯವದನ
ತಿದ್ದು ಮನವ ನಿನ್ನ ಪಾದಪದ್ಮವ ನೆನೆವಂತೆ ಮಾಡೊ
ಪೊದ್ದಿದವರ ಪೊರೆವ ಕರುಣಾಸಿಂಧು ನೀನೇ ಎನಗೆ ಬಂಧು ॥ ೭ ॥

೪. ಇದು ನಿಜವಲ್ಲ ಎಂದರೆ ಮಾಯಾವಾದಿಗಳು ಹೇಳುವಂತೆ ಮಿಥ್ಯೆ ಎಂದರ್ಥವಲ್ಲ, ಅನಿತ್ಯ ಎಂದರ್ಥ. ಅಮಂಗಳ ಎಂದೂ ಅರ್ಥ. ಈ ದೇಹವು ನಿಜ ಎಂಬುದು ಅನುಭವ ಸಿದ್ಧವಾದ ವಿಚಾರವಾದ್ದರಿಂದ ಅದನ್ನು ಅಸತ್ಯ ಎಂದು ಶಾಸ್ತ್ರಗಳು ಸರ್ವಥಾ ಕರೆಯಲಾರವು. ಭಗವದ್ಗೀತೆಯ 'ಆಗಮಾಪಾಯಿನೋಽನಿತ್ಯಾಃ'(೨/೧೪) ಎಂಬ ಮಾತಿನಲ್ಲಿ ಈ ಭಾವ ಸ್ಪಷ್ಟವಾಗಿ ಬಂದಿದೆ.

೫. ಮಡದಿ, ಮನೆ ಮೊದಲಾದವುಗಳ ಬಗ್ಗೆ ಸಲ್ಲದ ಅಭಿಮಾನಕ್ಕೊಳಗಾಗಿ ಜೀವ ಅವುಗಳತ್ತ ಹೆಚ್ಚು ಗಮನಹರಿಸುತ್ತಾ ಮುಖ್ಯ ಸ್ವಾಮಿಯಾದ ಶ್ರೀಹರಿಯನ್ನು ಮರೆತು ಬಿಡುವನು. ಆದರಿಂದಾಗಿ ಸಕಲ ವಿಧವಾದ ಅನರ್ಥಕ್ಕೆ ಗುರಿಯಾಗುವನು. ಅವುಗಳ ಬಗ್ಗೆ ಅನಿತ್ಯ ಎಂಬ ಎಚ್ಚರವನ್ನು ಹೊಂದಿ ಸೂಕ್ತ ರೀತಿಯಲ್ಲಿ ಅವುಗಳ ಚಿಂತನೆಯನ್ನು ಮಿತಿಗೊಳಿಸಿ ಶ್ರೀಹರಿಯನ್ನೇ ಸದಾ ಸ್ಮರಿಸುವುದು ಉದ್ಧಾರದ ಹಾದಿ ಎಂದರ್ಥ. ಇದು ಶ್ರೀಮದ್ಭಾಗವತದ ಈ ಕೆಳಗಿನ ಮಾತಿನ ವಿವರಣೆಯಾಗಿದೆ:

ರಾಯಃ ಕಲತ್ರಂ ಪಶವಃ ಸುತಾದಯೋ
ಗೃಹಾ ಮಹೀಕುಂಜರಕೋಶಭೂತಯಃ।
ಸರ್ವೇಽರ್ಥಕಾಮಾಃ ಕ್ಷಣಭಂಗುರಾಯುಷಃ
ಕುರ್ವಂತಿಮರ್ತ್ಯಸ್ಯ ಕಿಯತ್ಪ್ರಿಯಂ ಚಲಾಃ ॥

೬. ಜೀವನು ಮನೆ ಮೊದಲಾದವುಗಳ ಬಗ್ಗೆ ಅನಗತ್ಯವಾದ ಪ್ರಾಶಸ್ತ್ಯವನ್ನು ಕೊಡುವನು ಎಂಬುದನ್ನು ತಿಳಿಸಲು ಮುಳುಗಿ ಎಂಬ ಪದವನ್ನು ಉಪಯೋಗಿಸಿರುವರು.

೭. ಇಂತಹ ಅವಿವೇಕ ಮುಂದಿನ ಅಪಾರವಾದ ಅನರ್ಥಕ್ಕೆ ಕಾರಣ ಎಂಬುದರ ಪರಿವೆ ಇಲ್ಲದಿರುವುದು ಇದಕ್ಕೆ ಕಾರಣ. 'ತಾಗುಬಾಗು'ಗಳು ಎಂದರೆ ಆಗುಹೋಗುಗಳು ಎಂದರ್ಥ. ಸತ್ಕಾರ್ಯದಿಂದ ಸತ್ಫಲ, ದುಷ್ಕಾರ್ಯದಿಂದ ದುಷ್ಫಲ ಎಂಬ ಎಚ್ಚರವನ್ನು ಹೊಂದದವರಿಗೆ ಮುಂದಿನ ಆಗುಹೋಗುಗಳು ತಿಳಿಯಲಾರವು ಎಂದರ್ಥ.

೮. ಶ್ರೀಹರಿಯ ಸಮಾಗಮವನ್ನು ಬಯಸುವುದು ಎಂದರೆ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಎಂಬ ನಾಲ್ಕು ಮುಕ್ತಿಗಳಲ್ಲಿ ಒಂದನ್ನು ಪಡೆಯುವುದು ಎಂದರ್ಥ. ಶ್ರೀಹರಿಯ ಜೊತೆಗೆ ಜೀವನು ಸದಾ ಇರುವನಾದರೂ ಆ ಬಗ್ಗೆ ಪರಿವೆ ಇಲ್ಲದಿದ್ದಾಗ ಇಲ್ಲದಿದ್ದಂತೆಯೇ ಸರಿ. ಆ ಪರಿವೆ ಉಂಟಾದಾಗ ಮಾತ್ರ ಅದು ನಿಜವಾದ ಸಮಾಗಮ ಎನ್ನಿಸುವುದು. ಶ್ರೀಹರಿಯ ಮಹಿಮೆಯನ್ನು ಶಾಸ್ತ್ರ ತತ್ತ್ವಗಳ ಹಿನ್ನೆಲೆಯಲ್ಲಿ ತಿಳಿದು ಹೃದಯದಲ್ಲಿ ನೆಲೆಸಿದ ಅವನನ್ನು ಸಾಕ್ಷಾತ್ ಕರೆಸಿಕೊಂಡು ಮುಕ್ತಿ ಪಡೆಯುವುದೇ ಜೀವನದ ಸಿದ್ಧಿ ಎಂಬುದು ಇಲ್ಲಿಯ ಮುಖ್ಯ ಭಾವ.

೯. ಶ್ರೀಕನಕದಾಸರ 'ತಾನ್ಯಾರೋ ತನ್ನ ದೇಹವ್ಯಾರೋ' ಎಂಬ ಕೀರ್ತನೆ ಈ ಪದ್ಯದ ವಿವರಣೆಯಾಗಿದೆ:

ತಾನ್ಯಾರು ದೇಹವ್ಯಾರು – ದಿವ್ಯ–
ಜ್ಞಾನದಲಿ ತಿಳಿದಾತ ಪರಮಯೋಗಿ ॥ ಪ ॥
ಅಸ್ಥಿಪಂಜರದ ನರಗಳ ತೊಗಲಹೊದಿಕೆಯ
ವಿಸ್ತರಿಸಿ ಬಿಗಿದ ಮಾಂಸದ ಬೊಂಬೆಯು
ಮೂತ್ರಮಲರಕ್ತ ಕೀವದ ಪ್ರಳಯದೊಡಲೆಂದು
ವಿಸ್ತರಿಸಿ ತಿಳಿದಾತ ಪರಮಯೋಗಿ ॥ ೧ ॥
ಸೂತಕಾಬ್ಧಿಯಲಿ ನವಮಾಸ ತುಂಬಿರೆ ತನ್ನ
ಮಾತೆಯುದರದಿ ಬಂದು ಬೆರೆಸಿ ಬೆಳೆದು
ಪಾತಕವದೊಂದು ಮೂರುತಿಯಾದ ತನುವೆಂದು
ನೀತಿಯಲಿ ತಿಳಿದಾತ ಪರಮಯೋಗಿ ॥ ೨ ॥

ಘೋರ ಸಂಸಾರತನುವೆಂದು ತನ್ನಲಿ ತಿಳಿದು
ಗೇರು ಹಣ್ಣಿನ ಬೀಜದಂತೆ ಹೊರಟು
ಮಾರಪಿತ ಕಾಗಿನೆಲೆಯಾದಿಕೇಶವನ ಪಾದ-
ವಾರಿಜವ ನಂಬಿದವ ಪರಮಯೋಗಿ ॥ ೩ ॥

*****

## ೫೬. ಕಮಲಾಸನನ ಹಂಗೇಕೆ ರಕ್ಷಿಸು

[೧]ಮಾಸುರಕ್ತದ ಮಡುವಿನಲಿ ನವ-
ಮಾಸ ಜನನಿಯ ಜಠರದೊಳಗಿರು-
ವಾ ಸಮಯದಲಿ ವೃತ್ತಿಯನು ಕಲ್ಪಿಸಿದ ಪ್ರಭುವಾರು ।
ನೀ ಸಲಹಿದವನಲ್ಲವೇ ಕರು-
ಣಾಸಮುದ್ರನು ನೀನಿರಲು ಕಮ-
ಲಾಸನನ ಹಂಗೇಕೆ ರಕ್ಷಿಸು ನಮ್ಮನನವರತ ॥ ೫೬ ॥

**ಅ: ಮಾಸು ಹಾಗೂ ರಕ್ತದ ಮಡುವಿನಲ್ಲಿ ಒಂಬತ್ತು ತಿಂಗಳುಗಳ ಕಾಲ ತಾಯಿಯ ಜಠರದೊಳಗೆ ಇರುವ ಆ ಸಮಯದಲ್ಲಿ ಬದುಕು ನೀಡಿದ ಸ್ವಾಮಿ ಬೇರಾರು? ಹಾಗೆ ಸಲಹಿದವನು ನೀನೆ ಅಲ್ಲವೇ? ಶ್ರೀಹರಿಯೇ! ಇಂತಹ ಕರುಣಾಸಮುದ್ರನಾದ ನೀನಿರುವಾಗ ಬ್ರಹ್ಮದೇವರ ಹಂಗೇಕೆ? ನೀನು ಸದಾ ನಮ್ಮನ್ನು ರಕ್ಷಿಸು.**

ವಿ.: ೧: ಗರ್ಭವಾಸದಂತಹ ದುರ್ಭರ ಪ್ರಸಂಗದಲ್ಲಿ ರಕ್ಷಿಸುವ ಸ್ವಾಮಿ ಭಗವಂತನಾದ ಶ್ರೀಹರಿ ಎಂಬುದನ್ನು ಇಲ್ಲಿ ನಿರೂಪಿಸಿರುವರು.

೨. ತಾಯಿಯ ಗರ್ಭದಲ್ಲಿ ಒಂಬತ್ತು ತಿಂಗಳು ಕಳೆಯುವುದು ಸಾಮಾನ್ಯವಾಗಿ ಗರ್ಭವಾಸದ ಅವಧಿ, ಆ ಸಮಯದಲ್ಲಿ ಹೊರಗಿನ ಆಹಾರವನ್ನು ಸ್ವೀಕರಿಸುವ ಸ್ಥಿತಿಯಲ್ಲಿ ಜೀವಿ ಇರುವುದಿಲ್ಲ, ಆದರೆ, ಬದುಕಿಗೆ ಆಹಾರ ಅತ್ಯಗತ್ಯ. ಅಂತಹ ಆಹಾರವನ್ನು ತಲುಪಿಸುವ ವ್ಯವಸ್ಥೆಯನ್ನು ಮಾಡಿದವನು ಸ್ವಾಮಿ ಶ್ರೀಹರಿ.

೩. ಅಂತಹ ಸುದೀರ್ಘ ಅವಧಿಯವರೆಗೆ ಹಾಗೆ ಜೀವಿಗೆ ಆಹಾರವನ್ನು ನೀಡುವ ಮೂಲಕ ಶ್ರೀಹರಿ ಅವನನ್ನು ರಕ್ಷಿಸುವ ಪರಿ ಅನನ್ಯವಾದುದು. ಹೊರಗಿನಿಂದ ರಕ್ಷಿಸುವ ಸ್ಥಿತಿಯಲ್ಲೂ ಸಹ ಬೇರಾರೂ ಇರುವುದಿಲ್ಲ. ತನಗೆ ಸರ್ವಥಾ ಗರ್ಭವಾಸದ ಗೋಜಿಲ್ಲದ ಶ್ರೀಹರಿ ಗರ್ಭವಾಸ ಹೊಂದಿರುವ ಜೀವಿಗಳಿಗೆ ಹಾಗೆ ರಕ್ಷಣೆ ಕೊಡುವುದು ಅವನ ಅಪಾರ

೧. ಮಾಂಸರಕ್ತದ ಮಡುವಿನಲಿ (ಪಾ.)

ಕಾರುಣ್ಯಕ್ಕೆ ನಿದರ್ಶನ ಎಂಬುದನ್ನು '**ಕರುಣಾಸಮುದ್ರ**' ಎಂಬ ಪದದಿಂದ ಸೂಚಿಸಿರುವರು; **ವೃತ್ತಿ** – ಜೀವನೋಪಾಯ.

೪. ಇದು '**ಸ ರಕ್ಷಿತಾ ರಕ್ಷತಿ ಯೋ ಹಿ ಗರ್ಭೇ**' (೭/೨/೩೮) ಎಂಬ ಶ್ರೀಮದ್ಭಾಗವತ-ಪುರಾಣದ ಮಾತಿನ ವಿವರಣೆಯಾಗಿದೆ.

೫. ಜೀವನ ಅಸ್ವಾತಂತ್ರ್ಯವನ್ನು ಅನುಭವಕ್ಕೆ ದೊರೆಯುವಂತೆ ತಿಳಿಸಿರುವುದು ಈ ಪದ್ಯದ ಹಿರಿಮೆ. ಶ್ರೀಮದ್ಭಾಗವತಪುರಾಣದ ತೃತೀಯಸ್ಕಂಧದಲ್ಲಿ ಬರುವ ಕಪಿಲಗೀತೆಯಲ್ಲಿ ಜೀವಿಯ ಗರ್ಭವಾಸದ ಪಾಡು ನಿರೂಪಿತವಾಗಿದೆ. ಈ ಮೂಲಕ ಅದರೆಡೆಗೆ ಗಮನ ಸೆಳೆಯುವ ಕಾರ್ಯವನ್ನು ಈ ಪದ್ಯ ಮಾಡಿದೆ.

೬. ಒಬ್ಬರು ನಮಗೆ ಮಾಡಿದ ಉಪಕಾರದ ಮಹತ್ವ ಅರಿವಿಗೆ ಬಂದಾಗ ಅವರ ಬಗ್ಗೆ ಸಹಜವಾಗಿಯೇ ಆದರವು ಹುಟ್ಟುವುದು. ಶ್ರೀಹರಿಯಿಂದ ನಮಗಾದ ಈ ಉಪಕಾರದ ಅರಿವು ಆಸ್ತಿಕ್ಯವನ್ನು ಮೂಡಿಸಲು ಸಮರ್ಥವಾಗಿದೆ. ನಾಸ್ತಿಕರು ಸಹ ಈ ವಿಷಯದ ಮಹತ್ವವನ್ನು ಅರಿತಾಗ ದೇವರ ಅಸ್ತಿತ್ವವನ್ನು, ಅವನ ಅಪಾರ ಕಾರುಣ್ಯವನ್ನು ಮನವರಿಕೆ ಮಾಡಿಕೊಳ್ಳಲು ಸಾಧ್ಯವಾಗುವುದು.

೭. ಹುಟ್ಟು ಮತ್ತು ಸಾವುಗಳು ಜೀವಿಗೆ ನಿರಂತರ. ಈ ಶೃಂಖಲೆ ಕೊನೆಗೊಳ್ಳುವುದು ಮುಕ್ತನಾದ ಮೇಲೆ ಮಾತ್ರ. ಅಲ್ಲಿಯವರೆಗೂ ಹುಟ್ಟಿದವನಿಗೆ ಸಾವು, ಸತ್ತವನಿಗೆ ಮರಳಿ ಹುಟ್ಟು ಅನಿವಾರ್ಯ. '**ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ**' ಎಂಬ ಭಗವದ್ಗೀತೆಯ ಮಾತಿನಲ್ಲಿ ಇದು ನಿರೂಪಿತವಾಗಿದೆ. ಹುಟ್ಟುಸಾವುಗಳು ಎಂದರೆ ದೇಹವನ್ನು ಪಡೆಯುವುದು, ಕಳೆದುಕೊಳ್ಳುವುದು ಮತ್ತೆ ಪಡೆಯುವುದು ಎಂದರ್ಥ. ಇಂತಹ ಸೃಷ್ಟಿ ಕಾರ್ಯ ತ್ರಿಮೂರ್ತಿಗಳಲ್ಲಿ ಒಬ್ಬರೆನ್ನಿಸಿದ ಬ್ರಹ್ಮದೇವರದು ಎಂಬ ಶಾಸ್ತ್ರದ ವಿವರವು ಇದರಲ್ಲಿ '**ಕಮಲಾಸನನ ಹಂಗೇಕೆ**' ಎಂಬ ಪದದಲ್ಲಿ ಬಂದಿದೆ.

೮. '**ಕಮಲಾಸನನ ಹಂಗು**' ಎಂದರೆ ಹುಟ್ಟಿ ಸಾಯುವ ಪ್ರಕ್ರಿಯೆ. ಶ್ರೀಹರಿಯ ಕರುಣೆಯಿಂದ ಮುಕ್ತಿ ಲಭಿಸಿದಾಗ ಈ ಸಂಕೋಲೆ ಕಡಿದು ಮತ್ತೆ ಹುಟ್ಟುವ ಪ್ರಸಕ್ತಿ ತಪ್ಪುವುದು. ಅಲ್ಲಿಗೆ ಬ್ರಹ್ಮದೇವರ ಹಂಗು ಇಲ್ಲದಂತಾಗುವುದು. ಎಂದರೆ, ಶ್ರೀಹರಿಯ ಕರುಣೆಯಿಂದ ಮುಕ್ತಿ ಲಭಿಸುವುದು ಹುಟ್ಟುಸಾವುಗಳಿಂದ ಪಾರಾಗುವ ಅತ್ಯಂತ ಖಚಿತವಾದ ಉಪಾಯ ಎಂದು ತಾತ್ಪರ್ಯ.

೯. ಶ್ರೀಕನಕದಾಸರ '**ತಲ್ಲಣಿಸದಿರು ಕಂಡ್ಯ ತಾಳು ಮನವೆ**' ಎಂಬ ಅಪೂರ್ವ ಕೀರ್ತನೆಯಲ್ಲಿ ಇದರ ವಿವರಣೆಯನ್ನು ಕಾಣಬಹುದು:

ತಲ್ಲಣಿಸದಿರು ಕಂಡ್ಯ ತಾಳು ಮನವೆ – ಸ್ವಾಮಿ
[೧]ನಿಲ್ಲದಲೆ ರಕ್ಷಿಸುವ ಸಂದೇಹ ಬೇಡ ॥ ಪ ॥

೧. ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ (ಪಾ.)

ಬೆಟ್ಟದ ತುದಿಯಲ್ಲಿ ಬೆಳೆದ ವೃಕ್ಷಂಗಳಿಗೆ
ಕಟ್ಟೆ ಕಟ್ಟುತ ನೀರ ಹೊಯ್ವರಾರು?
ಹುಟ್ಟಿಸಿದ ಸ್ವಾಮಿ ತಾ ಹೊಣೆಗಾರನಾದ ಮೇಲೆ
ಕೊಟ್ಟು ರಕ್ಷಿಸುವನು ಇದಕೆ ಸಂದೇಹ ಬೇಡ ॥ ೧ ॥
ಅಡವಿಯೊಳಗಾಡುವ ಮೃಗಜಾತಿ ಪಕ್ಷಿಗಳಿಗೆ
ಅಡಿಗಡಿಗೆ ಆಹಾರವಿತ್ತವರದಾರು?
ಪಡೆದ ಜನನಿಯಂತೆ ಸಾರಥಿಯಾಗಿ ತಾ
ಬಿಡದೆ ರಕ್ಷಿಸುವನು ಇದಕೆ ಸಂದೇಹಬೇಡ ॥ ೨ ॥
ಕಲ್ಲೊಳಗೆ ಪುಟ್ಟಿ ಕೂಗುವ ಮಂಡುಕಂಗಳಿಗೆ
ಅಲ್ಲಿ ಹೋಗಿ ಆಹಾರವಿತ್ತವರದಾರು?
ಬಲ್ಲಿದನು ಕಾಗಿನೆಲೆಯಾದಿಕೇಶವರಾಯ
ನಿಲ್ಲದೇ ರಕ್ಷಿಪನು ಇದಕೆ ಸಂದೇಹಬೇಡ ॥ ೩ ॥

*****

## ೫೭. ನಿನ್ನನು ಭಜಿಸುವವರಿಗೆ ಕೊಲೆಗೆ ಕಾರಣವೇನು ರಕ್ಷಿಸು

**ಬಲು ಮೃಗವು ಮರ ಪಕ್ಷಿ ಕೀಟಕ**
**ಜಲಚರೌಘದಿ ಜನಿಸಿದೆನು ಕೋ-**
**ಟಲೆಗೊಳಿಸಬೇಡಕಟ ಮಾನವನಾದ ಬಳಿಕಿನ್ನು ।**
**ಕೊಲಿಸದಿರು ಯಮನಿಂದ ಮುರಹರ**
**ಒಲಿದು ನಿನ್ನನು ಭಜಿಸುವವರಿಗೆ**
**ಕೊಲೆಗೆ ಕಾರಣವೇನು ರಕ್ಷಿಸು ನಮ್ಮನನವರತ ॥ ೫೭ ॥**

ಅ: ಅನೇಕ ವಿಧವಾದ ಮೃಗಗಳು, ಮರ, ಪಕ್ಷಿ, ಕೀಟ, ಜಲಚರ ಮೊದಲಾದವುಗಳ ಪ್ರವಾಹದಲ್ಲಿ ನಾನು ಜನಿಸಿ ಬಂದಿರುವೆನು. ಇಂತಹ ಬವಣೆಯನ್ನು ಇನ್ನಾದರು ತಪ್ಪಿಸು. ಅಯ್ಯೋ! ಮಾನವನಾದ ಮೇಲೆ ಇನ್ನು ಯಮನಿಂದ ಮತ್ತೆ ಮತ್ತೆ ಸಾಯುವಂತೆ ಮಾಡದಿರು, ಎಲೈ! ಮುರನನ್ನು ಸಂಹರಿಸಿದಂತಹ ನೀನು ಒಲಿದು ನಿನ್ನನ್ನು ಸೇವಿಸುವವರನ್ನು ಹೀಗೆ ಕೊಲ್ಲಿಸುವುದು ತರವೇ? ಶ್ರೀಹರಿಯೇ! ನೀನು ನಮ್ಮನ್ನು ಸದಾ ರಕ್ಷಿಸು.

ವಿ.: ೧. ಜೀವಿಯು ಮಾನವನಾಗಿ ಜನಿಸುವುದು ಎಷ್ಟು ಕಷ್ಟ. ಆ ಮುನ್ನ ಅವನು ಎಷ್ಟೋ ಯೋನಿಗಳಲ್ಲಿ ಜನಿಸಿ ಬರುವುದು ಅನಿವಾರ್ಯ. ಮನುಷ್ಯ ಜನ್ಮ ಲಭಿಸಿದಾಗ

ಅದನ್ನು ವ್ಯರ್ಥಗೊಳಿಸದೇ ಭಗವದಾರಾಧನೆಯಿಂದ ಜೀವನವನ್ನು ಸಾರ್ಥಕಪಡಿಸಿಕೊಂಡು ಮುಕ್ತಿಯನ್ನು ಪಡೆಯಬೇಕು ಎಂಬ ವಿವರ ಇದರಲ್ಲಿ ನಿರೂಪಿತವಾಗಿದೆ.

೨. ಎಂಭತ್ನಾಲ್ಕು ಲಕ್ಷ ಯೋನಿಗಳಲ್ಲಿ ಜೀವಿಯು ಜನಿಸುವನು ಎಂದು ಶಾಸ್ತ್ರಗಳು ಸಾರಿವೆ. ಅಂತಹ ಯೋನಿಗಳಲ್ಲಿ ಮೃಗ, ಕೀಟ, ಪಶು, ಪಕ್ಷಿ, ಜಲಚರ, ಮರ-ಗಿಡ ಮೊದಲಾದ ಸಕಲವೂ ಸೇರಿವೆ. ಮರಗಿಡ ಮೊದಲಾಗಿ ಜನಿಸುವುದು ಸ್ಥಾವರಜನ್ಮ ಎನ್ನಿಸುವುದು. ಇವುಗಳಿಗೆ ಚಲಿಸುವವು ಸಾಮರ್ಥ್ಯವಿಲ್ಲದೇ ಜಡದಂತೆ ಇರುವ ಪರಿಸ್ಥಿತಿ. ಜಲಚರಗಳು ನೀರಿನಲ್ಲಷ್ಟೇ ಬದುಕುವಂತಹವು. ಖೇಚರಗಳದು ಹಾರಾಟದ ಬದುಕು. ಕ್ರಿಮಿ-ಕೀಟಗಳಾಗಿ ಜನಿಸಿದಾಗಲಂತೂ ಬದುಕು ಮತ್ತಷ್ಟು ದುರ್ಭರ. ಮೃಗ ಮೊದಲಾದವುಗಳಾಗಿ ಜನಿಸಿದಾಗ ಸಾಧನೆಗೆ ಅಗತ್ಯವೆನ್ನಿಸುವ ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳು ಪೂರ್ಣವಾಗಿ ಲಭಿಸದೇ ಸಾಧನೆ ಅಶಕ್ಯವೆನ್ನಿಸುವುದು. ಮಾನವ ಜನ್ಮ ಒಂದೇ ಸಾಧನೆಗೆ ಅಗತ್ಯವೆನ್ನಿಸುವ ಸಕಲ ಪರಿಕರಗಳಿಂದ ಕೂಡಿದ ಅತ್ಯಮೂಲ್ಯವಾದ ಜನ್ಮ. ಇಂತಹ ಜನ್ಮವನ್ನು ಕ್ರಿಮಿ-ಕೀಟಗಳ ಬಾಳಿನಂತೆ ವ್ಯರ್ಥಗೊಳಿಸಿಕೊಳ್ಳದೇ ಮುಕ್ತಿ ಗಳಿಸುವ ಸಾರ್ಥಕತೆಯಲ್ಲಿ ಪರ್ಯವಸಾನಗೊಳಿಸಿಕೊಳ್ಳಬೇಕು ಎಂಬುದು ಇಲ್ಲಿಯ ಸಂದೇಶ; **ಓಘ** – ಸಮೂಹ, ಗುಂಪು; **ಕೋಟಲೆ** – ತೊಂದರೆ, ಕಾಟ, ಆಪತ್ತು.

೩. '**ಕೊಲಿಸದಿರು ಯಮನಿಂದ**' ಎಂಬುದಕ್ಕೆ, ಮತ್ತೆ ಮತ್ತೆ ಸಾಯುವ ಸಂಸಾರವನ್ನು ತಪ್ಪಿಸು ಎಂದರ್ಥ. ಅದರಂತೆ ಯಮನಿಂದ ನರಕದಲ್ಲಿ ಬಳಲುವಂತೆ ಮಾಡದಿರು ಎಂಬ ಮತ್ತೊಂದು ಅರ್ಥವು ವಿವಕ್ಷಿತ. ಅಪಮೃತ್ಯು ಮೊದಲಾದವುಗಳು ಒದಗದಂತೆ ಪಾಲಿಸು ಎಂದೂ ಯಮಲೋಕ ಸೇರುವಂತಹ ಪಾಪಕರ್ಮಗಳನ್ನು ಮಾಡಿಸದಿರು ಎಂಬ ಬೇಡಿಕೆಯನ್ನು ಸಹ ಇದರಲ್ಲಿ ಗುರುತಿಸಬಹುದು.

೪. ಅಪಮೃತ್ಯು, ನರಕ ಮೊದಲಾದವುಗಳು ಒದಗುವುದು ಸ್ವಧರ್ಮವನ್ನು ಮರೆತು ಶ್ರೀಹರಿಯ ಸೇವೆಯನ್ನು ತೊರೆಯುವವರಿಗೆ. ಆದರೆ, ಹಾಗೆ ಮಾಡದೇ ಶ್ರೀಹರಿ ನೀಡಿದ ಮಾನವ ಜನ್ಮವನ್ನು ಜ್ಞಾನಾರ್ಜನೆ, ಲೋಕೋಪಕಾರ, ಭಗವದ್ಪೂಜೆ ಮೊದಲಾದವುಗಳ ಮೂಲಕ ಸಾರ್ಥಕ ಪಡಿಸಿಕೊಳ್ಳುವವರಿಗೆ ಅಂತಹ ಕೇಡು ಸರ್ವಥಾ ಒದಗದು ಎಂಬ ಭಾವವು ಸಹ ನಿನ್ನನ್ನು ಭಜಿಸುವವರನ್ನು ಕೊಲ್ಲಿಸುವುದು ತರವೇ ಎಂಬ ಮಾತಿನಲ್ಲಿ ಇದು ವ್ಯಕ್ತಪಡಿಸಿದೆ.

೫. ಜೀವನದ ಸಾರ್ಥಕ್ಯ ಪಶುಗಳಂತೆ ಬದುಕುವುದರಲ್ಲಲ್ಲ, ಸದಾ ಎಚ್ಚೆತ್ತಿದ್ದು ಭಗವದಾರಾಧನೆಯಲ್ಲಿ ತೊಡಗುವುದು ಎಂಬುದು ಇಲ್ಲಿಯ ಮುಖ್ಯ ಭಾವ.

೬. ಇದು ಶ್ರೀಮದ್ಭಾಗವತದ ಈ ಕೆಳಗಿನ ಶ್ಲೋಕದ ಭಾವವನ್ನು ವಿವರಿಸುವಂತಿದೆ:

> ಸೃಷ್ಟ್ವಾ ಪುರಾಣಿ ವಿವಿಧಾನ್ಯಜಯಾऽತ್ಮಶಕ್ತ್ಯಾ
> ವೃಕ್ಷಾನ್ ಸರೀಸೃಪಪಶೂನ್ ಖಗದಂಶಮತ್ಸ್ಯಾನ್ ।

ತೈಸ್ತೈರತೃಪ್ತಹೃದಯಃ ಪುರುಷಂ ವಿಧಾಯ
ಬ್ರಹ್ಮಾವಬೋಧಧಿಷಣಂ ಮುದಮಾಪ ದೇವಃ ॥ - (೧೧/೯/೨೮)

೭. 'ಮಾನವಜನ್ಮ ದೊಡ್ಡದು' ಎಂಬ ಶ್ರೀಪುರಂದರದಾಸರ ಕೀರ್ತನೆಯಲ್ಲಿ ಮಾನವ ಜನ್ಮದ ಹಿರಿಮೆ ವಿವರವಾಗಿ ನಿರೂಪಿತವಾಗಿದೆ.

೮. ಮಾನವಜನ್ಮ ಬರುವ ಮುನ್ನ ಧರಿಸುವ ಅನೇಕ ಜನ್ಮಗಳ ವಿವರ ಮಹಾಭಾರತದ ಅನುಶಾಸನಪರ್ವ ಮೊದಲಾದವುಗಳಲ್ಲಿ ಬಂದಿದೆ.

*****

## ೫೮. ನೀ ಕೊಂಚದವನೇ ಕೃಷ್ಣ ರಕ್ಷಿಸು

ಪಂಚಭೂತದ ಕಾಯದೊಳು ನೀ
ವಂಚಿಸದೆ ಇರುತಿರಲು ಪೂರ್ವದ
ಸಂಚಿತದ ಫಲವೆನ್ನಲೇಕಿದ ಮುರುಳುತನದಿಂದ ।
ಮಿಂಚಿದವರಿನ್ನುಂಟೆ ತಿಳಿಯೆ ಪ್ರ-
ಪಂಚವೆಲ್ಲಕೆ ತಪ್ಪಿದವ ನೀ
ಕೊಂಚದವನೇ ಕೃಷ್ಣ ರಕ್ಷಿಸು ನಮ್ಮನನವರತ ॥ ೫೮ ॥

**ಅ: ಪಂಚಭೂತಗಳಿಂದ ಆಗಿರುವ ಈ ದೇಹದೊಳಗೆ ನೀನು ವಂಚನೆ ಮಾಡದೇ ಇರುತ್ತಿರುವಾಗ, ನಾನು ಇದನ್ನು ಹಿಂದಿನ ಸಂಚಿತಕರ್ಮದ ಫಲ ಎಂದು ಏಕೆ ಎನ್ನಲಾದೀತು; ಇನ್ನು ಮರಳುತನದಿಂದಾಗಿ ಅಭ್ಯುದಯವನ್ನು ಕಂಡವರುಂಟೆ? ತಿಳಿಯದು. ಪ್ರಪಂಚಕ್ಕೆಲ್ಲ ಹೊರತಾದವನು ನೀನು. ನೀನು ಸಾಮಾನ್ಯನಾದವನೇನಲ್ಲ! ಶ್ರೀಕೃಷ್ಣ!, ಶ್ರೀಹರಿಯೇ! ನಮ್ಮನ್ನು ನೀನು ಸದಾ ರಕ್ಷಿಸು.**

ವಿ.: ೧. ಪ್ರಕೃತಿಗೆ ಒಳಪಟ್ಟ ಪ್ರತಿಯೊಂದು ದೇಹವು ಸಹ ಪ್ರಾಕೃತವಾದುದು. ಮನುಷ್ಯ-ಶರೀರವಂತೂ ಪಂಚಭೂತಗಳಿಂದಾದ ಭೌತಿಕದೇಹ ಇಂತಹ ದೇಹವನ್ನು ನೀಡಿದ ಶ್ರೀಹರಿ ಅದರೊಳಗೆ ಸ್ವತಃ ತಾನೇ ಇರುವನು. ಹಾಗೆ ಇರುವ ಮೂಲಕ ರಕ್ಷಣೆಯನ್ನು ಸಹ ನೀಡುವನು. ಹೀಗಿರುವಾಗ ಈ ದೇಹದಲ್ಲಾಗುವ ಕೆಡುಕು ಮೊದಲಾದವುಗಳನ್ನು ಕೇವಲ ಹಿಂದಿನ ಕರ್ಮದ ಫಲ ಎಂದು ಹೇಳುವುದು ಸರ್ವಥಾ ಸರಿಯಲ್ಲ ಎಂದರ್ಥ; **ಪಂಚಭೂತಗಳು** – ಭೂಮಿ, ನೀರು, ಅಗ್ನಿ, ವಾಯು ಹಾಗೂ ಆಕಾಶ – ಈ ಐದು ಪಂಚಭೂತಗಳು ಎನ್ನಿಸಿವೆ.

೨. ಇಂತಹ ದೇಹದಲ್ಲಿದ್ದಾಗ ಇದರ ಮಹತ್ವವನ್ನು ಅರಿಯದೇ ಮೋಹಕ್ಕೊಳಗಾಗಿ ಸಾಧನೆಯ ಮಾರ್ಗವನ್ನು ಹಿಡಿಯದೇ ಇರುವ ಜನರೇ ಹೆಚ್ಚು. ಇದಕ್ಕೆ ಮರಳುತನ

ಎಂದರೆ ಅರಿವಿಲ್ಲದಿರುವಿಕೆಯೇ ಕಾರಣ. ಇಂತಹ ಅರಿವು ಮೀರಿದ ಜೀವನ ಶ್ರೀಹರಿಯ ಮಾಯೆ: **ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ** (ಗೀತಾ ೭/೧೪). ಇಂತಹ ಮಾಯೆಗೆ ಒಳಗಾಗದಿರುವವರು ಅತ್ಯಂತ ವಿರಳ ಎಂಬುದನ್ನು 'ಮರುಳತನದಿಂದ ಮಿಂಚಿದವರುಂಟೆ' ಎಂಬುದಾಗಿ ತಿಳಿಸಿರುವರು.

೩. ಇಂತಹ ಭೌತಿಕ ದೇಹಕ್ಕೆ ಒಳಗಾಗದ ನಿತ್ಯಮುಕ್ತರು ಇಬ್ಬರೇ. ಒಬ್ಬಳು ಮಹಾಲಕ್ಷ್ಮಿಯಾದರೆ ಮತ್ತೊಬ್ಬ ಲಕ್ಷ್ಮೀಪತಿಯಾದ ನಾರಾಯಣ. ಸ್ವತಂತ್ರನಾದ ನಿತ್ಯಮುಕ್ತನಂತೂ ನಾರಾಯಣನೊಬ್ಬನೇ. ಆದ್ದರಿಂದಲೇ ಅವನು ಸರ್ವೋತ್ತಮ. ಅವನನ್ನು ಮಿಂಚಿದವರು ಎಂದರೆ ಮೀರಿಸಿದವರು, ಮಿಗಿಲಾದವರು ಎಂದರ್ಥ. ಅಂತಹವರು ಬೇರೆ ಯಾರೂ ಇಲ್ಲವೇ ಇಲ್ಲ. ಅವನು ಕ್ಷರಾಕ್ಷರಪುರುಷನಾದ ಸರ್ವೋತ್ತಮ. ಆದರಿಂದಾಗಿಯೇ ಅವನು ಕೃಷ್ಣ ಎನ್ನಿಸಿ ತನ್ನನ್ನು ನಂಬಿದವರಿಗೆ ಮುಕ್ತಿ ನೀಡುವ ಮಹಾಮಹಿಮನಾಗಿರುವನು ಎಂದರ್ಥ.

೪. ಲಕ್ಷ್ಮೀನಾರಾಯಣರ ಹೊರತು ಇತರರೆಲ್ಲರೂ ಸಹ ಪ್ರಕೃತಿಯ ಬಂಧನಕ್ಕೆ ಒಳಗಾಗುವವರು. ಬ್ರಹ್ಮಾದಿ ಋಜುಗಳಿಗೆ ಇಂತಹ ಬಂಧನ ದಗ್ಧಪಟಾಯಮಾನವಾಗಿರುವುದು; ಇತರರಿಗೆ ಇದು ಬಂಧಕವೇ ಆದುದು. ಶ್ರೀಹರಿಗೆ ಮಾತ್ರ ಪ್ರಕೃತಿಯ ಬಂಧನ ಸರ್ವಥಾ ಇಲ್ಲವಾದ್ದರಿಂದ ಅವನು ಸರ್ವೋತ್ತಮ ಎಂಬುದು ಇದರ ತಾತ್ಪರ್ಯ.

೫. ಇಲ್ಲಿ **ಸಂಚಿತ** ಎಂದರೆ ಹಿಂದಿನ ಜನ್ಮಗಳಲ್ಲಿ ಸಂಪಾದಿತವಾದ ಕರ್ಮ ಎಂದರ್ಥ. ಅಪರೋಕ್ಷಜ್ಞಾನವಾಗುತ್ತಲೆ ಆ ವರೆಗಿನ ಸಕಲ ಕರ್ಮಗಳೂ ಸಹ ಸಂಚಿತ ಎನ್ನಿಸುವುದು ಇದರ ಪಾರಿಭಾಷಿಕವಾದ ವಿಶೇಷ ಅರ್ಥ. ಆದರೆ ಅದು ಇಲ್ಲಿ ವಿವಕ್ಷಿತವಾದುದಲ್ಲ ಎಂದು ತಿಳಿಯಬೇಕು.

೬. '**ತಪ್ಪಿದವ**' ಎಂದರೆ ಸಂಸಾರಿಗಳಿಂದ ಭಿನ್ನನಾದವನು, ಮರುಳುತನದಿಂದ ಹೊರತಾದವನು, ನಿತ್ಯಮುಕ್ತ ಎಂದರ್ಥ. ಶ್ರೀಹರಿಗೆ ಜೀವರಿಗೆ ಒದಗುವ ಸಂಸಾರ ಸರ್ವಥಾ ಇಲ್ಲ ಎಂದು ತಾತ್ಪರ್ಯ.

೭. '**ಕೊಂಚದವನೆ**' ಎಂದರೆ ಸಾಮಾನ್ಯನೇ? ಎಂದರ್ಥ. ನಿತ್ಯಮುಕ್ತನಾದ ಶ್ರೀಹರಿಯು ಅಸಾಮಾನ್ಯ ಎಂದು ಭಾವ.

೮. '**ಮರುಳುತನದಿಂದ**' ಎಂದರೆ, ಅವಿವೇಕದಿಂದ ಎಂದರ್ಥ; 'ಮಿಂಚಿದವರು' ಎಂದರೆ ಮುಂದೆ ಬಂದವರು ಎಂದರ್ಥ; ಅವಿವೇಕದಿಂದ ಎಂದೂ ಸಾಧನೆ ನಡೆಯದು ಎಂದು ಭಾವ.

೯. '**ಮಿಂಚಿದವರು**' ಎಂಬುದಕ್ಕೆ ಮೀರಿದವರು ಎಂಬ ಅರ್ಥವೂ ಗ್ರಾಹ್ಯ. ಸಾಮಾನ್ಯವಾಗಿ ಸಂಸಾರಮೋಹ ಮೊದಲಾದವುಗಳನ್ನು ಮೀರಿ ನಿಲ್ಲುವವರು ತುಂಬಾ ವಿರಳ ಎಂದು ಭಾವ. ಇದು ಶ್ರೀಮದ್ಭಾಗವತದ ಈ ಕೆಳಗಿನ ಶ್ಲೋಕದ ಭಾವವಾಗಿದೆ:

ಕುಟುಂಬಪೋಷಾಯ ಚ ಯನ್ನಿಜಾಯು-
ರ್ನ ಬುದ್ಧ್ಯತೇऽರ್ಥ ವಿಹತಂ ಪ್ರಮತ್ತಃ।

ಸರ್ವತ್ರ ತಾಪತ್ರಯದುಃಖಿತಾತ್ಮಾ
ನಿರ್ವಿದ್ಯತೇ ನ ಸ್ವಕುಟುಂಬರಾಮಃ ॥
ವಿತ್ತೇಷು ನಿತ್ಯಾಭಿನಿವಿಷ್ಟಚೇತಾ
ವಿದ್ವಾಂಶ್ಚ ದೋಷಂ ಪರಿವಿತ್ತಹರ್ತುಃ ।
ಪ್ರೇತ್ಯೇಹ ವಾಽಥಾಪ್ಯಜಿತೇಂದ್ರಿಯ-
ಸ್ತದಶಾಂತಕಾಮೋ ಹರತೇ ಕುಟುಂಬೀ ॥
ವಿದ್ವಾನಪೀತ್ಥಂ ದನುಜಾಃ ಕುಟುಂಬಂ
ಪುಷ್ಣನ್ ಸ್ವಲೋಕಾಯ ನ ಕಲ್ಪತೇ ವೈ ।
ಯತ್ಸ್ವೀಯಪಾರಕ್ಯವಿಭಿನ್ನಭಾವಃ
ತಮಃ ಪ್ರಪದ್ಯೇತ ಯಥಾ ವಿಮೂಢಃ ॥ - (೭/೬/೧೦-೧೨)

೧೦. ಹರಿಕಥಾಮೃತಸಾರದ 'ಇವನ ಮಾಯವ ಗೆಲುವನಾವನು ಈ ಜಗತ್ರಯದಿ' ಎಂಬ ಮಾತಿನಲ್ಲಿ ಶ್ರೀಹರಿಯ ಮಾಯೆಯನ್ನು ಗೆಲ್ಲುವುದು ಮೂರು ಲೋಕದಲ್ಲಿನ ಸಕಲರಿಗೂ ಅಸಾಧ್ಯ ಎಂಬ ಪ್ರಮೇಯ ನಿರೂಪಿತವಾಗಿದೆ.

*****

## ೫೯. ತಳುವಿಲ್ಲ ರಕ್ಷಿಸು

**ಹಲವು ಕರ್ಮಗಳಿಂದ ಮೂತ್ರದ**
**ಬಿಲಗಳಲಿ ಸಂಚರಿಸಿ ಪದವಿಯ**
**ಫಲವ ಕಾಣದೆ ಹೊಲಬು ತಪ್ಪಿದೆನೆನ್ನ ದೇಹದಲಿ ।**
**ಒಲಿದು ನೀನಿರೆ ನಿನ್ನ ಸಲುಗೆಯ**
**ಬಲುಮೆಯಲಿ ಬರಸೆಳೆವೆ ಮುಕ್ತಿಯ**
**ಲಲನೆಯನು ತಳುವಿಲ್ಲ ರಕ್ಷಿಸು ನಮ್ಮನನವರತ ॥ ೫೯ ॥**

**ಅ: ಹಿಂದೆ ಮಾಡಿದ ಬಗೆಬಗೆಯ ಕರ್ಮಗಳಿಂದಾಗಿ ಅನೇಕ ಯೋನಿಗಳಲ್ಲಿ ಜನಿಸಿ ಬರುವ ನಾವು ಮುಂದೆ ದಾರಿಯನ್ನಾಗಲಿ, ಅದರ ಪರಿಣಾಮವನ್ನಾಗಲಿ ಕಾಣದೇ ನಾನು ದಾರಿಯನ್ನು ತಪ್ಪಿದೆನು. ನನ್ನ ದೇಹದಲ್ಲಿ ನೀನು ಒಲಿದು ನೆಲೆಸಿರುವಾಗ ನಿನ್ನ ಅನುಗ್ರಹದ ಬಲದಿಂದ ನಾನು ಮುಕ್ತಿ ಕಾಂತೆಯನ್ನು ತಕ್ಕೈಸುವೆನು, ತಡಮಾಡೆನು. ಅಂತಹ ಕರುಣಾಳುವಾದ ಶ್ರೀಹರಿಯೇ! ನೀನು ನಮ್ಮನ್ನು ಸದಾ ರಕ್ಷಿಸು.**

ವಿ.: ೧. ಸಾಧನೆ ಪೂರೈಸುವ ಮುನ್ನ ಜೀವ ಅನೇಕ ಯೋನಿಗಳಲ್ಲಿ ಜನಿಸಿ ಹುಟ್ಟುತ್ತಲೇ ಇರುವನು. ಅವನಿಗೆ ಉದ್ಧಾರದ ಹಾದಿ ಕಾಣುವುದು ಕಷ್ಟ ಆದ್ದರಿಂದಾಗಿಯೇ ತಪ್ಪು ದಾರಿ

ಹಿಡಿಯುವುದು ಸಹ ನಿಶ್ಚಿತ. ಆದರೆ, ಶ್ರೀಹರಿಯು ಒಲಿದಲ್ಲಿ ಮುಕ್ತಿಯು ಲಭಿಸುವುದು ನಿಶ್ಚಿತ ಎಂದರ್ಥ; **ಹೊಲಬು** – ದಾರಿ; **ಬಲುಮೆ** – ಬಲ; **ತಳುವು** – ತಡ, ವಿಳಂಬ.

೨. **ಮೂತ್ರದ ಬಿಲಗಳು** ಎಂದರೆ ಯೋನಿಗಳು ಎಂದರ್ಥ. ಸಾಮಾನ್ಯವಾಗಿ ಜೀವರು ಎಂಭತ್ತನಾಲ್ಕು ಲಕ್ಷ ಯೋನಿಗಳಲ್ಲಿ ಹುಟ್ಟಿ ಬರುವರು ಎಂಬುದು ಪುರಾಣಗಳಲ್ಲಿ ನಿರೂಪಿತವಾಗಿರುವ ವಿಚಾರ. ಈ ಹಿನ್ನೆಲೆಯಲ್ಲಿ ಈ ಮಾತಿನ ವಿಶೇಷಾರ್ಥ ತಿಳಿಯುವುದು.

೩. ಶ್ರೀಹರಿಯು ದೇಹ ನೀಡುವವನು ಮಾತ್ರವಲ್ಲದೇ, ಆ ದೇಹದಲ್ಲಿ ಸ್ವತಃ ತಾನು ನೆಲೆಸಿದ್ದು ಸರ್ವ ಬಗೆಯ ಕರ್ಮಗಳನ್ನು ಸಹ ಯಥೋಚಿತವಾಗಿ ನಡೆಸಿ ಸಾಧನವನ್ನು ಮಾಡಿಸಿ ಪೊರೆಯುವನು. ಇದರ ಎಚ್ಚರವಿಲ್ಲದವರು ಬಂಧನಕ್ಕೊಳಗಾಗುವರು. ಆದರೆ, ಅದನ್ನು ಸರಿಯಾಗಿ ಅರಿತು ಅವನನ್ನು ಭಕ್ತಿಯಿಂದ ಆರಾಧಿಸುವವರ ಕರ್ಮಬಂಧನ ಪರಿಹಾರವಾಗುವುದು.

೪. ಮುಕ್ತಿಯ ಲಲನೆಯನ್ನು ಬರಸೆಳೆಯುವುದು ಎಂದರೆ, ಮುಕ್ತಿಯನ್ನು ಪಡೆಯುವುದು ಎಂದರ್ಥ. ಶ್ರೀವಾದಿರಾಜಸ್ವಾಮಿಗಳು ರುಗ್ಮಿಣೀಶವಿಜಯದಲ್ಲಿ ಮುಕ್ತಿಯ ಲಲನೆಯನ್ನು ಕರುಣಿಸು ಎಂಬುದಾಗಿ ಬೇಡಿರುವರು[೧] (೧೦/೮೦). '**ತ್ರಿವಿಕ್ರಮದಾಸಸ್ಯ ದಾಸ**' ಎಂಬುವ ಮೂಲಕ ತಾವು ಶ್ರೀವಾದಿರಾಜರ ಶಿಷ್ಯರು ಎಂಬುದನ್ನು ತಿಳಿಸುವ ಶ್ರೀಕನಕದಾಸರು, ಶ್ರೀವಾದಿರಾಜರ ನಿರೂಪಣೆಯನ್ನು ಇಲ್ಲಿ ಅಳವಡಿಸಿಕೊಂಡಿರುವರು.

೫. ವಿಹಿತಕರ್ಮಗಳನ್ನು ಶಾಸ್ತ್ರೋಕ್ತ ರೀತಿಯಲ್ಲಿ ಸರಿಯಾಗಿ ಆಚರಿಸಿ ಪ್ರತಿಫಲವನ್ನು ಆಶಿಸದೇ ಶ್ರೀಕೃಷ್ಣಾರ್ಪಣಬುದ್ಧಿಯಿಂದ ಸಮರ್ಪಿಸಿದ್ದಲ್ಲಿ ಅದು ಅಪರೋಕ್ಷಜ್ಞಾನಕ್ಕೆ ಕಾರಣವಾಗಿ ಮುಂದೆ ಮುಕ್ತಿ ಲಭಿಸುವುದು ಎಂಬುದು ಶಾಸ್ತ್ರಗಳಿಂದ ತಿಳಿಯುವ ವಿಷಯ; ಆದರೆ, ಈ ಸಾಧನೆಯ ಪ್ರತಿಹಂತದಲ್ಲೂ ಸಹ ಶ್ರೀಹರಿಯ ಒಲುಮೆ ಅತ್ಯಂತ ಅಗತ್ಯ. ಮುಖ್ಯವಾಗಿ ಮುಕ್ತಿ ಲಭಿಸುವುದು ಸಹ ಶ್ರೀಹರಿಯ ಒಲುಮೆಯಿಂದಲೇ ಎಂಬುದು ಶಾಸ್ತ್ರಗಳಲ್ಲಿ ಪ್ರತಿಪಾದಿತವಾಗಿರುವ ದೊಡ್ಡ ಪ್ರಮೇಯ. ಅದನ್ನು ಇಲ್ಲಿ ಒಲುಮೆ ಎಂಬ ಪದದಿಂದ ಸೂಚಿಸಿರುವರು ಎಂದು ತಿಳಿಯಬೇಕು.

೬. ಇಲ್ಲಿಯ ಮುಕ್ತಿಯ ಲಲನೆಯನ್ನು ಬರಸೆಳೆವೆ ಎಂಬ ಮಾತು ಉಪನಿಷತ್ತಿನ '**ಪ್ರಿಯಯಾ ಸಂಪರಿಷ್ವಕ್ತಃ ಬಾಹ್ಯಂ ನ ಕಿಂಚನ ವೇದ**' ಎಂಬ ಮಾತಿನ ಭಾವದಂತಿದೆ.

*****

---

೧. ಸ್ವಾಮಿನ್ ವಿಟ್ಠಲ ಸಜ್ಜನಶ್ವಶುರತಃ ಪ್ರಾಪ್ತಾಂ ದಿಗಂತಾಂಬರಾ–
ಮುಕ್ತ್ಯಾಂತಾವಪಿ ಯೋಗಿನೀಂ ಮನನಸಜ್ಜ್ಞಾನಾದಿಭಿರ್ಭೂಷಿತಾಮ್ ।
ಮೋಕ್ಷಾಪತ್ಯವತೀಂ ವಿರಕ್ತಿರಮಣೀಂ ಸಂಶ್ಲಿಷ್ಯತೋಽಹರ್ನಿಶಂ
ಕಾಲೋ ಗಚ್ಛತು ನಾನ್ಯಥಾ ಕುರು ತದಾ ಕಾಮೋ ಯದಾಲಂಬತೇ ॥
– ರುಗ್ಮಿಣೀಶವಿಜಯ (೧೦/೮೦)

## ೬೦. ಮನವೊಲಿದು ರಕ್ಷಿಸು

ಎತ್ತಿದೆನು ನಾನಾ ಶರೀರವ
ಹೊತ್ತು ಹೊತ್ತಲಸಿದೆನು ಸಲೆ ಬೇ-
ಸತ್ತು ನಿನ್ನಯ ಪದವ ಕಾಣದೆ ತೊಳಲಿ ಬಳಲಿದೆನು ।
ಸತ್ತು ಹುಟ್ಟುವ ಹುಟ್ಟಿ ಹಿಂಗುವ
ಸುತ್ತು ತೊಡಕನು ಮಾಣಿಸೆಲೆ ಪುರು-
ಷೋತ್ತಮನೆ ಮನವೊಲಿದು ರಕ್ಷಿಸು ನಮ್ಮನನವರತ ॥ ೬೦ ॥

ಅ: ನಾನು ಬಗೆಬಗೆಯ ದೇಹಗಳನ್ನು ಹೊತ್ತೆನು. ಹಾಗೆ ದೇಹವನ್ನು ಹೊಂದಿ ಬೆಳಿಗ್ಗೆಯಿಂದ ಅಲೆದಲೆದು ಬಹಳ ಬೇಸತ್ತು ನಿನ್ನ ಪಾದವನ್ನು ಕಾಣಲಾಗದೇ ತೊಳಲಿ ಬಳಲಿದೆನು. ಸತ್ತು ಹುಟ್ಟುವಂತಹ, ಹುಟ್ಟಿ ಮರಳಿ ಸಾಯುವಂತಹ ವಿಷಮವಾದ ಸನ್ನಿವೇಶ ಈ ಬದುಕಿನದು. ಈ ತೊಡಕನ್ನು ನೀನು ಪರಿಹರಿಸು, ನೀನು ಪುರುಷೋತ್ತಮ, ಶ್ರೀಹರಿಯೇ! ನೀನು ನನ್ನನ್ನು ಸದಾ ರಕ್ಷಿಸು.

ವಿ.: ೧. ಜೀವನು ತನ್ನ ಕರ್ಮಗಳಿಗನುಸಾರವಾಗಿ ಬಗೆಬಗೆಯ ದೇಹಗಳಲ್ಲಿ ಹುಟ್ಟುವನು. ಹಾಗೆ ಹುಟ್ಟಿದಾಗ ಸಾಧನೆಯ ಮಹತ್ವವನ್ನು ತಿಳಿಯದೇ ಯಾವುದೋ ರೀತಿಯಲ್ಲಿ ಬದುಕಿ ಕಷ್ಟಕೋಟಲೆಗಳಿಗೆ ಒಳಗಾಗುವನು. ಹೀಗೆ ಹುಟ್ಟುವುದು ಮರಳಿ ಸಾಯುವುದು ಎಂಬುದು ಕೊನೆಯೇ ಇಲ್ಲದ ಒಂದು ಬಂಧನ. ಅಂತಹ ಬಂಧನವನ್ನು ಪರಿಹರಿಸಬೇಕು ಎಂಬುದು ಶ್ರೀಹರಿಯಲ್ಲಿ ಭಕ್ತರ ಪ್ರಾರ್ಥನೆ; ಹೊತ್ತು – ಬೆಳಿಗ್ಗೆ; ಅಲಸು– ಅಲೆದಾಡು, ನೋವು.

೨. ಹೀಗೆ ಅರಿವಿಲ್ಲದೇ ಸುತ್ತುವ ಜೀವನಿಗೆ ಅಂತಹ ವಿಷಮಚಕ್ರದಿಂದ ಬಿಡುಗಡೆ ಲಭಿಸುವುದು ಶ್ರೀಹರಿ ಅನುಗ್ರಹಿಸಿದಾಗ ಮಾತ್ರ. ಅಂತಹ ಅನುಗ್ರಹವನ್ನು ಅವನು ತಪ್ಪದೇ ಮಾಡಿ ಸಾತ್ವಿಕಚೇತನರನ್ನು ಉದ್ಧರಿಸಬೇಕು ಎಂಬುದು ಇಲ್ಲಿಯ ಪ್ರಾರ್ಥನೆ.

೩. ಸತ್ತು ಹುಟ್ಟುವುದು, ಹುಟ್ಟಿ ಸಾಯುವುದು ಎಂಬ ಸಂಕೋಲೆ ನಿಜಕ್ಕೂ ಬಂಧನದ ರೀತಿಯೇ ಆಗಿದೆ. 'ಜಾತಸ್ಯ ಹಿ ಧ್ರುವೋ ಮೃತ್ಯುಃ ಧ್ರುವಂ ಜನ್ಮ ಮೃತಸ್ಯ ಚ' ಎಂಬ ಭಗವದ್ಗೀತೆಯ ಮಾತಿನಲ್ಲಿ ಹುಟ್ಟು ಸಾವುಗಳ ಸರಪಳಿಯ ಪರಿ ನಿರೂಪಿತವಾಗಿದೆ. ಇಂತಹ ಸಂಕೋಲೆಯು ಕಳಚುವುದು ಭಗವದನುಗ್ರಹದಿಂದ ಮುಕ್ತಿ ಲಭಿಸಿದಾಗ ಮಾತ್ರ. ಅಂತಹ ಮುಕ್ತಿಯನ್ನು ನೀಡುವ ಶ್ರೀಹರಿಯು ಪಾಲಿಸಲಿ ಎಂಬುದು ಇದರ ಭಾವ.

೪. ಹುಟ್ಟುವುದು, ಸಾಯುವುದು ನಡೆದೀತೆ ಹೊರತು ಈ ಸಂಕೋಲೆಯಿಂದ ಬಿಡುಗಡೆಯನ್ನು ನೀಡುವ ಶ್ರೀಹರಿಯ ಮತದ ಚಿಂತನೆ ಮಾತ್ರ ನಡೆಯುವುದೇ ಇಲ್ಲ ಎಂಬುದು ಇಲ್ಲಿಯ ಮುಖ್ಯ ಭಾವ. ಬಹುಜನರ ಜೀವನ ನಡೆಯುವುದು ಹೀಗೆಯೆ.

**ಕನಕದಾಸರೇ ಬೇರೊಂದು ಕಡೆ ಹೇಳಿರುವಂತೆ 'ಎಲ್ಲಿಂದ ಬಂದೆ ಮುಂದೆತ್ತ ಪಯಣ'** ಎಂಬ **ಚಿಂತನೆ ಹೆಚ್ಚಿನವರಿಗೆ** ಬರುವುದೇ ಇಲ್ಲ. ಈ ಬಗ್ಗೆ ಎಚ್ಚರಗೊಳ್ಳುವುದೇ ನಿಜವಾದ ಜೀವನ ಎಂಬುದು ಇಲ್ಲಿಯ ಸಂದೇಶ:

ಎಲ್ಲಿಂದ ಬಂದೆ ಮುಂದೆತ್ತ ಪಯಣ
ಇಲ್ಲಿ ನಿನಗೆಷ್ಟು ದಿನವಾಲಸ್ಯ ಮರುಳೆ ॥ ಪ ॥
ಮಾತೆಯುದರದೊಳು ನವಮಾಸ ಮಲಮೂತ್ರದೊಳು
ಯಾತನೆಯ ಯೋನಿಮುಖ ಮಾರ್ಗವಿಡಿದು
ಭೂತಳಕೆ ಬಂದು ಹದನೇನ ತೀರಿಸಿಕೊಂಡೆ
ಜಾತಿ ಯಾವುದು ನಿನ್ನ ಹೆಸರೇನು ಮರುಳೆ ॥ ೧ ॥
ಮುಂದಾವ ಪಥವ ಸೇರುವೆ ಮರುಳೆ ಸಾಕಿನ್ನು
ಹಿಂದೆ ನಿನ್ನವರಾರು ಆಪ್ತರುಂಟೆ
ಒಂದುಗೂಡಿದ ಪತ್ನಿ ಸುತರೆಲ್ಲ ವರ್ಜಿಪರು
ನಿಂದು ಮಾತಾಡು ಬಳಲಿದೆ ಬರಿದೆ ಮರುಳೆ ॥ ೨ ॥
ಬರವಿದೇತಕೆ ನಿನ್ನ ಸ್ಥಳವೆಲ್ಲಿ ನೆಲೆಯಾಗಿ
ಇರುವ ಮಂದಿರವಾವುದದನೆನಗೆ ಪೇಳೊ
ಧರೆಯೊಳಗೆ ವರಕಾಗಿನೆಲೆಯಾದಿಕೇಶವನ
ಸಿರಿ ಚರಣಕಮಲವನು ನೆರೆನಂಬಿ ಸುಖಿಸೊ ॥ ೩ ॥

**

ಏನಿದೆತ್ತಣ ಬಯಕೆ ಎಲೊ ಮಂಕು ಜೀವ
ನೀನು ಅರಿತರೆ ಪೇಳು ನಿಜವನೆನಗೆ ॥ ಪ ॥
ಎಂಟೆರಡು ಮಾರುತರು ಎಡೆಯೆಡೆಗೆ ಬರುತಿರಲು
ನಂಟರೈವರು ಕೂಡಿ ಆಕ್ರಮಿಸುತಿಹರು
ದಾಂಟುವುದು ಅಸದಳವೊ ಎರಡೊಂದು ಬಲೆಗಳಲಿ
ಕಂಟಕದಿ ಬಲು ತಾಪದಿಂದ ಬಳಲುವರು ॥ ೧ ॥
ಆರೆರಡು ದಂತಿಗಳು ದಾರಿಯೊಳು ನಿಂತಿಹವು
ಆರು ಮೂರು ತುರುಗಗಳು ದಾರಿಯನು ಕೊಡವು
ಮೂರೆರಡನೀಡಾಡಿ ತೋರುವುದು ಎನ್ನಾಣೆ
ಸಾರಿ ಏನೇನಹುದು ಎಂಬುದನು ನೋಡು ॥ ೨ ॥
ಪರರನು ನಿಂದಿಸದೆ ಪರಯೋಗ್ಯ ನೀನಾಗಿ
ಪರರ ಪಾಪಗಳ ನೀ ಕಟ್ಟಿಕೊಳದೆ
ಪರಮಾತ್ಮ ಕಾಗಿನೆಲೆಯಾದಿಕೇಶವರಾಯ
ಪರಹಿತಕೆ ಸಖನೆಂದು ಭಜಿಸೆಲೊ ಮನುಜ ॥ ೩ ॥

೫. **ಪುರುಷೋತ್ತಮ** ಎಂಬುದು ಶ್ರೀಹರಿಯ ವಿಶೇಷ ನಾಮಗಳಲ್ಲೊಂದು. ಇಪ್ಪತ್ತಾಲ್ಕು ಕೇಶವನಾಮಗಳಲ್ಲಿ ಇದು ಒಂದು. ವಿಷ್ಣುಸಹಸ್ರನಾಮಗಳಲ್ಲೂ ಈ ಹೆಸರು ಬಂದಿದೆ: ಶ್ರೀಧರಃ **ಪುರುಷೋತ್ತಮಃ**. ಭಗವದ್ಗೀತೆಯಲ್ಲಿ ಬಂದಿರುವಂತೆ, ಪುರುಷೋತ್ತಮ ಶಬ್ದದ ಅರ್ಥ ಹೀಗಿದೆ[೧]; **ಮಾಣಿಸು** – ಪರಿಹರಿಸು, ತಪ್ಪಿಸು.

೬. ಸಮಸ್ತ ಚೇತನ ಪ್ರಪಂಚವು ಕ್ಷರ–ಅಕ್ಷರ ಎಂಬುದಾಗಿ ಎರಡು ಬಗೆ. ಕ್ಷರ ಚೇತನರು ಎಂದರೆ, ಬ್ರಹ್ಮಾದಿ ಸಮಸ್ತ ಜೀವನರಾಶಿ. ಅಕ್ಷರ ಚೇತನ ಪ್ರಕೃತಿಯ ಅಭಿಮಾನಿ ದೇವತೆಯಾದ ಮಹಾಲಕ್ಷ್ಮಿ. ಈ ಇಬ್ಬರೂ ಪುರುಷರಿಗಿಂತ ಮಿಗಿಲಾದವನೇ ಪುರುಷೋತ್ತಮ. ಅವನೇ ಶ್ರೀಹರಿ ಎಂದು ತಾತ್ಪರ್ಯ.

*****

## ೬೧. ನೀ ಗತಿ ಎಂದು ಬಿನ್ನೈಸಿದೆನು ರಕ್ಷಿಸು

ಇಂದು ಈ ಜನ್ಮದಲಿ ನೀನೇ
ಬಂಧು ಹಿಂದಣ ಜನ್ಮದಲಿ ಬಳಿ-
ಸಂದು ಮುಂದಣ ಜನ್ಮಕಧಿಪತಿಯಾಗಿ ಇರುತಿರಲು ।
ಎಂದಿಗೂ ಎನಗಿಲ್ಲ ತನು ಸಂ-
ಬಂಧ ನಿನ್ನದು ಎನಗೆ ನೀ ಗತಿ
ಎಂದು ಬಿನ್ನೈಸಿದೆನು ರಕ್ಷಿಸು ನಮ್ಮನನವರತ ॥ ೬೧ ॥

ಅ: ಈಗ ಈ ಜನ್ಮದಲ್ಲಿ ನೀನೇ ಬಂಧು. ಹಿಂದಿನ ಜನ್ಮದಲ್ಲಿ ಬಳಿ ಇದ್ದು, ಮುಂದಿನ ಜನ್ಮಕ್ಕೂ ಅಧಿಪತಿಯಾಗಿ ಇರುತ್ತಿರುವವನು ನೀನೇ. ಹೀಗಿರುವಾಗ, ಎಂದಿಗೂ ನನಗೆ ದೇಹದ ಸಂಬಂಧ ಇಲ್ಲ. ನಿನ್ನ ಸಂಬಂಧ ಮಾತ್ರವೇ ಇರುವುದು. ಆದ್ದರಿಂದ, ನನಗೆ

---

೧. ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।
ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥
ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।
ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥
ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।
ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥
ಯೋ ಮಾಮೇವಮಸಮ್ಮೂಢೋ ಜಾನಾತಿ ಪುರುಷೋತ್ತಮಮ್ ।
ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ॥
ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾಽನಘ ।
ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ ॥ ಭಗವದ್ಗೀತೆ (೧೫/೧೬-೨೦)

**ನೀನೇ ಗತಿ, ಎಂದು ವಿಜ್ಞಾಪಿಸುತ್ತಿರುವೆನು. ಶ್ರೀಹರಿಯೇ! ನೀನು ಅನವರತ ನಮ್ಮನ್ನು ರಕ್ಷಿಸು.**

ವಿ: ೧. ಶ್ರೀಹರಿಯು ಅನಾದಿಕಾಲದಿಂದ – ಅನಂತಕಾಲದವರೆಗೆ ನಮ್ಮ ಜೊತೆಗೆ ಇದ್ದು ಸಂರಕ್ಷಿಸುವ ಮಹಾ ಕರುಣಾಳು ಎಂಬ ತತ್ತ್ವ ಈ ಪದ್ಯದಲ್ಲಿ ನಿರೂಪಿತವಾಗಿದೆ.

೨. ಈ ಜನ್ಮ ಹಿಂದಿನ ಜನ್ಮ ಹಾಗೂ ಮುಂದಿನ ಜನ್ಮ ಎಂಬ ಇಲ್ಲಿಯ ಮೂರು ಪದಗಳು ಕ್ರಮವಾಗಿ ವರ್ತಮಾನ, ಭೂತ ಹಾಗೂ ಭವಿಷ್ಯತ್ ಕಾಲದ ರಕ್ಷಣೆಗೆ ಅನ್ವಯಿಸುವವು.

೩. ಈ ಜನ್ಮ ಎಂಬುದು ಕೇವಲ ಜನ್ಮಕ್ಕೆ ಮಾತ್ರವಲ್ಲದೇ ಪ್ರತಿನಿತ್ಯದ ಪ್ರತಿ ಕಾರ್ಯಗಳಿಗೂ ಸಹ ಅನ್ವಯಿಸುವ ಮಾತು. ಭಗವದ್ಗೀತೆಯಲ್ಲಿ ಬಂದಿರುವಂತೆ ಈ ಕೆಳಗಿನ ಸಕಲ ಕಾರ್ಯಗಳೂ ವಿವಕ್ಷಿತ:

**ನೈವ ಕಿಂಚಿತ್ ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್ ।**
**ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ನಶ್ನನ್ ಗಚ್ಛನ್ ಸ್ವಪನ್ ಶ್ವಸನ್ ॥** – ಗೀತಾ

೪. ಹೀಗೆ ಜೀವಾತ್ಮ ಪರಮಾತ್ಮರ ಸಂಬಂಧ ಅನಾದಿ ನಿತ್ಯವಾದುದು. ಪ್ರತಿಕ್ಷಣದಲ್ಲೂ ಜೀವಾತ್ಮನೊಂದಿಗೆ ಜೊತೆಯಲ್ಲಿಯೇ ಇದ್ದು ರಕ್ಷಣೆ ನೀಡುವ ಪರಮಕರುಣಾಳು ಶ್ರೀಹರಿಯಾಗಿರುವನು ಎಂಬ ಇಲ್ಲಿಯ ಭಾವ ಈ ಕೆಳಗಿನ ಉಪನಿಷದ್ವಾಣಿಯ ವಿವರಣೆಯೇ ಆಗಿದೆ: **ದ್ವಾ ಸುಪರ್ಣಾ ಸಯುಜಾ ಸಖಾಯಾ । (ಆಥರ್ವಣೋಪನಿಷತ್).**

೫. ಇವರ 'ಹಿಂದನೇಕ ಯೋನಿಗಳಲಿ ಬಂದು ಬಂದು ನೊಂದೆ ನಾನು । ಇಂದು ಭವದ ಬಂಧ ಬಿಡಿಸೋ ತಂದೆ ಗೋವಿಂದ' ಎಂಬ ಕೇಶವನಾಮದ ಮಾತಿನಲ್ಲಿ ಇದರ ವಿವರವಿದೆ.

೬. ಶ್ರೀಹರಿಯು ಜೊತೆಗಿರುವುದು ಎಂದರೆ ಕೇವಲ ಲೋಕದ ಮಿತ್ರರು ಬಂಧುಬಾಂಧವರು ಮೊದಲಾದವರಂತೆ ಇರುವುದು ಎಂದರ್ಥವಲ್ಲ, ಅವನು ಹಾಗಿರುವುದು ಸರ್ವರೀತಿಯ ಸ್ವಾಮಿಯಾಗಿ ಎಂಬುದನ್ನು 'ಅಧಿಪತಿಯಾಗಿ' ಎಂಬ ಪದದಿಂದ ತಿಳಿಸಿರುವರು.

೭. ದೇಹದ ಸಂಬಂಧ ಎಂದಿಗೂ ಇರುವಂತಹುದಲ್ಲ, ಅನಾದಿಕಾಲದಿಂದ ಸ್ವರೂಪ ದೇಹದ ಜೊತೆಗೆ ಇರುವುದು ಲಿಂಗ ದೇಹ. ಕೊನೆಯಲ್ಲಿ ಮುಕ್ತಿಯಲ್ಲಿ ಉಳಿಯುವುದು ಸ್ವರೂಪದ ದೇಹ ಮಾತ್ರ. ಸೃಷ್ಟಿಯ ಹಂತದಲ್ಲಿರುವ ಅನಿರುದ್ಧ ದೇಹ ಹಾಗೂ ಸ್ಥೂಲ ದೇಹಗಳು ಮುಕ್ತಿಯಲ್ಲಿ ಇರುವುದಿಲ್ಲ, ಲಿಂಗದೇಹವಂತೂ ಭಂಗವೇ ಆಗಿರುವುದು. ಆದ್ದರಿಂದ ಬಾಹ್ಯ ದೇಹದ ಸಂಬಂಧ ನಿತ್ಯವಾದುದಲ್ಲ, ಹೀಗೆ ತುಂಬಾ ಹತ್ತಿರವೆನ್ನಿಸುವ ದೇಹದ ಸಂಬಂಧವೇ ಅನಿತ್ಯವಾಗಿರುವಾಗ, ಉಳಿದವರ ಸಂಬಂಧ ಅನಿತ್ಯವೆಂಬುದು ಕೈಮೂತ್ಯ ಸಿದ್ಧ. ಆದರೆ, ಶ್ರೀಹರಿಯ ಸಂಬಂಧ ಮಾತ್ರ ಎಂದೂ ಬಿಡಲಾಗದಂತಹ ನಿತ್ಯ ಸಂಬಂಧ. ದಾಸರಾಯರ **'ತೊರೆದು ಜೀವಿಸಬಹುದೆ ಹರಿ ನಿನ್ನ ಚರಣಗಳ'** ಎಂಬ ಕೃತಿಯಲ್ಲಿ, ಈ ಭಾವ ತುಂಬಾ ವಿವರವಾಗಿ ನಿರೂಪಿತವಾಗಿದೆ.

೮. ಇಲ್ಲಿ '**ತನು ಸಂಬಂಧ ಇಲ್ಲ**' ಎಂಬುವ ಮಾತು ದೇಹದ ಮೇಲೆ ಅಭಿಮಾನವಿಲ್ಲ ಎಂಬ ತತ್ತ್ವಕ್ಕೂ ಸೂಚಕ. ಹೀಗೆ ಅಭಿಮಾನವನ್ನು ತೊರೆದವರಿಗೆ ಮಾತ್ರವೇ ಬ್ರಹ್ಮಜ್ಞಾನ ಸಿದ್ಧಿಸಿ, ಶ್ರೀಹರಿಯ ಒಲುಮೆ ಲಭಿಸಿ ಮುಕ್ತಿಯು ದೊರಕುವುದು. ಅದರಂತೆ, ಸ್ವತಂತ್ರ ಕರ್ತೃತ್ವದ ಭ್ರಮೆಯು ಇಲ್ಲ ಎಂಬುದು ಇದರಿಂದ ಸೂಚಿತ. ಹೀಗೆ ಮಮಕಾರದೊಂದಿಗೆ ಅಹಂಕಾರವನ್ನು ತೊರೆಯವುದು ಸಂಸಾರ ಮೋಚನದ ಶ್ರೇಷ್ಠ ಸಾಧನ:

**ವಿಹಾಯ ಕಾಮಾನ್ ಯಃ ಸರ್ವಾನ್ ಪುಮಾಂಶ್ಚರತಿ ನಿಸ್ಪೃಹಃ।**
**ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ ॥ - ಗೀತಾ (೨/೭೧)**

೯. ಹೀಗೆ ಶ್ರೀಹರಿಯ ನಿತ್ಯ ಸಂಬಂಧವನ್ನು ಅವನ ಸ್ವಾಮಿತ್ವವನ್ನು ತಿಳಿದು ಸದಾ ಅವನನ್ನು ಪ್ರಾರ್ಥಿಸಿಕೊಳ್ಳುವುದು ಸರ್ವರೀತಿಯ ಶ್ರೇಯಸ್ಸಿಗೆ ಸಾಧನ ಎಂಬುದನ್ನು ಭಿನ್ನೈಸಿದೆನು ಎಂಬ ಪದದಿಂದ ಸೂಚಿಸಿರುವರು.

೧೦. ಒಟ್ಟಾಗಿ ಈ ಪದ್ಯವು '**ಹರಿರೇವ ಪರೋ ಹರಿರೇವ ಗುರುಃ ಹರಿರೇವ ಜಗತ್ಪಿತೃ-ಮಾತೃಗತಿಃ**' ಎಂಬ ದ್ವಾದಶಸ್ತೋತ್ರದ ಮಾತಿನ ವಿವರಣೆಯಾಗಿದೆ.

೧೧. ಜೀವ ದೇಹದೊಳಗಿದೆ; ಜೀವನೊಳಗೆ ದೇವನಾದ ಶ್ರೀಹರಿ ನೆಲೆಸಿರುವನು; ನಮಗೆ ಹೊರಗಿನದಾದ ದೇಹದ ಸಂಬಂಧ ಅರಿವಾಗಿದೆ, ಅದು ಸಹ ನಾನು ಅಥವಾ ನನ್ನದು ಎಂಬ ತಪ್ಪು ಭಾವನೆಯಿಂದ ಮಾತ್ರ. ಆದರೆ, ಹೊರಗಿನದಾದ ಈ ದೇಹ ಅಳಿದುಹೋಗುವಂತಹುದು. ಜೀವನೊಳಗೆ ನೆಲೆಸಿರುವ ದೇಹ ನಿತ್ಯನಾದವನು. ನಿತ್ಯನಾದ ಜೀವನೊಂದಿಗೆ ನಿತ್ಯಸಂಬಂಧ ಇರುವುದು ಜಡವಾದ ಈ ದೇಹದೊಂದಿಗೆ ಅಲ್ಲ, ಪರಮನಿತ್ಯನಾದ ಶ್ರೀಹರಿಯೊಂದಿಗೆ ಮಾತ್ರ ಎಂಬ ಇಲ್ಲಿಯ ತತ್ತ್ವ ಅತ್ಯಂತ ರೋಚಕವಾದುದು.

೧೨. ಜೀವನ ಹುಟ್ಟುಸಾವುಗಳು ಭಗವಂತನ ಅಧೀನ ಎಂಬುದನ್ನು ದಾಸರು ಪ್ರತ್ಯೇಕ ಪದವೊಂದರಲ್ಲಿ ತಿಳಿಸಿರುವರು:

ನನ್ನಿಂದೆ ನಾನೇ ಜನಿಸಿ ಬಂದೆನೆ ದೇವ ॥ ಪ ॥
ನಿನ್ನ ಪ್ರೇರಣೆಯಿಂದ ನಡೆದು ನುಡಿದ ಮೇಲೆ
ನಿನ್ನದು ತಪ್ಪೋ ಎನ್ನದು ತಪ್ಪೋ ಪರಮಾತ್ಮ ॥ ಅಪ ॥
ಜನನಿಯ ಜಠರದಿ ನವಮಾಸವು
ಘನದಿ ನೀ ಪೋಷಿಸುತಿರೆ, ನಾನು
ಜನಿಸಲಾರೆನು ಎನೆ ಜನಿಸೆಂದಿಕ್ಕಳದಿಂದ
ವನಜಾಕ್ಷ ನೂಕಿದವನು ನೀನಲ್ಲವೆ – ದೇವ ॥ ೧ ॥
ಅಂಧನ ಕೈಯಲಿ ಕೋಲಿತ್ತು ಕರೆದೊಯ್ವ
ಮುಂದಾಡಿ ತಪ್ಪಿ ಗುಂಡಿಗೆ ಕೆಡಹಲು

ಅಂಧಕನದು ತಪ್ಪೊ ಮುಂದಾಡಿಯ ತಪ್ಪೊ
ಹಿಂದಾಡ ಬೇಡ ಎನ್ನಲಿ ತಪ್ಪಿಲ್ಲವೊ - ದೇವ ॥ ೨ ॥
ಕಂದನ ತಾಯಿಯು ಆಡಿಸುತಿರೆ ಪೋಗಿ
ಕಂದ ಬಾವಿಯ ಕಂಡು ನೋಡುತಿರೆ
ಬಂದು ಬೇಗದಿ ಬಿಗಿದಪ್ಪದಿರಲು ಆ
ಕಂದನ ತಪ್ಪೊ ಮಾತೆಯ ತಪ್ಪೊ - ಪರಮಾತ್ಮ ॥ ೩ ॥
ಭಾರವು ನಿನ್ನದೊ ದೂರು ನಿನ್ನದೊ ಕೃಷ್ಣ
ನಾರಿ ಮಕ್ಕಳು ತನುಮನ ನಿನ್ನವಯ್ಯ
ಕ್ಷೀರದೊಳದ್ದು ನೀರೊಳಗದ್ದು ಗೋವಿಂದ
ಹೇರನೊಪ್ಪಿಸಿದ ಮೇಲ್ ಸುಂಕವೇತಕೆ - ದೇವ ॥ ೪ ॥
ನ್ಯಾಯವಾದರೆ ದುಡುಕು ನಿನ್ನದೊ, ಮತ್ತ-
ನ್ಯಾಯವಾದರೆ ಪೇಳುವರಾರು
ಕಾಯಜಪಿತ ಕಾಗಿನೆಲೆಯಾದಿಕೇಶವ -
ರಾಯ ನೀ ಕಾಯಯ್ಯ ತಪ್ಪುಗಳೆಣಿಸದೆ ॥ ೫ ॥

೧೩. ತನುವು ಶ್ರೀಹರಿಗೆ ಸೇರಿದ್ದು, ಒಟ್ಟಾಗಿ ನಮ್ಮ ಜೀವನ ಬದುಕೇ ಭಗವಂತನ ಅಧೀನ ಎಂದು ಅತ್ಯಂತ ಪರಿಣಾಮಕಾರಿಯಾಗಿ ತಿಳಿಸುವ ಶ್ರೀಕನಕದಾಸರ ಕೃತಿ ಹೀಗಿದೆ:

ತನು ನಿನ್ನದು ಜೀವನ ನಿನ್ನದು ರಂಗ।
ಅನುದಿನದಲಿ ಬಾಹ ಸುಖದುಃಖ ನಿನ್ನದಯ್ಯ ॥ ಪ ॥
ಸವಿನುಡಿ ವೇದ-ಪುರಾಣ-ಶಾಸ್ತ್ರಂಗಳ
ಕಿವಿಯಿಂದ ಕೇಳುವ ಕಥೆ ನಿನ್ನದು
ನವಮೋಹನಾಂಗಿಯರ ರೂಪವ ಕಣ್ಣಿಂದ
ಎವೆಯಿಕ್ಕದಲೆ ನೋಡುವ ನೋಟ ನಿನ್ನದಯ್ಯ ॥ ೧ ॥
ಒಡಗೂಡಿ ಗಂಧ-ಕಸ್ತೂರಿ ಪರಿಮಳಗಳ
ಬಿಡದೆ ಲೇಪಿಸಿಕೊಂಬುದು ನಿನ್ನದು
ಷಡುರಸದನ್ನಕೆ ನಲಿದಾಡುವ ಜಿಹ್ವೆ
ಕಡುರುಚಿಗೊಂಡರಾರುಚಿ ನಿನ್ನದಯ್ಯ ॥ ೨ ॥
ಮಾಯಾಪಾಶದ ಬಲೆಯೊಳಗೆ ಸಿಲ್ಕಿರುವಂಥ
ಕಾಯ ಪಂಚೇಂದ್ರಿಯಗಳು ನಿನ್ನವು
ನ್ಯಾಯದಿ ಕನಕನೊಡೆಯ ಆದಿಕೇಶವ-
ರಾಯ ನೀನಲ್ಲದೆ ನರರು ಸ್ವತಂತ್ರರೆ ॥ ೩ ॥

೧೪. ಶ್ರೀಹರಿ ಉಪೇಕ್ಷೆ ಮಾಡಿದಲ್ಲಿ ವಿಶ್ವದಲ್ಲಿ ಯಾವುದೂ ಉಳಿಯದು ಎಂಬ ಇಲ್ಲಿಯ ಭಾವಕ್ಕೆ ಅವರ ಈ ಕೆಳಗಿನ ಪದ್ಯ ವಿವರಣೆಯಂತಿದೆ:

ನೀನುಪೇಕ್ಷೆಯ ಮಾಡೆ ಬೇರೆ ಗತಿಯಾರೆನಗೆ
ನಿಗಮಗೋಚರ ಮುಕುಂದ
ಗಾನರಸಲೋಲ ಆಗಮಶೀಲ ಭಕ್ತಪರಿ-
ಪಾಲ ಗೋಪಾಲ ಬಾಲ ॥ ಪ ॥
ಜಪತಪಾನುಷ್ಠಾನ ಜಪಿತನೆಂದೆನಿಸುವೆನೆ
ಜಾಣತನ ಮೊದಲಿಗಿಲ್ಲ
ಅಪರಿಮಿತ ಕರ್ಮವನು ಅನುಸರಿಸಿ ನಡೆವುದಕೆ
ನಿಪುಣತ್ವವೆನಗೆ ಇಲ್ಲ
ಗುಪಿತದಲಿ ದಾನಧರ್ಮವ ಮಾಳ್ಪೆನೆಂದರೆ
ಘನವಾದ ಧನವು ಇಲ್ಲ
ರಪಣನಿಪುಣತ್ವ ಜಾಣುವೆ ಇಲ್ಲದಿಹ ಜಡಗೆ
ಸುಪವಿತ್ರ ನೀನಲ್ಲದಿಲ್ಲ ॥ ೧ ॥
ಆನೆ ಮೊಸಳೆಗೆ ಸಿಲುಕಿ ಅರೆಬಾಯಿ ಬಿಡುತಿರಲು
ಮೌನದಲಿ ಬಂದು ಕಾಯ್ದೆ
ಏನು ಅರಿಯದ ಅಜಾಮಿಳಗೆ ಸಾಯುಜ್ಯವನು
ನೀನೊಲಿದು ಕೃಪೆ ಮಾಡಿದೆ
ಹಾನಿಯಿಲ್ಲದ ಪದವಿಯನು ಕೊಟ್ಟು ಧ್ರುವಗೆ ಕಡು-
ದೀನತ್ವವನು ಬಿಡಿಸಿದೆ
ದಾನವಾಂತಕ ಸಕಲ ದಿವಿಜಮುನಿವಂದಿತನೆ
ನೀನು ಎನ್ನನು ಸಲಹದೆ - ಬರಿದೆ ॥ ೨ ॥
ಈಷಣತ್ರಯದ ಬಯಲಾಸೆಯಲಿ ಭ್ರಮೆಗೊಂಡು
ಬೇಸರದಿ ಮನದಿ ನೊಂದು
ಹೇಸಿಗೆಯ ಸಂಸಾರಸಾಗರದೊಳಗೆ ಬಿದ್ದು
ಘಾಸಿ ಪಡಲಾರೆನಿಂದು
ಆಸೆಯನು ಬಿಡದೆ ಕಡು ಮೋಸದಲಿ ಸಿಲುಕಿರ್ದು
ವಾಸಿ ಇರದವನನಿಂದು
ದಾಸನೆಂದೆನಿಸಿ ಡಂಗುರ ಹೊಯ್ಸುವೆನು ಆದಿ-
ಕೇಶವನೆ ನೀನು ಎಂದು ಇಂದು ॥ ೩ ॥

೧೫. ಶ್ರೀಹರಿಯ ಪಾದವನ್ನು ತೊರೆದು ಜೀವಿಸುವುದು ಸರ್ವಥಾ ಅಸಾಧ್ಯ ಎಂಬುದನ್ನು ಅತ್ಯಂತ ರೋಚಕವಾಗಿ ವಿವರಿಸುವ ಅವರ ಕೀರ್ತನೆಯೊಂದು ಹೀಗಿದೆ:

ತೊರೆದು ಜೀವಿಸಬಹುದೆ ಹರಿ ನಿನ್ನ ಚರಣಗಳ
ಮರೆಯ ಮಾತೇಕಿನ್ನು ಅರಿತು ಪೇಳುವೆನಯ್ಯ ॥ ಪ ॥

ತಾಯಿ ತಂದೆಯ ಬಿಟ್ಟು ತಪವ ಮಾಡಲುಬಹುದು
ದಾಯಾದಿಬಂಧುಗಳ ಬಿಡಲುಬಹುದು
ರಾಯ ತಾ ಮುನಿದರೆ ರಾಜ್ಯವನು ಬಿಡಬಹುದು
ಕಾಯಜನ ಪಿತ ನಿನ್ನ ಅಡಿಯ ಬಿಡಲಾಗದು ॥ ೧ ॥
ಒಡಲು ಹಸಿಯಲು ಅನ್ನವಿಲ್ಲದಲೆ ಇರಬಹುದು
ಪಡೆದ ಕ್ಷೇತ್ರವ ಬಿಟ್ಟು ಪೋಗಬಹುದು
ಮಡದಿ ಮಕ್ಕಳ ಕಡೆಗೆ ತೊಲಗಿಸಿಯೆ ಬಿಡಬಹುದು
ಕಡಲೊಡೆಯ ನಿನ್ನಡಿಯ ಗಳಿಗೆ ಬಿಡಲಾಗದು ॥ ೨ ॥
ಪ್ರಾಣವನು ಪರರು ಬೇಡಿದರೆತ್ತಿ ಕೊಡಬಹುದು
ಮಾನದಲಿ ಮನವ ತಗ್ಗಿಸಲುಬಹುದು
ಪ್ರಾಣನಾಯಕನಾದ ಆದಿಕೇಶವರಾಯ
ಜಾಣ ಶ್ರೀಕೃಷ್ಣ ನಿನ್ನಡಿಯ ಬಿಡಲಾಗದೊ ॥ ೩ ॥

*****

## ೬೨. ಕುಣಿಕೆಗಳ ನೀ ಬಿಡಿಸಿ ರಕ್ಷಿಸು

**ಗಣನೆಯಿಲ್ಲದೆ ಜನನಿಯರು ಮೊಲೆ-**
**ಯುಣಿಸಲಾ ಪಯಬಿಂದುಗಳನದ-**
**ನೆಣಿಸಲಳವೇ ಸಪ್ತಸಾಗರಕಧಿಕವೆನಿಸುವುದು ।**
**ಬಣಗು ಕಮಲಜನದಕೆ ತಾನೇ**
**ಮಣಯಗಾರನು ಈತ ಮಾಡಿದ**
**ಕುಣಿಕೆಗಳ ನೀ ಬಿಡಿಸಿ ರಕ್ಷಿಸು ನಮ್ಮನನವರತ ॥ ೬೨ ॥**

ಅ: ಲೆಕ್ಕಕ್ಕೆ ಸಿಗದಷ್ಟು ತಾಯಂದಿರು, ಜನ್ಮಜನ್ಮಗಳಲ್ಲಿ ಸ್ತನ್ಯಪಾನವನ್ನು ಮಾಡಿಸಿರುವರು. ಅಂತಹ ಸ್ತನ್ಯಪಾನದ ಹನಿಗಳನ್ನು ಎಣಿಸಲು ಸರ್ವಥಾ ಸಾಧ್ಯದ್ದೀತೇ? ಸಪ್ತಸಾಗರಗಳಿಗಿಂತಲೂ ಮಿಗಿಲೆನ್ನಿಸುವಂತಹುದು ಅದು. ಇದಕ್ಕೆ ಆ ಬ್ರಹ್ಮದೇವರೇ ಕಾರಣ ಪುರುಷರು. ಈ ಬ್ರಹ್ಮದೇವರು ಹಾಕಿರುವ ಈ ಹುಟ್ಟುಸಾವುಗಳ ಕುಣಿಕೆಯನ್ನು ಬಿಡಿಸಿ ಉದ್ಧರಿಸಬೇಕಾದವನು ನೀನು. ಶ್ರೀಹರಿಯೇ! ನೀನು ಸದಾ ನಮ್ಮನ್ನು ರಕ್ಷಿಸು.

ವಿ.: ೧. ಜೀವನ ಹುಟ್ಟು- ಸಾವುಗಳು ಅಸಂಖ್ಯವಾದುದು ಎಂಬುದನ್ನು ಇಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ನಿರೂಪಿಸಲಾಗಿದೆ.

೨. ತಾಯಂದಿರು ಉಣಿಸಿದ ಸ್ತನ್ಯ ಗಣನೆಗೆ ಸಿಲುಕದು ಎಂಬುದು ಆಗಿ ಹೋಗಿರುವ ಜನ್ಮಗಳ ಸಂಖ್ಯೆಯನ್ನು ಕಾವ್ಯಮಯವಾಗಿ ಬಣ್ಣಿಸುವ ಅಪೂರ್ವ ಪರಿಯಾಗಿದೆ. ೮೪ ಲಕ್ಷ ಯೋನಿಯಲ್ಲಿ ಜೀವ ಜನಿಸುವನು ಎಂಬುದು ಪುರಾಣಪ್ರಪಂಚ ಸಾರಿರುವ ವಿಷಯ. ಪ್ರತಿ

ಜನ್ಮದಲ್ಲೂ ಕೆಲವೇ ದಿನಗಳ ಕಾಲ ಸ್ತನ್ಯಪಾನ ಮಾಡಿದರೂ ಸಹ ಅದರ ಒಟ್ಟು ಪ್ರಮಾಣ ಗಣನೆಗೆ ಮೀರುವಂತಹುದು ಆಗಿರುವುದು. ಈ ಅರ್ಥದಲ್ಲಿ ಕ್ಷೀರಸಾಗರಕ್ಕಿಂತ ಅಧಿಕ ಎಂಬುದು ಅರ್ಥವತ್ತಾಗುವ ಪದ. ಇದು ಶ್ರೀಕನಕದಾಸರ ಬೇರೊಂದು ಕೀರ್ತನೆಯಲ್ಲಿ ವಿಸ್ತಾರವಾಗಿ ನಿರೂಪಿತವಾಗಿರುವ ವಿಷಯ:

ಹಲವು ಜನುಮದಿ ತಾಯಿ ಎನಗಿತ್ತ ಮೊಲೆಹಾಲು
ನಲಿನಲಿದು ಉಂಬಾಗ ನೆಲಕೆ ಬಿದ್ದುದ ಕೂಡಿ
ಅಳೆದು ನೋಡಿದರೆ ಕ್ಷೀರಾಂಬುಧಿಗೆ ಎರಡು ಮಡಿ
ಹಲವಾರು ಸಲ ಅತ್ತ ಅಶ್ರುಜಲವನು ಕೂಡಿ
ಅಳೆದು ನೋಡಿದರೆ ಲವಣಾರ್ಣವಕೆ ಮೂರು ಮಡಿ
ಎಲುವುಗಳ ಕೂಡಿದರೆ ಮೇರುಗೆ ನಾಲ್ಕು ಮಡಿ
ಸುಲಿದು ಚರ್ಮವ ಹಾಸಿದರೆ ಧರೆಗೆ ಐದು ಮಡಿ
ನೆಲೆ ಯಾವುದೀ ದೇಹಕೆ ನರಹರಿಯೆ (ನೊಂದೆ ಹರಿ ಎನ್ನದೇ)

– **ಪಯ** – ಹಾಲು; **ಪಯಬಿಂದುಗಳು** - ಹಾಲಿನ ಹನಿಗಳು.

೩. ಈ ರೀತಿಯಾದ ಸೃಷ್ಟಿಕಾರ್ಯವನ್ನು ಮಾಡುವವರು ಬ್ರಹ್ಮದೇವರು ಎಂಬುದನ್ನು ಮಣಯಗಾರನು ಎಂಬ ಪದದಿಂದ ಸೂಚಿಸಿರುವರು. ಬ್ರಹ್ಮದೇವರನ್ನು ಬಣಗು ಎಂದಿರುವುದು, ಅವರಿಂದ ಬಂದಿರುವ ದೇಹಗಳ ಬಗ್ಗೆ ವಿರಕ್ತಿಯ ಮಾತೇ ಹೊರತು, ಅವರನ್ನು ನಿಂದಿಸುವ ಭಾವದಿಂದ ಕೂಡಿದ್ದಲ್ಲ; **ಬಣಗು** – ಕ್ಷುದ್ರ, ಹೀನ, ದೀನ; **ಮಣಯಗಾರ** – ಪಾರುಪತ್ಯಗಾರ; ಕಾರಣಪುರುಷ.

೪. ಕುಣಿಕೆಗಳು ಎಂದರೆ ಕಗ್ಗಂಟುಗಳು, ಬಿಡಿಸಲಾರದ ಕುಣಿಕೆಗಳು ಎಂದರ್ಥ. ಈ ದೇಹದ ಬಂಧನ ಅದೆಷ್ಟು ಅಗಾಧ, ಗಾಢ ಎಂಬುದನ್ನು ಕುಣಿಕೆ ಎಂಬ ಪದದಿಂದ ಸೂಚಿಸಿರುವರು. ದೇಹ ಕೊಡುವ ಕಾರ್ಯ ಬ್ರಹ್ಮದೇವರದಾದರೂ ಮೂಲ ಬಂಧ ಮಾತ್ರ ಭಗವದಧೀನವಾದ ಪ್ರಕೃತಿಯದೇ ಆಗಿದೆ. ಆದ್ದರಿಂದ, ಅದರ ಬಿಡುಗಡೆಯು ಸಹ ಭಗವಂತನಿಂದಲೇ ಆಗುವಂತಹುದು ಎಂಬುದನ್ನು ಕುಣಿಕೆಗಳ ನೀ ಬಿಡಿಸಿ ರಕ್ಷಿಸು ಎಂಬ ಪದದಿಂದ ಸೂಚಿಸಿರುವರು; **'ಬಂಧಕೋ ಭವಪಾಶೇನ ಭವಪಾಶಾಚ್ಚ ಮೋಚಕಃ'** ಎಂಬ ಶ್ರೀಮದಾಚಾರ್ಯರಿಂದ ವಿಷ್ಣುತತ್ತ್ವನಿರ್ಣಯದಲ್ಲಿ ಉದಾಹೃತವಾದ ಮಾತಿನ ಭಾವ ಇದಾಗಿದೆ.

*****

## ೬೩. ನೀನಿರಲು ಕಮಲಾಸನನ ಹಂಗೇಕೆ ರಕ್ಷಿಸು

**ಲೇಸ ಕಾಣೆನು ಜನನಮರಣದಿ**
**ಗಾಸಿಯಾದೆನು ನೊಂದೆನಕಟಾ**
**ಲೇಸೆನಿಸಿ ನೋಡಲು ಪರಾತ್ಪರವಸ್ತು ನೀನಾಗಿ ।**

**ನೀ ಸಲಹುವವನಲ್ಲವೇ ಕರು-**
**ಣಾಸಮುದ್ರನು ನೀನಿರಲು**
**ಕಮಲಾಸನನ ಹಂಗೇಕೆ ರಕ್ಷಿಸು ನಮ್ಮನನವರತ** || ೬೩ ||

**ಅ: ಜನನ-ಮರಣಗಳ ರೂಪದ ಸಂಸಾರದಿಂದ ಒಳಿತಾಗುವುದು ಸಾಧ್ಯವಿಲ್ಲ. ಬದಲಿಗೆ ಅದರಿಂದ ಲಭಿಸುವುದು ನೋವು ಮಾತ್ರ. ಅದರಿಂದ ನಾನು ನೊಂದಿರುವೆ. ಅಯ್ಯೋ! ಸರಿಯಾದ ರೀತಿಯಲ್ಲಿ ವಿಚಾರ ಮಾಡಿದಾಗ ಪರಾತ್ಪರ ವಸ್ತು ನೀನೇ ಎಂಬುದು ಮತ್ತು ನೀನೇ ಸರ್ವತ್ರ ನೆಲೆಸಿದ್ದು ರಕ್ಷಕನಾಗಿರುವವನು ಎಂಬುದು ತಿಳಿಯುವುದು ಅಲ್ಲವೇ? ನೀನು ಕರುಣಾಸಮುದ್ರನು ಇಂತಹ ನಿನ್ನ ರಕ್ಷಣೆ ಇರುವಾಗ ಬ್ರಹ್ಮದೇವರ ಹಂಗಿಗೆ ಕಾರಣವಿಲ್ಲ. ಶ್ರೀಹರಿಯೇ! ನೀನು ಸದಾ ನಮ್ಮನ್ನು ರಕ್ಷಿಸು.**

ವಿ.: ೧. ಸಂಸಾರದಲ್ಲಿ ಸುಖವಿರದು, ಅದರಿಂದ ಬಿಡುಗಡೆ ಲಭಿಸಿದಾಗಲೇ ನಿಜವಾದ ಒಳಿತು ಎಂಬುದನ್ನು ಅಂತಹ ಮುಕ್ತಿದಾತನು ಕರುಣಾಳುವಾದ ಶ್ರೀಹರಿಯೇ ಆಗಿರುವನು ಎಂಬುದನ್ನು ಇದರಲ್ಲಿ ನಿರೂಪಿಸಿರುವರು.

೨. ಮನುಷ್ಯನು, ಸುಖಕ್ಕೋಸ್ಕರವಾಗಿ ಅರಸುವ ಪ್ರತಿಯೊಂದು ವಸ್ತು ಸಹ ಅನಿತ್ಯವಾದುದು. ಅವುಗಳ ಪಡೆಯಬಯಸುವ ಸಂಸಾರವು ಸಹ ಹುಟ್ಟು - ಸಾವುಗಳ ಸಂಕೋಲೆಯೇ ಆಗಿದೆ. ಅದರಿಂದಾಗಿ ಲಭಿಸುವುದು ಬರಿ ನೋವು ಮಾತ್ರ. ಆದ್ದರಿಂದ, ವಿಷಯಸುಖವನ್ನು ಬಯಸದೇ ವಿರಕ್ತನಾಗಿ ಸಾಧನೆ ಮಾಡಬೇಕು ಎಂದು ಭಾವ; **ಗಾಸಿ** – ನೋವು, **ಗಾಸಿಯಾದೆನು** – ನೊಂದೆನು.

೩. ಅಂತಹ ಲೇಸನ್ನು ಕೊಡಲು ಪರಾತ್ಪರ ವಸ್ತುವಿಗೆ ಮಾತ್ರ ಸಾಧ್ಯ. ಪರಾತ್ಪರ ಎಂದರೆ ಅತಿ ಶ್ರೇಷ್ಠ ವಸ್ತುವಿಗಿಂತಲೂ ಮಿಗಿಲಾದ ಪರಮ ಶ್ರೇಷ್ಠ ವಸ್ತು ಎಂದರ್ಥ. ಅಂತಹ ಪರಾತ್ಪರ ವಸ್ತು ಶ್ರೀಹರಿ ಒಬ್ಬನೇ. ಅವನು ಕರುಣಾಸಮುದ್ರ. ಅವನು ಒಲಿದಾಗ ಮಾತ್ರ ಸಂಸಾರ ಬಂಧನವು ಪರಿಹಾರವಾಗಿ ಶಾಶ್ವತವಾದ ನಲಿವು ಲಭಿಸುವುದು ಎಂದರ್ಥ. ಇದು ಹರಿಸರ್ವೋತ್ತಮತ್ವವನ್ನು ಸಾರುವ ಸಕಲ ಶಾಸ್ತ್ರವಚನಗಳನ್ನು ಆಧರಿಸಿದ ಮಹಾಪ್ರಮೇಯವಾಗಿದೆ.

೪. ಶ್ರೀಹರಿಯ ಕರುಣೆ ಸೀಮಿತ ಸಂಖ್ಯೆಯ ಜನರನ್ನು ಸಲಹುವ ಮಿತಿಯನ್ನು ಹೊಂದಿಲ್ಲ. ಅನಾದಿಕಾಲದಿಂದ – ಅನಂತಕಾಲದವರೆಗಿನ ಸಕಲ ಸುಜೀವಿಗಳನ್ನು ಲೀಲಾಜಾಲವಾಗಿ ಉದ್ಧರಿಸುವಷ್ಟು ಅಪಾರವಾದುದು ಎಂಬುದನ್ನು '**ಕರುಣಾಸಮುದ್ರ**' ಎಂಬ ಪದದಿಂದ ಸೂಚಿಸಿರುವರು.

೫. ಮುಕ್ತಿ ಲಭಿಸಿದ ಮೇಲೆ ಮತ್ತೆ ಸಂಸಾರದಲ್ಲಿ ಹುಟ್ಟಿ ಬರುವ ಪ್ರಸಕ್ತಿ ಸರ್ವಥಾ ಇರದು ಎಂಬುದನ್ನು '**ಕಮಲಾಸನನ ಹಂಗೇಕೆ**' ಎಂಬ ಪದದಿಂದ ಸೂಚಿಸಿರುವರು. ಕಮಲಾಸನ

ಎಂದರೆ ಬ್ರಹ್ಮದೇವರು . ಕಮಲಾಸನನದು ಸೃಷ್ಟಿಯ ಕಾರ್ಯ. ಮುಕ್ತರಾದವರಿಗೆ ಸೃಷ್ಟಿಯ ಪ್ರಸಕ್ತಿಯೇ ಇಲ್ಲವಾದ್ದರಿಂದ, ಅವರ ಹಂಗು ಅನಗತ್ಯ ಎಂದರ್ಥ.

೬. '**ಕಮಲಾಸನನ ಹಂಗು**' ಎಂಬ ಮಾತಿನಲ್ಲಿ ಮತ್ತೊಂದು ಬಗೆಯ ವಿಶೇಷಾರ್ಥವನ್ನೂ ಗಮನಿಸಬಹುದು. ರಾವಣ, ಹಿರಣ್ಯಕಶಿಪು ಮೊದಲಾದ ಮಹಾದೈತ್ಯರು ಒಳಿತನ್ನು ಸಾಧಿಸಲೆಂದು ಆಶ್ರಯಿಸಿದ್ದು ಬ್ರಹ್ಮದೇವರನ್ನು. ಆದರೆ, ಅವರು ಹುಟ್ಟನ್ನು ನೀಡುವ ದೇವತೆಯೇ ಹೊರತು ಹುಟ್ಟು ಪರಿಹರಿಸುವವರೇನಲ್ಲ. ಎಂದರೆ, ದೈತ್ಯರ ಆ ಪ್ರಯತ್ನ ಮರಳಿ ಹುಟ್ಟಲು ಕಾರಣವಾಯಿತೇ ಹೊರತು ಮುಕ್ತಿಗೆ ಅಲ್ಲ. ಶ್ರೀಹರಿಯೊಬ್ಬನೇ ಹುಟ್ಟು ಸಾವುಗಳ ಸಂಕೋಲೆ ಎನ್ನಿಸುವ ಸಂಸಾರವನ್ನು ಪರಿಹರಿಸುವ ದೇವತೆ. ಆದ್ದರಿಂದ ವಿವೇಕಿಗಳು ಅವನನ್ನೇ ಆಶ್ರಯಿಸಬೇಕು ಎಂದು ಭಾವ. ಇದರಿಂದ ಲಯಕಾರಕರಾದ ರುದ್ರದೇವರನ್ನು ಆಶ್ರಯಿಸುವುದು ಸಹ ಮುಕ್ತಿಗೆ ಕಾರಣವಾಗದೆ, ಮತ್ತೊಮ್ಮೆ ಸಾಯುವಂತಹ, ಸತ್ತು ಹುಟ್ಟುವಂತಹ, ಸಂಸಾರ ಬಂಧನಕ್ಕೆ ಕಾರಣವಾಗುವುದು ಎಂಬ ವಿಶೇಷಾರ್ಥವು ಸೂಚಿತ.

೭. ಜನ್ಮಾಂತರದ ಕರ್ಮಗಳು ಮುಂದಿನ ಜನ್ಮಗಳಿಗೆ ಕಾರಣವಾಗುವ ಬಗೆಯನ್ನು ದಾಸರು ಇನ್ನೊಂದು ಪದ್ಯದಲ್ಲಿ ವಿವರವಾಗಿ ತಿಳಿಸಿರುವರು:

ಪೂರ್ವ ಜನ್ಮದಲಿ ನಾ ಮಾಡಿದ ಭವದಿಂದ
ಉರ್ವಿಯೊಳು ಜನಿಸಿದೆನೊ ಕೃಷ್ಣಾ ॥ ಪ ॥
ಕಾರುಣ್ಯನಿಧಿ ಎನ್ನ ಕಾಯಬೇಕಯ್ಯ ಹರಿ
ವಾರಿಜನಾಭನೆ ಮುದ್ದುಕೃಷ್ಣ ॥ ಅಪ ॥
ಪುಟ್ಟಿದಂದಿಂದಿಗು ಸುಖವ ನಾ ಕಾಣದಲೆ
ಕಷ್ಟಪಟ್ಟೆನು ಕಷ್ಟನಾದೆನೊ ಕೇಳೋ ಕೃಷ್ಣಾ
ತೊಟ್ಟಿಲಿನ ಶಿಶು ತಾಯ ಬಿಟ್ಟ ತೆರನಂತೆ ಕಂ-
ಗೆಟ್ಟು ಶೋಕಿಪೆನೋ ಸೊರಗಿದೆನಯ್ಯ ಕೃಷ್ಣಾ
ಮುಟ್ಟಲಮ್ಮರು ಎನ್ನ ಸತಿ ಸುತರು ಬಾಂಧವರು
ಅಟ್ಟಿ ಎಳೆಯುತ್ತಿಹರೊ ಕೃಷ್ಣಾ
ಕಷ್ಟ ದಾರಿದ್ರ್ಯವನು ಪರಿಹರಿಸದಿರೆ ದೂರು
ಮುಟ್ಟುವುದು ನಿನಗಯ್ಯ ಕೃಷ್ಣಾ ॥ ೧ ॥
ಕಾಶಿಯಾ ವಾಸವನು ಬಯಸಿ ಬಹು ದಿನದಿಂದ
ಆಸೆಯೊಳಗಿದ್ದೆನಯ್ಯ ಕೃಷ್ಣಾ
ಗಾಸಿಯನು ಮಾಡದಲೆ ದೋಷವನು ಪರಿಹರಿಸೊ
ಸಾಸಿರದ ನಾಮದಾ ಕೃಷ್ಣಾ
ಹೇಸಿಕೆಯೊಳಿರ್ದ ಸಂಸಾರವೆಂಬುವ ಮಾಯ-
ಪಾಶದಿಂದಲಿ ಬಿಗಿವರೇ ಕೃಷ್ಣಾ

ಕಂಸಮರ್ದನನೆ ನೀ ಕಾಯಬೇಕಯ್ಯ ಹರಿ
ವಾಸುದೇವನೆ ಮುದ್ದುಕೃಷ್ಣಾ ॥ ೨ ॥
ಲೋಕದೊಳಗೆನ್ನನು ಪೋಲ್ವ ಪಾಪಿಗಳನ್ನು
ನೀ ಕಂಡು ಬಲ್ಲೆಯಾ ಕೃಷ್ಣಾ
ಸಾಕಿನ್ನು ಎನಗೊಂದು ಗತಿಯ ತೋರಿಸಿ ಸದ್ವಿ-
ವೇಕಿಯನೆ ಮಾಡಯ್ಯ ಕೃಷ್ಣಾ
ರಾಕೇಂದುಮುಖಿ ದ್ರೌಪದಿಯ ಮಾನವನು ಕಾಯ್ದೆ
ಆಕೆಗಕ್ಷಯವಿತ್ತೆ ಕೃಷ್ಣಾ ಪಿ-
ನಾಕಿಸಖನಾದಿಕೇಶವನೆ ಉಡುಪಿಯ ವಾಸ
ಸಾಕಿ ಸಲಹೈ ಎನ್ನ ಕೃಷ್ಣಾ ॥ ೩ ॥

*****

## ೬೪. ನಿಜರೂಪಿನಲಿ ಬಂದೊಲಿದು ರಕ್ಷಿಸು

**ಕಾಪುರುಷರೈದಾರುಮಂದಿ ಸ -**
**ಮೀಪದಲಿ ಕಾಡುವರು ಎನ್ನನು**
**ನೀ ಪರಾಮರಿಸದೆ ಪರಾಕಾಗಿಹುದು ಲೇಸಲ್ಲ।**
**ಶ್ರೀಪದಾಬ್ಜದ ಸೇವೆಯಲಿ ನೆರೆ-**
**ಪಾಪವನು ಪರಿಹರಿಸಿ ನೀ ನಿಜ-**
**ರೂಪಿನಲಿ ಬಂದೊಲಿದು ರಕ್ಷಿಸು ನಮ್ಮನನವರತ ॥ ೬೪ ॥**

**ಅ: ಹನ್ನೊಂದು ಕೆಟ್ಟ ಜನರು ಸಮೀಪದಲ್ಲಿದ್ದು ನನ್ನನ್ನು ಕಾಡುತ್ತಿರುವರು. ಇದನ್ನು ನೀನು ಗಮನಿಸದೇ ಉದಾಸೀನದಿಂದಿರುವುದು ಸರಿಯಲ್ಲ. ನಿನ್ನ ಮಂಗಳಕರವಾದ ಪಾದಕಮಲದ ಸೇವೆಯಲ್ಲಿ ತೊಡಗಿಸುವ ಮೂಲಕ ಇವರಿಂದ ಒದಗುವ ಪಾಪವನ್ನು ನೀನು ಪರಿಹರಿಸಿ ಬಿಂಬರೂಪದಲ್ಲಿ ಬಂದು ಪ್ರಸನ್ನನಾಗಿ ನಮ್ಮನ್ನು ಸದಾ ರಕ್ಷಿಸು.**

ವಿ.: ೧. ಇಂದ್ರಿಯಾಭಿಮಾನಿ ದೈತ್ಯರಿಂದ ನಡೆಯುವ ಪಾಪಗಳನ್ನು ಪರಿಹರಿಸಿ ರಕ್ಷಿಸಬೇಕೆಂದು ಶ್ರೀಹರಿಯನ್ನು ಇಲ್ಲಿ ಪ್ರಾರ್ಥಿಸಲಾಗಿದೆ.

೨. ಐದಾರು ಮಂದಿ ಎಂದರೆ, ಐದು + ಆರು ಒಟ್ಟು ಹನ್ನೊಂದು ಎಂದರ್ಥ. ಐದು ಕರ್ಮೇಂದ್ರಿಯಗಳು ಹಾಗು ಆರು ಜ್ಞಾನೇಂದ್ರಿಯಗಳು ಎಂಬುದು ಐದಾರು ಎಂಬ ವಿಭಾಗಕ್ಕೆ ಹಿನ್ನೆಲೆ. ಮನಸ್ಸು ಸಹ ಜ್ಞಾನೇಂದ್ರಿಯವಾಗಿದ್ದು ಅಂತಃಕರಣ ಎನ್ನಿಸಿದೆ.

೩. ಇಲ್ಲಿ '**ಕಾಪುರುಷರು**' ಎಂದರೆ ಕೆಟ್ಟ ಜನರು ಎಂದರ್ಥ. ಇಂದ್ರಿಯಗಳಿಗೆ ಅಭಿಮಾನಿ-ಗಳಾಗಿ ದೇವತೆಗಳು ಇರುವಂತೆ ದೈತ್ಯರು ಸಹ ಇರುವರು. ಜೀವರಿಂದ ನಡೆಯುವ ಸತ್ಕರ್ಮಗಳಿಗೆ

ದೇವತೆಗಳು ಪ್ರೇರಕರಾಗಿರುವಂತೆ, ದುಷ್ಕರ್ಮಗಳಿಗೆ ದೈತ್ಯರು ಪ್ರೇರಕರಾಗಿರುವರು. ದೇವತೆಗಳು ಮಾಡಿಸುವ ಪುಣ್ಯಕಾರ್ಯಗಳು ನಮ್ಮ ಒಳಿತಿಗೆ ಕಾರಣವಾಗುವಂತೆ ದೈತ್ಯರು ಮಾಡಿಸುವ ಪಾಪಕಾರ್ಯಗಳು ನಮ್ಮ ಕೆಡುಕಿಗೆ ಕಾರಣವಾಗುವವು. ಪುಣ್ಯವು ಸದ್ಗತಿಗೆ ಕಾರಣವಾದರೆ, ಪಾಪವು ದುರ್ಗತಿಗೆ ಕಾರಣವಾಗುವುದು. ಆದ್ದರಿಂದ ಪಾಪದ ಪರಿಹಾರ ಅತ್ಯಗತ್ಯವಾದ ಸಾಧನೆ. ಅದು ಶ್ರೀಹರಿಯ ಕೃಪೆಯಿಂದಲೇ ಸಾಧ್ಯ ಎಂಬುದು ಇಲ್ಲಿಯ ಭಾವ.

೪. ಇಲ್ಲಿಯ '**ಕಾಪುರುಷರೈದಾರುಮಂದಿ**' ಎಂಬುದಕ್ಕೆ ಐದು ಜ್ಞಾನೇಂದ್ರಿಯಗಳಿಗೆ ಅಭಿಮಾನಿಯಾದ ದೈತ್ಯರು ಹಾಗೂ ಕಾಮಾದಿ ಅರಿಷಡ್ವರ್ಗಗಳಿಗೆ ಅಭಿಮಾನಿಯಾದ ಕಾಲನೇಮಿ ಮೊದಲಾದ ದೈತ್ಯರು ಎಂದು ಸಹ ಅರ್ಥಮಾಡಿಕೊಳ್ಳಬಹುದು.

೫. ಇಲ್ಲಿ **ಸಮೀಪದಲಿ** ಎಂದರೆ ದೇಹದೊಳಗೆ ನೆಲೆಸಿದ್ದು ಎಂದರ್ಥ. ದೇವತೆಗಳು ಇತರರಲ್ಲಿದ್ದು ಮಾಡಿಸುವ ಪಾಪಕಾರ್ಯಗಳು ದೂರದಲ್ಲಿದ್ದು ಮಾಡುವ ಪಾಪ-ಕಾರ್ಯಗಳಾದರೆ ದೇಹದೊಳಗೆ ನೆಲೆಸಿ ಮಾಡುವ ಪಾಪಕಾರ್ಯಗಳು ಸಮೀಪದಲಿ ಮಾಡುವ ಪಾಪಕಾರ್ಯಗಳು ಎನಿಸುವವು.

೬. **ಕಾಡುವರು** ಎಂದರೆ ಪೀಡಿಸುವರು ಎಂದರ್ಥ. ದೈತ್ಯರ ಈ ಪೀಡೆಯ ಒಟ್ಟು ವಿವರಣೆಯನ್ನು ಪಾಪಪುರುಷ ಚಿಂತನೆಯಲ್ಲಿ ಕಾಣಬಹುದು. ಪಾಪಪುರುಷ ಚಿಂತನೆಯ ವಿವರ ಹೀಗಿದೆ:

ಬ್ರಹ್ಮಹತ್ಯಾಶಿರಸ್ಕಂ ಚ ಸ್ವರ್ಣಸ್ತೇಯಭುಜದ್ವಯಮ್ ।
ಸುರಾಪಾನಹೃದಾ ಯುಕ್ತಂ ಗುರುತಲ್ಪಕಟಿದ್ವಯಮ್ ॥
ತತ್ಸಂಯೋಗಪದದ್ವಂದ್ವಮಂಗಪ್ರತ್ಯಂಗಪಾತಕಮ್ ॥
ಉಪಪಾತಕರೋಮಾಣಂ ರಕ್ತಶ್ಮಶ್ರುವಿಲೋಚನಮ್ ।
ಖಡ್ಗಚರ್ಮಧರಂ ಕೃಷ್ಣಂ ಕುಕ್ಷೌ ವಾಮೇ ವಿಚಿಂತಯೇತ್ ।

– ಸಂಗ್ರಹ (ವಾಯುಪುರಾಣ–ಮಾಘಮಾಸಮಾಹಾತ್ಮ್ಯ (ಸ್ಕ.ಮು.)

೭. ಇದನ್ನು ಶ್ರೀಹರಿಯು ಗಮನಿಸದೇ ಇರಲು ಸಾಧ್ಯವೇ ಇಲ್ಲ. ಆದ್ದರಿಂದ ಭಕ್ತರಾದ ನಮ್ಮ ಮೇಲಿನ ಕೃಪೆಯಿಂದ ಶ್ರೀಹರಿಯು ಈ ಪಾಪಿಗಳ ಪೀಡೆ ಒದಗದಂತೆ ಪಾಲಿಸಬೇಕು ಇಲ್ಲವಾದಲ್ಲಿ ಅವನ ವ್ಯಕ್ತಿತ್ವಕ್ಕೆ ಅದು ಶೋಭಿಸದು. '**ಲೇಸಲ್ಲ**' ಎಂಬುದಕ್ಕೆ ನಮ್ಮ ಒಳಿತಿಗೆ ಕಾರಣವಾಗದು ಎಂಬ ಅರ್ಥವೂ ವಿವಕ್ಷಿತ; **ಪರಾಕು** – ಉದಾಸೀನತೆ, ಅಲಕ್ಷ

೮. ಶ್ರೀಹರಿಯ ಪಾದಕಮಲದ ಸೇವೆಯಲ್ಲಿ ತೊಡಗಿದಾಗ ಈ ದೈತ್ಯರ ಉಪಟಳಕ್ಕೆ ಅವಕಾಶವಿಲ್ಲದಂತಾಗುವುದು. ಅದರಿಂದಾಗಿ ಆ ಮುನ್ನ ಅವರಿಂದ ನಡೆದ ಪಾಪವು ಪರಿಹಾರವಾಗುವುದು. ಮುಂದೆ ಯಾವುದೇ ಪಾಪಕಾರ್ಯವು ನಡೆಯದಂತೆಯೂ

ಆಗುವುದು. ಹೀಗೆ ಶ್ರೀಹರಿಯು ನಮ್ಮನ್ನು ಪಾಪಿಗಳಾಗದಂತೆ ಪಾಲಿಸಬೇಕು ಎಂದು ಭಾವ; **ಪದಾಬ್ಜ** - ಪಾದಕಮಲ.

೯. **ನಿಜರೂಪಿನಲಿ** ಎಂಬುದಕ್ಕೆ ಬಿಂಬರೂಪದಲ್ಲಿ ಎಂದರ್ಥ. ಪ್ರತಿಯೊಬ್ಬ ಜೀವಿಯ ಹೃದಯಕಮಲದಲ್ಲಿ ನೆಲೆಸಿರುವ ಭಗವದ್ರೂಪಕ್ಕೆ ಬಿಂಬರೂಪ ಎಂದು ಹೆಸರು. ಆ ಬಿಂಬರೂಪದ ದರ್ಶನವೇ ಅಪರೋಕ್ಷಜ್ಞಾನ ಎನ್ನಿಸುವುದು.

೧೦. ಇಲ್ಲಿ **ಬಂದು** ಎಂಬುದಕ್ಕೆ ದರ್ಶನವಿತ್ತು ಎಂದರ್ಥ. ಸದಾ ಶ್ರೀಹರಿಯು ನೆಲೆಸಿಯೇ ಇರುವುದರಿಂದ ಅನುಗ್ರಹೋನ್ಮುಖನಾಗಿ ಬಿಂಬರೂಪದ ದರ್ಶನವನ್ನು ನೀಡುವುದು ಎಂದು ಇದರ ಭಾವ.

೧೧. **ಒಲಿದು** ಎಂಬುದಕ್ಕೆ ಪೂರ್ಣಪ್ರಸನ್ನನಾಗಿ ಎಂದು ಅರ್ಥ. ಅಂತಹ ಪರಮಪ್ರಸಾದವೇ ಮೋಕ್ಷಕ್ಕೆ ಸಾಧನ ಎಂಬುದು ಶಾಸ್ತ್ರಗಳಲ್ಲಿ ನಿರೂಪಿತವಾಗಿರುವ ಪ್ರಮೇಯ:

**ಯತೋ ನಾರಾಯಣಪ್ರಸಾದಮೃತೇ ನ ಮೋಕ್ಷಃ** (ಬ್ರಹ್ಮಸೂತ್ರಭಾಷ್ಯ ೧/೧/೧)

೧೨. ನರಸಿಂಹರೂಪದಿಂದ ಶ್ರೀಹರಿಯು ಹಿರಣ್ಯಕಶಿಪುವಿನ ಬಳಿಗೆ ಬಂದರೂ, ಒಲಿಯದೆ ಮುನಿದು ಸಂಹರಿಸಿದ್ದು ಲೋಕವಿದಿತ. ಆದ್ದರಿಂದ ಬಂದು ಒಲಿದು ಎಂದು ಪ್ರಾರ್ಥಿಸುವರು ಎಂದು ತಿಳಿಯಬೇಕು.

೧೩. ಅಪರೋಕ್ಷಜ್ಞಾನವಾದಾಗಲೇ ಸಕಲ ಸಂಚಿತಪಾಪಗಳು ನಾಶವಾಗುವುವು ಎಂಬ ಶಾಸ್ತ್ರಾರ್ಥದ ಹಿನ್ನೆಲೆಯಲ್ಲಿ ಈ ಪದ್ಯ ವಿಶೇಷಾರ್ಥವನ್ನು ನೀಡುವುದು:

**ಪ್ರಾರಬ್ಧಕರ್ಮಣೋಽನ್ಯಸ್ಯ ಜ್ಞಾನಾದೇವ ಪರಿಕ್ಷಯಃ ।** (ಅಣುಭಾಷ್ಯ)

**ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ ಕುರುತೇಽರ್ಜುನ ।**
**ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ತಥಾ ॥** - (ಗೀತಾ ೪/೩೭)

೧೪. ಸಂಸಾರದಲ್ಲಿ ಒದಗುವ ಬಗೆಬಗೆಯ ಆಘಾತಗಳನ್ನು ವಿವರಿಸುವ ಶ್ರೀಕನಕದಾಸರ ಪದ್ಯವನ್ನು ಈಗಾಗಲೇ ಪೂರ್ಣವಾಗಿ ಹಿಂದೆ (೬೦ನೇ ಪದ್ಯ) ಕೊಡಲಾಗಿದೆ.

*****

## ೬೫. ಸುಕರ್ಮವನಾದರಿಸಿ ಕೈಕೊಂಡು ರಕ್ಷಿಸು

**ಐದು ತತ್ತ್ವಗಳಾದುವೊಂದ-**
**ಕ್ಕೈದು ಕಡೆಯಲಿ ತತ್ತ್ವ ಇಪ್ಪ-**
**ತ್ತೈದು ಕೂಡಿದ ತನುವಿನಲಿ ವಂಚಿಸದೆ ನೀನಿರಲು ।**

ಭೇದಿಸದೆ ಜೀವಾತ್ಮ ತಾ ಸಂ-
ಪಾದಿಸಿದ ಸಂಚಿತಸುಕರ್ಮವ-
ನಾದರಿಸಿ ಕೈಕೊಂಡು ರಕ್ಷಿಸು ನಮ್ಮನನವರತ ॥ ೬೫ ॥

ಅ: ಐದು ತತ್ತ್ವಗಳು, ಐದರಿಂದ ಗುಣಿಸಲ್ಪಟ್ಟು ಒಟ್ಟು ೨೫ ತತ್ತ್ವಗಳಾಗುವುವು. ಹೀಗೆ ನಮ್ಮ ಪಾಂಚಭೌತಿಕ ದೇಹದಲ್ಲಿ ಒಟ್ಟು ೨೫ ತತ್ತ್ವಗಳು ನೆಲೆಸಿರುವವು. ಇದರಲ್ಲಿ ಶ್ರೀಹರಿಯು ಮಾಯೆಗೊಳಗಾಗಿಸದೆ ಅನುಗ್ರಹೋನ್ಮುಖನಾಗಿ ನೆಲೆಸಿದಾಗ ಅವುಗಳಲ್ಲಿ ಪರಸ್ಪರ ಭೇದವನ್ನು ತಿಳಿಸಿಕೊಡುವನು. ಪ್ರಸನ್ನನಾಗುವ ಶ್ರೀಹರಿಯ ಅನುಗ್ರಹದಿಂದ ಜೀವಾತ್ಮನು ಆವರೆಗೆ ಮಾಡಿದ ಸಕಲ ಪುಣ್ಯಕರ್ಮಗಳನ್ನು ಪ್ರೀತಿಯಿಂದ ಸ್ವೀಕರಿಸಿ ರಕ್ಷಿಸುವನು. ಅಂತಹ ಶ್ರೀಹರಿಯೇ! ನೀನು ಸದಾ ನಮ್ಮನ್ನು ರಕ್ಷಿಸು.

ವಿ.: ೧. ನಮ್ಮ ದೇಹದಲ್ಲಿ ೨೫ ತತ್ತ್ವಗಳು ನೆಲೆಸಿದ್ದು ಅವುಗಳ ಸರ್ವಪ್ರೇರಕನಾಗಿ ಭಗವಂತನು ಇದ್ದು ಸಾಧನೆಯನ್ನು ಮಾಡಿಸಿದ ಬಳಿಕ ಸದ್ಗತಿ ನೀಡುವನು ಎಂದು ಇದರ ಭಾವ.

೨. ಐದು ತತ್ತ್ವಗಳು ಎಂದರೆ ಮೇಲ್ನೋಟಕ್ಕೆ ಸ್ಫುಟವಾಗಿ ಗೋಚರಿಸುವ ಪೃಥ್ವಿ, ಜಲ, ಅಗ್ನಿ, ವಾಯು ಹಾಗೂ ಆಕಾಶ. ಇತರ ತತ್ತ್ವಗಳ ಹಾಗೂ ಅವುಗಳ ಅಭಿಮಾನಿ ದೇವತೆಗಳ ವಿವರ ಹೀಗಿದೆ:

| ತತ್ತ್ವಗಳು | ಅಭಿಮಾನಿ ದೇವತೆಗಳು |
|---|---|
| ಅವ್ಯಕ್ತ ತತ್ತ್ವ | ಮಹಾಲಕ್ಷ್ಮಿ (ಸರಸ್ವತಿ ಭಾರತಿಯರು) |
| ಮಹತ್ತತ್ತ್ವ | ಬ್ರಹ್ಮವಾಯುಗಳು |
| ಅಹಂಕಾರತತ್ತ್ವ | ಗರುಡ ಶೇಷ ರುದ್ರರು |
| ಮನಸ್ಸು | ಇಂದ್ರಕಾಮರು |
| **ಪಂಚಜ್ಞಾನೇಂದ್ರಿಯಗಳು:** | |
| ಶ್ರೋತ್ರ | ಇಂದ್ರ, ಚಂದ್ರ ಮೊದಲಾದ ದಿಗ್ದೇವತೆಗಳು |
| ತ್ವಕ್ | ಅಹಂಕಾರಿಕಪ್ರಾಣ |
| ಕಣ್ಣು | ಸೂರ್ಯ |
| ಜಿಹ್ವೆ | ವರುಣ |
| ಘ್ರಾಣ | ಅಶ್ವಿನೀದೇವತೆಗಳು |
| **ಪಂಚಕರ್ಮೇಂದ್ರಿಯಗಳು:** | |
| ವಾಕ್ | ಅಗ್ನಿ |
| ಪಾಣಿ | ಶಚಿ ರತಿ ಅನಿರುದ್ಧ ಸ್ವಾಯಂಭುವಮನು ದಕ್ಷ ಬೃಹಸ್ಪತಿ |
| ಪಾದ | ಜಯಂತ, ಋಷಭ |

| | |
|---|---|
| ಪಾಯು | ಮಿತ್ರ |
| ಉಪಸ್ಥ | ವಸಿಷ್ಠಾದಿಸಪ್ತರ್ಷಿಗಳು, ವಿಶ್ವಾಮಿತ್ರ, ವೈವಸ್ವತಮನು |
| **ಪಂಚತನ್ಮಾತ್ರಾಗಳು:** | |
| ಶಬ್ದ | ಅಹಂಕಾರಿಕಪ್ರಾಣ, ಬೃಹಸ್ಪತಿ |
| ರೂಪ | ವ್ಯಾನ |
| ರಸ | ಉದಾನ |
| ಸ್ಪರ್ಶ | ಅಪಾನ |
| ಗಂಧ | ಸಮಾನ |
| **ಪಂಚಭೂತಗಳು:** | |
| ಅಗ್ನಿ | ಅಗ್ನಿ |
| ವಾಯು | ವಾಯು |
| ಆಕಾಶ | ಗಣೇಶ |
| ಭೂಮಿ | ಪೃಥ್ವಿ |
| ಜಲ | ಬುಧ |

– ಕಾಮಾದಿ ದೋಷಗಳಿಗೆ ಅಭಿಮಾನಿದೈತ್ಯರು ಕಾಲನೇಮಿ ಮೊದಲಾದವರು ಎಂದು ತಿಳಿಯಬೇಕು.

೩. ಶ್ರೀಹರಿಯು ಈ ಬಗ್ಗೆ ಎಚ್ಚರವನ್ನು ನೀಡಿ ಆ ಎಲ್ಲ ದೇವತೆಗಳ ಹಾಗೂ ಅವುಗಳಿಗೆ ಪ್ರೇರಕನಾದ ಶ್ರೀಮುಖ್ಯಪ್ರಾಣನ ಹಾಗೂ ಸರ್ವಪ್ರೇರಕನಾದ ತನ್ನ ಮಹಾತ್ಮ್ಯವನ್ನು ತಿಳಿಸಿಕೊಟ್ಟಾಗ ಉದ್ಧಾರದ ಹಾದಿ ಗೋಚರಿಸುವುದು ಎಂಬುದನ್ನು '**ವಂಚಿಸದೆ**' ಎಂಬ ಪದದಿಂದ ತಿಳಿಸಿರುವರು.

೪. ಇಲ್ಲಿ ಇಪ್ಪತ್ತೈದನೆ ತತ್ತ್ವ ಎಂದರೆ ಪುರುಷನಾಮಕನಾದ ಶ್ರೀಹರಿ. ಇಪ್ಪತ್ನಾಲ್ಕು ತತ್ತ್ವಗಳಿಗೆ ಅಧಿಪತಿ ಬ್ರಹ್ಮವಾಯುಗಳಾದರೆ, ಇಪ್ಪತ್ತೈದನೇ ತತ್ತ್ವಕ್ಕೆ ಅಧಿಪತಿಯಾದವನು ಶ್ರೀಲಕ್ಷ್ಮೀನಾರಾಯಣ. ಅವನನ್ನು ಅರಿತಾಗಲೇ ಜೀವಕ್ಕೆ ಮುಕ್ತಿ ಎಂಬುದು ಇಲ್ಲಿಯ ಮುಖ್ಯ ಭಾವ.

೫. ಜೀವನ ಸಾಧನೆ ಒಂದೆರಡು ಜನ್ಮದಲ್ಲಿ ಆಗುವಂತಹುದಲ್ಲ. ಅನಾದಿ ಕಾಲದ ಅವನ ಸಾಧನೆ ಅನೇಕ ಸಾಧನದೇಹಗಳಲ್ಲಿ ಪರಿಪೂರ್ಣಗೊಂಡು ಆ ವರೆಗೆ ಮಾಡಿದ ಸಕಲ ಪುಣ್ಯಕರ್ಮಗಳ ಒಟ್ಟು ಫಲ ಅಪರೋಕ್ಷಜ್ಞಾನಕ್ಕೆ ಕಾರಣವಾಗಿ ಶ್ರೀಹರಿಯ ವಿಶೇಷ ಒಲುಮೆಯನ್ನು ಒದಗಿಸಿ ಮೋಕ್ಷಕ್ಕೆ ಕಾರಣವಾಗುವುದು ಎಂಬುದು ಇಲ್ಲಿಯ ಒಟ್ಟು ಭಾವ.

೬. ಪ್ರಾಚೀನ ಕರ್ಮದ ಬಂಧನದ ಪರಿ ಎಷ್ಟು ಅಪಾರ ಎಂಬುದನ್ನು ಸೋದಾಹರಣವಾಗಿ ವಿವರಿಸುವ ಶ್ರೀಕನಕದಾಸರ ಕೆಲವು ಪದ್ಯಗಳು ಹೀಗಿವೆ:

ಪ್ರಾಚೀನ ಕರ್ಮವಿದು ಬಿಡಲರಿಯದು
ಯೋಚನೆಯ ಮಾಡಿ ಬಳಲುವುದೇಕೊ ಮನುಜ ॥ ಪ ॥
ಸೇತುವೆಯ ದಾಟಿ ಲಂಕೆಗೆ ಪೋಗಿ ಹನುಮಂತ
ಖ್ಯಾತಿಯಲಿ ರಾವಣನ ಪುರವನಳಿಸಿ
ಸೀತೆಯನು ಕಂಡು ಶ್ರೀರಾಮನಿಗೆ ಪೇಳಿದರೆ
ಪ್ರೀತಿಯಲಿ ರೂಪವನು ಕೊಡಲಿಲ್ಲ ಹರಿಯು ॥ ೧ ॥
ಲೋಕವೀರೇಳನ್ನು ತಿರುಗುವಾ ರವಿರಥಕೆ
ಏಕಗಾಲಿಯು ಏಳುಕುದುರೆಯಿಂದ
ಆಕಾಶಮಾರ್ಗದಲಿ ತೊಳಲಿ ಬಹ ಅರುಣನಿಗೆ
ಬೇಕೆಂಬ ಚರಣಗಳ ಕೊಡಲಿಲ್ಲ ಹರಿಯು ॥ ೨ ॥
ಸಾಸಿರನಾಮದೊಡೆಯ ಬಾಡದಾದಿಕೇಶವನ
ಬೇಸರದೆ ಹೆಗಲ ಮೇಲಿಟ್ಟುಕೊಂಡು
ದೇಶಾಧಿದೇಶಗಳ ತಿರುಗುವ ಗರುಡನಿಗೆ
ನಾಸಿಕದ ಕೊನೆಡೊಂಕು ತಿದ್ದಲಿಲ್ಲ ಹರಿಯು ॥ ೩ ॥

**

ಆರಿಗಾದರು ಪೂರ್ವಕರ್ಮ ಬಿಡದು
ವಾರಿಜಭವಭವರನು ಕಾಡುತಿಹುದು ॥ ಪ ॥
ವೀರಭೈರವನಂತೆ ತಾನು ಬತ್ತಲೆಯಂತೆ
ಮಾರಿ ಮಸಣಿಗಳಂತೆ ಕೂಳನ್ನು ತಿಂಬರಂತೆ
ಸೂರ್ಯ ಚಂದ್ರಮರಂತೆ ರಾಹುವಟ್ಟುಳಿಯಂತೆ
ಮೂರೆರಡು ತಲೆ ಹರಗೆ ಕೈಯೊಳ್ಕಪ್ಪರವಂತೆ ॥ ೧ ॥
ಶಿಷ್ಟ ಹರಿಶ್ಚಂದ್ರನಿಗೆ ಮಸಣದಡಿಗೆಯಂತೆ
ಸೃಷ್ಟಿಸುವ ಬೊಮ್ಮನಿಗೆ ಶಿರ ಹೋಯಿತಂತೆ
ಅಷ್ಟದಿಕಾಲ್ಪಕರು ಸೆರೆಯಾಗಿರುವರಂತೆ
ಕಟ್ಟುಗ್ರದಿಂದ್ರನಿಗೆ ಮೈಯೆಲ್ಲ ಕಣ್ಣಂತೆ ॥ ೨ ॥
ಹನುವೊಂದಕ್ಷೋಹಿಣಿ ಬಲವುಳ್ಳ ಕೌರವನು
ರಣದೊಳಗೆ ತೊಡೆಮುರಿದು ಬಿದ್ದಿರ್ಪನಂತೆ
ವನಜಾಕ್ಷಿ ಸಿರಿಯರಸು ಬಲಿಯ ಬೇಡಿದನಂತೆ
ವನಿತೆ ಧರ್ಮಜನ ತಾಯ್ತಿರಿದುಂಡಳಂತೆ ॥ ೩ ॥
ಧರೆಗೆ ಧರ್ಮಜನಂತೆ ಕಂಕಭಟ್ಟನಂತೆ
ಶೂರಭೀಮನು ಬಾಣಸಿಗನಾದನಂತೆ
ವೀರಫಲ್ಗುಣನಂತೆ ಕೈಯೊಳಗೆ ಬಳೆಯಂತೆ
ಕಿರು ನಕುಲಸಹದೇವರು ತುರುಗಾಯ್ದರಂತೆ ॥ ೪ ॥

ಹರನ ವಾಹನವಂತೆ ಹುಲ್ಲ ಹೊರುವನಂತೆ
ವಿರಿಂಚಿವಾಹನವಂತೆ ಕಮಲ ಭಕ್ಷಿಪನಂತೆ
ಹರಿಯ ಹೊತ್ತಿಹನಂತೆ ಹಾವು ಭಕ್ಷಿಪನಂತೆ
ನೆರೆಯಾದಿಕೇಶವನು ತಾ ಬೆಣ್ಣೆಗಳ್ಳನಂತೆ ॥ ೫ ॥

**

ಆರಿಗಾದರು ಪೂರ್ವಕಲ್ಪನೆಯು ತಪ್ಪದು
ಬೇರೆ ಬಯಸಿದರೆ ಬರಲರಿಯದಯ್ಯ ॥ ಪ ॥
ರಾಮಚಂದ್ರನ ಸೇವೆ ಮಾಡಿ ಮೆಚ್ಚಿಸಿ ಮಹಾ
ತಾಮಸನ ಗರ್ವವನು ಮುರಿದು ಬಂದ
ರೋಮರೋಮಕೆ ಕೋಟಿ ಲಿಂಗವೆನಿಸಿದ ಹನುಮ
ಗ್ರಾಮಗಳ ಕಾಯ್ದುಕೊಂಡಿಹುದೆ ಗತಿಯಾಯ್ತು ॥ ೧ ॥
ಸುರಪತಿಯ ಗೆದ್ದು ಸುಧೆಯನು ತಂದು ಮಾತೆಯ
ಸೆರೆಯ ಪರಿಹರಿಸಿ ಬಹು ಭಕ್ತನೆನಿಸಿ
ಹರಿಗೆ ವಾಹನನಾಗಿ ಹದಿನಾಲ್ಕು ಲೋಕವನು
ಚರಿಸಿದ ಗರುಡನಿಗೆ ಮರವೆ ಮನೆಯಾಯ್ತು ॥ ೨ ॥
ಪೊಡವಿ ಭಾರವ ಹೊತ್ತು ಮೃಡಗೆ ಭೂಷಣನಾಗಿ
ಹೆಡೆಯೊಳಗೆ ಮಾಣಿಕ್ಯವಿರಿಸಿಕೊಂಡು
ಬಿಡದೆ ಶ್ರೀಹರಿಗೆ ಹಾಸಿಗೆಯಾದ ಫಣಿಪತಿಗೆ
ಅಡವಿಯೊಳಗಣ ಹುತ್ತು ಮನೆಯಾಯಿತಯ್ಯ ॥ ೩ ॥
ಮೂರು ಲೋಕದ ಒಡೆಯ ಮುಕ್ಕಣ್ಣನೆಂಬಾತ
ಸಾರುತಿದೆ ಸಟೆಯಲ್ಲ ವೇದವಾಕ್ಯ
ಪಾರುವತಿ ಪತಿಯಾದ ಕೈಲಾಸದೊಡೆಯನಿಗೆ
ಊರ ಹೊರಗಣ ಮಸಣ ಮನೆಯಾಯಿತಯ್ಯ ॥ ೪ ॥
ಮೀರಲಳವಲ್ಲವೋ ಮುನ್ನ ಮಾಡಿದ್ದುದನು
ಆರು ಪರಿಹರಿಸಿಕೊಂಬವರಿಲ್ಲವೊ
ಮಾರಪಿತ ಕಾಗಿನೆಲೆಯಾದಿಕೇಶವರಾಯ
ಕಾರಣಕೆ ಕರ್ತ ನೀ ಕಡೆ ಹಾಯಿಸಯ್ಯ ॥ ೫ ॥

**

ಕಷ್ಟಪಟ್ಟರು ಇಲ್ಲ ಕಳವಳಿಸಿದರು ಇಲ್ಲ
ಭ್ರಷ್ಟ ಮಾನವ ನಿನ್ನ ಹಣೆಯಬರೆಹವಲ್ಲದೆ ಇಲ್ಲ ॥ ಪ ॥
ಸಿರಿವಂತನ ಸ್ನೇಹಮಾಡಿ ನಡೆದರಿಲ್ಲ
ಪರಿಪರಿಯಲಿ ವಿದ್ಯೆ ಕಲಿತರಿಲ್ಲ

ನರಿಯ ಬುದ್ಧಿಯಲಿ ನಡೆದುಕೊಂಡರು ಇಲ್ಲ
ಅರಿಯದೆ ಹಲವ ಹಂಬಲಿಸಿದರಿಲ್ಲ ॥ ೧ ॥
ಕೊಂಡೆಗಾರಿಕೆಯನ್ನು ಹೇಳಿ ನಡೆದರಿಲ್ಲ
ಕಂಡ ಕಂಡವರಿಗೆ ಕೈ ಮುಗಿದರಿಲ್ಲ
ಗಂಡುಗತ್ತರಿಯನ್ನು ಕೊರಳಿಗಿಟ್ಟರು ಇಲ್ಲ – ಪ್ರ-
ಚಂಡನಾದರು ಇಲ್ಲ ಪರಿಹಾಸ್ಯವಲ್ಲ ॥ ೨ ॥
ಕಟ್ಟಾಳು ಕಡುಜಾಣನಾಗಿ ಪುಟ್ಟಿದರಿಲ್ಲ
ಬೆಟ್ಟಗಳನು ಕಿತ್ತಿ ಇಟ್ಟರಿಲ್ಲ
ಸೃಷ್ಟಿಯೊಳು ಕಾಗಿನೆಲೆಯಾದಿಕೇಶವರಾಯ
ಕೊಟ್ಟವರಿಗೆ ಉಂಟು ಕೊಡದವರಿಗಿಲ್ಲ ॥ ೩ ॥

**

ತನ್ನ ಪ್ರಾಪ್ತಿಯ ಫಲವ ತಾನರಿಯದೆ
ಅನ್ಯರಿಗೆ ಆಡುವುದು ಅವಗುಣವು ಮರುಳೆ ॥ ಪ ॥
ಸರಸಿಜೋದ್ಭವನು ಫಣೆಯೊಳು ಬರೆದು ನಿರ್ಮಿಸಿದ
ತೆರನೊಂದು ಬೇರುಂಟು ತಾನರಿಯದೆ
ಕರಕೊಂಡು ಕಂಡವರ ಕೂಡೆ ತಾನಾಡಿದರೆ
ನೆರೆ ದುಃಖವಿದು ಬಿಟ್ಟು ಕಡೆಗೆ ತೊಲಗುವುದೆ ॥ ೧ ॥
ಬಡತನವು ಸಾಕೆಂದು ಸಿರಿತನವ ಬಯಸಿದರೆ
ಪಡೆದದ್ದು ಪೂರ್ವದಲಿ ಬೆನ್ನ ಬಿಡದು
ಅಡಿಗಡಿಗೆ ಶೋಕದಲಿ ಅವರಿವರಿಗುಸುರಿದರೆ
ಬಡತನವು ಬಿಟ್ಟು ಹಿಂಗುವುದೇನು ಮರುಳೆ ॥ ೨ ॥
ದೆಸೆಗೆಟ್ಟು ನಾಡದೈವಂಗಳಿಗೆ ಹಲುಬಿದಡೆ
ನೊಸಲ ಬರೆಹವ ತೊಡೆದು ತಿದ್ದಲಳವೆ
ವಸುಧೇಶ ಕಾಗಿನೆಲೆಯಾದಿಕೇಶವನಂಘ್ರಿ-
ಬಿಸಜವನು ಕಂಡು ನೀ ಸುಖಿಯಾಗು ಮನುಜ ॥ ೩ ॥

*****

## ೬೬. ದೇಹದಲುಂಟೆ ಫಲಪುರುಷಾರ್ಥ ರಕ್ಷಿಸು

ಎಂಟುಗೇಣಿನ ದೇಹ ರೋಮಗ-
ಳೆಂಟು ಕೋಟಿಯು ಕೀಲ್ಗಳರವ-
ತ್ತೆಂಟು ಮಾಂಸಗಳಿಂದ ಮಾಡಿದ ಮನೆಯ ಮನವೊಲಿದು ।

**ನೆಂಟ ನೀನಿರ್ದಗಲಿದೊಡೆ ಒಣ-**
**ಹೆಂಟೆಯಲಿ ಮುಚ್ಚುವರು ದೇಹದ-**
**ಲುಂಟೆ ಫಲಪುರುಷಾರ್ಥ ರಕ್ಷಿಸು ನಮ್ಮನನವರತ ॥ ೬೬ ॥**

**ಅ: ಎಂಟು ಗೇಣಿನ ದೇಹ, ಅದಕ್ಕೆ ಎಂಟು ಕೋಟಿ ರೋಮಗಳು, ಅರವತ್ತೆಂಟು ಕೀಲುಗಳು. ಹೀಗೆ ದೇಹವು ಮಾಂಸದಿಂದ ಮಾಡಿದ ಒಂದು ಮನೆ. ಇದರ ಮೇಲೆ ಬಹಳ ಮೆಚ್ಚಿಗೆಯನ್ನು ಜನರು ಇಡುವುದುಂಟು. ಆದರೆ, ಬಂಧುವಾದ ಶ್ರೀಹರಿಯೇ ಅದನ್ನು ಬಿಟ್ಟು ನಡೆದರೆ ಅದನ್ನು ಒಣ ಹೆಂಟೆಯಲ್ಲಿ ಮುಚ್ಚಿ ಸುಟ್ಟು ಹಾಕುವರು. ಇಂತಹ ದೇಹವನ್ನೇ ಪುರುಷಾರ್ಥವೆಂದು ತಿಳಿಯುವುದು ಉಚಿತವೇ? ನೆಂಟನಾದ ಶ್ರೀಹರಿಯೇ! ನೀನು ಸದಾ ನಮ್ಮನ್ನು ರಕ್ಷಿಸು.**

ವಿ.: ೧. ದೇಹದ ಮೇಲೆ ಮಿತಿ ಮೀರಿದ ಅಭಿಮಾನವನ್ನು ಹೊಂದುವ ಜನರಿಗೆ ಇದರಲ್ಲಿ ಹಿತೋಪದೇಶವಿದೆ.

೨. ಮೇಲ್ನೋಟಕ್ಕೆ ಎಷ್ಟೇ ಆಕರ್ಷಕವಾಗಿ ಕಂಡರೂ ದೇಹದ ವ್ಯಾಪ್ತಿ ತುಂಬಾ ಕಿರಿದು. ಅದರ ಉದ್ದ ಕೇವಲ ಎಂಟು ಗೇಣು ಮಾತ್ರ. ಅದರಲ್ಲಿರುವ ರೋಮಗಳು ಎಂಟು ಕೋಟಿ. ಕೀಲುಗಳು ಅರವತ್ತೆಂಟು, ಅದರೊಳಗೆ ತುಂಬಿರುವುದೆಲ್ಲ ಬರೀ ಮಾಂಸ. ಹೀಗೆ ಹೇಯವೆನ್ನಿಸುವ ದೇಹಕ್ಕೆ ಬೆಲೆ ಇರುವುದು ಅದರಲ್ಲಿ ಬಂಧುವಾದ ಶ್ರೀಹರಿಯು ಅನುಗ್ರಹಿಸಿ ನೆಲೆಸಿರುವವರೆಗೆ ಮಾತ್ರ. ಆ ಬಳಿಕ ಅದು ಶವವೆನ್ನಿಸುವುದು. ಮುಂದೆ ಅದು ದಹಿಸಲ್ಪಟ್ಟು ಬೂದಿಯಾಗುವುದು. ಇಂತಹ ದೇಹದ ಮೇಲೆ ಮಿತಿ ಮೀರಿದ ಮಮತೆಯನ್ನು ಹೊಂದಿ ಅದರ ಪೋಷಣೆ ಮೊದಲಾದವುಗಳಿಗಾಗಿ ಅಕೃತ್ಯವನ್ನೆಸಗುವುದು ಅತ್ಯಂತ ಪಾಪಕರ ಎಂಬುದು ಇದರ ಭಾವ.

೩. ನೆಂಟ ಎಂದರೆ ಬಂಧು. ಜೀವನಿಗೆ ದೇಹದಲ್ಲಿರಲು ಸಾಧ್ಯವಾಗುವುದು ಅದರಲ್ಲಿ ಶ್ರೀಹರಿವಾಯುಗಳು ನೆಲೆಸಿರುವವರೆಗೆ ಮಾತ್ರ. ಅವರು ದೇಹವನ್ನು ಬಿಟ್ಟು ನಡೆಯುತ್ತಲೇ ಜೀವಿಯು ಹೊರಬರಬೇಕಾಗುವುದು. ಆ ಕೂಡಲೇ ಅದಕ್ಕೆ ಶವ ಎನ್ನುವ ಹೆಸರು ಉಂಟಾಗುವುದು. ಶವಕ್ಕೆ ಬೂದಿಯಾಗುವುದು ಅಥವಾ ಮಣ್ಣಾಗುವುದು ಎರಡೇ ದಾರಿ, ಇಲ್ಲವಾದಲ್ಲಿ ನರಿ, ನಾಯಿಗಳ ಪಾಲಾಗುವುದು ತಪ್ಪಿದ್ದಲ್ಲ.

೪. ದೇಹ ಮೋಕ್ಷಸಾಧನೆಗೆ ಉಪಯೋಗವಾದಾಗ ಮಾತ್ರ ಅದಕ್ಕೆ ತುಂಬಾ ಮಹತ್ವ. ಅದನ್ನು ಬಿಟ್ಟು ಕೇವಲ ಪೋಷಣೆ, ವಿಹಾರ, ವಿಲಾಸಗಳಿಗೆ ಮಾತ್ರ ವಿನಿಯೋಗವಾದಾಗ ಅದು ಅನರ್ಥಕ್ಕೆ ಕಾರಣ. ಆದ್ದರಿಂದ, ಎಚ್ಚರಿಕೆಯಿಂದ ದೇಹವನ್ನು ಪುರುಷಾರ್ಥಸಾಧನೆಗೆ ಉಪಯುಕ್ತವಾಗುವಂತೆ ನೋಡಿಕೊಳ್ಳಬೇಕು ಎಂಬುದು ಇಲ್ಲಿಯ ಸಂದೇಶ.

೫. '**ನೆಂಟ ನೀನಿರ್ದಗಲಿದೊಡೆ**' ಎಂಬುದಕ್ಕೆ ಶ್ರೀಮದಾಚಾರ್ಯರಿಂದ ಅವರ ವಿಷ್ಣುತತ್ವವಿನಿರ್ಣಯ ಕೃತಿಯಲ್ಲಿ ಉದಾಹೃತವಾಗಿರುವ 'ಬ್ರಹ್ಮಣಾ ತ್ಯಕ್ತದೇಹಸ್ತು ಮೃತ ಇತ್ಯುಚ್ಯತೇ ನರಃ' ಎಂಬ ಮಹಾಭಾರತದ ಮಾತು ಆಧಾರವಾಗಿದೆ.

೬. ದೇಹವನ್ನು ದಹನ ಮಾಡುವುದು ಪಂಚಭೂತಗಳಿಂದಾದ ಅದು ಪುನಃ ಅವುಗಳೊಂದಿಗೆ ಸೇರಿಕೊಳ್ಳುವ ವ್ಯವಸ್ಥೆ. ಇದರಿಂದಾಗಿಯೇ ಮರಣವನ್ನು ಪಂಚತ್ವ ಎಂದು ಕರೆಯುವುದುಂಟು.

೭. '**ಒಣಹೆಂಟೆಯಲ್ಲಿ ಮುಚ್ಚುವರು**' ಎಂದರೆ, ದಹನ ಮಾಡುವರು ಎಂದರ್ಥ. ಹೂಳುವುದು ಎಂಬ ಅರ್ಥವು ಉಪಲಕ್ಷಿತ. ಎರಡೂ ಆಗದಿದ್ದಾಗ ದೇಹವು ನರಿ-ನಾಯಿಗಳ ಪಾಲಾಗುವುದೇ ನಿಶ್ಚಿತ. ಒಟ್ಟಾಗಿ ಈ ದೇಹ ನಾಶ ಹೊಂದುವಂತಹುದು ಎಂದು ಭಾವ.

*****

## ೬೭. ಭಕ್ತಿಗೆ ನೀನೆ ಕಾರಣನಾಗಿ ರಕ್ಷಿಸು

**ಸ್ನಾನ ಸಂಧ್ಯಾ ಧ್ಯಾನ ಜಪ ತಪ**
**ದಾನ ಧರ್ಮ ಪರೋಪಕಾರ ವಿ-**
**ಹೀನಜನ್ಮವದಳಿವುದಲ್ಲದೆ ಬೇರೆ ಗತಿಯುಂಟೆ ।**
**ಏನು ಮಾಡಿದಡೇನು ಮುಕ್ತಿ-**
**ಜ್ಞಾನವಿಲ್ಲದೊಡಿಲ್ಲ ಭಕ್ತಿಗೆ**
**ನೀನೆ ಕಾರಣನಾಗಿ ರಕ್ಷಿಸು ನಮ್ಮನನವರತ ॥ ೬೭ ॥**

**ಅ:** ಸ್ನಾನ, ಸಂಧ್ಯಾವಂದನೆ, ಧ್ಯಾನ, ಜಪ, ತಪ, ದಾನ, ಧರ್ಮ, ಪರೋಪಕಾರ ಮೊದಲಾದವುಗಳನ್ನು ಮಾಡದ ಜನ್ಮ ವ್ಯರ್ಥವಾಗುವುದಲ್ಲದೆ ಅದಕ್ಕೆ ಬೇರೆ ಫಲವಿಲ್ಲ ಅಲ್ಲವೆ? ಇತರ ಏನೇ ಕೆಲಸಗಳನ್ನು ಮಾಡಿದರೂ ಸಹ ಮುಕ್ತಿ ಹೊಂದಲು ಅಗತ್ಯವೆನ್ನಿಸುವ ತತ್ತ್ವಜ್ಞಾನವನ್ನು ಸಂಪಾದಿಸದಿದ್ದಲ್ಲಿ ಅವೆಲ್ಲ ವ್ಯರ್ಥ. ಅಂತಹ ಜ್ಞಾನದ ಫಲವೇ ಮುಕ್ತಿಗೆ ಪ್ರಧಾನ ಸಾಧನವೆನ್ನಿಸುವ ಭಕ್ತಿ. ಅಂತಹ ಭಕ್ತಿಗೆ ಕಾರಣನಾಗಿ ಶ್ರೀಹರಿಯೇ! ನೀನು ಸದಾ ನಮ್ಮನ್ನು ರಕ್ಷಿಸು.

ವಿ.: ೧. ಹಿಂದಿನ ಪದ್ಯದಲ್ಲಿ ದೇಹವನ್ನು ಸಾರ್ಥಕಪಡಿಸಿಕೊಳ್ಳದಿದ್ದಾಗ ವ್ಯರ್ಥವೆನ್ನಿಸುವುದು ಎಂಬ ವಿಚಾರವನ್ನು ತಿಳಿಸಿ ಇದರಲ್ಲಿ ದೇಹ ಸಾರ್ಥಕ್ಯವನ್ನು ಮಾಡಿಕೊಳ್ಳುವ ಬಗೆಯನ್ನು ತಿಳಿಸಿರುವರು.

೨. ಇಲ್ಲಿ ಸ್ನಾನ ಎಂದರೆ ಪ್ರತಿನಿತ್ಯ ಮಾಡುವ ಸಕಾಲದ ಸ್ನಾನ ಹಾಗೂ ಗ್ರಹಣಾದಿ ಪರ್ವಕಾಲಗಳಲ್ಲಿ ಮಾಡುವ ನೈಮಿತ್ತಿಕ ಸ್ನಾನ, ಸೂತಕಾದಿಗಳ ಬಳಿಕ ಮಾಡುವ ಶುದ್ಧಿ ಸ್ನಾನ,

ಯಾತ್ರೆಯ ಕಾಲದಲ್ಲಿ ಮಾಡುವ ತೀರ್ಥಸ್ನಾನ, ಮೊದಲಾದ ಬಗೆಬಗೆಯ ಜ್ಞಾನಸಾಧನಗಳು ವಿವಕ್ಷಿತ.

೩. **ಸಂಧ್ಯಾ** ಎಂದರೆ ದ್ವಿಜರಿಗೆ ವಿಹಿತವಾದ ತ್ರಿಕಾಲ ಸಂಧ್ಯಾವಂದನೆ ಎಂದರ್ಥ. ದ್ವಿಜರಲ್ಲದವರಿಗೆ ಸಂಧ್ಯಾವಂದನೆ ವಿಹಿತವಲ್ಲವಾದರೂ ಆ ಕಾಲದಲ್ಲಿ ಭಗವಂತನನ್ನು ಚಿಂತಿಸುವುದು ಮಾತ್ರ ವಿಹಿತವೇ ಆಗಿದೆ. ಆದ್ದರಿಂದ ಇದು ಸಕಲರಿಗೂ ಅನ್ವಯಿಸುವ ಮಾತು ಎಂದು ತಿಳಿಯಬಹುದು.

೪. **ಜಪ** ಎಂದರೆ ಮಂತ್ರಗಳ ಪುನರಾವರ್ತನೆ. ಗಾಯತ್ರೀಜಪವು ಹತ್ತು, ನೂರು, ಸಾವಿರ ಎಂಬುದಾಗಿ ಮೂರು ಬಗೆ. ಇತರ ಮಂತ್ರಗಳು ಕನಿಷ್ಠವೆಂದರೆ ನೂರೆಂಟು ಬಾರಿ ಜಪಿಸಲ್ಪಡಬೇಕು. ಅಕ್ಷರಲಕ್ಷ ಎಂಬುದು ಇತರ ಮಂತ್ರಗಳ ಸಿದ್ಧಿಗೆ ವಿಹಿತವಾದ ಪಕ್ಷ. ಉದಾಹರಣೆಗೆ ಕೃಷ್ಣ ಮಂತ್ರ, ವಿಷ್ಣುಮಂತ್ರ ಮೊದಲಾದವುಗಳು. ಅವು ಷಡಕ್ಷರ ಮಂತ್ರಗಳಾದ್ದರಿಂದ ಆರು ಲಕ್ಷಸಂಖ್ಯೆಯಲ್ಲಿ ಮಾಡಲ್ಪಟ್ಟಾಗ ಪೂರ್ಣಪ್ರಮಾಣದ ಫಲ ನೀಡುವವು ಎಂದು ತಿಳಿಯಬೇಕು.

೫. **ತಪ** ಎಂದರೆ ತಪಸ್ಸು. ಏಕಾದಶೀ ಮೊದಲಾದ ವ್ರತಗಳು ಮುಖ್ಯವಾಗಿ ತಪಸ್ಸು ಎನ್ನಿಸಿಕೊಳ್ಳುವವು. ವಿಷ್ಣುಪಂಚಕ, ಭೀಷ್ಮಪಂಚಕ ಮೊದಲಾದ ವ್ರತಗಳು ಚಾತುರ್ಮಾಸ್ಯ ವ್ರತಗಳು ಮೊದಲಾದವುಗಳು ಸಹ ಈ ಗುಂಪಿಗೆ ಸೇರುವವು. ಶ್ರೀಮದಾಚಾರ್ಯರ ಕೃಷ್ಣಾಮೃತಮಹಾರ್ಣವದಲ್ಲಿ ಈ ಬಗ್ಗೆ ಹೆಚ್ಚಿನ ವಿವರಗಳನ್ನು ಕಾಣಬಹುದು.

೬. **ದಾನ** ಎಂದರೆ ತನ್ನ ವಸ್ತುವನ್ನು ಇತರರಿಗೆ ನೀಡುವುದು ಎಂದರ್ಥ. ಅನ್ನದಾನ, ಜಲದಾನ, ವಸ್ತ್ರದಾನ, ಗೃಹದಾನ ಮೊದಲಾಗಿ ದಾನಗಳು ಅನೇಕ ಬಗೆ. ಇವುಗಳಲ್ಲಿ ಅಭಯದಾನ ತುಂಬಾ ಶ್ರೇಷ್ಠ. ವಿದ್ಯಾದಾನವಂತೂ ಸರ್ವೋತ್ಕೃಷ್ಟ ದಾನ. ದೇವತೆಗಳನ್ನು ಉದ್ದೇಶಿಸಿ ಮಾಡುವ ಯಜ್ಞಗಳು ಹರ್ವಿದಾನಸ್ವರೂಪಗಳಾದ್ದರಿಂದ ಅವು ಒಂದರ್ಥದಲ್ಲಿ ದಾನ ಎನ್ನಿಸುವವು.

೭. **ಧರ್ಮ** ಎಂದರೆ ಸ್ವಧರ್ಮಾಚರಣೆ, ಕರ್ಮಾಚರಣೆ ಎಂದರ್ಥ. ವರ್ಣಧರ್ಮ, ಆಶ್ರಮಧರ್ಮ, ದೇಶಧರ್ಮ, ಕಾಲಧರ್ಮ, ಮನುಷ್ಯಧರ್ಮ, ಪುರುಷಧರ್ಮ, ಸ್ತ್ರೀಧರ್ಮ ಮೊದಲಾಗಿ ಧರ್ಮಗಳು ಅನೇಕ ಬಗೆ. ಅವುಗಳಲ್ಲಿ ತನ್ನ ಸಾಮರ್ಥ್ಯ, ವಯಸ್ಸು ಮೊದಲಾದವುಗಳಿಗೆ ಅನುಗುಣವಾಗಿ ಯಾವುದೇ ವಿಧವಾದ ಧರ್ಮವನ್ನು ತಪ್ಪದೇ ಮಾಡಬೇಕು ಎಂದರ್ಥ.

೮. **ಪರೋಪಕಾರ** ಎಂದರೆ ಪರರಿಗೆ ಎಂದರೆ ಸಜ್ಜನರಿಗೆ ಮಾಡುವ ಉಪಕಾರ ಎಂದರ್ಥ; ಇದಕ್ಕೆ ಸಾಧನೆಯಲ್ಲಿ ಅಗ್ರಸ್ಥಾನ. ಪರ ಎಂಬುದಕ್ಕೆ ಸರ್ವೋತ್ತಮನಾದ ಭಗವಂತ ಎಂಬ

ಅರ್ಥವೂ ಉಂಟು. ಭಗವತ್ಪ್ರೀತಿಗಾಗಿ ನೊಂದ ಅರ್ಹವ್ಯಕ್ತಿಗಳಿಗೆ ಮಾಡುವ ಉಪಕಾರವು ಪರೋಪಕಾರವೇ. 'ನಾನಾಜನಸ್ಯ ಶುಶ್ರೂಷಾ[೧]' ಎಂಬ ಶ್ರೀಮದಾಚಾರ್ಯರಿಂದ ತಿಳಿಸಲ್ಪಟ್ಟ ವಿಶೇಷ ರೀತಿಯ ನಡವಳಿಕೆ ಈ ಪರೋಪಕಾರ ಎಂಬ ಶಬ್ದದಿಂದ ಸೂಚಿತ ಎಂದು ತಿಳಿಯಬಹುದು.

೯. ಹೀಗೆ ಮುಖ್ಯವೆನ್ನಿಸುವ ಸಾಧನೆಯನ್ನು ಮಾಡದಿದ್ದಲ್ಲಿ ದೇಹವು ಅಪಮೃತ್ಯು ಮೊದಲಾದ ದುರಂತಕ್ಕೆ ಒಳಗಾಗುವುದು ಮತ್ತು ಮುಖ್ಯಸಾಧನೆಗೆ ನೆರವಾಗದೇ ವ್ಯರ್ಥವೆನ್ನಿಸುವುದು ಎಂಬ ಹಿತೋಕ್ತಿ ಇದಾಗಿದೆ.

೧೦. ಬೇರೆ ಎಷ್ಟೇ ಕೆಲಸವನ್ನು ಮಾಡಿದರು ಸಹ ಅದು ಮುಕ್ತಿಗೆ ಸಾಧನ ಎನ್ನಿಸದು. ಅಧ್ಯಯನದ ಹೊರತು ಇತರ ಯಾವ ಕಾರ್ಯಗಳನ್ನು ಮಾಡಿದರು ಸಹ ವಿದ್ಯಾರ್ಥಿಯು ಉತ್ತೀರ್ಣನಾಗುವುದು ಹೇಗೆ ಅಶಕ್ಯವೋ ಹಾಗೆ. ಆದ್ದರಿಂದ ಸ್ನಾನಾದಿ ಸತ್ಕರ್ಮಗಳ ಆಚರಣೆಯ ಮೂಲಕ ಜನ್ಮಸಾರ್ಥಕ ಪಡಿಸಿಕೊಳ್ಳುವ ವಿವೇಕವನ್ನು ಮುಮುಕ್ಷುಗಳು ತೋರಬೇಕು ಎಂದು ಭಾವ.

೧೧. ಇಂತಹ ಜ್ಞಾನಭಕ್ತಿಗಳ ಪ್ರಾಪ್ತಿಗೆ ಶ್ರೀಹರಿಯ ಅನುಗ್ರಹವೇ ಮುಖ್ಯ ಸಾಧನ. ಆದ್ದರಿಂದ ಜೀವನದ ಸಾರ್ಥಕ್ಯವನ್ನು ಬಯಸುವ ಪ್ರತಿಯೊಬ್ಬರು ಇಲ್ಲಿ ಪ್ರತಿಪಾದಿತವಾದ ಸಾಧನೆಯನ್ನು ತಪ್ಪದೆ ಮಾಡಲೇಬೇಕು ಎಂಬುದು ಭಾವ.

೧೨. ಸ್ನಾನ-ಸಂಧ್ಯಾದಿ ಮೊದಲಾದ ಸತ್ಕರ್ಮಾಚರಣೆ ಹಾಗೂ ಸದಾಚಾರಕ್ಕೆ ಶ್ರೀದಾಸರು ನೀಡಿರುವ ಪ್ರಾಮುಖ್ಯ ಗಮನಾರ್ಹವಾದುದು:

ಸಾಕು ಸಾಕು ಮನುಜಸೇವೆಯು – ಶ್ರೀರಂಗರಾಯ
ಸಾಕು ಸಾಕು ಮನುಜಸೇವೆಯು ॥ ಪ ॥
ಸಾಕು ಸಾಕು ಮನುಜಸೇವೆ ಮಾಡಿ ಬೆಂದು ಬಳಲಿದೆನು
ಬೇಕು ನಿನ್ನಯ ಪಾದ ಭಜನೆಯೆಂದು ಬಯಸುತಿಹೆನು ರಂಗ ॥ ಅಪ ॥
ಹೊತ್ತಾರೆದ್ದು ಹೋಗಿ ಪರರ ಚಿತ್ತವೃತ್ತಿಗಳನೆ ಹಿಡಿದು
ಭೃತ್ಯನಂತೆ ಹಲ್ಲ ತೆರೆದು ಕೆಲಸ ಮಾಡಿ ದಣಿಯುವೆ – ರಿಕ್ತ-
ಹಸ್ತದಿಂದ ಮನೆಯ ಸೇರುವೆ – ಈ ಉದರಕಾಗಿ
ಮತ್ತೆ ಕಂಡ ಕಡೆಗೆ ತಿರುಗುವೆ – ಕಡೆಗೆ ಅಪರ-
ರಾತ್ರಿಯಲ್ಲಿ ತಿಂದು ಒರಗುವೆ ॥ ೧ ॥
ಸ್ನಾನ ಸಂಧ್ಯಾನ ನೇಮ ನಿತ್ಯ ಜಪಗಳನ್ನೆ ಜರೆದು
ಹೀನನಾಗಿ ಕೆಟ್ಟ ಜನರ ಮನೆಯ ಸೇರುವೆನೊ ದಣಿದ

೧. ನಾನಾಜನಸ್ಯ ಶುಶ್ರೂಷಾ ಕರ್ಮಾಖ್ಯಾ ಕರವನ್ಮಿತೇಃ।
ತಸ್ಯ ಪ್ರಾಣ್ಯುಪಕಾರೇಣ ಸಂತುಷ್ಟೋ ಭವತಿ ಈಶ್ವರಃ॥ – ಗೀತಾತಾತ್ಪರ್ಯ (೬/೩)

ಶ್ವಾನನಂತೆ ದಿನವ ಕಳೆವೆನೊ – ದುರಾಸೆಗಾಗಿ
ಮಾನ ಬಿಟ್ಟುಕೊಂಡು ಕುದಿವೆನೊ – ಕಡೆಯಲ್ಲಿ ಎಳ್ಳ-
ಮೊನೆಯನಿತೂ ಸುಖವ ಕಾಣೆನೊ ॥ ೨ ॥
ಒಡಲ ಆಸೆಗಾಗಿ ನೊಣವು ಕೊಡದ ಜೇನಿನಲ್ಲಿ ಬಿದ್ದು
ತೊಡಕಿದಂತೆ ಪಾಶದಲ್ಲಿ ಬಿದ್ದು ಬಾಯಬಿಡುತಲಿಹೆನು
ಬಿಡಿಸೊ ಎನ್ನ ಬಂಧಪಾಶವ – ಪೊಡವಿ-
ಗೊಡೆಯ ನಾರಸಿಂಹ ಮಾಧವ – ಹೇ ಬಿಸರುಹಾಕ್ಷ
ಒಡೆಯ ಬಾಡದಾದಿಕೇಶವ ॥ ೩ ॥

*****

## ೬೮. ಕೀರ್ತಿಕಲಾಪವನು ನೀ ಕಾಯ್ದು ರಕ್ಷಿಸು

ಕೋಪವೆಂಬುದು ತನುವಿನಲಿ ನೆರೆ
ಪಾಪ ಪಾತಕದಿಂದ ನರಕದ
ಕೂಪದಲಿ ಮುಳುಗುವುದು ತಪ್ಪದು ಶಾಸ್ತ್ರಸಿದ್ಧವಲೇ ।
ರಾಪುಮಾಡದೆ ಬಿಡನು ಯಮನು ನಿ-
ರಾಪರಾಧಿಯು ನೋಡಿ ಕೀರ್ತಿಕ-
ಲಾಪವನು ನೀ ಕಾಯ್ದು ರಕ್ಷಿಸು ನಮ್ಮನನವರತ ॥ ೬೮ ॥

ಅ: ಕೋಪ ಎಂಬುದು ದೇಹಕ್ಕೆ ಅಂಟಿಕೊಳ್ಳುವ ದೊಡ್ಡ ಪಾಪ. ಆ ಪಾತಕದಿಂದಾಗಿ ನರಕದ ಕೂಪದಲ್ಲಿ ಮುಳುಗುವುದು ಸರ್ವಥಾ ತಪ್ಪದು. ಇದು ಶಾಸ್ತ್ರಸಿದ್ಧವೇ ಆಗಿದೆ ಅಲ್ಲವೆ? ಯಮನು ಮುಂದೆ ಶಿಕ್ಷಿಸದೇ ಬಿಡನು. ಆದರೆ, ಅಂತಹ ಅಪರಾಧ ಮಾಡದ ನಿರಪರಾಧಿಗಳನ್ನು ಮಾತ್ರ ನೀನು ಗಮನಿಸಿ ಅವರ ಕೀರ್ತಿ ಕಲಾಪವನ್ನು ಕಾಯ್ದು ಶ್ರೀಹರಿಯೇ! ಸದಾ ನಮ್ಮನ್ನು ರಕ್ಷಿಸು.

ವಿ.: ೧. ಪಾಪದಿಂದಾಗುವ ಅನರ್ಥವು ಇದರಲ್ಲಿ ನಿರೂಪಿತವಾಗಿದೆ.

೨. ಕೋಪ ಮನಸ್ಸನ್ನು ಹಾಳು ಮಾಡುವ ಪ್ರಬಲ ದೋಷ. ಅದನ್ನು ಸುಲಭವಾಗಿ ಗೆಲ್ಲುವುದು ಸಾಧ್ಯವಿಲ್ಲ. ಇಲ್ಲಿಯ ಭಾವವು:

ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ ।
ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ॥
– ಗೀತಾ (೩/೩೭)

– ಎಂಬ ಗೀತೆಯ ಶ್ಲೋಕ ಹಾಗೂ ಅದರ ಭಾಷ್ಯ ತಾತ್ಪರ್ಯಗಳ ಭಾವವನ್ನು ಆಧರಿಸಿದೆ. ಅದರಂತೆ ಗೀತೆಯಲ್ಲಿನ, ..**ಕಾಮಾತ್ ಕ್ರೋಧೋಽಭಿಜಾಯತೇ । ಕ್ರೋಧಾದ್ಭವತಿ ಸಮ್ಮೋಹಃ ಸಮ್ಮೋಹಾತ್ ಸ್ಮೃತಿವಿಭ್ರಮಃ॥ ಸ್ಮೃತಿಭ್ರಂಶಾತ್ ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣ- ಶ್ಯತಿ ॥** (೨/೬೩) ಎಂಬ ಗೀತೆಯ ಶ್ಲೋಕದಲ್ಲಿ ನಿರೂಪಿತವಾಗಿರುವ ಅನರ್ಥ ಪರಂಪರೆಯು ಇದರಿಂದ ಸೂಚಿತ. ಕ್ರೋಧದಿಂದಾಗಿ ಬುದ್ಧಿಗೆ ಮಂಕು ಕವಿದು ತಿಳುವಳಿಕೆ ಅಳಿಯುವುದು. ಬುದ್ಧಿ ಕೆಟ್ಟಾಗ ನರಕ ಲಭಿಸುವುದು ತಪ್ಪಿದ್ದಲ್ಲ;

**'ಕ್ರುದ್ಧೋ ಹನ್ಯಾತ್ ಗುರೂನಪಿ'** ಎಂಬ ಮಹಾಭಾರತದ ವಚನವು ಕೋಪವು ಗುರುಹತ್ಯೆ ಮೊದಲಾದ ಮಹಾ ಅನರ್ಥಗಳಿಗೆ ಮೂಲವೆನ್ನಿಸುವ ಮಹಾಪಾತಕ ಎಂಬ ಅಂಶವನ್ನು ನಿರೂಪಿಸುವುದು; **ರಾಪು** – ಶಿಕ್ಷೆ, ಜೋರು, ಅಂಜಿಕೆ; **ಕೂಪ** – ಬಾವಿ, ಹಳ್ಳ.

೩. **'ಶಾಸ್ತ್ರಸಿದ್ಧವಲೇ'** ಎಂಬ ಇಲ್ಲಿಯ ಮಾತು ಕೋಪವು ಅನರ್ಥ ಸಾಧನ ಎಂಬುದು ಶಾಸ್ತ್ರಗಳು ಪರಿಪರಿಯಾಗಿ ನಿರೂಪಿಸಿರುವ ತತ್ತ್ವ ಎಂಬುದನ್ನು ಸೂಚಿಸುವುದು.

೪. ಕೆಲವೊಮ್ಮೆ ಲೌಕಿಕಪಾಪಗಳಿಗೆ ಇಲ್ಲಿಯೇ ಶಿಕ್ಷೆಯಾಗುವುದುಂಟು. ಕೆಲವು ಲೌಕಿಕ ಪಾಪಗಳು ಆಧ್ಯಾತ್ಮಿಕವಾಗಿ ಪಾಪವೆನ್ನಿಸದೆಯೂ ಇರಬಹುದು. ಆದರೆ, ಕೋಪವು ಎಲ್ಲ ರೀತಿಯಲ್ಲಿಯೂ ಸಹ ಪಾತಕದ ಸಾಲಿಗೆ ಸೇರುವುದರಿಂದ ಅದಕ್ಕೆ ಶಿಕ್ಷೆ ತಪ್ಪಿದ್ದಲ್ಲ. ಲೋಕದ ಕಾನೂನಿನಿಂದ ಪಾರಾದರೂ ಯಮದೇವರು ನೀಡುವ ನರಕಶಿಕ್ಷೆಯಿಂದ ಪಾರಾಗಲು ಸಾಧ್ಯವೇ ಇಲ್ಲ ಎಂಬುದು ಇಲ್ಲಿಯ ಭಾವ. ಇದರಿಂದ ಸ್ವರ್ಗ ನರಕಾದಿಗಳು ಸತ್ಯ; ಸತ್ಕಾರ್ಯಗಳಿಗೆ ಸ್ವರ್ಗ ಲಭಿಸುವಂತೆ ದುಷ್ಕಾರ್ಯಗಳಿಗೆ ನರಕ ಲಭಿಸುವುದು ನಿಶ್ಚಿತ ಎಂಬ ಅಂಶ ಸ್ಫುಟಪಡುವುದು.

೫. ಆದರೆ, ಮನಸ್ಸು ನಿರ್ಮಲವಾಗಿದ್ದು ಕೋಪ–ತಾಪಗಳಿಗೆ ಒಳಗಾಗದೇ ಇದ್ದಲ್ಲಿ ಅಪರಾಧದ ಪ್ರಸಕ್ತಿ ಒದಗುವುದಿಲ್ಲ. ಆದರಿಂದಾಗಿ ಯಮಲೋಕದಲ್ಲಿ ಶಿಕ್ಷೆ ಲಭಿಸುವ ಬದಲು ಸ್ವರ್ಗಾದಿ ಲೋಕಗಳು ದೊರೆತು ಒಳಿತೇ ಆಗುವುದು. ವ್ಯಕ್ತಿ ನಿರಪರಾಧಿ ಎಂದು ಗಮನಿಸಲು ಸಾಧ್ಯವಾಗುವುದು ಮುಖ್ಯವಾಗಿ ಸರ್ವತಂತ್ರಸ್ವತಂತ್ರನಾದ ಭಗವಂತನಿಂದ ಮಾತ್ರ ಸಾಧ್ಯ. ಅಂತಹ ಭಗವಂತನು ಸದಾ ನಿಷ್ಪಕ್ಷಪಾತಿಯಾದ್ದರಿಂದ ನಿರಪರಾಧಿಗಳನ್ನು ಸರ್ವಥಾ ಪಾಲಿಸುವನು. ಭಕ್ತರು ಸಾಮಾನ್ಯವಾಗಿ ಇಂತಹ ಅಪಚಾರಕ್ಕೆ ತುತ್ತಾಗದಿರುವುದರಿಂದ ಅವರಿಗೆ ಭಗವಂತನ ರಕ್ಷಣೆ ಸದಾ ಇರುವುದು ಎಂಬುದು ಇಲ್ಲಿಯ ಸಂದೇಶ.

೬. ಸಾತ್ವಿಕ ಜನತೆಯ ಮೇಲೆ ಹುಟ್ಟುವ ಕೋಪ ಅನರ್ಥಕ್ಕೆ ಸಾಧನ. ಆದರೆ, ಧರ್ಮ ತಪ್ಪಿ ನಡೆಯುವ ಪಾಪಿಗಳ ಮೇಲೆ ಕೋಪ ಹುಟ್ಟುವುದು ಧರ್ಮದ ಮೇಲೆ, ದೇವರ ಮೇಲೆ ಇರುವ ಪ್ರೀತಿಗೆ ದ್ಯೋತಕ. ಆದ್ದರಿಂದ ಅಂತಹ ಕೋಪ–ತಾಪಗಳು ಕೆಡುಕಿಗೆ ಕಾರಣವಾಗದೇ ಒಳಿತಿಗೆ ಕಾರಣವಾಗುವುದು ಎಂಬುದು ಇನ್ನೊಂದು ಗಮನಿಸಬೇಕಾದ ಅಂಶ. ಸಾತ್ವಿಕಕ್ರೋಧದಿಂದ

ಶ್ವಾನನಂತೆ ದಿನವ ಕಳೆವೆನೊ – ದುರಾಸೆಗಾಗಿ
ಮಾನ ಬಿಟ್ಟುಕೊಂಡು ಕುದಿವೆನೊ – ಕಡೆಯಲ್ಲಿ ಎಳ್ಳ-
ಮೊನೆಯನಿತೂ ಸುಖವ ಕಾಣೆನೊ ॥ ೨ ॥
ಒಡಲ ಆಸೆಗಾಗಿ ನೊಣವು ಕೊಡದ ಜೇನಿನಲ್ಲಿ ಬಿದ್ದು
ತೊಡಕಿದಂತೆ ಪಾಶದಲ್ಲಿ ಬಿದ್ದು ಬಾಯಬಿಡುತಲಿಹೆನು
ಬಿಡಿಸೊ ಎನ್ನ ಬಂಧಪಾಶವ – ಪೊಡವಿ-
ಗೊಡೆಯ ನಾರಸಿಂಹ ಮಾಧವ – ಹೇ ಬಿಸರುಹಾಕ್ಷ
ಒಡೆಯ ಬಾಡದಾದಿಕೇಶವ ॥ ೩ ॥

*****

## ೬೮. ಕೀರ್ತಿಕಲಾಪವನು ನೀ ಕಾಯ್ದು ರಕ್ಷಿಸು

**ಕೋಪವೆಂಬುದು ತನುವಿನಲಿ ನೆರೆ**
**ಪಾಪ ಪಾತಕದಿಂದ ನರಕದ**
**ಕೂಪದಲಿ ಮುಳುಗುವುದು ತಪ್ಪದು ಶಾಸ್ತ್ರಸಿದ್ಧವಲೇ ।**
**ರಾಪುಮಾಡದೆ ಬಿಡನು ಯಮನು ನಿ-**
**ರಾಪರಾಧಿಯು ನೋಡಿ ಕೀರ್ತಿಕ-**
**ಲಾಪವನು ನೀ ಕಾಯ್ದು ರಕ್ಷಿಸು ನಮ್ಮನನವರತ ॥ ೬೮ ॥**

**ಅ: ಕೋಪ ಎಂಬುದು ದೇಹಕ್ಕೆ ಅಂಟಿಕೊಳ್ಳುವ ದೊಡ್ಡ ಪಾಪ. ಆ ಪಾತಕದಿಂದಾಗಿ ನರಕದ ಕೂಪದಲ್ಲಿ ಮುಳುಗುವುದು ಸರ್ವಥಾ ತಪ್ಪದು. ಇದು ಶಾಸ್ತ್ರಸಿದ್ಧವೇ ಆಗಿದೆ ಅಲ್ಲವೆ? ಯಮನು ಮುಂದೆ ಶಿಕ್ಷಿಸದೇ ಬಿಡನು. ಆದರೆ, ಅಂತಹ ಅಪರಾಧ ಮಾಡದ ನಿರಪರಾಧಿಗಳನ್ನು ಮಾತ್ರ ನೀನು ಗಮನಿಸಿ ಅವರ ಕೀರ್ತಿ ಕಲಾಪವನ್ನು ಕಾಯ್ದು ಶ್ರೀಹರಿಯೇ! ಸದಾ ನಮ್ಮನ್ನು ರಕ್ಷಿಸು.**

ವಿ.: ೧. ಪಾಪದಿಂದಾಗುವ ಅನರ್ಥವು ಇದರಲ್ಲಿ ನಿರೂಪಿತವಾಗಿದೆ.

೨. ಕೋಪ ಮನಸ್ಸನ್ನು ಹಾಳು ಮಾಡುವ ಪ್ರಬಲ ದೋಷ. ಅದನ್ನು ಸುಲಭವಾಗಿ ಗೆಲ್ಲುವುದು ಸಾಧ್ಯವಿಲ್ಲ. ಇಲ್ಲಿಯ ಭಾವವು:

**ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ ।**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ॥**
**– ಗೀತಾ (೩/೩೭)**

– ಎಂಬ ಗೀತೆಯ ಶ್ಲೋಕ ಹಾಗೂ ಅದರ ಭಾಷ್ಯ ತಾತ್ಪರ್ಯಗಳ ಭಾವವನ್ನು ಆಧರಿಸಿದೆ. ಅದರಂತೆ ಗೀತೆಯಲ್ಲಿನ, ..**ಕಾಮಾತ್ ಕ್ರೋಧೋಽಭಿಜಾಯತೇ । ಕ್ರೋಧಾದ್ಭವತಿ ಸಮ್ಮೋಹಃ ಸಮ್ಮೋಹಾತ್ ಸ್ಮೃತಿವಿಭ್ರಮಃ ॥ ಸ್ಮೃತಿಭ್ರಂಶಾತ್ ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣ- ಶ್ಯತಿ ॥** (೨/೬೩) ಎಂಬ ಗೀತೆಯ ಶ್ಲೋಕದಲ್ಲಿ ನಿರೂಪಿತವಾಗಿರುವ ಅನರ್ಥ ಪರಂಪರೆಯು ಇದರಿಂದ ಸೂಚಿತ. ಕ್ರೋಧದಿಂದಾಗಿ ಬುದ್ಧಿಗೆ ಮಂಕು ಕವಿದು ತಿಳುವಳಿಕೆ ಅಳಿಯುವುದು. ಬುದ್ಧಿ ಕೆಟ್ಟಾಗ ನರಕ ಲಭಿಸುವುದು ತಪ್ಪಿದ್ದಲ್ಲ;

'**ಕ್ರುದ್ಧೋ ಹನ್ಯಾತ್ ಗುರೂನಪಿ**' ಎಂಬ ಮಹಾಭಾರತದ ವಚನವು ಕೋಪವು ಗುರುಹತ್ಯೆ ಮೊದಲಾದ ಮಹಾ ಅನರ್ಥಗಳಿಗೆ ಮೂಲವೆನ್ನಿಸುವ ಮಹಾಪಾತಕ ಎಂಬ ಅಂಶವನ್ನು ನಿರೂಪಿಸುವುದು; **ರಾಪು** – ಶಿಕ್ಷೆ, ಜೋರು, ಅಂಜಿಕೆ; **ಕೂಪ** – ಬಾವಿ, ಹಳ್ಳ.

೩. '**ಶಾಸ್ತ್ರಸಿದ್ಧವಲೇ**' ಎಂಬ ಇಲ್ಲಿಯ ಮಾತು ಕೋಪವು ಅನರ್ಥ ಸಾಧನ ಎಂಬುದು ಶಾಸ್ತ್ರಗಳು ಪರಿಪರಿಯಾಗಿ ನಿರೂಪಿಸಿರುವ ತತ್ತ್ವ ಎಂಬುದನ್ನು ಸೂಚಿಸುವುದು.

೪. ಕೆಲವೊಮ್ಮೆ ಲೌಕಿಕಪಾಪಗಳಿಗೆ ಇಲ್ಲಿಯೇ ಶಿಕ್ಷೆಯಾಗುವುದುಂಟು. ಕೆಲವು ಲೌಕಿಕ ಪಾಪಗಳು ಆಧ್ಯಾತ್ಮಿಕವಾಗಿ ಪಾಪವೆನ್ನಿಸದೆಯೂ ಇರಬಹುದು. ಆದರೆ, ಕೋಪವು ಎಲ್ಲ ರೀತಿಯಲ್ಲಿಯೂ ಸಹ ಪಾತಕದ ಸಾಲಿಗೆ ಸೇರುವುದರಿಂದ ಅದಕ್ಕೆ ಶಿಕ್ಷೆ ತಪ್ಪಿದ್ದಲ್ಲ. ಲೋಕದ ಕಾನೂನಿನಿಂದ ಪಾರಾದರೂ ಯಮದೇವರು ನೀಡುವ ನರಕಶಿಕ್ಷೆಯಿಂದ ಪಾರಾಗಲು ಸಾಧ್ಯವೇ ಇಲ್ಲ ಎಂಬುದು ಇಲ್ಲಿಯ ಭಾವ. ಇದರಿಂದ ಸ್ವರ್ಗ ನರಕಾದಿಗಳು ಸತ್ಯ; ಸತ್ಕಾರ್ಯಗಳಿಗೆ ಸ್ವರ್ಗ ಲಭಿಸುವಂತೆ ದುಷ್ಕಾರ್ಯಗಳಿಗೆ ನರಕ ಲಭಿಸುವುದು ನಿಶ್ಚಿತ ಎಂಬ ಅಂಶ ಸ್ಫುಟಪಡುವುದು.

೫. ಆದರೆ, ಮನಸ್ಸು ನಿರ್ಮಲವಾಗಿದ್ದು ಕೋಪ–ತಾಪಗಳಿಗೆ ಒಳಗಾಗದೇ ಇದ್ದಲ್ಲಿ ಅಪರಾಧದ ಪ್ರಸಕ್ತಿ ಒದಗುವುದಿಲ್ಲ. ಅದರಿಂದಾಗಿ ಯಮಲೋಕದಲ್ಲಿ ಶಿಕ್ಷೆ ಲಭಿಸುವ ಬದಲು ಸ್ವರ್ಗಾದಿ ಲೋಕಗಳು ದೊರೆತು ಒಳಿತೇ ಆಗುವುದು. ವ್ಯಕ್ತಿ ನಿರಪರಾಧಿ ಎಂದು ಗಮನಿಸಲು ಸಾಧ್ಯವಾಗುವುದು ಮುಖ್ಯವಾಗಿ ಸರ್ವತಂತ್ರಸ್ವತಂತ್ರನಾದ ಭಗವಂತನಿಂದ ಮಾತ್ರ ಸಾಧ್ಯ. ಅಂತಹ ಭಗವಂತನು ಸದಾ ನಿಷ್ಪಕ್ಷಪಾತಿಯಾದ್ದರಿಂದ ನಿರಪರಾಧಿಗಳನ್ನು ಸರ್ವಥಾ ಪಾಲಿಸುವನು. ಭಕ್ತರು ಸಾಮಾನ್ಯವಾಗಿ ಇಂತಹ ಅಪಚಾರಕ್ಕೆ ತುತ್ತಾಗದಿರುವುದರಿಂದ ಅವರಿಗೆ ಭಗವಂತನ ರಕ್ಷಣೆ ಸದಾ ಇರುವುದು ಎಂಬುದು ಇಲ್ಲಿಯ ಸಂದೇಶ.

೬. ಸಾತ್ವಿಕ ಜನತೆಯ ಮೇಲೆ ಹುಟ್ಟುವ ಕೋಪ ಅನರ್ಥಕ್ಕೆ ಸಾಧನ. ಆದರೆ, ಧರ್ಮ ತಪ್ಪಿ ನಡೆಯುವ ಪಾಪಿಗಳ ಮೇಲೆ ಕೋಪ ಹುಟ್ಟುವುದು ಧರ್ಮದ ಮೇಲೆ, ದೇವರ ಮೇಲೆ ಇರುವ ಪ್ರೀತಿಗೆ ದ್ಯೋತಕ. ಆದ್ದರಿಂದ ಅಂತಹ ಕೋಪ–ತಾಪಗಳು ಕೆಡುಕಿಗೆ ಕಾರಣವಾಗದೇ ಒಳಿತಿಗೆ ಕಾರಣವಾಗುವುದು ಎಂಬುದು ಇನ್ನೊಂದು ಗಮನಿಸಬೇಕಾದ ಅಂಶ. ಸಾತ್ವಿಕಕ್ರೋಧದಿಂದ

ಲೋಕಕ್ಕೆ ಕಲ್ಯಾಣವಾಗುವುದರಿಂದ ಅದು ದೋಷವೆನ್ನಿಸದೇ ಗುಣವೇ ಆಗುವುದು ಎಂಬುದು ಅದರ ಭಾವ.

*****

## ೬೯. ಸುಕರ್ಮವೆಲ್ಲವು ನಿನ್ನದೆಂದೊಪ್ಪಿಸಿದೆ ರಕ್ಷಿಸು

ನಿನ್ನ ಸೂತ್ರದೊಳಾಡುವವು ಚೈ-
ತನ್ಯ ಸಚರಾಚರಗಳೆಲ್ಲವು
ನಿನ್ನ ಸೂತ್ರವು ತಪ್ಪಿದರೆ ಮೊಗ್ಗುವವು [೧]ಹೂಹೆಗಳು ।
ಇನ್ನು ನಮಗೆ ಸ್ವತಂತ್ರವೆಲ್ಲಿಯ-
ದನ್ಯಕರ್ಮ ಸುಕರ್ಮವೆಲ್ಲವು
ನಿನ್ನದೆಂದೊಪ್ಪಿಸಿದೆ ರಕ್ಷಿಸು ನಮ್ಮನನವರತ ॥ ೬೯ ॥

ಅ: ಶ್ರೀಹರಿಯೇ! ಚೈತನ್ಯವನ್ನು ಒಳಗೊಂಡಂತೆ ಸಕಲ ಜಡಚೇತನಗಳು ಸಹ ನಿನ್ನ ಸೂತ್ರಕ್ಕೆ ಒಳಪಟ್ಟೇ ನಡೆಯುವವು. ನಿನ್ನ ಸೂತ್ರವು ತಪ್ಪಿದರೆ ಬೊಂಬೆಗಳಂತೆ ನಿಷ್ಕ್ರಿಯವಾಗುವವು. ಇನ್ನು ನಮಗೆ ಸ್ವಾತಂತ್ರ್ಯ ಎಲ್ಲಿಯದು? ಆದ್ದರಿಂದ ಯಾವುದೇ ಪಾಪಕರ್ಮವಾಗಲೀ, ಪುಣ್ಯಕರ್ಮವಾಗಲೀ ನಡೆಯಲು ಮುಖ್ಯವಾಗಿ ದೇವರ ದಯೆ ಅತ್ಯಗತ್ಯ. ಆದ್ದರಿಂದ, ಅದರ ಆಂತರ್ಯವನ್ನು ಸರಿಯಾಗಿ ತಿಳಿದು ಸಕಲ ಕರ್ಮಗಳನ್ನೂ ಸಹ ನಿನಗೆ ಸಮರ್ಪಿಸಿರುವೆನು. ಶ್ರೀಹರಿಯೇ! ನೀನು ಸದಾ ರಕ್ಷಿಸು.

ವಿ.: ೧. ಜಗತ್ತಿನಲ್ಲಿ ರಮಾಬ್ರಹ್ಮಾದಿಗಳನ್ನೊಳಗೊಂಡಂತೆ ಅನಂತ ಚೇತನರು, ಜಡ ಪದಾರ್ಥಗಳು ಇರುವವು. ಆದರೆ, ಅವರಾರಿಗೂ ಸಹ ಸ್ವಾತಂತ್ರ್ಯ ಎಂಬುದಿಲ್ಲ. ನಿಜಕ್ಕೂ ಸ್ವತಂತ್ರನೆಂದರೆ ಭಗವಂತನಾದ ಶ್ರೀಹರಿ ಮಾತ್ರ. ಅವನ ಸಂಕಲ್ಪಕ್ಕೆ ಅನುಗುಣವಾಗಿಯೇ ಇತರ ಎಲ್ಲರ ಆಗುಹೋಗುಗಳು ಸಹ ಪ್ರತಿಕ್ಷಣದಲ್ಲೂ ನಿಯಂತ್ರಿಸಲ್ಪಡುವವು. ಈ ಅನುಸಂಧಾನವನ್ನು ಅಳವಡಿಸಿಕೊಂಡವರಿಗೆ ಸಕಲ ಕರ್ಮಗಳನ್ನು ಭಗವಂತನ ಪ್ರೇರಣೆ ಎಂದು ಚಿಂತಿಸಿ ಸಮರ್ಪಿಸಲು ಸಾಧ್ಯವಾಗುವುದು. ಅದು ಮುಂದೆ ಕರ್ಮದಿಂದ ಬಿಡುಗಡೆಗೆ ಸಾಧನವೆನ್ನಿಸಿ ಮುಕ್ತಿಗೆ ಕಾರಣವಾಗುವುದು ಎಂದು ಭಾವ.

---

೧. ಊಹೆಗಳು (ಪಾ.) ಹೆಚ್ಚಿನ ಪದ್ಯಗಳಲ್ಲಿ ಊಹೆಗಳು ಎಂಬ ಪಾಠ ಕಂಡುಬರುವುದು. ಹೂಹೆಗಳು ಎಂಬುದು ಶುದ್ಧಪಾಠ. ಹೂಹೆಗಳು ಎಂದರೆ ಬೊಂಬೆಗಳು ಎಂದರ್ಥ. ಈ ಅರ್ಥವನ್ನು ಗಮನಿಸದ ಕೆಲವರು ತಮಗೆ ತೋಚಿದಂತೆ ಊಹೆ ಎಂಬುದಾಗಿ ಬದಲಾಯಿಸಿಕೊಂಡಿರುವರು ಎಂದು ತಿಳಿಯಬಹುದು.

೨. ಇಲ್ಲಿ ಸ್ವತಂತ್ರ ಎಂಬುದು ಶ್ರೀಮನ್ಮಧ್ವಸಿದ್ಧಾಂತದಲ್ಲಿ ಭಗವಂತನ ಹಿರಿಮೆಯ ಬಗ್ಗೆ ನಿರೂಪಿತವಾಗಿರುವ ವಿಶಿಷ್ಟ ಗುಣ. '**ಸ್ವರೂಪಪ್ರಮಿತಿಪ್ರವೃತ್ತಿರೂಪಸತ್ತಾತ್ರೈವಿಧ್ಯೇ ಪರಾನಪೇಕ್ಷಂ ಸ್ವತಂತ್ರಂ**' ಎಂಬುದು ಶ್ರೀಜಯತೀರ್ಥರು ತತ್ತ್ವಸಂಖ್ಯಾನ ಟೀಕೆಯಲ್ಲಿ ನೀಡಿರುವ ವಿವರಣೆ. ಎಂದರೆ, ಇರುವಿಕೆ, ತಿಳುವಳಿಕೆ ಹಾಗೂ ಚಟುವಟಿಕೆ – ಈ ಮೂರರಲ್ಲೂ ಸಹ ಬೇರಾರನ್ನೂ ಅವಲಂಬಿಸದೇ ಇರುವ ವಸ್ತು ಸ್ವತಂತ್ರ ಎನ್ನಿಸುವುದು. ಇತರ ಸಕಲರ ಇರುವಿಕೆ ಮೊದಲಾದವುಗಳು ಭಗವಂತನ ಅಧೀನವಾದ್ದರಿಂದ ಅವರೆಲ್ಲರೂ ಅಸ್ವತಂತ್ರರು. ಅವುಗಳನ್ನು ನಿಯಂತ್ರಿಸುವ ಭಗವಂತನು ಮಾತ್ರ ಬೇರಾರ ಅಂಕೆಗೂ ಒಳಗಾಗದ ಸರ್ವತಂತ್ರಸ್ವತಂತ್ರ.

೩. ಸ್ವತಂತ್ರ ಎಂಬ ತಾತ್ವಿಕ ಪರಿಕಲ್ಪನೆಯನ್ನು ಶ್ರೀಮನ್ಮಧ್ವಾಚಾರ್ಯರು ತತ್ತ್ವಸಂಖ್ಯಾನ, ತತ್ತ್ವವಿವೇಕ ಮೊದಲಾದ ತಮ್ಮ ಸರ್ವಮೂಲಗ್ರಂಥಗಳಲ್ಲಿ ನಿರೂಪಿಸಿರುವರು. ಈ ಪದವು ನಮ್ಮ ದೇಶ ಸ್ವತಂತ್ರ ಎಂಬ ಸಾಪೇಕ್ಷಾರ್ಥದಲ್ಲಿ ಬಳಸುವ ಪದವಲ್ಲ. ಆತ್ಯಂತಿಕವಾದ ಅರ್ಥದಲ್ಲಿ ಸ್ವತಂತ್ರ ಎಂಬ ಪದವು ಅನ್ವಯಿಸುವುದು ಮುಖ್ಯವಾಗಿ ಭಗವಂತನಿಗೆ ಮಾತ್ರ. ಈ ತತ್ತ್ವವನ್ನು ತಿಳಿಯುವುದೇ ನಿಜವಾದ ಅರ್ಥದಲ್ಲಿ ತತ್ತ್ವಜ್ಞಾನ ಎನ್ನಿಸುವುದು. ಈ ಬಗೆಯ ವಿವೇಚನೆಯನ್ನು ಸ್ಫುಟವಾಗಿ ನೀಡಿದ ಶ್ರೇಯಸ್ಸು ಶ್ರೀಮನ್ಮಧ್ವಾಚಾರ್ಯರದು. ಶ್ರೀಕನಕದಾಸರು ಶ್ರೀವ್ಯಾಸರಾಜರು ಹಾಗೂ ಶ್ರೀವಾದಿರಾಜರ ಸಂಪರ್ಕದಿಂದಾಗಿ ಮಧ್ವಸಿದ್ಧಾಂತದ ಆಳವಾದ ಪರಿಚಯವನ್ನು ಪಡೆದುಕೊಂಡ ಮಹನೀಯರು. ಅವರ ಈ ಪದ್ಯದಲ್ಲಿ ಆ ಮುಖ್ಯತತ್ತ್ವದ ಅನುಸಂಧಾನದ ಕ್ರಮವು ಅತ್ಯಂತ ಪರಿಣಾಮಕಾರಿಯಾಗಿ ನಿರೂಪಿತವಾಗಿದೆ. '**ತೇನ ವಿನಾ ತೃಣಮಪಿ ನ ಚಲತಿ**', '**ನ ಋತೇ ತ್ವತ್ಕ್ರಿಯತೇ ಕಿಂಚನಾರೇ**' ಎಂಬ ಶ್ರುತಿವಚನಗಳ ಭಾವವು ಇದೇ ಆಗಿದೆ. '**ನಿಮಿತ್ತಮಾತ್ರಂ ಭವ ಸವ್ಯಸಾಚಿನ್**' ಎಂಬ ಭಗವದ್ಗೀತೆಯ ವಚನದಲ್ಲೂ ಈ ತತ್ತ್ವ ನಿರೂಪಿತವಾಗಿದೆ.

೪. '**ನಿನ್ನಸೂತ್ರದೊಳಾಡುವವು**' ಎಂಬ ಮಾತು ಭಗವದ್ಗೀತೆಯ '**ಮಯಿ ಸರ್ವಂ ಇದಂ ಪ್ರೋತಂ ಸೂತ್ರೇ ಮಣಿಗಣಾ ಇವ**' ಎಂಬ ಮಾತಿನ ಭಾವವಾಗಿದೆ.

೫. ಶ್ರೀಹರಿಯ ರಕ್ಷಣೆ ತಪ್ಪಿದಲ್ಲಿ ಬೇರಾರ ಸಂಕಲ್ಪವು ನಡೆಯದು ಎಂಬ ಭಾವವು '**ತಪ್ಪುವುವು ಹೂಹೆಗಳು**' ಎಂಬ ಮಾತಿನಲ್ಲಿ ಸೊಗಸಾಗಿ ನಿರೂಪಿತವಾಗಿದೆ.

೬. '**ಹೂಹೆಗಳು**' ಎಂದರೆ ಬೊಂಬೆಗಳು ಎಂದರ್ಥ. ಬೊಂಬೆಯಾಟದಲ್ಲಿ ಅವುಗಳ ಪ್ರತಿಯೊಂದು ಕ್ರಿಯೆಯು ಸಹ ಆಡಿಸುವವನ ಅಧೀನವಾಗಿರುವಂತೆ, ಜಗತ್ತಿನ ಇತರ ಸಕಲರ ಸಕಲಕ್ರಿಯೆಗಳು ಸಹ ಶ್ರೀಹರಿಗೆ ಸಂಪೂರ್ಣ ಅಧೀನ. ಅವನೊಬ್ಬನೇ ಸರ್ವತಂತ್ರಸ್ವತಂತ್ರ ಎಂದು ಭಾವ. ಇದು ಈ ಕೆಳಗಿನ ಮಹಾಭಾರತ ಶ್ಲೋಕದ ಭಾವವಾಗಿದೆ:

**ಯಥಾ ದಾರುಮಯೀಂ ಯೋಷಾಂ ನರಃ ಸ್ಥಿರ ಸಮಾಹಿತಃ।**
**ಇಂಗಯತ್ಯಂಗಮಂಗಾನಿ ತಥಾ ರಾಜನ್ನಿಮಾಃ ಪ್ರಜಾಃ ॥**
**- ಮಹಾಭಾರತ (ವನಪರ್ವ/೩೦/೨೩)**

೭. ಶ್ರೀಹರಿಯ ಈ ರೀತಿಯ ಸರ್ವಸ್ವಾತಂತ್ರ್ಯದ ಅನುಸಂಧಾನ ಇರುವ ಜ್ಞಾನಿಗಳಿಗೆ ಪಾಪ-ಪುಣ್ಯಗಳ ಲೇಪ ಒದಗದು; ಅಂತಹ ಅನುಸಂಧಾನವು ಅಪರೋಕ್ಷಜ್ಞಾನಿಗಳಿಗೆ ಮಾತ್ರ ಸಾಧ್ಯವಾದ್ದರಿಂದ ಅವರಿಗೇ ಈ ಮಾತು ಮುಖ್ಯವಾಗಿ ಅನ್ವಯಿಸುವುದು ಎಂದು ತಿಳಿಯಬೇಕು.

೮. ಶ್ರೀಹರಿಯ ಸ್ವಾತಂತ್ರ್ಯದ ಅನುಸಂಧಾನವಿದ್ದವರು ಸರ್ವಥಾ ಪಾಪಕರ್ಮವನ್ನು ಮಾಡರು, ತಪ್ಪದೆ ಪುಣ್ಯಕರ್ಮವನ್ನೇ ಮಾಡುವರು. ಆದ್ದರಿಂದ ಅವರು ತಾವು ಮಾಡುವ ಸಕಲ ಕರ್ಮಗಳನ್ನು ಸಹ ಶ್ರೀಹರಿಗೆ ಅರ್ಪಿಸುವ ಅರ್ಹತೆಯನ್ನು ಪಡೆದಿರುವರು ಎಂಬ ವಿಶೇಷಾಂಶ ಇಲ್ಲಿ ಸೂಚಿತ.

೯. ದೈವಸಾಕ್ಷಾತ್ಕಾರವಿಲ್ಲದ ಇತರರು ಪಾಪಕರ್ಮಗಳನ್ನು ಮಾಡಿದಾಗ ಆ ಬಗ್ಗೆ ಪಶ್ಚಾತ್ತಾಪ ಪಟ್ಟು ಅದಕ್ಕೆ ವಿಹಿತವಾದ ಪ್ರಾಯಶ್ಚಿತ್ತವನ್ನು ಮಾಡಿಕೊಂಡು ಶ್ರೀಹರಿಗೆ ಒಪ್ಪಿಸಬೇಕೆ ಹೊರತು ನೇರವಾಗಿ ಅಲ್ಲ. ಆದರೆ, ಪುಣ್ಯಕರ್ಮಗಳನ್ನು ಮಾತ್ರ ನೇರವಾಗಿ ಭಗವಂತನಿಗೆ ಅರ್ಪಿಸಬೇಕು ಎಂಬುದು ಶಾಸ್ತ್ರದ ವಿಶೇಷ ಸಂದೇಶ.

೧೦. ಒಟ್ಟಾಗಿ ಬ್ರಹ್ಮಜ್ಞಾನದ ಮಹತ್ವವು ಇದರಲ್ಲಿ ನಿರೂಪಿತವಾಗಿದೆ.

*****

## ೭೦. ಕೈಪಿಡಿದು ಮುದದಲಿ ಬಿಡದೆ ರಕ್ಷಿಸು

**ಒಡೆಯ ನೀನೆಂದರಿದು ನಾ ನಿ-**
**ಮ್ಮಡಿಯ ಭಜಿಸದೆ ಮರುಳನಾದೆನು**
**ಮಡದಿಮಕ್ಕಳ ಮೋಹದಲಿ ಮನ ಸಿಲುಕುತಡಿಗಡಿಗೆ।**
**ಮಡದಿಯಾರೀ ಮಕ್ಕಳಾರೀ**
**ಒಡಲಿಗೊಡೆಯನು ನೀನು ನೀ ಕೈ-**
**ಪಿಡಿದು ಮುದದಲಿ ಬಿಡದೆ ರಕ್ಷಿಸು ನಮ್ಮನನವರತ ॥ ೭೦ ॥**

ಅ: ನೀನು ನಮ್ಮೆಲ್ಲರ ಒಡೆಯ ಎಂದು ತಿಳಿದು ನಿನ್ನ ಪಾದವನ್ನು ನಾನು ಭಜಿಸದೇ ಹೆಜ್ಜೆಹೆಜ್ಜೆಗೂ ದಾರಿತಪ್ಪಿದೆನು. ಮತ್ತೆ ಮತ್ತೆ ಹೆಂಡಿರು ಮಕ್ಕಳ ಮೇಲಿನ ಮೋಹದಿಂದ ಮನಸ್ಸು ಕೆಡಿಸಿಕೊಂಡು ನಿನ್ನನ್ನು ಭಜಿಸದವನಾದೆ. ಜೀವಿಗೆ ಮಡದಿ ಯಾರು? ಮಕ್ಕಳು

**ಯಾರು? ಈ ದೇಹಕ್ಕೆ ಮುಖ್ಯವಾಗಿ ಒಡೆಯನು ಶ್ರೀಹರಿಯಾದ ನೀನೇ. ಇದನ್ನು ಸರಿಯಾಗಿ ತಿಳಿದು ಕೈಬಿಡದೆ ಪಾಲಿಸಬೇಕು; ಶ್ರೀಹರಿಯೇ! ನೀನು ಸದಾ ನಮ್ಮನ್ನು ರಕ್ಷಿಸು.**

ವಿ.: ೧. ಶ್ರೀಹರಿಯು ಸಕಲ ಜಗತ್ತಿಗೂ ಮುಖ್ಯ ಸ್ವಾಮಿಯಾದ ಪರದೇವತೆ. ಸಕಲಕ್ಕೂ ಸ್ವಾಮಿಯಾದವನು ಅವನೇ. ಈ ತತ್ತ್ವವನ್ನು ತಿಳಿಯುವುದೇ ಮುಕ್ತಿಗೆ ಸಾಧನ ಎಂಬುದು ಇಲ್ಲಿಯ ಭಾವ.

೨. ಶ್ರೀಹರಿಯು ಸಕಲ ಜಗತ್ತಿಗೆ ಒಡೆಯನೆಂಬ ಇಲ್ಲಿಯ ವಿಷಯವು ಈ ಕೆಳಗಿನ ಈಶಾವಾಸ್ಯೋಪನಿಷತ್ತು ಮೊದಲಾದ ಶಾಸ್ತ್ರವಚನಗಳನ್ನಾಧರಿಸಿದೆ:

ಈಶಾವಾಸ್ಯಮಿದಂ ಸರ್ವಂ (ಈಶಾವಾಸ್ಯೋಪನಿಷತ್)
ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ (ಗೀತಾ ೭/೬)
ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ (ಗೀತಾ ೭/೭)

೩. ಮಡದಿ, ಮಕ್ಕಳ ಸಂಬಂಧ ದೈಹಿಕವಾದುದು, ಎಂದರೆ ಒಬ್ಬ ಜೀವಿಗೆ ಇರುವ ಬಾಹ್ಯದೇಹದೊಂದಿಗೆ ಮಾತ್ರ ಅವುಗಳ ಸಂಬಂಧ. ಅನೇಕ ಜನ್ಮಗಳನ್ನು ಹೊಂದುವ ಜೀವಿಗೆ ಮಡದಿ, ಮಕ್ಕಳ ಬಗೆಗಿನ ಮೋಹ ತರವಾದುದಲ್ಲ. ಅದು ಶ್ರೀಹರಿಯ ಚಿಂತನೆಗೆ ಅಡ್ಡಿಯಾಗುವ ದೋಷವೇ ಸರಿ.

೪. ನಿಜಕ್ಕೂ ಅನಾದಿಕಾಲದಿಂದ, ಅನಂತಕಾಲದವರೆಗೆ ನಿತ್ಯ ಸಂಬಂಧ ಹೊಂದಿದ ಹಿರಿಮೆ ಶ್ರೀಹರಿಯದು ಮಾತ್ರ. ಆದ್ದರಿಂದಲೇ ಅವನ ಒಡೆತನವು ಅಬಾಧಿತವಾದುದು. ಅವನ ಸಂಬಂಧ ತಾರಕವಾದುದು. ಅದರ ಅರಿವನ್ನು ಹೊಂದಿ ಮಡದಿ, ಮಕ್ಕಳ ಮೇಲಿನ ಮೋಹವನ್ನು ತೊರೆದು ಅವರ ಆರಾಧನೆ ಎಂದು ಭಾವಿಸಿ ಬದುಕನ್ನು ಸಾಗಿಸುವುದು ಸದ್ಗತಿಗೆ ಸಾಧನ ಎಂದರ್ಥ.

೫. ಮಡದಿ-ಮಕ್ಕಳ ಮೇಲೆ ಪ್ರೀತಿ ಅನಗತ್ಯ ಎಂಬುದು ಇದರ ಭಾವವಲ್ಲ. ಆದರೆ, ಅಗತ್ಯಕ್ಕಿಂತ ಹೆಚ್ಚಿನ ಮೋಹವನ್ನು ತೋರಿದಲ್ಲಿ ಅದು ವ್ಯಾಮೋಹವೆನ್ನಿಸಿ ಸಾಧಕರ ಸಾಧನೆಗೆ ಅಡ್ಡಿಯಾಗುವುದು. ಅವರಿಗೋಸ್ಕರ ತನ್ನ ಬದುಕು ಎಂದು ತಿಳಿಯುವುದು ಸರ್ವಥಾ ಉದ್ಧಾರದ ಹಾದಿಯಲ್ಲ. ಭಗವತ್ಸೇವೆಯ ಮೂಲಕ ಅವರ ಬದುಕು ಸಹ ಉದ್ಧಾರದತ್ತ ಸಾಗಬೇಕು ಎಂಬುದೇ ಜೀವನದ ಗುರಿಯಾಗಿರಬೇಕು. ಆದ್ದರಿಂದ ಅವರ ಮೇಲಿನ ಮೋಹವನ್ನು ತ್ಯಜಿಸಿ ಶ್ರೀಹರಿಯಲ್ಲಿ ಭಕ್ತಿಯನ್ನು ಅಳವಡಿಸಿಕೊಂಡು ಉದ್ಧಾರದ ಹಾದಿಯಲ್ಲಿ ಸಾಗಬೇಕು ಎಂದರ್ಥ; ಒಡಲು ಎಂದರೆ ಎಂದರ್ಥ.

೬. ಇದು ಈ ಕೆಳಗಿನ ಗೀತಾ ಶ್ಲೋಕದ ಭಾವದಂತಿದೆ:

**ಅಸಕ್ತಿರನಭಿಷ್ವಂಗಃ ಪುತ್ರದಾರಗೃಹಾದಿಷು ।** - (೧೩/೧೦)

೭. ದಾಸರ ಈ ಕೆಳಗಿನ ಎರಡು ಪದ್ಯಗಳಲ್ಲಿ ಸಂಸಾರದಲ್ಲಿ ಎಚ್ಚರದಿಂದಿರಬೇಕಾದ ಸಂದೇಶ ನಿರೂಪಿತವಾಗಿದೆ:

ಏನು ಇಲ್ಲದ ಎರಡು ದಿನದ ಸಂಸಾರ
ಜ್ಞಾನದಲಿ ದಾನ-ಧರ್ಮವ ಮಾಡಿರಯ್ಯ ॥ ಪ ॥
ಹಸಿದು ಬಂದವರಿಂಗೆ ಅಶನವೀಯಲು ಬೇಕು
ಶಿಶುವಿಂಗೆ ಪಾಲ್ಬೆಣ್ಣೆ ನಡೆಸಬೇಕು
ಹಸನಾದ ಭೂಮಿಯನು ಧಾರೆಯೆರೆಯಲು ಬೇಕು
ಭಾಷೆ ಕೊಟ್ಟ ಬಳಿಕ ನಿಜವಿರಲು ಬೇಕು ॥ ೧ ॥
ಕಳ್ಳತನಗಳ ಮಾಡಿ ಒಡಲ ಹೊರೆಯಲು ಬೇಡ
ತಳ್ಳಿಗಾರನು ಆಗಿ ತಿರುಗಬೇಡ
ಕುಳ್ಳಿರ್ದ ಸಭೆಯೊಳಗೆ ತಿಳಿವ ನಡೆಸಲು ಬೇಡ
ಉಳ್ಳವನು ತಾನೆಂದು ಉಬ್ಬಬೇಡ ॥ ೨ ॥
ದೊರೆತನವು ಬಂದಾಗ ಕೆಟ್ಟನುಡಿಯಲು ಬೇಡ
ಸಿರಿ ಬಂದ ಕಾಲಕ್ಕೆ ಮೆರೆಯಬೇಡ
ಸಿರಿವಂತ ಶ್ರೀಕಾಗಿನೆಲೆಯಾದಿಕೇಶವನ
ಚರಣ ಕಮಲವ ಸೇರಿ ಸುಖಿಯಾಗು ಮನುಜ ॥ ೩ ॥

**

ನೆಚ್ಚದಿರು ಸಂಸಾರ ನೆಲೆಯಲ್ಲವೀ ಕಾಯ
ಅಚ್ಯುತನ ನಾಮವನು ನೆನೆದು ಸುಖಿಯಾಗೊ ॥ ಪ ॥
ಗಳಿಸದಿರು ಸೀಮೆಯನು ಗಳಿಸದಿರು ದ್ರವ್ಯವನು
ಗಳಿಸದಿರು ನೀ ದುರಿತರಾಶಿಗಳನು
ನಳಿನನಾಭನ ದಿವ್ಯನಾಮವನು ನೆನೆನೆನೆದು
ನೆಲೆಯಾದ ಪರಮಪದವಿಯ ಪಡೆಯೊ ಮನವೆ ॥ ೧ ॥
ನೋಡದಿರು ಪರಸತಿಯ ಕೂಡದಿರು ದುರ್ಜನರ
ಆಡದಿರು ಮಾತುಗಳ ಗರ್ವದಿಂದ
ಬೇಡದಿರು ಕೈಯ ಹಿಂದೆಗೆವ ಲೋಭಿಯನು ಕೊಂ-
ಡಾಡದಿರು ಬೀದಿಗೂಳುಂಬ ದೈವಗಳ ॥ ೨ ॥
ನಾನಾ ಜನ್ಮದಿ ಬಂದ ನಾಟಕದ ಬೊಂಬೆಯಿದು
ಮಾನಕ್ಕೆ ಮೆಚ್ಚಿ ನೀ ಮರುಳಾಗದೆ
ಜಾಣತನದಿಂ ಕಾಗಿನೆಲೆಯಾದಿಕೇಶವನ
ಮಾನಸದಲಿ ನೆನೆದು ಸುಖಿಯಾಗೊ ಮನುಜ ॥ ೩ ॥

*****

## ೭೧. ನಿನ್ನೊಳಗುಂಟೆ ನಿರ್ದಯ ನೋಡಿ ರಕ್ಷಿಸು

ಪಂಟಿಸಿದ ಮದಮುಖರು ಕೆಲಕೆಲ-
ರುಂಟು ರಿಪುಗಳು ದಂಟಿಸುತ ಬಲು-
ಕಂಟಕದಿ ಕಾಡುವರು ಕಾಯ್ವೆ ಕಲುಷಸಂಹಾರ ।
ಬಂಟನಲ್ಲವೆ ನಾನು ದೀನರ
ನೆಂಟನಲ್ಲವೆ ನೀನು ನಿನ್ನೊಳ-
ಗುಂಟೆ ನಿರ್ದಯ ನೋಡಿ ರಕ್ಷಿಸು ನಮ್ಮನನವರತ ॥ ೭೧ ॥

ಅ: ದಾಳಿ ಮಾಡುವ ಮದವೇ ಮೊದಲಾದ ಜೀವನದ ಕೆಲವು ಶತ್ರು ಮತ್ತೆ ಮತ್ತೆ ಹಿಂಡುಹಿಂಡಾಗಿ ಕಂಟಕಗಳನ್ನು ಒಡ್ಡಿ ಕಾಡುವುದುಂಟು. ಎಲೈ! ಕಲುಷ ಸಂಹಾರನಾದ ಶ್ರೀಹರಿಯೇ! ನೀನು ನನ್ನನ್ನು ಕಾಪಾಡು. ನಾನು ನಿನ್ನ ಬಂಟನಾಗಿರುವೆನಲ್ಲವೇ? ನೀನು ದೀನರ ನೆಂಟನಾಗಿರುವಿ ಅಲ್ಲವೇ? ನಿನ್ನಲ್ಲಿ ದಯಾಹೀನತೆಯು ಇರಲಾದೀತೇ? ಅಂತಹ ಶ್ರೀಹರಿಯೇ! ನೀನು ನಮ್ಮನ್ನು ಗಮನಿಸಿ ಸದಾ ರಕ್ಷಿಸು.

ವಿ.: ೧. ಮನಸ್ಸನ್ನು ಕಾಡುವ ಅರಿಷಡ್ವರ್ಗಗಳ ನಿಗ್ರಹ ಶ್ರೀಹರಿಯಿಂದ ಮಾತ್ರವೇ ಸಾಧ್ಯ. ಆದ್ದರಿಂದ ಭಕ್ತವತ್ಸಲನಾದ ಅವನು ಆ ಕಾರ್ಯವನ್ನು ಮಾಡಿ ಭಕ್ತರನ್ನು ರಕ್ಷಿಸಬೇಕು ಎಂಬುದು ಇಲ್ಲಿಯ ಭಾವ.

೨. ಮದಮುಖರು ಎಂದರೆ ಮದವೆ ಮೊದಲಾದ ಎಂದರ್ಥ. ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮತ್ಸರ ಎಂಬ ಈ ಆರು ಅರಿಷಡ್ವರ್ಗಗಳೆನಿಸಿವೆ. ಇವುಗಳ ಕಾಟ ಸಕಲ ಸಾಧಕರಿಗೂ ಸದಾ ಇದ್ದದ್ದೇ. ಇವುಗಳಲ್ಲಿ ಮದವನ್ನು ಮುಖ್ಯವಾಗಿ ಹೆಸರಿಸಲು ಅದು ಸ್ವೋತ್ತಮದ್ರೋಹಾದಿ ಮಹಾಪಾತಕಗಳಿಗೆ ಕಾರಣವಾಗುವ ಕಾರಣದಿಂದ ಎಂದು ತಿಳಿಯಬೇಕು. ಅನ್ನಮದ, ಅರ್ಥಮದ ಮೊದಲಾಗಿ ಮದವು ಅನೇಕ ಬಗೆಯದು[೧]. ಅವುಗಳ

---

೧. ಬಿನ್ನಹಕೆ ಬಾಯಿಲ್ಲ ಎನಗೆ ಆದರಿಂದ ।
ನಿನ್ನ ಮರೆದೆನೊ ಸ್ವಾಮಿ ಎನ್ನ ಕಾಯಯ್ಯ ॥ ಪ ॥
ಅನ್ನಮದ ಅರ್ಥಮದ ಅಖಿಳ ವೈಭವದ ಮದ ।
ಮುನ್ನ ಪ್ರಾಯದ ಮದವು ರೂಪಮದವು ॥
ತನ್ನ ಸತ್ವದ ಮದ ಧರಿತ್ರಿ ವಶವಾದ ಮದ ।
ಇನ್ನು ಎನಗಿದಿರಿಲ್ಲವೆಂಬ ಮದದಿ ॥ ೧ ॥
ಶಶಿವದನೆಯರ ಮೋಹ ಜನನಿ ಜನಕರ ಮೋಹ ।
ರಸಿಕ ಭ್ರಾಂತಿಯ ಮೋಹ ರಾಜಮನ್ನಣೆ ಮೋಹ ॥
ಪಶು ಮೋಹ ಶಿಶುಮೋಹ ಬಂಧುವರ್ಗದ ಮೋಹ ।
ಹಸನುಳ್ಳ ವಸ್ತ್ರ ಆಭರಣಗಳ ಮದದಿ ॥ ೨ ॥

ಆಕ್ರಮಣಕ್ಕೆ ತುತ್ತಾಗುವ ಸಾಧಕನು ತನ್ನ ಆವರೆಗಿನ ಸಾದನೆಯನ್ನು ಕಳೆದುಕೊಳ್ಳುವನು. ಮುಂದಿನ ಸಾದನೆಯಿಂದ ವಂಚಿತನಾಗುವನು. ಆದ್ದರಿಂದ ಆ ಬಗ್ಗೆ ವಿಶೇಷ ಎಚ್ಚರ ವಹಿಸಬೇಕು ಎಂದು ಭಾವ; **ಪಂಟಿಸಿದ** – ದಾಳಿಮಾಡಿದ, ಆಕ್ರಮಿಸಿದ.

೩. ಶ್ರೀಹರಿಯು ಕಲುಷಗಳನ್ನು ಸಂಪೂರ್ಣವಾಗಿ ಪರಿಹರಿಸುವ ನಿರ್ದೋಷನಾದ ಪರಮಪುರುಷ. ಸ್ವತಃ ನಿರ್ದೋಷನಾದ್ದರಿಂದಲೇ ಅವನು ಭಕ್ತರ ಕಲುಷವನ್ನು ಪರಿಹರಿಸುವ ಸಾಮರ್ಥ್ಯ ಉಳ್ಳವನು ಎಂದರ್ಥ.

೪. ಈ ರೀತಿಯಾಗಿ ಪ್ರಾರ್ಥಿಸಿಕೊಳ್ಳಲು ಅವನ ಆರಾಧಕರು ಅವನ ಗುಣಗಳಿಗೆ ಮಾರುಹೋದ ಬಂಟರಾಗಿರುವುದೇ ಕಾರಣ. ಇದು ಅರ್ಜುನನ ಶಿಷ್ಯಸ್ತೇಽಹಂ ಸ್ಯಾಧಿಮಾಂ ಮಾಂ ಪ್ರಪನ್ನಂ ಎಂಬ ಮಾತನ್ನು ಜ್ಞಾಪಿಸುವಂತಿದೆ.

೫. ಭಕ್ತನು ಬಂಟನಾಗಿರುವಂತೆ ಸ್ವಾಮಿಯಾದ ಶ್ರೀಹರಿಯು ಭಕ್ತರ ನೆಂಟನೂ ಆಗಿರುವುದು ಇನ್ನೊಂದು ವಿಶೇಷ. ಭಕ್ತರ ನೆಂಟ ಎಂಬುದಕ್ಕೆ ಭಕ್ತವತ್ಸಲ ಎಂದು ಅರ್ಥ. ಭಕ್ತವಾತ್ಸಲ್ಯದ ಶ್ರೀಹರಿ ಎಂದೂ ತನ್ನನ್ನು ನಂಬಿದ ಭಕ್ತರನ್ನು ಕೈಬಿಡುವುದಿಲ್ಲ ಎಂಬುದು ಇಲ್ಲಿಯ ಭಾವ.

೬. ಶ್ರೀಹರಿಯು ಸರ್ವಸಮರ್ಥನಾಗಿರುವಂತೆ ಮಹಾಕರುಣಾಳುವೂ ಆಗಿರುವನು. ಅವನಲ್ಲಿ ನಿರ್ದಯತೆ ಸರ್ವಥಾ ಇಲ್ಲ. ಆದ್ದರಿಂದಾಗಿಯೇ ಅವನು ತನ್ನ ಭಕ್ತರನ್ನು ಕೇವಲ ಕಾರುಣ್ಯದಿಂದ ಸಂರಕ್ಷಿಸಿ ಉದ್ಧರಿಸುವನು ಎಂದು ತಿಳಿಯಬೇಕು.

೭. ಇದು ಭಗವದ್ಗೀತೆಯ ಮೂರನೆ ಅಧ್ಯಾಯದಲ್ಲಿ ಕೊನೆಯಲ್ಲಿ ಬಂದಿರುವ '**ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ । ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸನಮ್ ॥**' ಎಂಬ ಮಾತಿನ ವಿವರಣೆಯಂತಿದೆ.

೮. ಹುಟ್ಟು ವಿದ್ಯೆ, ಅಧಿಕಾರ ಮೊದಲಾದವುಗಳು ಅನರ್ಹರಿಗೆ ಮದಕ್ಕೆ ಕಾರಣವಾಗುವುದು. ಆದರೆ, ಯೋಗ್ಯರಿಗೆ ಅವು ದಮಕ್ಕೆ ಕಾರಣವಾಗಿ ಎಚ್ಚರಿಕೆಯ ಗಂಟೆಯಂತೆ ಕೆಲಸ ಮಾಡುವವು ಎಂಬ ವಿಶೇಷಾಂಶ ವಿದುರ ನೀತಿಯಲ್ಲಿ ಬಂದಿದೆ[೧].

*****

ಇಷ್ಟು ದೊರಕಿದರೆ ಮತ್ತಿಷ್ಟು ಬೇಕೆಂಬಾಸೆ ।
ಅಷ್ಟು ದೊರಕಿದರೆ ಮತ್ತಷ್ಟರಾಸೆ ॥
ಕಷ್ಟ ಜೀವನದಾಸೆ ಕಡುಸುಖವ ಕಾಂಬಾಸೆ
ನಷ್ಟ ಜೀವನ ಬಿಡಿಸೆ ಪುರಂದರವಿಠಲ ॥ ೩ ॥ – ಪುರಂದರದಾಸರು

೧. ವಿದ್ಯಾಮದೋ ಧನಮದಸ್ತ್ರತೀಯೋಽಭಿಜನೋ ಮದಃ ।
ಮದಾ ಏತೇಽವಲಿಪ್ತಾನಾಮೇತ ಏವ ಸತಾಂ ದಮಾಃ ॥ – ಮಹಾಭಾರತ (ಉ.ಪ/೩೪/೪೪)

## ೭೨. ನೀನುದ್ದಂಡ ದೇವರದೇವ ರಕ್ಷಿಸು

**ದಂಡಧರನುದ್ದಂಡ ಪಟಲತೆ**
**ಕೊಂಡು ಮೊರೆಹೊಗುವವರ ಕಾಣೆನು**
**ಪುಂಡರೀಕೋದ್ಭವನ ಶಿರವನು ಕಡಿದು ತುಂಡಿಸಿದ ।**
**ಖಂಡಪರಶುವು ರುದ್ರಭೂಮಿಯೊ-**
**ಳಂಡಲೆದು ತಿರುಗುವನು ನೀನು-**
**ದ್ದಂಡ ದೇವರದೇವ ರಕ್ಷಿಸು ನಮ್ಮನನವರತ ॥ ೭೨ ॥**

**ಅ: ದಂಡಧರನಾದ ಯಮನ ಉದ್ದಂಡವಾದ ಸಾಮರ್ಥ್ಯವನ್ನು ಕಂಡು ಮೊರೆ ಹೋಗುವುದು ಯಾರನ್ನು ಎಂಬುದನ್ನು ನಾನು ಕಾಣದಾಗಿರುವೆ. ಕಮಲೋದ್ಭವರೆನ್ನಿಸಿದ ಬ್ರಹ್ಮದೇವರ ಒಂದು ತಲೆಯನ್ನು ಕಡಿದು ತುಂಡು ಮಾಡಿದ ಖಂಡಪರಶು ಎನ್ನಿಸಿದ ಶ್ರೀರುದ್ರದೇವರು ರುದ್ರಭೂಮಿಯಲ್ಲಿ ಸುತ್ತುತ್ತಿರುವರು ಎಂದ ಮೇಲೆ ಇತರರ ಪಾಡೇನು? ನಿಜಕ್ಕೂ ಉದ್ದಂಡ ದೇವರದೇವನೆಂದರೆ ಶ್ರೀಹರಿಯಾದ ನೀನೊಬ್ಬನೆ. ಅಂತಹ ಶ್ರೀಹರಿಯೇ! ನೀನು ನಮ್ಮನ್ನು ಸದಾ ರಕ್ಷಿಸು.**

ವಿ.: ೧. ಮೃತ್ಯುವನ್ನು ಪರಿಹರಿಸಿ ಸಂರಕ್ಷಿಸುವ ಸಮರ್ಥನಾದ ದೇವತೆ ಶ್ರೀಹರಿಯ ಹೊರತು ಮತ್ತೊಬ್ಬನಿಲ್ಲ ಎಂಬುದು ಇಲ್ಲಿಯ ಭಾವ.

೨. ದಂಡಧರ ಎಂದರೆ ಯಮ. ಮೃತ್ಯುದೇವತೆ ಎನ್ನಿಸಿದ ಯಮನು ಸಕಲರನ್ನು ಸೂಕ್ತಕಾಲದಲ್ಲಿ ಸಂಹರಿಸುವನು. ಯಮನ ಆಯುಧ ದಂಡ; ಅದಕ್ಕೆ ದಂಡಧರ ಎಂದು ಹೆಸರು. ಆತನಿಂದ ಪಾರಾಗಲು ಬೇರೆ ಯಾರನ್ನು ಆಶ್ರಯಿಸಿದರೂ ಪ್ರಯೋಜನವಿಲ್ಲ ಎಂದರ್ಥ.

೩. ಯಮನು ಮೃತ್ಯುದೇವತೆ ಎನ್ನಿಸಿದರೆ ಯಮನಿಗೂ ಮೃತ್ಯುಸ್ವರೂಪನಾದವನು ಶಿವ. ಶಿವನನ್ನು ಆಶ್ರಯಿಸಿದರೂ ಸಹ ಮೃತ್ಯುವಿನ ಭಯ ಪೂರ್ತಿಯಾಗಿ ಪರಿಹಾರವನ್ನು ಹೊಂದದು. ಏಕೆಂದರೆ, ಅವನು ಸಹ ಒಂದು ವಿಧವಾದ ಭಯಕ್ಕೆ ಒಳಗಾದವನೇ ಆಗಿರುವನು.

೪. ಶಿವನಿಗೆ '**ಖಂಡಪರಶು**' ಎಂದು ಹೆಸರು. ಅಂತಹ ಅದ್ಭುತವಾದ ಆಯುಧವನ್ನು ಹೊಂದಿದ್ದರೂ ಸಹ ಭಯದಿಂದ ಬಿಡುಗಡೆಯನ್ನು ಹೊಂದಲು ಸಾಧ್ಯವಾಗಿಲ್ಲ. ಒಂದು ಕಾಲಕ್ಕೆ ಬ್ರಹ್ಮದೇವರ ಐದನೆ ಶಿರಸ್ಸನ್ನು ಕತ್ತರಿಸಿದ ವ್ಯಕ್ತಿತ್ವ ಶಿವನದು. ಆದರೆ, ಅದರ ಫಲವಾಗಿ ಅವರ ಕೈಗೆ ಅಂಟಿಕೊಂಡ ಬ್ರಹ್ಮಹತ್ಯೆಯ ಸಂಕೇತವಾದ ಬ್ರಹ್ಮಕಪಾಲ ಅವರನ್ನು ಗಾಢವಾಗಿ ಹಿಡಿದುಬಿಟ್ಟಿತು. ಅದರ ಪರಿಹಾರಕ್ಕಾಗಿ ಅವರು ಮಾಡಿದ ಪ್ರಯತ್ನ ಇನ್ನಿಲ್ಲದಂತಹುದು.

೫. '**ಪುಂಡರೀಕೋದ್ಭವ**' ಎಂದರೆ ಪುಂಡರೀಕ-ಕಮಲ, ಪುಂಡರೀಕೋದ್ಭವ ಎಂದರೆ ಮಹಾವಿಷ್ಣುವಿನ ನಾಭಿಕಮಲದಿಂದ ಜನಿಸಿದ ಚತುರ್ಮುಖ ಬ್ರಹ್ಮದೇವರು ಎಂದರ್ಥ.

೬. '**ಅಂಡಲೆದು**' ಎಂದರೆ, ರಕ್ಷಣೆಗಾಗಿ ಅನೇಕರ ಹಿಂದೆ ಹಿಂದೆ ಅಲೆದು ಅಲೆದು ಎಂದರ್ಥ; ಅಂಡಲೆ – ಕಷ್ಟಕ್ಕೆ ಒಳಗಾಗಿ, ಅಲೆದಾಡುತ್ತಾ.

೭. ರುದ್ರದೇವರು ವಾಸಮಾಡುವ ಸ್ಥಾನ '**ರುದ್ರಭೂಮಿ**' ಎನ್ನಿಸಿದ ಸ್ಮಶಾನ. ಅಂತಹ ಭವ್ಯವ್ಯಕ್ತಿತ್ವದ ಅವರಿಗೂ ಸಹ ಪ್ರಾರಬ್ಧವಶಾತ್ ಅಲ್ಲಿ ನೆಲೆಸುವ ಅನಿವಾರ್ಯತೆ ಉಂಟಾಗಿದೆ. ಹೀಗೆ ಬಂಧನಕ್ಕೊಳಗಾಗುವ ಅವರು ಇತರರಿಗೆ ಮೋಕ್ಷ ನೀಡಲಾರರು ಎಂದರ್ಥ.

೮. ಆದರೆ, ಶ್ರೀಹರಿಯು ಮಾತ್ರ ಅಂತಹ ದೇವತೆಯಲ್ಲ. ಯಾವುದೇ ಕಾರಣಕ್ಕೂ ಶ್ರೀಹರಿಗೆ ಸಂಕಟ ಒದಗಿದ ಪ್ರಸಂಗ ಇಲ್ಲವೇ ಇಲ್ಲ. ಇತರರಿಗೆ ಸದಾ ಅಭಯ ನೀಡುವ ಉದ್ದಂಡ ದೇವರದೇವ ಎಂಬುದು ಆತನ ಹಿರಿಮೆ. ಇತರರನ್ನು ಅಂಜಿಸುವ ಶಿವ, ಯಮ ಮೊದಲಾದವರು ಸಹ ತಮ್ಮ ಒಳಿತಿಗಾಗಿ ಸದಾ ಆಶ್ರಯಿಸಿರುವುದು ಶ್ರೀಹರಿಯನ್ನೇ. ಆದರಿಂದಾಗಿ ಶ್ರೀಹರಿಯೇ ಮೃತ್ಯುಭಯವನ್ನು ಸರ್ವರೀತಿಯಲ್ಲೂ ಪರಿಹರಿಸಬಲ್ಲ ಮಹಾ ಸಮರ್ಥ.

೯. ಇಲ್ಲಿ ಮೃತ್ಯು ಎಂಬುದಕ್ಕೆ ಸಂಸಾರದಿಂದ ಬಿಡುಗಡೆ ಎಂಬುದು ಮುಖ್ಯ ಭಾವ. ಮೃತ್ಯುಪರಿಹಾರಕ ದೇವರೆಂದರೆ ಮೋಕ್ಷ ನೀಡುವ ದೇವರು ಎಂದರ್ಥ. ಶಿವ ಮೊದಲಾದ ದೇವತೆಗಳು ತಾವು ಮುಕ್ತಿ ನೀಡುವವರಲ್ಲ ಎಂದು ತಾವೇ ಸ್ಫುಟಪಡಿಸಿರುವುದರಿಂದ ಅವರನ್ನು ಆಶ್ರಯಿಸುವುದರಿಂದ ಮೃತ್ಯುವಿನ ಭಯದಿಂದ ಪಾರಾಗಲು ಸಾಧ್ಯವಾಗದು. ಶ್ರೀಹರಿಯು ತಾನು '**ಭವಬಂಧೈಕ ಮೋಚಕ**' ಎಂದು ಸಾರಿ ಸಾರಿ ಹೇಳುವ ಮೂಲಕ ತಾನು ಮೋಕ್ಷ ನೀಡುವ ಪರದೇವತೆ ಎಂದು ಸಾರಿರುವನು. ಈ ಹಿನ್ನೆಲೆಯಲ್ಲಿ ಈ ಪದ್ಯದಲ್ಲಿ ಬಂದಿರುವ ಭಾವ ತುಂಬಾ ಅಪೂರ್ವ ಎನ್ನಿಸುವುದು.

೧೦. ಶ್ರೀಹರಿಯ ಹಿರಿಮೆಯನ್ನು ಬಗೆಬಗೆಯಾಗಿ ವರ್ಣಿಸುವ ಶ್ರೀಕನಕದಾಸರ ಕೆಲವು ಪದಗಳು ಹೀಗಿವೆ:

ಕಣಿಯ ಹೇಳಬಂದೆ ನಾನು ತಿಳಿಯಲಿಲ್ಲವೆ ॥ ಪ ॥
ಕಣಿಯ ಹೇಳಬಂದೆ ನಾರಾಯಣನಲ್ಲದೆ ಇಲ್ಲವೆಂದು
ಬಿನುಗು ಮಾರ್ಗವನು ಹಿಡಿದು ಜುಣುಗಬೇಡಿರೋ ॥ ಅಪ ॥
ಎಕ್ಕನಾತಿಯರು ಕಾಟ ಜಕ್ಕಣಿಯರು ಜಲಜೆಯರು
ಸೊಕ್ಕಿನಿಂದ ಸೊಂಟದ ಮುರುಕ ಮೈಲಾರದೇವರು
ಮಿಕ್ಕ ಮಾರಿ ಮಸಣಿ ಚೌಡಿ ಭೈರವದೇವ ಮೊದಲಾದ
ತಕ್ಕುದೇವರ ದೈವದ ಗೊಡವೆ ಬೇಡ ನರಕ ತಪ್ಪದು ॥ ೧ ॥
ಹಳ್ಳದ ತಡೆಯಲಿದ್ದ ಸುಳ್ಳರೆಲ್ಲ ಕೂಡಿ ಬಿದ್ದು
ಬೆಳ್ಳನೆ ಬೆಳತನಕ ನೀರ ತರುವರೆಲ್ಲರು

ಕುಳ್ಳಿನಿಂದ ಕುದಿಸಿ ತಿಂದು ಕಳ್ಳ ಗಡಿಗೆ ಬರಿದು ಮಾಡೆ
ಜೊಳ್ಳುದೇವರ ಗೊಡವೆ ಬೇಡ ನರಕ ತಪ್ಪದು ॥ ೨ ॥
ಗಾಳಗೂಳರೆಲ್ಲ ಕೂಡಿ ತೂಳದೇವರ ಮಾತ ಕೇಳಿ
ಹಾಳುಮಾಡಿ ಕೈಯೊಳಿದ್ದ ಹೊನ್ನು ಹಣಗಳ
ಬಾಳುತಿಪ್ಪ ಕುರಿಯ ಕೋಣವ ಬೀಳು ಬೀಳು ಕೊರಳ ಕೊಯ್ಸಿ
ಬೀಳಬೇಡಿ ನರಕಕೆಂದು ಹೇಳಬಂದೆನೊ ॥ ೩ ॥
ಸುತ್ತಲವರ ಮಾತ ಕೇಳಿ ಗುತ್ತಿಯ ಎಲ್ಲಮ್ಮಗೊಲಿದು
ಬತ್ತಲಿಂದ ಬಂದವಳ ನೋಡಿ ಎಲ್ಲರು
ಮತ್ತೆ ಬೇವಿನುಡುಗೆಯುಟ್ಟು ಮುಕ್ತಿ ತಾವು ಪಡವೆವೆಂಬ
ತೊತ್ತು ಮಾಯಕಾರಿಯವಳಿಗೆ ಛೀ ಥೂ ಎಂಬರು ॥ ೪ ॥
ಪೊಡವಿಗಧಿಕ ಕಾಗಿನೆಲೆಯ ಒಡೆಯ ವೇಂಕಟೇಶ ನಿನ್ನ
ಅಡಿಗಳಿಂದ ಸಲಹೊ ಎನ್ನ ಕನಕನೊಡೆಯನೆ
ಒಡೆಯ ಬಾಡದಾದಿಕೇಶವನಡಿಗಳನ್ನು ಸ್ಮರಿಸಿ ಇಂಥ
ದೊಡ್ಡದೇವರ ಮೊರೆಯ ಬಿದ್ದರೆ ಮುಕ್ತಿ ತಪ್ಪದು ॥ ೫ ॥

**

ಆವ ಬಲವಿದ್ದರೇನು – ವಾಸು
ದೇವನಾ ಬಲವು ನಿಜವಾಗಿ ಇರದನಕ ॥ ಪ ॥
ನೊಸಲಗಣ್ಣನ ಬಲ ನಾಲ್ಕು ತೆರದ ಬಲ
ತ್ರಿಶುಲ ಡಮರು ಅಗ್ನಿ ಫಣಿಯ ಬಲವು
ಪಶುಪತಿಯ ರೂಪಿನ ಬಲದ ಶಿಶುಪಾಲನ
ಅಸುರಮರ್ದನ ಕೃಷ್ಣ ಶಿರವ ಛೇದಿಸುವಾಗ ॥ ೧ ॥
ಹರನ ಕರುಣದ ಬಲವು ಸುರರ ಗೆಲಿದಾ ಬಲವು
ಪರಮ ಶಕ್ತಿಯು ತನ್ನ ಭುಜದ ಬಲವು
ಧರೆಯನೆತ್ತಿದ ಬಲವುಳ್ಳ ಹಿರಣ್ಯಾಕ್ಷನ
ವರಾಹನಾಗಿ ಹರಿ ಶಿರವ ಸೀಳುವಾಗ ॥ ೨ ॥
ಮುನ್ನ ಗೆಲಿದ ಬಲ ಮುಕ್ಕಣ್ಣ ಹರನ ಬಲ
ತನ್ನ ಲಂಕಿಣಿಯ ಕಾವಲಿನ ಬಲವು
ತನ್ನ ವಂಶದ ಬಲವುಳ್ಳ ರಾವಣಶಿರಕೆ
ಘನ್ನ ರಾಘವಸ್ವಾಮಿ ಶರವ ತೊಡುವಾಗ ॥ ೩ ॥
ಲಿಂಗಪೂಜೆಯ ಬಲ ನಿಶ್ಚಿಂತನಾಗಿಹ ಬಲ
ಹಿಂಗದೆ ಹರನು ಬಾಗಿಲ ಕಾಯ್ದ ಬಲವು
ಮುಂಗೈಯ ಶಕ್ತಿ ಸಾವಿರ ತೋಳ ಬಾಣನ
ತುಂಗ ವಿಕ್ರಮ ಕೃಷ್ಣ ತೋಳ ಖಂಡಿಸುವಾಗ ॥ ೪ ॥

ಈಸು ದೇವರ ಬಲಗಳಿದ್ದರೆ ಫಲವೇನು
ವಾಸುದೇವನ ಬಲವಿಲ್ಲದವಗೆ
ದೇಶಕಧಿಕ ಕಾಗಿನೆಲೆಯಾದಿಕೇಶವನ
ಲೇಸಾದ ಚರಣಕಮಲದ ಬಲವಿರದನಕ ॥ ೫ ॥

*****

## ೭೩. ಮುಕ್ತಿಗೆ ಭಕ್ತಿಯೇ ಕಾರಣವು ರಕ್ಷಿಸು

ಶಕ್ತಿಯೆಂಬುದು ಮಾಯೆ ಮಾಯಾ-
ಶಕ್ತಿಯದು ತನುವಿನಲಿ ನೀ ನಿಜ-
ಮುಕ್ತಿದಾಯಕನಿರಲು ಸುಖದುಃಖಾದಿಗಳಿಗಾರು ।
ಯುಕ್ತಿಯೊಳಗಿದನರಿತು ಮನದ ವಿ-
ರಕ್ತಿಯಲಿ ಭಜಿಸುವಗೆ ಮುಕ್ತಿಗೆ
ಭಕ್ತಿಯೇ ಕಾರಣವು ರಕ್ಷಿಸು ನಮ್ಮನನವರತ ॥ ೭೩ ॥

ಅ: ಶಕ್ತಿ ಎಂಬುದು ಮತ್ತೊಂದು ಶ್ರೀಹರಿಯ ಮಾಯೆ. ಅದು ಅವನ ಮಾಯಾ-ಶಕ್ತಿಯೇ ಆಗಿದೆ. ಅದು ಆವರಿಸಿ ಈ ದೇಹದಲ್ಲಿ ನೆಲೆಸಿದೆ. ನಿಜಮುಕ್ತಿಯನ್ನು ನೀಡುವ ದೇವತೆಯಾಗಿ ನೀನಿರುವಾಗ ಸುಖದುಃಖಗಳಿಗೆ ಬೇರೆ ಯಾರು ತಾನೆ ಕಾರಣರಾಗಲು ಸಾಧ್ಯ? ಇದನ್ನು ಯುಕ್ತಿಯಿಂದ ಸರಿಯಾಗಿ ತಿಳಿದು ಮನಸ್ಸಿನಲ್ಲಿ ವಿರಕ್ತಿಯನ್ನು ದೃಢಪಡಿಸಿಕೊಂಡು ಆರಾಧಿಸುವವನಿಗೆ ಮುಕ್ತಿ ಲಭಿಸುವುದು; ಅದಕ್ಕೆ ಭಕ್ತಿಯೇ ಸಾಧನ. ಇಂತಹ ಭಕ್ತಿವಿಷಯನಾದ ಶ್ರೀಹರಿಯೇ! ನೀನು ನಮ್ಮನ್ನು ಸದಾ ರಕ್ಷಿಸು.

ವಿ.: ೧. ಹಿಂದಿನ ಪದ್ಯದಲ್ಲಿ ಪಾಶುಪತಮತದ ನಿರಾಕರಣೆ ಇದ್ದರೆ ಈ ಪದ್ಯದಲ್ಲಿ ಶಾಕ್ತಮತದ ನಿರಾಕರಣೆ ಇದೆ.

೨. ಮೇಲ್ನೋಟಕ್ಕೆ ಶಕ್ತಿದೇವತೆಯು ಶಿವಾದಿಗಳಿಗಿಂತ ಮಿಗಿಲು ಎನ್ನುವುದು ನಿಜ. ಆದರೆ, ಆ ಶಕ್ತಿಯು ಪರದೇವತೆಯಾಗಿರದೇ ಶ್ರೀಹರಿಯ ಇಚ್ಛೆಯನ್ನು ಅನುಸರಿಸಿ ನಡೆಯುವ ಮಹಾಲಕ್ಷ್ಮಿಯಾಗಿರುವಳು. ಎಂದರೆ, ಅವಳು ಸಹ ಸರ್ವೋತ್ತಮ ದೇವತೆಯಲ್ಲ, ಅದರಿಂದಾಗಿ ಸ್ವಾತಂತ್ರ್ಯೇಣ ಮುಕ್ತಿಯನ್ನು ನೀಡುವ ಶಕ್ತಿ ಅವರದಲ್ಲ ಎಂದರ್ಥ. ಮಾಯಾ ಎಂದರೆ ತಮೋಭಿಮಾನಿನಿಯಾದ ದುರ್ಗಾದೇವಿ ಎಂದರ್ಥ:

ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।
ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ ॥
– ಗೀತಾ (೭/೧೪)

೩. ನಿಜಕ್ಕೂ ಶಕ್ತಿ ಎಂಬುದರ ಮುಖ್ಯವಾದ ಅರ್ಥ. ಮೋಕ್ಷನೀಡುವ ಶಕ್ತಿ ಎಂದೇ ಆಗಿದೆ. ಅಂತಹ ಶಕ್ತಿ ಶ್ರೀಹರಿಯದು ಮಾತ್ರ.

೪. ಇಲ್ಲಿ '**ಸುಖದುಃಖಗಳಿಗಾರು**' ಎಂಬ ಪದಕ್ಕೆ ಸುಖ ಶಬ್ದಕ್ಕೆ ಮುಕ್ತಿ ಎಂದು, ದುಃಖ ಶಬ್ದಕ್ಕೆ ತಮಸ್ಸು ಎಂದು ಅರ್ಥ. ಸಜ್ಜನರಿಗೆ ಮುಕ್ತಿಯನ್ನು ದುರ್ಜನರಿಗೆ ಅಂಧಂತಮಸ್ಸನ್ನು ನೀಡುವ ಅಪಾರ ಶಕ್ತಿ ಸ್ವಾತಂತ್ರ್ಯೇಣ ಶ್ರೀಹರಿಯದು ಮಾತ್ರವೇ ಆಗಿದೆ. ಈ ವಿಷಯವನ್ನು ಯುಕ್ತಿಯಿಂದ ತಿಳಿಯಬೇಕು ಎಂದರೆ ಸರಿಯಾದ ಚಿಂತನೆಯಿಂದ ಅರ್ಥಮಾಡಿಕೊಳ್ಳಬೇಕು ಎಂದರ್ಥ.

೫. ಇಲ್ಲಿ ಯುಕ್ತಿ ಎಂಬುದಕ್ಕೆ ಯುಕ್ತ್ಯನುಸಂಧಾನ ರೂಪವಾದ ಬ್ರಹ್ಮಮೀಮಾಂಸಾ ಶಾಸ್ತ್ರ ಎಂದೇ ಭಾವ. ಅಂತಹ ಪರವಿದ್ಯೆಯ ಅಧ್ಯಯನದಿಂದ ಶ್ರೀಹರಿಯ ಸರ್ವೋತ್ತಮತ್ವವು ಮನಸ್ಸಿನಲ್ಲಿ ದೃಢವಾಗಿ ನಿಲ್ಲುವುದು. ಇಂತಹ ಸಿದ್ಧಿಗೆ ಭಕ್ತಿಯೇ ಮುಖ್ಯ ಕಾರಣ. ಭಕ್ತಿ ಇಲ್ಲದ ಇತರ ಸಕಲ ಸಾಧನೆಗಳು ಸಹ ಕೇವಲ ಶ್ರಮದಲ್ಲಿ ಮಾತ್ರ ಪರ್ಯವಸಾನವಾಗುವ ಯಾಂತ್ರಿಕ ಸಾಧನಗಳು ಮಾತ್ರ. ಆದ್ದರಿಂದ ಸರ್ವರೂ ಸದಾಕಾಲವು ಸಹ ನಿರ್ಮಲಭಕ್ತಿಯನ್ನು ಸಾಧಿ-ಸುವ ಮಹಾಪ್ರಯತ್ನದಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕು.

೬. ಹರಿಯಲ್ಲಿ ಮಾಡುವ ಭಕ್ತಿಯೇ ನಿಜವಾದ ಮುಕ್ತಿಗೆ ಸಾಧನ ಎಂಬುದನ್ನು ನಿರೂಪಿಸುವ ಈ ಪದ್ಯವು 'ಹರಿಭಕ್ತಿಸಾರ' ಎಂಬ ಕೃತಿಯ ಹೆಸರಿಗೆ ಒಂದು ರೀತಿಯಲ್ಲಿ ಸಮರ್ಪಣರೂಪವೂ ಆಗಿದೆ. ಶ್ರೀವ್ಯಾಸರಾಜರ '**ಅಮಲಾ ಭಕ್ತಿಶ್ಚ ತತ್ಸಾಧನಂ**' ಎಂಬ ಮಾತಿನ ಹಿನ್ನೆಲೆಯಲ್ಲಿ ಇದು ವಿಶೇಷಾರ್ಥವನ್ನು ನೀಡುವುದು.

೭. '**ಯುಕ್ತಿಯಲಿ**' ಎಂಬುದನ್ನು ಮುಕ್ತಿದಾಯಕನಾದವನು ಶ್ರೀಹರಿಯೇ ಎಂಬುದಕ್ಕೂ, ಸುಖದುಃಖಗಳಿಗೆ ಬೇರೆ ಯಾರು ಕಾರಣರಲ್ಲ ಎಂಬುದಕ್ಕೂ, ಮುಕ್ತಿಗೆ ಭಕ್ತಿಯೇ ಕಾರಣ ಎಂಬುದಕ್ಕೂ ಅನ್ವಯಿಸಿಕೊಂಡು ಓದಿಕೊಳ್ಳಬೇಕು.

*****

## ೭೪. ನೀನೀಗ ರಕ್ಷಿಸು

**ಮೂರುಗುಣ ಮೊಳೆದೋರಿತದರೊಳು**
**ಮೂರು ಮೂರ್ತಿಗಳಾಗಿ ರಂಜಿಸಿ**
**ತೋರಿ ಸೃಷ್ಟಿಸ್ಥಿತಿಲಯಂಗಳ ರಚಿಸಿ ವಿಲಯದಲಿ ।**
**ಮೂರುರೂಪೊಂದಾಗಿ ಪ್ರಳಯದ**
**ವಾರಿಯಲಿ ವಟಪತ್ರಶಯನದಿ**
**ಸೇರಿದವ ನೀನೀಗ ರಕ್ಷಿಸು ನಮ್ಮನನವರತ ॥ ೭೪ ॥**

**ಆ ಮೂರು ಗುಣಗಳು ಅಭಿವ್ಯಕ್ತಿಗೊಂಡವು; ನೀನು ಮೂರು ರೂಪಗಳಿಂದ ರಂಜಿಸಿ ಪ್ರಕಟಗೊಂಡೆ. ಸೃಷ್ಟಿ ಸ್ಥಿತಿ ಮತ್ತು ಲಯಗಳನ್ನು ಆ ಮೂರು ರೂಪಗಳಿಂದ ಮಾಡಿದೆ. ಕೊನೆಗೆ ಪ್ರಳಯಕಾಲದಲ್ಲಿ ಆ ಮೂರು ರೂಪಗಳನ್ನು ಸಹ ಒಂದು ರೂಪವನ್ನಾಗಿ ಮಾಡಿಕೊಂಡು ಪ್ರಳಯೋದಕದಲ್ಲಿ ವಟಪತ್ರವನ್ನು ಹಾಸಿಗೆ ಮಾಡಿಕೊಂಡು ಮಲಗಿದವನು ನೀನು. ಅಂತಹ ಶ್ರೀಹರಿಯೇ! ನೀನು ನಮ್ಮನ್ನು ಸದಾ ರಕ್ಷಿಸು.**

ವಿವರಣೆ: ೧. ಶ್ರೀಹರಿಯು ಸೃಷ್ಟಿ ಸ್ಥಿತಿ, ಲಯಗಳನ್ನು ಮಾಡುವ ವೈಭವದ ನಿರೂಪಣೆ ಇದರಲ್ಲಿ ಬಂದಿದೆ.

೨. ಇಲ್ಲಿ ಮೂರು ಗುಣಗಳು ಎಂದರೆ ಸತ್ವಗುಣ, ರಜೋಗುಣ ಹಾಗೂ ತಮೋಗುಣ ಎಂಬ ಮೂರು ಪ್ರಾಕೃತ ಗುಣಗಳು ಎಂದರ್ಥ. ಮೊಳೆದೋರಿತು ಎಂದರೆ ಅಭಿವ್ಯಕ್ತಿಗೊಂಡಿತು ಎಂದರ್ಥ.

೩. ಮೂರು ಮೂರ್ತಿಗಳಾಗಿ ತೋರುವುದು ಎಂದರೆ ಬ್ರಹ್ಮ, ವಿಷ್ಣು, ಮಹೇಶ್ವರ ಎಂಬ ಮೂರು ರೂಪಗಳಾಗಿ ಪ್ರಕಟಗೊಳ್ಳುವುದು ಎಂದರ್ಥ. ಬ್ರಹ್ಮನಿಂದ ಸೃಷ್ಟಿ ವಿಷ್ಣುವಿನಿಂದ ಸ್ಥಿತಿ ಹಾಗೂ ಮಹೇಶ್ವರನಿಂದ ಲಯ ಎಂದು ತಿಳಿಯಬೇಕು.

೪. ಈ ಮೂರು ಮೂರ್ತಿಗಳು ಸಾಮಾನ್ಯರು ತಿಳಿದಿರುವಂತೆ ಬ್ರಹ್ಮ, ವಿಷ್ಣು, ಶಿವ ಎಂಬ ಮೂರು ದೇವತೆಗಳಲ್ಲ. ಮಹಾವಿಷ್ಣುವಿನ ಬ್ರಹ್ಮ, ವಿಷ್ಣು ಹಾಗೂ ಶಿವ ಎಂಬ ಸಾಕ್ಷಾದ್ರೂಪಗಳು ಎಂದು ತಿಳಿಯಬೇಕು. ಸೃಷ್ಟಿಯ ಪ್ರಾರಂಭದ ಒಂದು ಹಂತದಲ್ಲಿ ಮಹಾವಿಷ್ಣುವು ಶ್ರೀ, ಭೂ, ದುರ್ಗಾ ಎಂಬ ಗುಣತ್ರಯಗಳ ಅಭಿಮಾನಿ ರೂಪಗಳೆನ್ನಿಸಿದ ಮಹಾಲಕ್ಷ್ಮಿಯಲ್ಲಿ ಕ್ರಮವಾಗಿ ಬ್ರಹ್ಮ, ವಿಷ್ಣು, ಮಹೇಶ್ವರ ಎಂಬ ತನ್ನದೇ ಆದ ಮೂರು ರೂಪಗಳನ್ನು ಪ್ರಕಟಿಸಿದ ಎಂಬ ಅಪೂರ್ವ ವಿವರ ಮಹಾಭಾರತತಾತ್ಪರ್ಯನಿರ್ಣಯದಲ್ಲಿದೆ:

**ಪುನಶ್ಚ ಮಾಯಾ ತ್ರಿವಿಧಾ ಬಭೂವ ಸತ್ವಾದಿರೂಪೈರಥ ವಾಸುದೇವಾತ್ ।**
**ಸತ್ವಾತ್ಮಿಕಾಯಾಂ ಸ ಬಭೂವ ತಸ್ಮಾತ್ ಸ ವಿಷ್ಣುನಾಮ್ನೈವ ನಿರಂತರೋಽಪಿ ।**
**ರಜಸ್ತನೌ ಚೈವ ವಿರಿಂಚ ಆಸೀತ್ ತಮಸ್ತನೌ ಶರ್ವ ಇತಿ ತ್ರಯೋಽಸ್ಮಾತ್ ॥**

– ಮ.ಭಾ.ತಾ.ನಿ (೩/೧೯)

೫. ಶ್ರೀಹರಿಯು ಈ ಮೂರು ರೂಪಗಳಲ್ಲಿ ಬ್ರಹ್ಮ ಎಂಬ ರೂಪವನ್ನು ಬ್ರಹ್ಮದೇವರೊಳಗಿರಿಸಿ ಸೃಷ್ಟಿ ಕಾರ್ಯವನ್ನು ಮಾಡುವನು. ವಿಷ್ಣುರೂಪದಿಂದ ಸಂರಕ್ಷಣೆಯ ಕಾರ್ಯವನ್ನು ಮಾಡುವನು. ಹಾಗೂ ಶಿವ ಎಂಬ ತನ್ನ ರೂಪವನ್ನು ಶಿವನೊಳಗಿರಿಸಿ ಲಯಕಾರ್ಯವನ್ನು ಮಾಡುವನು: ಬ್ರಹ್ಮಣಿ ಬ್ರಹ್ಮರೂಪೋಽಸೌ ಶಿವರೂಪೀ ಶಿವೇ ಸ್ಥಿತಃ (ವಿಷ್ಣುಪುರಾಣ).

೬. ಶ್ರೀಹರಿಕಥಾಮೃತಸಾರದ ಕೆಳಗಿನ ಈ ಪದ್ಯದಲ್ಲಿ ಈ ವಿವರಗಳು ಬಂದಿವೆ:

ಜಗವನೆಲ್ಲವ ನಿರ್ಮಿಸುವ ನಾ । ಲ್ಮೊಗನೊಳಗೆ ತಾನಿದ್ದು ಸಲಹುವ
ಗಗನಕೇಶನೊಳಿದ್ದು ಸಂಹರಿಸುವನು ಲೋಕಗಳ ।
ಸ್ವಗತಭೇಧವಿವರ್ಜಿತನು ಸ । ರ್ವಗುಸದಾನಂದೈಕ ದೇಹನು
ಬಗೆಬಗೆಯ ನಾಮದಲಿ ಕರೆಸುವ ಭಕುತರನು ಪೊರೆವ ॥ (೨/೮)

೭. ಪ್ರಳಯಕಾಲದಲ್ಲಿ ಈ ಮೂರುರೂಪಗಳನ್ನು ಸಹ ಪುನಃ ಒಂದಾಗಿಸಿಕೊಂಡು ಶ್ರೀಹರಿಯು ವಟಪತ್ರಶಾಯಿಯಾಗಿ ಪ್ರಳಯೋದಕದಲ್ಲಿ ನೆಲೆಸುವನು. ಈ ಮೂರು ರೂಪಗಳು ಒಂದಾಗುವುದು ಎಂದರೆ, ಅವನದೇ ಆದ ಮೂರು ರೂಪಗಳು ಒಂದಾಗುವುದು ಎಂದೇ ಹೊರತು, ಬ್ರಹ್ಮ, ವಿಷ್ಣು, ಶಿವ ಎಂಬ ಲೋಕಪ್ರಸಿದ್ಧವಾದ ತ್ರಿಮೂರ್ತಿಗಳು ಒಂದಾಗುವುದು ಎಂದರ್ಥವಲ್ಲ; ವಾರಿ – ನೀರು.

೮. ಇಂತಹ ವೈಭವದ ಶ್ರೀಹರಿಯು ಇದರ ಅನುಸಂಧಾನವನ್ನು ಹೊಂದಿರುವ ಭಕ್ತವರ್ಗವನ್ನು ಪಾಲಿಸಬೇಕು ಎಂದರ್ಥ.

*****

## ೭೫. ನಮಗಾರು ಬಾಂಧವರುಂಟು ರಕ್ಷಿಸು

ನೀರಮೇಲಣ ಗುಳ್ಳೆಯಂದದಿ
ತೋರಿಯಡಗುವ ದೇಹವೀ ಸಂ-
ಸಾರಬಹಳಾರ್ಣವದೊಳಗೆ ಮುಳುಗಿದೆನು ಪತಿಕರಿಸಿ ।
ತೋರಿಸಚಲಾನಂದಪದವಿಯ
ಸೇರಿಸಕಟಾ ನಿನ್ನವೊಲು ನಮ-
ಗಾರು ಬಾಂಧವರುಂಟು ರಕ್ಷಿಸು ನಮ್ಮನನವರತ ॥ ೭೫ ॥

**ಅ: ಈ ನಮ್ಮ ದೇಹವು ನೀರಮೇಲಿನ ಗುಳ್ಳೆಯಂತೆ ಕಂಡು ಮರೆಯಾಗುವಂತಹುದು. ಸಂಸಾರವೆಂಬ ಮಹಾಸಾಗರದಲ್ಲಿ ನಾನು ಮುಳುಗಿರುವೆನು. ನನ್ನ ಮೇಲೆ ಕರುಣೆ ತೋರಿ ಪರಿಪೂರ್ಣವಾದ ಆನಂದದ ನೆಲೆಯೆನ್ನಿಸಿದ ಮೋಕ್ಷವನ್ನು ನೀಡು. ಅಬ್ಬಾ! ನಿನ್ನಂತೆ, ನಮಗೆ ಯಾರು ತಾನೇ ಬಾಂಧವರಾಗಿ ಇರುವರು. ಶ್ರೀಹರಿಯೇ! ನೀನು ಸದಾ ನಮ್ಮನ್ನು ರಕ್ಷಿಸು.**

ವಿ.: ೧. ಶ್ರೀಹರಿಯ ಶರೀರ ಅನಾದಿನಿತ್ಯವಾದರೆ ನಮ್ಮ ಬಾಹ್ಯಶರೀರವು ನೀರಮೇಲಿನ ಗುಳ್ಳೆಯಂತೆ ಅನಿತ್ಯವಾದುದು. ಮೋಕ್ಷವು ನಿತ್ಯವೆನ್ನಿಸಿರುವ ಪುರುಷಾರ್ಥ. ಅದನ್ನು ನೀಡಿ ರಕ್ಷಿಸುವ ಹಿರಿಮೆ ಶ್ರೀಹರಿಯದು ಎಂಬ ಭಾವ ಈ ಪದ್ಯದಲ್ಲಿದೆ.

೨. ನೀರಮೇಲಿನ ಗುಳ್ಳೆ ತುಂಬಾ ಅಸ್ಥಿರವಾದುದು. ಯಾವು ಕ್ಷಣದಲ್ಲಾದರೂ ಅದು ಒಡೆದು ನಾಶಹೊಂದುವಂತಹುದು. ಎಂದರೆ, ಅತ್ಯಂತ ಕ್ಷಣಿಕವಾದುದು ಎಂದರ್ಥ. **'ಯಾರಿಗೆ ಯಾರುಂಟು ಯರವಿನ ಸಂಸಾರ । ನೀರಮೇಲಿನ ಗುಳ್ಳೆ ನಿಜವಲ್ಲ ಹರಿಯೇ'** ಎಂಬ ಶ್ರೀಪುರಂದರದಾಸರ ಮಾತನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

೩. ಶ್ರೀಹರಿಯದು ಪ್ರಕೃತಿಯ ಗುಣಗಳಿಗೆ ಒಳಗಾಗದ ಜ್ಞಾನಾನಂದಮಯವಾದ ದೇಹ. ಅನಾದಿಕಾಲದಿಂದ ಅನಂತಕಾಲದವರೆಗೆ ಒಂದೇ ರೀತಿ ಇರುವ ಅಕ್ಷರವೆನ್ನಿಸುವ ಅದ್ಭುತ ದೇಹ ಅವನದು. ಅಂತಹ ಅವನು ಮಾತ್ರವೇ ನಮ್ಮನ್ನು ಉದ್ಧರಿಸಬಲ್ಲ ಸರ್ವಸಮರ್ಥ ಎಂದು ಭಾವ.

೪. ಇಲ್ಲಿ **'ಪತಿಕರಿಸುವುದು'** ಎಂದರೆ ಪವಿತ್ರಗೊಳಿಸುವುದು, ಶುದ್ಧಗೊಳಿಸುವುದು, ಸ್ವೀಕರಿಸುವುದು ಎಂದರ್ಥ. ಸಂಸಾರಿ ಜೀವರ ಸ್ವರೂಪದೇಹದ ಮೇಲೆ ಲಿಂಗದೇಹ, ಅನಿರುದ್ಧದೇಹ ಹಾಗೂ ಸ್ಥೂಲದೇಹ ಎಂಬ ಇತರ ಮೂರು ದೇಹಗಳು ಕ್ರಮವಾಗಿ ಇರುವವು. ಅವುಗಳಿಂದಾಗಿಯೇ ಜೀವನಿಗೆ ಹುಟ್ಟಿ ಸಾಯುವ ಸಂಕೋಲೆಯಂತಹ ಸಂಸಾರದಲ್ಲಿ ತೊಳಲುವುದು ಅನಿವಾರ್ಯವಾಗಿದೆ. ಸ್ವರೂಪದೇಹ ಶುದ್ಧವಾದರೆ ಮೇಲಿನ ಈ ಮೂರು ದೇಹಗಳು ಸಹ ಸಂಸಾರಕ್ಕೆ ಕಾರಣವಾಗುವ ದೇಹಗಳಾಗಿವೆ. ಇವುಗಳ ಸಂಪರ್ಕ ಇರುವವರೆಗೂ ಜೀವನಿಗೆ ಹುಟ್ಟು ಸಾವುಗಳು ತಪ್ಪಿದ್ದಲ್ಲ. ಹುಟ್ಟು ಸಾವುಗಳ ಸಂಪರ್ಕ ಅಶುದ್ಧಿಗೆ ಕಾರಣವಾಗುವಂತಹುದು. ಶ್ರೀಹರಿಯು ಅನುಗ್ರಹಿಸಿ ಈ ಮೂರು ದೇಹಗಳಿಂದ ಜೀವನನ್ನು ಬಿಡುಗಡೆ ಮಾಡಿದಾಗ ಶುದ್ಧವಾದ ಅವನ ಸ್ವರೂಪ ದೇಹವು ಪ್ರಕಟವಾಗಿ ಅವನು ಪವಿತ್ರನೆನಿಸುವನು. ಮುಕ್ತಿ ಪಡೆದು ನಿತ್ಯ ಸುಖಿ ಎನಿಸುವನು. ಇದೆಲ್ಲ ಆಗುವುದು ಶ್ರೀಹರಿಯ ದಯೆಯಿಂದ ಮಾತ್ರ ಎಂಬ ಪ್ರಮೇಯ ಇಲ್ಲಿ ನಿರೂಪಿತವಾಗಿದೆ.

೫. ಅಚಲಾನಂದ ಪದವಿಯನ್ನು ಶ್ರೀಹರಿಯು ನೀಡಬೇಕು. ಇಲ್ಲಿ ಅಚಲಾನಂದ ಪದವಿ ಎಂದರೆ ಎಂದೂ ಸಹ ನಾಶವಾಗದ ನಿತ್ಯಾನಂದದ ನೆಲೆ ಎಂದರ್ಥ. ಸ್ವರ್ಗಲೋಕಕ್ಕೂ ಸಹ **'ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ'** (೯/೨೧) ಎಂಬ ಮಾತಿನಿಂದ ಅನಿತ್ಯತ್ವ, ಅಪೂರ್ಣತ್ವ ಎಂಬ ದೋಷಗಳಿವೆ; ಆದರೆ ಮುಕ್ತಿಯು ಮಾತ್ರ ಅಚಲ ಎಂದರೆ ನಿತ್ಯವೆನ್ನಿಸುವ ಲೋಕ:

**ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ ।**
**ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ॥** - (ಗೀತಾ ೮/೧೬)

**'ನ ಚ ಪುನರಾವರ್ತತೇ ನ ಚ ಪುನರಾವರ್ತತೇ'** ಎಂಬ ಛಾಂದೋಗ್ಯೋಪನಿಷತ್ತಿನಲ್ಲಿ **'ಅನಾವೃತ್ತಿಃ ಶಬ್ದಾತ್ ಅನಾವೃತ್ತಿಃ ಶಬ್ದಾತ್'** ಎಂಬ ಬ್ರಹ್ಮಸೂತ್ರಗಳಲ್ಲಿ ಈ ಬಗ್ಗೆ ಹೆಚ್ಚಿನ ವಿವರಗಳು ದೊರಕುವವು. ಒಟ್ಟಾಗಿ ಇತರ ಸಕಲಬಗೆಯ ಆನಂದವು ಸಹ ಅಪೂರ್ಣ ಹಾಗೂ

ಅಸ್ಥಿರ ಎನ್ನಿಸುವುದು. ಮುಕ್ತಿಯ ಆನಂದ ಮಾತ್ರವೇ ಅಚಲವಾದ ಆನಂದ ಎಂಬುದು ಇದರ ಭಾವ. ಅಂತಹ ಮುಕ್ತಿಯನ್ನು ನೀಡುವ ಸಾಮರ್ಥ್ಯ ಶ್ರೀಹರಿಯದು ಮಾತ್ರ ಎಂಬುದು ಮತ್ತೊಂದು ಮುಖ್ಯ ಪ್ರಮೇಯ. ಅಚಲಾನಂದವಿಠಲ ಎಂಬ ಅಂಕಿತದ ಒಬ್ಬ ಹರಿದಾಸರು ಆಗಿ ಹೋಗಿದ್ದು, ಅದರಲ್ಲಿನ ಅಚಲಾನಂದ ಎಂಬ ಪದವು ಇದರ ಪ್ರೇರಣೆಯಿಂದ ಬಂದಿರುವಂತಿದೆ.

೬. ಶ್ರೀಹರಿಯಂತೆ ಬೇರೆ ಯಾರೂ ಸಹ ಜೀವರಿಗೆ ಬಂಧುಗಳಲ್ಲ ಎಂಬ ಮಾತು ಮತ್ತೊಂದು ರೀತಿಯ ಮುಖ್ಯತತ್ತ್ವವನ್ನು ತಿಳಿಸುವುದು. '**ದ್ವಾಸುಪರ್ಣಾ ಸಯುಜಾ ಸಖಾಯಾ**' ಎಂಬ ಉಪನಿಷತ್ತಿನ ಮಾತಿನಲ್ಲಿ ಶ್ರೀಹರಿಯು ಪ್ರತಿಯೊಬ್ಬ ಜೀವನೊಂದಿಗೆ ಅನಾದಿಕಾಲದಿಂದ ಅನಂತಕಾಲದವರೆಗೆ ಜೊತೆಯಾಗಿದ್ದು ಸಂರಕ್ಷಿಸುವ ಶ್ರೇಷ್ಠ ಬಂಧು ಎಂಬ ನಿರೂಪಣೆ ಬಂದಿದೆ. ಅವನಂತೆ ಪ್ರತಿಜನ್ಮದಲ್ಲಿ, ಪ್ರತಿಕ್ಷಣದಲ್ಲಿ ಹಿತೈಷಿಯಾದ ಬೇರೊಬ್ಬ ವ್ಯಕ್ತಿ ಸರ್ವಥಾ ಇಲ್ಲ. ಆದರಿಂದಾಗಿಯೇ ಶ್ರೀಹರಿಯನ್ನು ನಿತ್ಯಬಂಧು, ಅನಿಮಿತ್ತಬಂಧು ಎಂಬುದಾಗಿ ಶಾಸ್ತ್ರಗಳು ವರ್ಣಿಸಿವೆ. ಇಂತಹ ಅನುಸಂಧಾನವಿದ್ದವರಿಗೆ ಶ್ರೀಹರಿಯ ಒಲುಮೆಯ ಸಂಪಾದನೆ ಸುಲಭಸಾಧ್ಯವೆನ್ನಿಸುವುದು ಎಂದು ಭಾವ.

೭. '**ಬಹಳಾರ್ಣವ**' ಎಂದರೆ ಮಹಾಸಾಗರ, ಅಕ್ಷಯಸಾಗರ ಎಂದರ್ಥ; **ಅರ್ಣವ** – ಸಮುದ್ರ.

೮. ದೇಹ ತೊರೆದ ಬಳಿಕ ಜೀವನ ಹಿಂದೆ ಯಾವುದೂ ಬಾರದು ಎಂಬುದನ್ನು ತಿಳಿಸುವ ಶ್ರೀಕನಕದಾಸರ ಪದ ಹೀಗಿದೆ:

ಏನು ಬರುವುದೊ ಸಂಗಡೇನು ಬರುವುದೊ ॥ ಪ ॥
ದಾನ ಧರ್ಮ ಮಾಡಿ ಬಹು ನಿಧಾನಿ ಎನಿಸಿಕೊಳ್ಳೊ ಮನುಜ ॥ ಅ.ಪ. ॥
ಹೆಂಡಿರಿಲ್ಲಿ ಮಕ್ಕಳಿಲ್ಲಿ ಬಂಡಿತುಂಬ ಭಾಗ್ಯವಿಲ್ಲಿ
ಮಂಡೆತುಂಬ ಬಂಧುಬಳಗ ಇಲ್ಲಿ ಇರುವರೊ
ಕೊಂಡು ದೂತರೆಳೆದು ಒಯ್ದು ಹಿಂಡಿ ಹಿಪ್ಪೆ ಮಾಡುವಾಗ
ಕಂಡು ಬಿಡಿಸಿಕೊಂಬರಾರೊ ಕೀರ್ತಿಯಪಕೀರ್ತಿಯೆರಡೆ ॥ ೧ ॥
ಎನ್ನದೆಂದು ತನ್ನದೆಂದು ಹೊನ್ನು ಹೆಣ್ಣು ಮಣ್ಣಿಗಾಗಿ
ಬನ್ನಬಟ್ಟು ಬಾಯಿಬಿಡುವೆ ಬರಿದೆ ಮೋಹದಿ
ಸನ್ನುತದಲಿ ಪರಹಿತಾರ್ಥ ಮಾಡಿ ಪುಣ್ಯಪಡೆಯೊ ನೀನು
ಮುನ್ನ ಕ್ರೂರಫಣಿಯ ಕೂಪದಂತೆ ಕೆಡಲು ಬೇಡ ಮನುಜ ॥ ೨ ॥
ಬತ್ತಲಿಂದ ಬರುತಿಹರು ಬತ್ತಲಿಂದ ಹೋಗುತಿಹರು
ಕತ್ತಲೆಕಾಳ ಬೆಳಗ ಮಾಡಿ ಹೊತ್ತುಗಳೆವರೊ
ಸತ್ತರಿಲ್ಲ ಅತ್ತರಿಲ್ಲ ಹೊತ್ತುಕೊಂಡು ಹೋಹರಲ್ಲಿ
ವ್ಯರ್ಥ ದೇಹ ಮಣ್ಣುಕೂಡಿದಂತೆ ಕೆಡಬೇಡ ಮನುಜ ॥ ೩ ॥

ಕಟ್ಟಲಿಲ್ಲ ಬಿಚ್ಚಲಿಲ್ಲ ಕಷ್ಟಪಟ್ಟು ಬಳಲಲಿಲ್ಲ
ಸುಟ್ಟು ಸುಟ್ಟು ಸುಣ್ಣದ ಹರಳು ಆಯಿತೀಕಾಯವನ್ನು
ಬಿಟ್ಟು ಹೋಗುವಾಗ ಚೋಟು ಬಟ್ಟೆ ನಿನಗೆ ಹೊಂದಲಿಲ್ಲ –
ದೃಷ್ಟ ನೋಡು ಕಟ್ಟಕಡೆಗೆ ಬಟ್ಟಬಯಲಾಗುತಿದೆ ॥ ೪ ॥
ಗರುವದ ಹೊರೆಯಿಂದ ನೀನು ಬರಿದೆ ಕಾಲ ಕಳೆದೆಯೊ – ಮುಂ-
ದರಿದು ನೋಡು ನರರ ತನುವು ದೊರಕಲರಿಯದು
ನೆರೆ ಮಹಾಮೂರ್ತಿಯೊಡೆಯ ಪರಮ ಬಾಡದಾದಿಕೇಶವ-
ಚರಣ ಭಜಿಸಿ ಚಂಚಲವಳಿದು ವರಪಡೆದು ಹೊಂದುಗೂಡು ॥ ೫ ॥

**

ದಾನಧರ್ಮವ ಮಾಡಿ ಸುಖಿಯಾಗು ಮನವೆ
ಹೀನವೃತ್ತಿಯಲಿ ನೀ ಕೆಡಬೇಡ ಮನವೆ ॥ ಪ ॥
ಎಕ್ಕನಾತಿ ಯಲ್ಲಮ್ಮ ಮಾರಿ ದುರ್ಗಿ ಚೌಡಿಯರ
ಅಕ್ಕರೆಯಿಂದಲಿ ಪೂಜೆ ಮಾಡಲೇಕೆ ?
ಗಕ್ಕನೆ ಯಮದೂತರು ಎಳೆದೊಯ್ಯುವಾಗ
ಶಕ್ತಿಯರು ಬಿಡಿಸಿಕೊಂಬರೇನೊ ಮರುಳೆ ॥ ೧ ॥
ಸಂಭ್ರಮದಲಿ ಒಂದು ಹೊತ್ತು ನೇಮದಲ್ಲಿದ್ದು
ತಂಬಿಟ್ಟಿನಾ ದೀಪ ಹೊರಲೇತಕೆ
ಕೊಂಬು ಹೋತು ಕುರಿ ಕೋಣನ ಬಲಿಗೊಂಬ
ಡೊಂಬೆ ದೈವಗಳನು ಭಜಿಸದಿರು ಮನವೆ ॥ ೨ ॥
ಚಿಗುರೆಲೆ ಬೇವಿನ ಸೊಪ್ಪು ನಾರಸೀರೆ
ಬಗೆಬಗೆಯಿಂದ ಶೃಂಗಾರ ಮಾಡಿ
ನೆಗೆನೆಗೆದಾಡಲು ಕುಣಿಯಲು ನಿನಗಿನ್ನು
ಮಿಗಿಲಾದ ಮುಕುತಿಯುಂಟೇ ಹುಚ್ಚು ಮನವೆ ॥ ೩ ॥
ದಾನಧರ್ಮ ಪರರುಪಕಾರವ ಮಾಡು
ದೀನನಾಗಿ ನೀ ಕೆಡಬೇಡವೊ
ಜ್ಞಾನವಿಲ್ಲದೆ ಹೀನ ದೈವವ ಭಜಿಸಲು
ಏನುಂಟು ನಿನಗಿನ್ನು ಎಲೆ ಹುಚ್ಚು ಮನವೆ ॥ ೪ ॥
ನರಲೋಕದಿ ಯಮನ ಬಾಧೆಯನು ಕಳೆಯಲು
ವರಪುಣ್ಯಕಥೆಗಳ ಕೇಳುತಲಿ
ಸಿರಿ ಕಾಗಿನೆಲೆಯಾದಿಕೇಶವರಾಯನ ನೆರೆನಂಬಿ
ಸ್ಥಿರವಾದ ಪದವಿಯ ಪಡೆ ಹುಚ್ಚು ಮನವೆ ॥ ೫ ॥

*****

## ೭೬. ಭಕ್ತಿ ವಿರುದ್ಧವಾಗದವೋಲು ರಕ್ಷಿಸು

ಹೊದ್ದಿನಿಲುವುದೆ ದರ್ಪಣದ ಮೇ-
ಲುದ್ದುರುಳಿ ಬೀಳ್ವಂತೆ ನಿಮಿಷದಿ
ಬಿದ್ದುಹೋಗುವ ಕಾಯವೀ ತನುವೆಂಬ ಪಾಶದಲಿ ।
ಬದ್ಧನಾದೆನು ಮಮತೆಯಲಿ ನೀ-
ನಿದ್ದುದಕೆ ಫಲವೇನು ಭಕ್ತಿ ವಿ-
ರುದ್ಧವಾಗದವೋಲು ರಕ್ಷಿಸು ನಮ್ಮನನವರತ ॥ ೭೬ ॥

ಅ: ಕನ್ನಡಿಯ ಮೇಲಿನ ಉದ್ದು ಸ್ಥಿರವಾಗಿ ನಿಲ್ಲಲಾರದು. ಅದು ನಿಮಿಷಮಾತ್ರದಲ್ಲಿ ಉರುಳಿ ಕೆಳಗೆ ಬೀಳುವುದು. ಅದರಂತೆ ನಮ್ಮ ಈ ದೇಹ ಯಾವುದೇ ಸಮಯದಲ್ಲೂ ಬಿದ್ದುಹೋಗುವಂತಹುದು. ಇದರ ಮೇಲೆ ಅಭಿಮಾನದ ಬಂಧನಕ್ಕೊಳಗಾಗಿ ನಾನು ತೊಳಲುತ್ತಿರುವೆನು. ಕರುಣಾಳುವಾದ ನೀನು ಇಂತಹ ನನ್ನನ್ನು ರಕ್ಷಿಸದಿದ್ದಲ್ಲಿ, ನೀನಿದ್ದುದಕ್ಕೆ ಪ್ರಯೋಜನವೇನು. ನಾನು ಮಾಡುವ ಭಕ್ತಿಗಾದರೂ ಬೆಲೆ ಎಲ್ಲಿದ್ದೀತು. ಆದ್ದರಿಂದ, ಶ್ರೀಹರಿಯೇ! ನಿನ್ನಲ್ಲಿನ ಭಕ್ತಿಗೆ ಕುಂದು ಬರದಂತೆ ನಮ್ಮನ್ನು ನೀನು ಸದಾ ರಕ್ಷಿಸು.

ವಿ.: ೧: ದೇಹ ಅನಿತ್ಯ ಎಂಬುದನ್ನು ಮತ್ತೊಂದು ಬಗೆಯಲ್ಲಿ ತಿಳಿಸುತ್ತಾ, ಇದರ ಮೇಲಿನ ಮಮಕಾರ ತೊರೆಯದ ಹೊರತು ಉದ್ಧಾರ ಸಾಧ್ಯವಿಲ್ಲ ಎಂಬುದನ್ನು ಇಲ್ಲಿ ನಿರೂಪಿಸಲಾಗಿದೆ.

೨. ಈ ದೇಹ ಅನಿತ್ಯ ಎಂಬುದನ್ನು ನೀರಮೇಲಿನ ಗುಳ್ಳೆಯ ನಿದರ್ಶನದೊಂದಿಗೆ ಹಿಂದಿನ ಪದ್ಯದಲ್ಲಿ ನಿರೂಪಿಸಿ ಈ ಪದ್ಯದಲ್ಲಿ ಕನ್ನಡಿಯ ಮೇಲಿನ ಉದ್ದಿನಂತೆ ಅನಿತ್ಯ ಎಂದು ಮತ್ತೊಮ್ಮೆ ಸ್ಪಷ್ಟಪಡಿಸಿರುವರು.

೩. ಕನ್ನಡಿಯ ಮೇಲಿರಿಸಿದ ಉದ್ದು ನಿಲ್ಲಲು ಸಾಧ್ಯವಾಗದೇ ಯಾವ ಕ್ಷಣದಲ್ಲಾದರೂ ಜಾರಿ ಬೀಳುವುದು ನಿಶ್ಚಿತ. ಅದರಂತೆ ಜೀವಿಗೆ ಈ ದೇಹ ಯಾವ ಕ್ಷಣದಲ್ಲಾದರೂ ಬಿಟ್ಟು ಹೋಗುವಂತಹುದು. ಈ ಮಾತಿನಲ್ಲಿ ದೇಹವು ಅನಿತ್ಯ ಮತ್ತು ಅದರ ಇರುವಿಕೆ ಅತ್ಯಂತ ಅನಿಶ್ಚಿತ ಎಂಬ ಭಾವ ನಿರೂಪಿತವಾಗಿದೆ. ನಿಮಿಷದಲಿ ಎಂದರೆ ಅರವತ್ತು ಸೆಕೆಂಡಿನಲ್ಲಿ ಎಂದರ್ಥವಲ್ಲ, ಎವೆ ಇಕ್ಕುವಷ್ಟರಲ್ಲಿ, ಒಡನೆಯೇ ಎಂದರ್ಥ.

೪. ಇಂತಹ ಅನಿತ್ಯವಾದ ದೇಹದಲ್ಲಿ ಮಮಕಾರವನ್ನು ಹೊಂದುವುದು ಅವಿವೇಕದ ಲಕ್ಷಣ. ಆದರೆ, ಅಂತಹ ಅವಿವೇಕಕ್ಕೆ ಜೀವಿ ಒಳಗಾಗುವುದು ಸ್ವಾಭಾವಿಕ. ಅದರ ಅನಿತ್ಯತ್ವದ

ಬಗ್ಗೆ ಎಚ್ಚರವನ್ನು ಹೊಂದದೆ ನಿತ್ಯವೆಂದು ಭ್ರಮಿಸಿ ಮೋಕ್ಷ ನೀಡುವಂತಹ ಭಗವಂತನನ್ನು ಮರೆತು ಬದುಕುವ ಜೀವನ ಅತ್ಯಂತ ಹೇಯವಾದುದು ಎಂದರ್ಥ.

೫. ಭಕ್ತನಾದವನು ಹೀಗೆ ಮಮಕಾರಕ್ಕೊಳಗಾಗಿ ತೊಳಲುವುದನ್ನು ಪರಮಹಿತೈಷಿಯಾದ ನಿತ್ಯಬಂಧುವಾದ ಭಗವಂತನು ನೋಡಿ ಸುಮ್ಮನಿರುವುದು ಉಚಿತವಲ್ಲ. ಅವನು ಮಾಡುವ ಭಕ್ತಿಗೆ ಇದು ಯೋಗ್ಯ ಪ್ರತಿಕ್ರಿಯೆ ಎನ್ನಿಸದು. ಆದ್ದರಿಂದ, ನಿತ್ಯಬಂಧುವಾದ ಶ್ರೀಹರಿಯು ಭಕ್ತನ ಭಕ್ತಿಯನ್ನು ಗಮನಿಸಿ ದೇಹದ ಮೇಲಿನ ಅವನ ಮಮಕಾರವನ್ನು ತೊಲಗಿಸಿ ಮುಕ್ತಿಯನ್ನು ಕರುಣಿಸಬೇಕು ಎಂಬುದು ಈ ಪ್ರಾರ್ಥನೆಯ ಭಾವ.

೬. ಶ್ರೀಹರಿಯಲ್ಲಿ ನಿಜವಾದ ಭಕ್ತಿಯನ್ನು ಮಾಡುವುದಕ್ಕೆ ಅಹಂಕಾರ-ಮಮಕಾರಗಳು ಪರಿಹಾರವಾಗಿ ಈ ಸಂಸಾರದಿಂದ ಮುಕ್ತಿ ಲಭಿಸುವುದೇ ಮುಖ್ಯ ಪ್ರಯೋಜನ. ಇತರ ಯಾವುದೇ ಪ್ರಯೋಜನವು ಸಹ ನಗಣ್ಯವೆನ್ನಿಸುವಂತಹುದು ಎಂದರ್ಥ.

*****

## ೭೭. ಭಕ್ತಿಯೊಳಾಳಿ ಬದುಕುವುದುಚಿತ ರಕ್ಷಿಸು

**ಕೇಳುವುದು ಕಡುಕಷ್ಟ ಕಷ್ಟದ**
**ಬಾಳುವೆಯ ಬದುಕೇನು ಸುಡು ಸುಡು**
**ಗಾಳಿಗೊಡ್ಡಿದ ಸೊಡರು ಈ ಸಂಸಾರದೇಳಿಗೆಯು ।**
**ಬಾಳಬೇಕೆಂಬವಗೆ ನೆರೆ ನಿ-**
**ಮ್ಮಾಳಿಗವ ಮಿಗೆ ಮಾಡಿ ಭಕ್ತಿಯೊ-**
**ಳಾಳಿ ಬದುಕುವುದುಚಿತ ರಕ್ಷಿಸು ನಮ್ಮನನವರತ ॥ ೭೭ ॥**

ಅ: ಇತರರನ್ನು ಕೇಳುವುದು ತುಂಬಾ ನೋವಿನ ಸಂಗತಿ. ಅಂತಹ ನೋವಿನ ಬದುಕು, ಬದುಕು ಹೇಗಾದೀತು. ಅದು ಸುಡಲಿಕ್ಕೆ ಯೋಗ್ಯವೆನ್ನಿಸುವಂತಹುದು. ಈ ಸಂಸಾರದಲ್ಲಿ ಕಾಣುವ ಪ್ರಗತಿಯು ಗಾಳಿಗೆ ಒಡ್ಡಿದ ದೀಪದಂತೆ ತುಂಬಾ ನಶ್ವರವಾದುದು. ನಿಜವಾಗಿಯೂ ಸಹ ಬಾಳಬೇಕು ಎನ್ನುವವನಿಗೆ ಶ್ರೀಹರಿಯಾದ ನಿನ್ನ ಸೇವಕನಾಗಿ ಭಕ್ತಿಯಿಂದ ಸುಖವಾಗಿ ಬದುಕುವುದೇ ಯೋಗ್ಯವಾದ ಜೀವನ. ಶ್ರೀಹರಿಯೇ! ನೀನು ನಮ್ಮನ್ನು ಸದಾ ರಕ್ಷಿಸು.

ವಿ.: ೧. ಯಾಚನೆಯ ಬದುಕು ಅತ್ಯಂತ ಹೇಯ; ನಿಜಕ್ಕೂ ಶ್ರೀಹರಿಯ ದಾಸನಾಗಿ ಬದುಕುವುದೇ ಸಾರ್ಥಕ ಜೀವನ ಎಂದು ಈ ಪದ್ಯದಲ್ಲಿ ತಿಳಿಸಲಾಗಿದೆ.

೨. ಯಾಚನೆ ಎಂದರೆ ಫಲದ ಅಪೇಕ್ಷೆ. ಲೋಕದ ಜನರ ಮುಂದೆ ಕೈಯೊಡ್ಡಿ ತನ್ನ ಅಗತ್ಯವನ್ನು ಪೂರೈಸಿಕೊಳ್ಳುವ ಚಟ ಕೆಲವರದು. ಭಿಕ್ಷೆ ಎಂದರೆ ಇದೇ. ಬ್ರಹ್ಮಚಾರಿಗಳ, ಯತಿಗಳ ಭಿಕ್ಷೆ ಇದಕ್ಕೆ ಅನ್ವಯಿಸುವುದಿಲ್ಲ. ದೇಹದಲ್ಲಿ ಶಕ್ತಿ ಇದ್ದು ಕೇವಲ ಸೋಮಾರಿತನದಿಂದ ಇತರರ ಮುಂದೆ ಬೇಡಿ ಬದುಕುವ ಬಾಳು ಅತ್ಯಂತ ನಿಕೃಷ್ಟವಾದುದು ಎಂಬುದು ಇದರ ಒಂದು ಬಗೆಯ ಅರ್ಥ; **ಸೊಡರು** – ದೀಪ.

೩. ಯಾಚನೆ ಎಂದರೆ, ತಾವು ಮಾಡುವ ಸೇವೆಗೆ ಪ್ರತಿಫಲ ಬೇಡುವ ಪ್ರವೃತ್ತಿ. ದೇವರ ಸೇವೆಯನ್ನೂ ಸಹ ಪುತ್ರಪೌತ್ರಾದಿಗಳ ಬಯಕೆಯಿಂದ ಮಾಡುವ ಜನರೇ ಹೆಚ್ಚು. ಇವರದು ಸಹ ಒಂದು ರೀತಿಯ ಯಾಚನೆಯ ಬದುಕೇ. ಜನರನ್ನು ಕೇಳುವ ಬದಲು ದೇವತೆಗಳನ್ನು ಕೇಳುವರು ಎಂಬುದಷ್ಟೇ ವ್ಯತ್ಯಾಸ. ಇಂತಹ ಯಾಚನೆಯೂ ಸಹ ಬಂಧಕವಾದದ್ದೇ ಸರಿ ಎಂದರ್ಥ.

೪. ಹಿರಣ್ಯಕಶಿಪು ಮೊದಲಾದವರ ಯಾಚನೆ ಮತ್ತೊಂದು ಬಗೆಯದು. ಅವರ ಯಾಚನೆ ಲೋಕಕ್ಕೆ ಕೇಡನ್ನು ಬಯಸುವಂತಹ ಕೆಟ್ಟ ಯಾಚನೆ. ಅರ್ಚಿಸಿದ್ದು ಆರಾಧಿಸಿದ್ದು ಬ್ರಹ್ಮದೇವರಂತಹ ಮಹನೀಯರನ್ನೇ ಆದರೂ, ಅದರ ಹಿನ್ನೆಲೆಯಾಗಿ ಇದ್ದದ್ದು ಲೋಕನಾಶ ಮಾಡುವಂತಹ ದುಷ್ಟಫಲದ ಯಾಚನೆಯೇ ಆಗಿತ್ತು. ಅದರಿಂದಾಗಿ ಅವನು ಸರ್ವನಾಶವನ್ನು ಕಂಡ. ಬ್ರಹ್ಮ ಶಿವ ಮೊದಲಾದ ದೇವತೆಗಳನ್ನು ಹೀಗೆ ಲೋಕನಾಶಕ್ಕೋಸ್ಕರ ಬೇಡುವ ಎಲ್ಲ ಜನರ ಪಾಡೂ ಇಂತಹುದೇ ಎಂದು ತಿಳಿಯಬೇಕು.

೫. ಬ್ರಹ್ಮಾದಿ ದೇವತೆಗಳನ್ನೇ ಸಾತ್ವಿಕ ಫಲಕ್ಕಾಗಿ ಯಾಚಿಸುವುದು ಮತ್ತೊಂದು ಬಗೆಯ ಯಾಚನೆ. ಈ ಫಲ ಎಂತಹುದೇ ಆಗಿದ್ದರೂ ಮುಕ್ತಿಯ ಸಾಧನೆಗೆ ಅಡ್ಡಿಯಾಗುವಂತಹುದು. ಸ್ವರ್ಗಾದಿಗಳನ್ನು ಬಯಸಿ ಮಾಡುವ ಯಜ್ಞ-ಯಾಗಾದಿಗಳ ರೀತಿಯೂ ಸಹ ಇಂತಹುದೇ. ಕೊನೆಗೆ ಅನರ್ಥ ಇದರ ಫಲಶ್ರುತಿ: **'ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ'** (ಗೀತಾ ೯/೨೧).

೬. ಇನ್ನು ಶ್ರೀಹರಿಯನ್ನೇ ಭಕ್ತಿಯಿಂದ ಆರಾಧಿಸಿದಾಗಲೂ ಸಹ, ಜ್ಞಾನ-ಭಕ್ತ್ಯಾದಿ ಮುಖ್ಯಫಲಗಳನ್ನು ಕೇಳದೇ ಇಹಲೋಕದ ಸುಖ, ಸ್ವರ್ಗಾದಿ ಪರಲೋಕಪ್ರಾಪ್ತಿಗಳನ್ನು ಬಯಸಿದರೆ ಅದು ಕಾಮ್ಯಕರ್ಮವೆಂದೆನಿಸಿ ಬಂಧಕವಾಗುವುದು. ಇಂತಹ ಫಲ ಕೇಳುವ ಭಕ್ತ ನಿಜ ಅರ್ಥದಲ್ಲಿ ಭಗವದ್ಭಕ್ತನೆನ್ನಿಸನು. ಈಶಾವಾಸ್ಯೋಪನಿಷತ್ತು ತಿಳಿಸುವ **'ತೇನ ತ್ಯಕ್ತೇನ ಭುಂಜೀಥಾ ಮಾ ಗೃಧಃ ಕಸ್ಯಸ್ವಿದ್ಧನಮ್'** ಎಂಬ ಮಾತಿನ ಅರ್ಥ ಇದೇ ಆಗಿದೆ. ಭಗವದ್ಗೀತೆಯು ಪ್ರತಿಪಾದಿಸುವ ನಿಷ್ಕಾಮ ಕರ್ಮ ಎಂದರೂ ಇದೇ: **'ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ'**[೧].

೧. ಗೀತಾ (೨/೪೭)

೭. ಪ್ರಹ್ಲಾದರಾಜ ಶ್ರೀನರಸಿಂಹದೇವರನ್ನು ಕುರಿತು ತಾನು ಯಾವುದೇ ಪಲವನ್ನು ಬಯಸಲಾರೆ, ಹಾಗೆ ಬಯಸುವುದು ವ್ಯಾಪಾರವೆನ್ನಿಸುವುದು. ತನಗೆ ಎಂದೂ ಸಹ ಕೇಳುವ ಬಯಕೆಯೇ ಬರದಂತೆ ಅನುಗ್ರಹಿಸು ಎಂದು ಬೇಡಿಕೊಳ್ಳುವುದು ನಿಜವಾದ ಭಗವದ್ಭಕ್ತನ ಲಕ್ಷಣ. ಶ್ರೀಕನಕದಾಸರು ಆ ಭಾವವನ್ನು ಇಲ್ಲಿ ವ್ಯಕ್ತಪಡಿಸಿರುವರು[೧].

೮. ಹೀಗೆ ಫಲಾಪೇಕ್ಷೆಯ ಪ್ರವೃತ್ತಿ ಕೊನೆಗೂ ಸಹ ಮುಕ್ತಿಯಂತಹ ಪರಮಪುರುಷಾರ್ಥಕ್ಕೆ ಅಡ್ಡಿಯಾಗುವುದು. ಇಹಲೋಕದಲ್ಲೂ ಸಹ ಮಾನಸಿಕ ಕ್ಲೇಶ ಮೊದಲಾದವುಗಳಿಗೆ ಕಾರಣವಾಗುವುದು. ಆದ್ದರಿಂದ ಫಲಕೇಳುವ ಪ್ರವೃತ್ತಿ, ದೀನಪ್ರವೃತ್ತಿ ಎನ್ನಿಸಿ ದುಃಖಕ್ಕೆ ಕಾರಣವಾಗುವುದು. ಆದ್ದರಿಂದ ಅದು ಹೇಯ ಎಂಬುದು ಒಟ್ಟು ಭಾವ.

೯. ಹೀಗೆ ಯಾಚನೆ ಮಾಡಿ ಫಲವನ್ನು ಪಡೆದರೂ ಸಹ ಅದರಿಂದ ಬರುವ ಏಳಿಗೆಯು ಸುಖಕ್ಕೆ ಕಾರಣವಾಗುವುದಿಲ್ಲ. ಒಟ್ಟು ಜೀವನವೇ ಗಾಳಿಗೆ ಒಡ್ಡಿದ ದೀಪದಂತೆ ನಶ್ವರವಾಗಿರುವಾಗ ಆ ಸಮಯದಲ್ಲಿ ಲಭಿಸುವ ಫಲಗಳು ಹೇಗೆ ತಾನೇ ಪೂರ್ಣಸುಖವನ್ನು ನೀಡಿಯಾವು? ಈ ಅರ್ಥದಲ್ಲೂ ಯಾಚನೆಯ ಬಾಳು ನಿಂದ್ಯ ಎಂದರ್ಥ. ಹಿರಣ್ಯಕಶಿಪು ಮೊದಲಾದ ದೈತ್ಯರ ಜೀವನ ಇದಕ್ಕೆ ನಿದರ್ಶನ. ವರಬಲದಿಂದಾಗಿ ಲೋಕಗಳನ್ನು ಪೀಡಿಸಿ ಅಪಾರ ಸಂಪತ್ತನ್ನು ಸಂಗ್ರಹಿಸಿದರೂ ಸಹ ಅದರ ಪ್ರಯೋಜನ ಪಡೆಯಲಾಗದೇ ದುರಂತವನ್ನು ಕಂಡ ಬದುಕು ಅವರದು. ಬದುಕು ಅನಿತ್ಯ ಎಂಬ ತತ್ತ್ವವನ್ನು ತಿಳಿದವರಿಗೆ ಇನ್ನೊಬ್ಬರ ಮುಂದೆ ಕೈಚಾಚಿ ಅದರಿಂದ ಬರುವ ಫಲದಿಂದ ಸುಖವಾಗಿರಲು ಸಾಧ್ಯ ಎನ್ನಿಸುವುದು ಕೇವಲ ಭ್ರಮೆ ಎಂಬುದು ಮನವರಿಕೆಯಾಗುವುದು. ಇದು ಒಂದುರೀತಿಯಲ್ಲಿ ಈಶಾವಾಸ್ಯೋಪನಿಷತ್ತಿನ ಮೊದಲ ಮಂತ್ರದಲ್ಲಿನ 'ಮಾ ಗೃಧಃ ಕಸ್ಯಸ್ವಿದ್ಧನಂ' ಎಂಬ ಮಾತಿನ ವಿವರಣೆಯಂತಿದೆ. ಅದರ ಭಾಷ್ಯದಲ್ಲಿನ '**ಅತೋ ನಾನ್ಯಂ ಪ್ರಯಾಚಯೇತ್**' ಎಂಬ ಮಾತಿಗೂ ಇದು ವಿವರಣೆಯಾಗಿದೆ.

೧೦. ನಿಜಕ್ಕೂ ಸಾರ್ಥಕವಾದ ಬದುಕು ಎಂದರೆ ಶ್ರೀಹರಿಯ ದಾಸನಾಗಿ ಬದುಕುವುದು. ಧ್ರುವ, ಪ್ರಹ್ಲಾದಾದಿಗಳು ಇದಕ್ಕೆ ನಿದರ್ಶನ. ಗುಣಸಾಗರನೂ, ದೋಷದೂರನೂ ಆದ ಭಗವಂತನಿಗೆ ತಮ್ಮನ್ನು ಒಪ್ಪಿಸಿಕೊಂಡ ಮೇಲೆ ಇನ್ನೊಬ್ಬರನ್ನು, ಇನ್ನೊಂದನ್ನು ಕೇಳುವ ಯೋಚನೆಯೂ ಮನಸ್ಸಿನಲ್ಲಿ ಮೂಡಲಾರದು. ತನ್ನ ಸಮಸ್ತ ಯೋಗಕ್ಷೇಮವನ್ನು ಭಗವಂತ ಸದಾ ವಹಿಸುವನು ಎಂಬ ತತ್ತ್ವ ತಿಳಿದವರಿಗೆ ಕೇಳುವ ಅಗತ್ಯವೇ ಕಂಡುಬರುವುದಿಲ್ಲ. ಶ್ರೀವಿಜಯದಾಸರು ಒಮ್ಮೆ ತಮ್ಮ ಬಳಿಗೆ ಅಪಾರ ಸಂಪತ್ತು ತಾನಾಗಿ ಒದಗಿದಾಗ ಅದಕ್ಕಾಗಿ ಸ್ವಲ್ಪವೂ ಸಂತೋಷಪಡದೇ, '**ನೀನೊಲಿದುದಕೆ ಇಹಸೌಖ್ಯವೇ ರಂಗ ನಾನೊಲ್ಲೆ ನಾನೊಲ್ಲೆ**' ಎಂದು ಬೇಡಿಕೊಂಡು ಆ ಸಂಪತ್ತನ್ನು ಮರಳಿಸಿದ ವಿವರ ಇಲ್ಲಿ ಉಲ್ಲೇಖನಾರ್ಹವಾಗಿದೆ[೨].

---

೧. ಕಾಮಾನಾಂ ಹೃದ್ಯಸಂ ರೋಹಂ ಭವತಸ್ತು ವೃಣೇವರಮ್ - ಭಾಗವತ (೭/

೨. ಈ ಬಗ್ಗೆ ಹೆಚ್ಚಿನ ವಿವರಗಳನ್ನು ನಮ್ಮ ಪ್ರಕಾಶನದ 'ಶ್ರೀವಿಜಯದಾಸದರ್ಶನ' ಎಂಬ ಕೃತಿಯಲ್ಲಿ ಕಾಣಬಹುದು.

೧೧. ಶ್ರೀಹರಿಯಲ್ಲಿ ಊಳಿಗ ಮಾಡುವುದು ಎಂದರೆ ಇದೇ. ತಾನು ಮಾಡುವ ಪ್ರತಿಯೊಂದು ಕಾರ್ಯವೂ ಸಹ ಜನ್ಮಜನ್ಮದ ಸ್ವಾಮಿಯಾದ ಶ್ರೀಹರಿಯ ಸೇವೆ, ತನ್ನ ಸಮಸ್ತ ಯೋಗಕ್ಷೇಮವನ್ನು ಸಹ ಅವನು ಸದಾ ನೋಡುವವನು ಎಂಬ ದೃಢವಾದ ನಂಬಿಕೆ ಭಕ್ತರ ಜೀವನದ ನಿಜವಾದ ಯಶಸ್ಸು. ಇಂತಹ ಊಳಿಗವೇ ಸಾಧನೆ ಎನ್ನಿಸುವುದು.

೧೨. '**ಫಲವಿದು ಬಾಳ್ದುದಕೆ ಸಿರಿ ನಿಲಯನ ಗುಣಗಳ ಅರಿತು ಭಜಿಸುವುದೆ ಫಲವಿದು ಬಾಳ್ದುದಕೆ**' ಎಂಬ ಶ್ರೀಜಗನ್ನಾಥದಾಸರ ಮಾತಿನಲ್ಲಿ ಇಂತಹ ಸಾರ್ಥಕಜೀವನದ ಹೆಚ್ಚಿನ ವಿವರಗಳನ್ನು ಕಾಣಬಹುದು.

*****

## ೭೮. ಮಾನವ ಸಾಹಸಿಯೆ ಸಟೆಮಾತು ರಕ್ಷಿಸು

ದೇಹಧಾರಕನಾಗಿ ಬಹುವಿಧ
ಮೋಹದೇಳಿಗೆಯಾಗಿ ಮುಕುತಿಗೆ
ಬಾಹಿರನು ತಾನಾಗಿ ವಿಷಯಾದಿಗಳಿಗೊಳಗಾಗಿ ।
ದೇಹವೀ ಸಂಸಾರವೆನ್ನದೆ
ಮೋಹಿಸುವ ಮತಿಗೇಡಿ ಮಾನವ
ಸಾಹಸಿಯೆ ಸಟೆಮಾತು ರಕ್ಷಿಸು ನಮ್ಮನನವರತ ॥ ೭೮ ॥

**ಅ: ಕೇವಲ ದೇಹವನ್ನಷ್ಟೇ ಪೋಷಣೆ ಮಾಡುತ್ತಾ, ಬಹುವಿಧವಾದ ಮೋಹವನ್ನೇ ಹೆಚ್ಚಿಸಿಕೊಳ್ಳುತ್ತಾ ಬದುಕುವವನು ಮುಕ್ತಿಯನ್ನು ಕಳೆದುಕೊಳ್ಳುವನು. ವಿಷಯಸುಖಕ್ಕೆ ವಶನಾಗಿ ಈ ದೇಹವೇ ಸಂಸಾರಕ್ಕೆ ಕಾರಣ ಎಂದು ತಿಳಿಯದೇ ಮೋಹಕ್ಕೊಳಗಾಗುವ ಮಾನವನು ಬುದ್ಧಿಹೀನನೇ ಸರಿ. ಅವನು ಸಾಹಸಿ ಎನ್ನಿಸಿಯಾನೆ? ಈ ಮಾತು ಸತ್ಯವಾದುದು. ಶ್ರೀಹರಿಯೇ! ನೀನು ಸದಾ ನಮ್ಮನ್ನು ರಕ್ಷಿಸು.**

ವಿ.: ೧. ದೇಹದ ಪೋಷಣೆಗಷ್ಟೇ ಗಮನ ನೀಡಿ ಐಹಿಕವಾದ ಭೋಗ-ಭಾಗ್ಯಗಳನ್ನು ಮಾತ್ರವೇ ಸಾಧನೆಯೆಂದು ಭ್ರಮಿಸುವ ಜನರು ಮುಕ್ತಿಯನ್ನು ಪಡೆಯಲಾರರು. ಅವರ ಬದುಕು ನಿಜಕ್ಕೂ ಹೇಯ ಎಂಬುದು ಇಲ್ಲಿಯ ಭಾವ.

೨. ಇತ್ತೀಚಿನ ಜನಗಳ ಬದುಕಿನ ಕಲ್ಪನೆ ಹೆಚ್ಚಾಗಿ ಇಂತಹುದೇ ಆಗಿದೆ. ದೇಹದ ಪೋಷಣೆಗೆ ಅಗತ್ಯವಾದ ಧನ ಲಭಿಸಿದಲ್ಲಿ ಅದನ್ನೇ ಮಹಾಸಾಧನೆಯೆಂದು ಭ್ರಮಿಸುವ ರೀತಿ ಇವರದು: '**ಬೈಬೈ ವರೆಗೂ ಊಟದ ಕೆಲಸ ಉಂಡ ಮೇಲೆ ಶಯನ**' ಎಂಬ ಶ್ರೀಪುರಂದರದಾಸರ ಮಾತಿನಲ್ಲಿ ಇಂತಹ ಜೀವನದ ವಿಮರ್ಶೆ ಬಂದಿದೆ.

೩. ಕೇವಲ ಹಣವನ್ನು ಸಂಪಾದಿಸುವುದು, ಅದನ್ನು ವಿಷಯಸುಖಗಳ ಪ್ರಾಪ್ತಿಗಾಗಿ ವಿನಿಯೋಗಿಸುವುದು ಅಷ್ಟೇ ಜೀವನ. ಭಗವಂತನ ಮಹಿಮೆಯ ಪರಿಜ್ಞಾನ, ಗುರುಹಿರಿಯರಲ್ಲಿ ಭಕ್ತಿ, ಫಲಾಪೇಕ್ಷೆ ಇಲ್ಲದ ಪರಿಶುದ್ಧ ಜೀವನ, ಮುಖ್ಯವಾಗಿ ಶಾಸ್ತ್ರಾಧ್ಯಯನದ ಮೂಲಕ ಪರತತ್ತ್ವವನ್ನು ತಿಳಿಯುವ ಮುಖ್ಯಕರ್ತವ್ಯ ಮೊದಲಾದವುಗಳ ಬಗ್ಗೆ ಸ್ವಲ್ಪವೂ ಎಚ್ಚರವನ್ನು ಹೊಂದದೇ, ಕ್ಷುಲ್ಲಕ ಫಲ, ಕ್ಷುಲ್ಲಕ ಜನರ ಸಹವಾಸ ಮೊದಲಾದವುಗಳನ್ನೇ ಜೀವನದ ಪರಮಸಿದ್ಧಿ ಎಂದು ಭ್ರಮಿಸುವ ಜನರೇ ಹೆಚ್ಚಿನ ಸಂಖ್ಯೆಯಲ್ಲಿ ದೊರೆಯುವರು. ಅಂತಹ ಜನರದು ನಿಜ ಅರ್ಥದಲ್ಲಿ ಜೀವನವಾಗಿರದೇ ಕೇವಲ ಭ್ರಮಾಲೋಕ ಮಾತ್ರವೇ ಆಗಿದೆ ಎಂಬ ಕಟುಸತ್ಯವನ್ನು ಶ್ರೀಕನಕದಾಸರು ಇದರಲ್ಲಿ ನಿರೂಪಿಸಿರುವರು.

೪. ಈ ದೇಹ ಹೇಯ, ಈ ಹೇಯ ದೇಹವನ್ನೆ ಸಂಸಾರವೆಂದು ಭಾವಿಸಿ ಅದರ ಪೋಷಣೆಯಲ್ಲಿ ಕಾಲಕಳೆಯುವುದು ಅವಿವೇಕದ ಲಕ್ಷಣ ಎಂದರ್ಥ. ಅದರಲ್ಲಿ ಲಭಿಸುವ ಸುಖ–ಸಂತೋಷಗಳು ಕೇವಲ ಕ್ಷಣಿಕ ಹಾಗೂ ಕ್ಷುಲ್ಲಕವಾಗಿ ನಿಜಕ್ಕೂ ಹೇಯವೆ ಆಗಿದೆ. ಒಂದು ಎಂಜಲು ಪದಾರ್ಥ ಎಷ್ಟೇ ಆಕರ್ಷಕವಾಗಿದ್ದರೂ ಅದು ಅಸಹ್ಯವನ್ನು ಹುಟ್ಟಿಸುವುದು. ಅದರಂತೆ ತಾನು ವಾಂತಿ ಮಾಡಿದ ಪದಾರ್ಥವನ್ನು ಎಷ್ಟೇ ಹಸಿದಿದ್ದರೂ ಸಹ ತಿನ್ನುವ ಮನಸ್ಸು ಸರ್ವಥಾ ಬರಲಾರದು. ಅದರಂತೆ ವಿಷಯಸುಖಗಳು ಅತ್ಯಂತ ಕ್ಷುಲ್ಲಕವಾಗಿದ್ದು ಅವುಗಳಿಂದ ಶಾಶ್ವತಸುಖದ ಬಯಕೆ ಖಂಡಿತ ತಣಿಯದು ಎಂಬ ಎಚ್ಚರವನ್ನು ವಿವೇಕಿಯಾದವನು ಸದಾ ಹೊಂದಿರುವನು. ಆದರೆ, ಅವಿವೇಕಿಗಳಾದವರು ಅದನ್ನು ಗಮನಿಸದೇ ಕೇವಲ ಆಸೆ–ಆಮಿಷಗಳಿಗೆ ಬಲಿಯಾಗಿ, ತಮ್ಮ ಕರ್ತವ್ಯಕ್ಕೆ ತಿಲಾಂಜಲಿಯನ್ನಿತ್ತು, ಶ್ರೀಹರಿಗುರುಗಳ ಕರುಣೆಯ ಮಹತ್ವವನ್ನು ತಿಳಿಯದೇ ತಮ್ಮ ಜೀವನವನ್ನು ಹಾಳು ಮಾಡಿಕೊಳ್ಳುವರು. ಅವರಿಗೆ ಯಾವ ಕಾಲಕ್ಕೂ ಸಹ ನಿಜವಾದ ಉದ್ಧಾರದ ಹಾದಿ ಗೋಚರಿಸುವುದೇ ಇಲ್ಲ. ಇಂತಹವರ ಜೀವನ ಅತ್ಯಂತ ಶೋಚನೀಯ ಎಂಬುದು ಇಲ್ಲಿಯ ಭಾವ.

೫. ಇಹಜೀವನದ ಸಂಪತ್ತು ಮೊದಲಾದವುಗಳನ್ನು ಗಳಿಸಿದವರನ್ನು ಮಹಾ ಸಾಹಸ–ವಂತರು, ಅವರದು ನಿಜಕ್ಕೂ ಸಾಹಸ ಎಂದು ಭ್ರಮಿಸುವ ಜನರೂ ಇರುವರು. ಶ್ರೀಹರಿಯನ್ನು ಮರೆತು ಪರಲೋಕದ ಬಗ್ಗೆ ಎಚ್ಚರವಹಿಸದ ಹೊರತು ಅದು ನಿಜವಾದ ಜೀವನ ಎನ್ನಿಸದು ಎಂಬ ತಿಳುವಳಿಕೆ ಅವರಿಗೆ ಇರುವುದೇ ಇಲ್ಲ. ಈ ಕಾಲದ ಬಹುಜನರು ತಮ್ಮ ಮಕ್ಕಳ ಐಹಿಕಪ್ರಗತಿಯನ್ನು ಕಂಡು ಪರಮಾನಂದ ಪಡುವರೇ ಹೊರತು, ಅವರು ಶ್ರೀಹರಿವಾಯುಗಳನ್ನು ಮರೆತು, ಆಧ್ಯಾತ್ಮಿಕ ಅವನತಿಯತ್ತ ಸಾಗುತ್ತಿರುವರು ಎಂಬ ಸತ್ಯಾಂಶವನ್ನು ಮರೆಯುವರು. ಅವರ ಬಗ್ಗೆ ಮರುಕವನ್ನೂ ಸಹ ಈ ಮಾತಿನಲ್ಲಿ ಗುರುತಿಸಬಹುದು.

೬. ಶ್ರೀದಾಸರು ಇಂತಹವರನ್ನು ಮತಿಗೇಡಿ ಎಂದು ಉಗ್ರವಾಗಿ ಟೀಕಿಸಿರುವರು. ದಾರಿತಪ್ಪಿದ ತಾವು ಮತಿಭ್ರಾಂತರು ಎಂಬ ಎಚ್ಚರವಿಲ್ಲದೆ ಮಹಾಸಾಹಸಿಗರು ಎಂದು ತಿಳಿಯುವ ಆ ಜನರು, ಮತಿಗೇಡಿಗಳಲ್ಲದೆ ಬೇರೇನು ತಾನೇ ಆಗಲು ಸಾಧ್ಯ ಎಂದರ್ಥ.

೭. ಈ ದೇಹವೇ ಸಂಸಾರ ಎಂಬುದು ಒಂದು ರೀತಿಯಲ್ಲಿ ಚಾರ್ವಾಕ ಮತದ ವಾದವಾಗಿದೆ. ದೇಹವನ್ನೇ ಸಂಸಾರವೆಂದು ಬಗೆದು ದೇಹದಿಂದ ಬೇರೆ ಜೀವವಿಲ್ಲ, ದೇಹದ ಅಳಿವು ಎಂದರೆ ಜೀವನದ ನಾಶ, ಅದರ ಪೋಷಣೆಗಾಗಿ ಸಾಲ ಮಾಡಿಯಾದರು ತುಪ್ಪ ತಿನ್ನಬಹುದು; ಭಸ್ಮವಾದ ದೇಹ ಮತ್ತೆ ಎಂತು ತಾನೆ ಮರಳೀತು ಮೊದಲಾಗಿ ಚಾರ್ವಾಕ ಮತ ಹೇಳುವುದು. ಅಂತಹ ಮತವನ್ನು ನಂಬಿ ಬದುಕುವುದು ಅನರ್ಥಕರ ಎಂದು ತಿಳಿಯಬೇಕು.

೮. ಧರ್ಮಕಾರ್ಯವನ್ನು ತೊರೆದು ದುಷ್ಕರ್ಮಕ್ಕೆ ತೊಡಗುವ ಮನುಷ್ಯರ ಸ್ವಭಾವವನ್ನು ದಾಸರು ಪ್ರತ್ಯೇಕವಾಗಿ ಪದವೊಂದರಲ್ಲಿ ವಿವರಿಸಿರುವರು:

ಧರ್ಮೇಂದ್ರಿಯಕ್ಕೆ ದಟ್ಟಡಿಯನಿಡಲೊಲ್ಲೆ ದು-
ಷ್ಕರ್ಮೇಂದ್ರಿಯಕ್ಕೆ ಕಾಲ ಕೆದರುತಿಹೆ ಮರುಳೆ ॥ ಪ ॥
ದುರ್ಮತಿಯಲಿ ಚಲಿಸುವುದ ಕಂಡರೆ ಮೈಯ
ಚರ್ಮವನು ಸುಲಿಯದೆ ಯಮ ಬಿಡುವನೆ ಮರುಳೆ ॥ ಅ.ಪ ॥
ಪುಸ್ತಕವ ಬಿಚ್ಚಿ ಪೌರಾಣ ಶಾಸ್ತ್ರಂಗಳ
ವಿಸ್ತರಿಸಿ ಹರಿಯ ಕಲ್ಯಾಣಗುಣಚರಿತೆಯನು
ಸ್ವಸ್ಥದಿಂ ಕುಳಿತು ಕೇಳೆಂದಡಾ ಠಾವಿನಲಿ
ಮಸ್ತಕಕೆ ವ್ಯಥೆ ತೋರಿ ಮನೆಗೆ ಪೋಪೆ
ಹಸ್ತದಿಂ ಹಣ ಭತ್ತ ಹಚ್ಚಡಂಗಳ ಕೊಟ್ಟು
ಕುಸ್ತರಿಸಿ ಬಿನಗು ಚಾರಿತ್ರ್ಯಗಳ ಲಾಲಿಸುತ
ದುಸ್ತರದಲೆತ್ತ ಚದುರಂಗ ಪಗಡೆಯೊಳುದ-
ಯಾಸ್ತಮಯತನ ಕುಳಿತು ಏಳದಿಹೆ ಮರುಳೆ ॥ ೧ ॥
ಗಂಧ ಶಾಲ್ಯಾನ್ನ ಸದ್ಘೃತ ತೋಯೆ ಪಳಿದ್ಯವ
ಮಂದವಾದ ಅಳೆಯ ಸ್ವಾದು ಸೀಕರಣೆಗಳನು
ಒಂದೆರಡು ಪರುತವಿಸಿ ದಶಮಿ ದ್ವಾದಶಿ ಶ್ರೀಮು-
ಕುಂದಾರ್ಪಣವ ಮಾಡಿ ಮನೆಯಲುಣ್ಣದೆ
ಬಂದವನಾವನಾದರು ಕರೆದೆಡೆ ಪುಣ್ಯ-
ವೆಂದವರ ಮನೆಗಳಿಗೆ ಪೋಗಿ ಬಹುಜನ-
ದೊಂದಿಗೆ ಕುಳಿತು ನೀ ಮಿಂಚುಗೂಳನೆ ತಿಂದು
ಬೆಂದೊಡಲ ಪೊರೆದು ಕಾಲವ ಕಳೆಯುತಿಹೆ ಮರುಳೆ ॥ ೨ ॥
ಸುರಗಿ ಸೇವಂತಿ ಮಲ್ಲಿಗೆ ಮೊಲ್ಲೆ ಬಕುಳ ಪಾ-
ದರಿ ಕಂಜ ಕಣಗಿಲೆ ಮೊಲ್ಲೆ ಸರೋಜ ಪಚ್ಚೆ
ಹರಿಚರಣಯುಗಳಕ್ಕೆ ಅರುಪಿಸಿದಾ ಬಳಿಕ
ಪರಿಮಳವನಾಘ್ರಾಣಿಸೆಂದೊಡೊಲ್ಲೆ

ಬಿರಿದ ಕೆಂಜಾಜಿಯ ನಾಗಸಂಪಿಗೆ ಕ-
ಸ್ತುರಿ ಕ್ರಮುಕದೆಸಳು ಮುಡಿವಾಳವನು ವನಿತೆಯರ
ಸಿರಿ ಮುಡಿಗೆ ಮುಡಿಸಿ ಕುಂತಳಸ್ವರೂಪವ ಕಂಡು
ಬರಿದೆ ಸಂತೋಷವನು ಪಡೆಯುತಿಹೆ ಮರುಳೆ || ೩ ||
ಶತ ಸಾಹಸ್ರ ಲಕ್ಷ ಪ್ರಣತಿಯ ಗೋ-
ಘೃತ ದೀಪ ಬೆಳಗಲಚ್ಯುತ ನಿಲಯದಿ ಭಾಗ-
ವತ ಗೀತನೃತ್ಯಗಳ ಕೇಳದೇಕಾದಶಿ-
ವ್ರತದಲ್ಲಿ ಜಾಗರದಲಿ ನೀ ನಿಡುನಿದ್ರೆಗೈವೆ
ಕೃತಕಮಯ ಪಣ್ಯಾಂಗನೆಯರರ್ತಿಗೆ ಮನೋ-
ರಥ ಸಿದ್ಧಿಯಲಿ ನಿರೀಕ್ಷಿಪೆನೆಂದು ಕುಜನಸಂ-
ಮತವೆರಸಿ ಬೆಳತನಕ ಕುಳ್ಳಿರುತ ನಿದ್ರಾ ವ-
ರ್ಜಿತನಾಗಿ ಪರಮ ಸಂತಸ ಪಡೆಯುತಿಹ ಮರುಳೆ || ೪ ||
ತಿದ್ದುವ ಸದಮಲ ವೈಷ್ಣವರು ಬರುತಿರೆ ಕಂಡು-
ಎದ್ದು ನಮಸ್ಕರಿಸಲೊಲ್ಲೆ ಕನ್ನಡಿ ಮೇಲೆ
ಉದ್ದು ಉರುಳುವನ್ನ ಪರಸುಖವಿಲ್ಲದೆ ಸ್ತ್ರೀಯರ
ಗೆದ್ದು ಬಾಳಿರಿಯೆಂದು ನಾ ಬೇಡಿಕೊಂಬೆ
ಸಿದ್ಧಿಯಂ ಪೇಳ್ವೆ ಕರಣಪ್ರಪಂಚಕೆ ಇದು
ಮದ್ದು ಮತ್ಕಾಗಿನೆಲೆಯಾದಿಕೇಶವರಾಯನ
ಮುದ್ದು ನಾಮಸ್ಮರಣೆಯನು ಮಾಡಿ ಯಮನವರ
ಗೆದ್ದು ವೈಕುಂಠದೊಳು ಇರು ಕಂಡೆಯ ಮರುಳೆ || ೫ ||

*****

## ೭೯. ಪಾಪವ ಕಳೆದು ಬಿಡುವುದು ಲೇಸು ರಕ್ಷಿಸು

ಅಳಿವ ಒಡಲನು ನೆಚ್ಚಿ ವಿಷಯಂ-
ಗಳಿಗೆ ಕಾತರನಾಗಿ ಮಿಗೆ ಕಳ-
ವಳಿಸಿ ಕಾಲನ ಬಳಿಗೆ ಹಂಗಿಗನಾಗಿ ಬಾಳುವರೆ ।
ತಿಳಿದು ಮನದೊಳು ನಿನ್ನ ನಾಮಾ-
ವಳಿಯ ಜಿಹ್ವೆಗೆ ತಂದು ಪಾಪವ
ಕಳೆದು ಬಿಡುವುದು ಲೇಸು ರಕ್ಷಿಸು ನಮ್ಮನನವರತ || ೭೯ ||

ಅ: ನಾಶವಾಗುವಂತಹ ಒಡಲನ್ನೇ ನಂಬಿ ವಿಷಯಸುಖಕ್ಕೆ ಕಾತರಿಸುತ್ತಾ ಮತ್ತೆ ಮತ್ತೆ ಕಳವಳಕ್ಕೆ ತುತ್ತಾಗಿ ಕೊನೆಗೆ ಮೃತ್ಯುಪಾಶಕ್ಕೆ ತುತ್ತಾಗಿ ಬಾಳುವುದ ಬದುಕು ಎನ್ನಿಸೀತೇ?

**ಮನಸ್ಸಿನಲ್ಲಿ ಚೆನ್ನಾಗಿ ಅರ್ಥಮಾಡಿಕೊಂಡು ನಿನ್ನ ನಾಮಾವಳಿಯನ್ನು ಜಿಹ್ವೆಗೆ ತಂದುಕೊಂಡು ಆ ಮೂಲಕವಾಗಿ ಪಾಪಗಳನ್ನು ಕಳೆದುಕೊಂಡುಬಿಡುವುದೇ ಲೇಸಾದ ಜೀವನ. ಶ್ರೀಹರಿಯೇ ನೀನು ಸದಾ ನಮ್ಮನ್ನು ರಕ್ಷಿಸು.**

ವಿ.: ೧. ಜನರು ತಮ್ಮ ಹೊಟ್ಟೆಗೋಸ್ಕರ ಎಂಬುದಾಗಿ ಸಲ್ಲದ ಕಾರ್ಯಗಳಲ್ಲಿ ತೊಡಗುವರು. ಹೊಟ್ಟೆ ತುಂಬುವುದಷ್ಟೇ ಜೀವನದ ದೊಡ್ಡ ಗುರಿ ಎಂದು ಭಾವಿಸಿ ವಿಷಯಸುಖಗಳತ್ತ ಧಾವಿಸುವರು. ಅದರ ಪರಿಣಾಮ ಕೇವಲ ದುರಂತದ ಸಾವು ಮಾತ್ರ. ಆದ್ದರಿಂದ ಅದರ ಬಗ್ಗೆ ವೈರಾಗ್ಯವನ್ನು ಹೊಂದಿ ಶ್ರೀಹರಿಯ ನಾಮವನ್ನು ಉಚ್ಚರಿಸುತ್ತಾ ಪಾಪವನ್ನು ಪರಿಹರಿಸಿಕೊಂಡು ಉದ್ಧಾರವಾಗುವುದೇ ಒಳಿತಿನ ಹಾದಿ ಎಂಬುದು ಇಲ್ಲಿಯ ಭಾವ.

೨. ಹೆಚ್ಚಿನ ಜನರು ಹೊಟ್ಟೆಪಾಡು ಎಂದು ಮತ್ತೆ ಮತ್ತೆ ನುಡಿಯುತ್ತಾ, ಅದಕ್ಕಾಗಿ ಮಾತ್ರ ತಮ್ಮ ಬದುಕು ಎನ್ನುವಂತೆ ಇರುವರು. ಹೊಟ್ಟೆಯ ಹೆಸರಿನಲ್ಲಿ ಸಲ್ಲದ ಭೋಗಗಳಿಗಾಗಿ ಹಂಬಲಿಸುವರು. ಇಂತಹ ಉದರಂಭರಿಗಳಾದ ಜನ ತಮಗೆ ತಲೆ ಇದೆ ಎಂಬುದನ್ನೇ ಮರೆಯುವರು. ಶ್ರೀಕನಕದಾಸರ '**ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ**[೧]' ಎಂಬ ಕೃತಿಯಲ್ಲಿ ಜನರು ಹೊಟ್ಟೆಗಾಗಿ ಜನರು ಎಂತೆಂಥಹ ಸಲ್ಲದ ಕಾರ್ಯಗಳಿಗೆ, ಅಪಾಯದ

---

೧. ಎಲ್ಲರೂ ಮಾಡುವುದು ಹೊಟ್ಟೆಗಾಗಿ – ಗೇಣುಬಟ್ಟೆಗಾಗಿ ॥ ಪ ॥
ನೆಲ್ಲುಗಳ ಕುಟ್ಟಿಕೊಂಡು ಬಿದುರುಗಳ ಹೊತ್ತುಕೊಂಡು
ಕೂಲಿಗಳ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥ ೧ ॥
ನಾಲಕು ವೇದಪುರಾಣಶಾಸ್ತ್ರಪಂಚಾಂಗ ಹೇಳಿಕೊಂಡು
ಕಾಲಕಳೆಯುವುದೆಲ್ಲ ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥ ೨ ॥
ಬಡಿದು ಬಡಿದು ಕಬ್ಬಿಣವ ಕಾಸಿ ತುಬಾಕಿ ಮಾಡಿ
ಹೊಡೆವ ಗುಂಡು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥ ೩ ॥
ಚಂಡಭಟರೆಲ್ಲರು ಮುಂದೆ ಕತ್ತಿ ಹರಿಗೆಯ ಪಿಡಿದು
ಖಂಡತುಂಡ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥ ೪ ॥
ದೊಡ್ಡ ದೊಡ್ಡ ಕುದುರೆಯನೇರಿ ನೇಜೆ ಹೊತ್ತು ರಾಹುತನಾಗಿ
ಹೊಡೆದಾಡಿ ಸಾಯುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥ ೫ ॥
ಕುಂಟೆ–ಕೂರಿಗೆಯಿಂದ ಹೆಂಟೆ– ಮಣ್ಣ ಮಾಡಿ
ರಂಟೆ ಹೊಡೆದು ಬೆಳಸುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥ ೬ ॥
ಕೆಟ್ಟತನದಿಂದ ಕಳ್ಳತನವನ್ನೆ ಮಾಡಿ
ಕಟ್ಟಿ ಹೊಡೆಸಿಕೊಂಬುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥ ೭ ॥
ಸನ್ಯಾಸಿ ಜಂಗಮ ಜೋಗಿ ಜಟ್ಟಿಮೊಂಡಬೈರಾಗಿ
ನಾನಾ ವೇಷಕೊಂಬುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥ ೮ ॥
ಉನ್ನತ ಕಾಗಿನೆಲೆ ಆದಿಕೇಶವನ
ಅನುದಿನ ನೆನೆವುದು ಭಕ್ತಿಗಾಗಿ – ಪರಮುಕ್ತಿಗಾಗಿ ॥ ೯ ॥

ಕಾರ್ಯಗಳಿಗೆ ತಮ್ಮನ್ನು ಒಡ್ಡಿಕೊಳ್ಳುವರು ಎಂಬುದನ್ನು ತುಂಬಾ ಪರಿಣಾಮಕಾರಿಯಾಗಿ ವರ್ಣಿಸಿರುವರು.

೩. ಇದರ ಅರ್ಥ ಹೊಟ್ಟೆಯನ್ನು ನಿರ್ಲಕ್ಷಿಸಬೇಕೆಂದೇನು ಅಲ್ಲ; ಅದಕ್ಕಾಗಿ ಪ್ರಯತ್ನ ಅನಗತ್ಯ ಎಂದೂ ಅಲ್ಲ. ಆದರೆ ಹೊಟ್ಟೆ ತುಂಬಿಸಿಕೊಳ್ಳುವುದಷ್ಟೇ ಜೀವನದ ಮುಖ್ಯ ಧ್ಯೇಯವಾಗಬಾರದು ಎಂದು ಭಾವ. ವಿದ್ಯಾರ್ಥಿ ಓದಲೆಂದು ಹಾಸ್ಟೆಲ್ ಮೊದಲಾದವುಗಳನ್ನು ಸೇರಿಕೊಂಡವರು ಊಟ, ಉಪಚಾರಗಳನ್ನು ತೊರೆಯಬೇಕೆಂದೇನೂ ಅಲ್ಲ. ಅವುಗಳು ಇಲ್ಲದೆ ಅವರು ಬದುಕುವುದು ಸಾಧ್ಯವೂ ಆಗದು. ಆದರೆ, ಅವುಗಳಿಗಷ್ಟೇ ಗಮನ ನೀಡಿ ಓದುವ ಕಾರ್ಯವನ್ನು ಮರೆತರೆ ಅವನ ಜೀವನ ಶೋಚನೀಯವಾಗುವುದು. ಊಟ ಉಪಚಾರಗಳ ಗುರಿ ವಿದ್ಯಾರ್ಜನೆ ಆಗಿರುವುದೇ ಹೊರತು ವಿಲಾಸವಾಗಿರುವುದಲ್ಲ. ಅದರಂತೆ ಸಾಧಕನಾದವನು ತನ್ನ ಬದುಕಿಗೆ ಅಗತ್ಯವಾದಷ್ಟು ಸಂಪಾದನೆಯನ್ನು ಸಾತ್ವಿಕ ಮಾರ್ಗದಲ್ಲಿ ತನ್ನ ವರ್ಣ ಹಾಗೂ ಆಶ್ರಮಗಳಿಗೆ ವಿಹಿತವಾದ ರೀತಿಯಲ್ಲಿ ಮಾಡುವುದು ಸರ್ವಥಾ ತಪ್ಪು ಎನ್ನಿಸದು. ಆದರೆ, ಅದನ್ನು ಮಾತ್ರವೇ ಗುರಿಯೆಂದು ಭಾವಿಸಿ ಸಲ್ಲದ ರೀತಿಯ ಸಂಪಾದನೆಗೆ ಕೈ ಹಾಕಿದಾಗ ಅದು ಆ ಕಾಲಕ್ಕೆ ಹಿತವೆಂದು ತೋರಿದರೂ ಸಹ ಮುಂದಿನ ದಿನಗಳಲ್ಲಿ ಅತ್ಯಂತ ಅಪಾಯಕಾರಿಯಾಗಿ ಪರಿಣಮಿಸುವುದು. ತನಗೆ ವಿಹಿತವಲ್ಲದ ವರ್ಣಾಶ್ರಮಗಳಿಗೆ ಒಪ್ಪದಂತಹ ರೀತಿಯ ಸಂಪಾದನೆಯನ್ನು ಶಾಸ್ತ್ರಗಳು ಒಪ್ಪಿಲ್ಲ[೧]. ಈ ಎಚ್ಚರ ನಿಜವಾದ ಸಾಧಕನಿಗೆ ಮಾತ್ರವೇ ಇರುವುದೇ ಹೊರತು ಯಾವುದೇ ರೀತಿಯಲ್ಲಾದರೂ ಸಹ ಧನ-ಕನಕಗಳು ದೊರೆತರೆ ಸಾಕು ಎಂಬ ಅವಿವೇಕಿಗಳಿಗೆ ತಿಳಿಯದು.

೪. ಈ ಸಂಸಾರ; ಇದರಲ್ಲಿ ಒದಗುವ ಕೇಡು ಮೊದಲಾದವುಗಳೆಲ್ಲ ಹಿಂದಿನ ಜನ್ಮದ ಪಾಪದ ಫಲ ಎಂಬ ಪರಿಜ್ಞಾನವನ್ನು ಹೊಂದಿ ಅದರ ಪರಿಹಾರಕ್ಕೆ ಯತ್ನಿಸುವುದು ನಿಜವಾದ ವಿವೇಕಿಯ ಲಕ್ಷಣ. ಪಾಪಪರಿಹಾರಕ್ಕೆ ಭಗವಂತನ ನಾಮಾವಳಿಯ ಕೀರ್ತನೆಯೊಂದೆ ಮುಖ್ಯವಾದ ಮಾರ್ಗ. ಅಂತಹ ಕೀರ್ತನೆಯು ಸಹ ತನಗೆ ವಿಹಿತವಾದ ನಿತ್ಯಾಹ್ನಿಕ, ಸತ್ಯ-ಧರ್ಮಗಳಿಗೆ ತೆರೆದುಕೊಂಡ ಬದುಕು ಮೊದಲಾದವುಗಳ ಮೂಲಕವೇ ನಡೆಯಬೇಕು. ಆಗ ಅವನ ಪಾಪಗಳೆಲ್ಲ ಶ್ರೀಹರಿಯ ನಾಮಾವಳಿಯ ಪ್ರಭಾವದಿಂದ ಹರಿದುಹೋಗುವವು. ಈ ಸಂಸಾರದ ಬಂಧನ ಕಳಚುವುದು. ಅದರೊಂದಿಗೆ ಮತ್ತೆಂದಿಗೂ ಸಹ ಅವನು ದುಃಖ-ಕ್ಕೊಳಗಾಗುವ ಪ್ರಸಂಗವೇ ಒದಗದು. ಅಪರೋಕ್ಷಜ್ಞಾನದ ಸ್ಥಿತಿಯೆಂದರೆ ಇದೇ. ಇಂತಹ ಜ್ಞಾನಸಾಧನೆಯಲ್ಲಿಯೇ ಮಾನವನ ನಿಜವಾದ ಯಶಸ್ಸು ಅಡಗಿದೆ. ಇಂತಹ ಎಚ್ಚರವನ್ನು ಹೊಂದಿ ಸಾಗಿಸುವ ಜೀವನ ಮುಕ್ತಿಗೆ ಸಾಧನವಾಗಿ ಸಾರ್ಥಕವೆನ್ನಿಸುವುದು.

---

೧. ಧರ್ಮೇಣೇಜ್ಯಾಸಾಧನಾನಿ ಸಾಧಯಿತ್ವಾ ವಿಧಾನತಃ।
ಸ್ನಾತ್ವಾ ಸಂಪೂಜಯೇದ್ವಿಷ್ಣುಂ ವೇದತಂತ್ರೋಕ್ತಮಾರ್ಗತಃ॥ – ಸದಾಚಾರಸ್ಮೃತಿ

೫. ಶ್ರೀಕನಕದಾಸರು ತಮ್ಮ ಸುದೀರ್ಘ ಜೀವನದಲ್ಲಿ ಬಗೆಬಗೆಯ ಜನರನ್ನು ಅವರ ಜೀವನರೀತಿಯನ್ನು ಕಂಡು ಅದರ ಬಗ್ಗೆ ತುಂಬಾ ಕಳಕಳಿಯಿಂದ ನುಡಿದಿರುವ ಈ ಮಾತುಗಳ ಹಿಂದಿನ ಸತ್ಯವನ್ನು ಗಮನಿಸಬಹುದು.

೬. ಶ್ರೀಕನಕದಾಸರ ಕೇಶವನಾಮದಲ್ಲಿ ಬಂದಿರುವ ಈ ಕೆಳಗಿನ ಮಾತು ಗಮನಾರ್ಹ:

**ಶರಣುಹೊಕ್ಕೆನಯ್ಯ ಎನ್ನ ಮರಣ ಕಾಲದಲ್ಲಿ ನಿನ್ನ**
**ಚರಣ ಸ್ಮರಣೆ ಕರುಣಿಸಯ್ಯ ನಾರಾಯಣ।**

೭. ಶ್ರೀಮಾದನೂರು ವಿಷ್ಣುತೀರ್ಥರ ಕೃಷ್ಣಾಷ್ಟಕ ಅಥವಾ ಪ್ರಾರ್ಥನಾಷ್ಟಕ ಎಂಬ ಕೃತಿಯಲ್ಲಿ ಅಂತ್ಯಕಾಲದ ಹರಿಸ್ಮರಣೆಯ ಮಹತ್ವವನ್ನು ಅಪೂರ್ವವಾಗಿ ತಿಳಿಸುವುದು:

**ಶ್ರೀಕೃಷ್ಣ ಮನ್ಮರಣಕಾಲ ಉಪಾಗತೇ ತು**
**ತ್ವನ್ನಾಮ ಮದ್ವಚನಗೋಚರತಾಮುಪೈತು।**

*****

## ೮೦. ಅಂತಃಕರಣ ನಿನ್ನೊಳು ತೋರಿ ರಕ್ಷಿಸು

**ವರುಷ ನೂರಾಯುಷ್ಯವದರೊಳ-**
**ಗಿರುಳು ಕಳೆದೈವತ್ತರೊಳೈವ-**
**ತ್ತರಲಿ ವಾರ್ಧಕ ಬಾಲ್ಯ ಕೌಮಾರದಲಿ ಮೂವತ್ತು।**
**ಇರದೆ ಸಂದದು ಬಳಿಕ ಇಪ್ಪ-**
**ತ್ತೊರುಷವದರೊಳಗಾದುದಂತಃ-**
**ಕರಣ ನಿನ್ನೊಳು ತೋರಿ ರಕ್ಷಿಸು ನಮ್ಮನನವರತ ॥ ೮೦ ॥**

**ಅ: ಮನುಷ್ಯನ ಆಯುಷ್ಯ ಒಂದುನೂರು ವರ್ಷ. ಅದರೊಳಗೆ ಐವತ್ತು ವರ್ಷ ರಾತ್ರಿಯಲ್ಲಿ ಕಳೆಯುವುದು. ಉಳಿದ ಐವತ್ತರಲ್ಲಿ ವೃದ್ಧಾಪ್ಯ, ಬಾಲ್ಯ ಹಾಗೂ ಕೌಮಾರಗಳಲ್ಲಿ ೩೦ ವರ್ಷ ಕಳೆಯುವುದು. ಉಳಿಯುವುದು ಇಪ್ಪತ್ತು ವರ್ಷಗಳು ಮಾತ್ರ. ಆದ್ದರಿಂದ ಇಂತಹ ಆಯುಷ್ಯದೊಳಗೆ ನನ್ನ ಮನಸ್ಸು ನಿನ್ನಲ್ಲಿ ಬರುವಂತೆ ಕರುಣೆ ಮಾಡಿ ಶ್ರೀಹರಿಯೇ! ನಮ್ಮನ್ನು ಸದಾ ರಕ್ಷಿಸು.**

ವಿ.: ೧. ಬದುಕಿನ ನೂರು ವರ್ಷಗಳ ಆಯುಷ್ಯವು ಕಳೆಯುವ ರೀತಿಯನ್ನು ಇದರಲ್ಲಿ ತಿಳಿಸಿ ಅಂತಹ ಆಯುಷ್ಯದ ಸಾರ್ಥಕ್ಯವಾಗುವುದು ಮುಖ್ಯವಾಗಿ ಶ್ರೀಹರಿಯಲ್ಲಿ ಮನಸ್ಸನ್ನು ಹಾಕಿದಾಗ ಮಾತ್ರ ಎಂದು ಎಚ್ಚರಿಸಿರುವರು; ವಾರ್ಧಕ - ಮುಪ್ಪು.

೨. ಸಾಮಾನ್ಯವಾಗಿ ಮನುಷ್ಯನ ಪೂರ್ಣಾಯುಷ್ಯ ನೂರು ವರ್ಷಗಳು. ಅದರಲ್ಲಿ ರಾತ್ರಿಕಾಲ ಐವತ್ತು ವರ್ಷಗಳಷ್ಟು ಎಂದರೆ ಆ ಕಾಲದಲ್ಲಿ ಸಾಧನೆ ಸಾಗದು. ಇನ್ನು ಉಳಿದ ಐವತ್ತು ವರ್ಷಗಳಲ್ಲಿ ಬಾಲ್ಯ, ಕೌಮಾರ ಹಾಗೂ ವೃದ್ಧಾಪ್ಯಗಳಲ್ಲಿ ಮೂವತ್ತು ವರ್ಷ ಕಳೆದು ಹೋಗುವುದು. ಕೊನೆಗೆ ಉಳಿಯುವುದು ಇಪ್ಪತ್ತು ವರ್ಷ ಮಾತ್ರ. ಮೇಲ್ನೋಟಕ್ಕೆ ನೂರು ಎಂಬುದಾಗಿ ಕಾಣುವ ಆಯುಷ್ಯ ಸಾಧನೆಯ ಲೆಕ್ಕದಲ್ಲಿ ಕೇವಲ ಇಪ್ಪತ್ತು ವರ್ಷಗಳಷ್ಟು ಅಲ್ಪ. ಆದ್ದರಿಂದ ಯಾವುದೇ ಕಾರಣಕ್ಕೂ ಸತ್ಕಾರ್ಯಕ್ಕೆ ವಿಳಂಬವನ್ನು ಮಾಡದೇ ಶ್ರೀಹರಿಯಲ್ಲಿ ಮನಸ್ಸನ್ನಿರಿಸಿ ಜೀವನವನ್ನು ಸಾರ್ಥಕ ಮಾಡಿಕೊಳ್ಳಬೇಕು ಎಂದರ್ಥ. ಹಗಲು ಹೊತ್ತು ನಿದ್ರಿಸುವವರ ಪಾಲಿಗಂತೂ ಐವತ್ತು ಮಾತ್ರವಲ್ಲದೆ ಐಪ್ಪತ್ತೈದೂ ಕಳದುಹೋಗುವುದು ಸತ್ಯ.

೩. ಈ ಭಾಗ ಮುಖ್ಯವಾಗಿ ಶ್ರೀಮದ್ಭಾಗವತ ಮಹಾಪುರಾಣದ ಸಪ್ತಮಸ್ಕಂಧದಲ್ಲಿನ ಪ್ರಹ್ಲಾದೋಪದೇಶಕ್ಕೆ ಸಂಬಂಧಿಸಿದ ಪ್ರಸಂಗದಲ್ಲಿ ಬಂದಿರುವ ಈ ಕೆಳಗಿನ ಶ್ಲೋಕಗಳ ತಾತ್ಪರ್ಯವಾಗಿದೆ ಎಂದು ತಿಳಿಯಬೇಕು:

**ಪುಂಸೋ ವರ್ಷಶತಂ ಹ್ಯಾಯುಸ್ತದರ್ಧಂ ಚಾಜಿತಾತ್ಮನಃ ।**
**ನಿಷ್ಫಲಂ ಯದಸೌ ರಾತ್ರ್ಯಾಂ ಶೇತೇऽಂಧಂ ಪ್ರಾಪಿತಸ್ತಮಃ ॥**
**ಮುಗ್ಧಸ್ಯ ಬಾಲ್ಯಕೌಮಾರೈಃ ಕ್ರೀಡತೋ ಯಾತಿ ವಿಂಶತಿಃ ।**
**ಜರಯಾ ಗ್ರಸ್ತದೇಹಸ್ಯ ಯಾತ್ಯಕಲ್ಪಸ್ಯ ವಿಂಶತಿಃ ॥**

– ಶ್ರೀಮದ್ಭಾಗವತ(೭/೬/೧೧,೧೨

೪. ಈ ಕೆಳಗಿನ ಸುಭಾಷಿತದಲ್ಲೂ ಸಹ ಆಯುಷ್ಯದ ವ್ಯಯದ ಬಗೆಗಿನ ವಿವರ ಕಂಡುಬರುವುದು:

**ಆಯುರ್ವರ್ಷಶತಂ ನೃಣಾಂ ಪರಿಮಿತಂ ರಾತ್ರೌ ತದರ್ಧಂ ಗತಂ**
**ತಸ್ಯಾರ್ಧಸ್ಯ ಪರಸ್ಯ ಚಾರ್ಧಮಪರಂ ಬಾಲತ್ವವೃದ್ಧತ್ವಯೋಃ ।**
**ಶೇಷಂ ವ್ಯಾಧಿವಿಯೋಗದುಃಖಸಹಿತಂ ಸೇವಾದಿಭಿರ್ನೀಯತೇ**
**ಜೀವೇ ವಾರಿತರಂಗಚಂಚಲತರೇ ಸೌಖ್ಯಂ ಕುತಃ ಪ್ರಾಣಿನಾಮ್ ॥**

೫. ಶ್ರೀಮಾದನೂರು ವಿಷ್ಣುತೀರ್ಥರು ರಚಿಸಿರುವ ಉಪದೇಶ ಹಾಗೂ ಆಜ್ಞಾಪತ್ರಗಳಲ್ಲಿ ಬಂದಿರುವ ಅನೇಕ ವಿವರಗಳು ಶ್ರೀಕನಕದಾಸರ ಈ ಮಾತುಗಳಿಗೆ ವಿವರಣರೂಪವಾಗಿವೆ.

೬. ಹೀಗೆ ಸಾಧನೆಗೆ ಒಟ್ಟಾಗಿ ಲಭಿಸುವ ಕಾಲ ಅತ್ಯಂತ ಅಲ್ಪವಾದ್ದರಿಂದ ಯಾವುದೇ ಕಾರಣಕ್ಕೂ ಜ್ಞಾನಾದಿಗಳನ್ನು ಸಂಪಾದಿಸುವ ಸಾಧನಮಾರ್ಗವನ್ನು ವಿಳಂಬ ಮಾಡದೇ ಆಶ್ರಯಿಸಬೇಕು ಎಂಬುದು ಇದರ ಮುಖ್ಯ ಭಾವ.

*****

## ೮೧. ತನುಸಂಚಾರವೀ ಬಗೆಯಾಯ್ತು ರಕ್ಷಿಸು

ಊರು ತನಗೊಂದಿಲ್ಲ ಹೊತ್ತ ಶ-
ರೀರಗಳು ಮಿತಿಯಿಲ್ಲ ತಾ ಸಂ-
ಚಾರಿಸದ ನೆಲವಿಲ್ಲ ನುಡಿಯದ ಭಾಷೆ ಮತ್ತಿಲ್ಲ।
ಬೇರೆ ಹೊಸತೊಂದಿಲ್ಲ ಉಣ್ಣದ
ಸಾರ ವಸ್ತುಗಳಿಲ್ಲ ತನು ಸಂ-
ಚಾರವೀ ಬಗೆಯಾಯ್ತು ರಕ್ಷಿಸು ನಮ್ಮನನವರತ ॥ ೮೧ ॥

ಅ: ಜೀವನು ಅನಾದಿಕಾಲದ ತನ್ನ ಜೀವನದಲ್ಲಿ ಜನಿಸಿ ಬರದೇ ಇರುವ ಊರು ಯಾವುದೂ ಇಲ್ಲ. ಅವನು ತಾಳಿದ ಶರೀರಗಳಿಗೆ ಮಿತಿಯಿಲ್ಲ. ಬ್ರಹ್ಮಾಂಡದಲ್ಲಿ ಅವನು ಸಂಚರಿಸದ ನೆಲವೂ ಇಲ್ಲ. ನುಡಿಯದ ಹೊಸ ಭಾಷೆ ಎಂಬುದೂ ಇಲ್ಲ. ಹೊಸದಾದ ಯಾವುದು ಉಳಿದುಕೊಂಡಿಲ್ಲ. ತಿನ್ನದ ಸಾರ ವಸ್ತುಗಳೂ ಇಲ್ಲ; ಹುಟ್ಟು ಸಾವುಗಳ ರೂಪವಾದ ದೇಹದ ಸಂಚಾರ ಈ ತೆರನಾಗಿ ನಡೆಯುತ್ತಿದೆ. ಶ್ರೀಹರಿಯೇ! ನೀನು ನಮ್ಮನ್ನು ಸದಾ ರಕ್ಷಿಸು.

ವಿ.: ೧. ಜೀವನ ಸಂಸಾರ ಅನಾದಿಯಿಂದ ಇರುವಂತಹುದು. ಇದರಿಂದಾಗಿ ಹುಟ್ಟು-ಸಾವುಗಳ ರೂಪವಾದ ಸಂಸಾರಕ್ರಿಯೆ ನಡೆಯುತ್ತಲೇ ಬಂದಿದೆ. ಇದರಿಂದಾಗಿ ಖಚಿತವಾದ ಒಂದು ನೆಲೆ ಎಂಬುದು ಜೀವನಿಗೆ ಇಲ್ಲ ಎಂದಾಗುವುದು. ಅದರಂತೆ ಅವನು ಹೊಂದದ ಶರೀರವೂ ಇಲ್ಲ. ಸಂಚರಿಸದೆ ಬಿಟ್ಟಿರದ ನೆಲವೂ ಇಲ್ಲ. ನುಡಿಯದೇ ಇರುವ ಭಾಷೆಯೂ ಇಲ್ಲ. ತಿನ್ನದಿರುವಂತಹ ವಸ್ತುಗಳೂ ಇಲ್ಲ. ಹೀಗೆ ಜೀವನು ಅನುಭವಕ್ಕೆ ಯೋಗ್ಯವಾದ ಸಕಲ ಸ್ಥಳ ಮೊದಲಾದವುಗಳ ಎಲ್ಲ ಅನುಭವವನ್ನು ಹೊಂದಿರುವನು. ಆದ್ದರಿಂದ ಇಂತಹ ಘೋರ ಸಂಸಾರದ ಬಗ್ಗೆ ವಿರಕ್ತಿಯನ್ನು ಹೊಂದಿ ಶಾಶ್ವತ ನೆಲೆ ಎನ್ನಿಸಿದ ವಿಷ್ಣುಲೋಕವನ್ನು ತಲುಪುವ ಬಗ್ಗೆ ಸಕಲ ಸುಜೀವಿಗಳೂ ಬದ್ಧದೀಕ್ಷರಾಗಬೇಕು ಎಂಬುದು ಇದರ ಭಾವ.

೨. 'ಉಣ್ಣದ ಸಾರ ವಸ್ತುಗಳಿಲ್ಲ' ಎಂಬ ಮಾತು ಉಪನಿಷತ್ತಿನ 'ಪಿಪ್ಪಲಂ ಸ್ವಾದು ಅತ್ತಿ', ಜಗತ್ತೆಂಬ ಪಿಪ್ಪಲ ವೃಕ್ಷದ ಹಣ್ಣನ್ನು ಅದು ಅಸಾರವೇ ಆಗಿದ್ದರೂ, ಸಾರ ಎಂಬುದಾಗಿ ಭ್ರಮಿಸಿ ಜೀವ ತಿನ್ನುವನು ಎಂಬ ಭಾವ ಬಂದಿದೆ.

೩. ಶ್ರೀಕನಕದಾಸರ ಕೆಲವು ಕೀರ್ತನೆಗಳಲ್ಲೂ ಈ ಭಾವ ವಿವರವಾಗಿ ನಿರೂಪಿತವಾಗಿದೆ:

ನೊಂದೆ ನಾ ಹರಿಯೆನ್ನದೆ ॥ ಪ ॥
ನೊಂದೆ ನಾ ಸತ್ತು ಹುಟ್ಟುವ ಕೋಟಲೆಗಳಿಂದ।
ನೊಂದೆ ನಾ ಪಂಚೇಂದ್ರಿಯಗಳ ಬಾಧೆಗಳಿಂದ
ನೊಂದೆ ನಾ ವೈರಿ ಷಡ್ವರ್ಗದಾಯತದಿಂದ ನೊಂದೆ ನಾ ಹರಿಯೆನ್ನದೆ ॥ ಅ.ಪ. ॥

ಒಂದು ಕ್ಷಣ ದುರ್ಗಂಧ ವಾಯು ಬರೆ ಹೇಸುವರು
ತಂದೆಯುದರದಿ ಮೂರು ಮಾಸ ತಾಯುದರದಲಿ
ಸಂದೇಹವಿಲ್ಲ ನವಮಾಸ ಮಲ ಮೂತ್ರದೊಳು ಒಂದಾಗಿ ಕುದಿದು ಹುಟ್ಟಿ
ಬಂದೆ ಎಂಭತ್ತು ನಾಲುಕು ಲಕ್ಷ ಯೋನಿಯೊಳು
ನೊಂದೆ ಮುನ್ನೂರ ಅರವತ್ತು ವ್ಯಾಧಿಗಳಿಂದ
ಒಂದು ಕ್ಷಣವೂ ಯಮನ ಬಾಧೆ ತಾಳಲಾರೆನ್ನೆ ಇಂಬಿಟ್ಟುಕೊಳು ಮುರಾರಿ ॥ ೧ ॥

ಎಲುವುಗಳ ಗಳ ಮಾಡಿ ಬಲು ನರಂಗಳ ಬಿಗಿದು
ಚೆಲುವ ತೊಗಲನೆ ಪೊದಿಸಿ ಮಾಂಸ ಮಜ್ಜವ ತುಂಬಿ
ಹೊಲೆ ಗೂಡಿನೊಳು ಪೊಗಿಸಿ ತಲೆ ಹುಳಿತ ನಾಯಂತೆ ಮನೆಮನೆಯ ತಿರುಗಿ ಪೋಗಿ
ಮಲಮೂತ್ರ ಹಲವು ಉಚ್ಚಿಷ್ಟವೆನ್ನದೆ ತಿಂದು
ಕಳವು ಹಾದರ ಪಂಚಪಾತಕಂಗಳ ಮಾಡಿ
ನೆಲೆಯಿಲ್ಲದಧಿಕ ನರಕದೊಳಿಳಿವ ಎನ್ನ ನೀ ನಳಿನಾಕ್ಷ ಕಾಯ್ದುಕೊಳ್ಳೊ ॥ ೨ ॥

ಹಲವು ಜನ್ಮದ ತಾಯಿ ಎನಗಿತ್ತ ಮೊಲೆಹಾಲು
ನಲಿದು ಉಂಬಾಗ ಹನಿ ನೆಲಕೆ ಬಿದ್ದುದ ಕೂಡಿ
ಅಳೆದು ನೋಡಿದರೆ ಕ್ಷೀರಾಂಬುಧಿಗೆ ಇಮ್ಮಿಗಿಲು ಬಳಕಳುವ ನಯನಜಲವು
ತಿಳಿದು ನೋಡಿದರೆ ಲವಣಾರ್ಣಕೆ ಮೂರು ಮಡಿ
ಎಲುವು ನರಗಳ ಕೂಡಿದರೆ ಮೇರುವಿಗೆ ನಾಲ್ಕು ಮಡಿ
ಸುಲಿದು ಚರ್ಮವ ಹಾಸಿದರೆ ಭೂಮಿಗೈದು ಮಡಿ ನೆಲೆ ಯಾವುದೀ ದೇಹಕೆ ॥ ೩ ॥

ಹುಟ್ಟಿದಾಗಲೆ ಜಾತಕರ್ಮ ಷೋಡಶವೆಂಬ
ಕಟ್ಟಳೆಯ ದಿವಸಕ್ಕೆ ನೆಂಟರಿಷ್ಟರು ಬಂದು
ಕಟ್ಟಿ ಮುಂಜಿಯ ಮದುವೆಯನೆ ಹರಸಿ ಉಂಡುಟ್ಟು ಅತಿ ಹರುಷದಿಂದ
ಬಿಟ್ಟು ಪ್ರಾಣವ ಪೋಗೆ ಪೆಣನೆಂದು ಮೂಲೆಯಲಿ
ಕಟ್ಟಿ ಕುಳ್ಳಿರಿಸಿ ಹೊಟ್ಟೆಯ ಹೊಯ್ದುಕೊಳುತ ಆ-
ಸುಟ್ಟು ಸುಡುಗಾಡಿನಲಿ ಪಿಂಡಗಳನಿಟ್ಟು ಬಹುಕಟ್ಟಳೆಯ ಮಾಡಿಸಿದರೈ ॥ ೪ ॥

ತಂದೆತಾಯ್ ಆರು ಆನಿದ್ದ ಊರಾವುದೋ
ಬಂದಿರುವುದೆಲ್ಲಿ ಇದ್ದ ತಾ ತಂದ ಸತಿ ಸುತರೆಲ್ಲಿ
ಹಿಂದಾದ ಕುಲಗೋತ್ರ ನಾಮಂಗಳೆಷ್ಟು ತಾ ಬಂದ ಸುಖದುಃಖವೆಷ್ಟು
ಹಿಂದೆ ಕಾಯ್ದವರಾರು ಮುಂದೆ ಕೊಲ್ಲುವರಾರು
ಎಂದು ನಾನರಿಯೆ ನೀ ದಂದುಗವ ನೀಬಲ್ಲೆ
ತಂದೆ ಸಿರಿ ಕಾಗಿನೆಲೆಯಾದಿಕೇಶವನ ಪದದ್ವಂದ್ವವನು ಬಿಡೆನು ಬಿಡೆನೈ ॥ ೫ ॥

**

ಹೇಗಿದ್ದು ಹೇಗಾದೆಯೊ – ಆತ್ಮಾ
ಯೋಗೀಶನಾನಂದಪುರದಲಿರುವುದ ಬಿಟ್ಟು ॥ ಪ ॥
ಬಸಿರ ಹಳ್ಳಿಗೆ ಬಂದು ಮಾಸನೂರಲಿ ನಿಂದು
ಗುಸುಕಾಡಿ ನುಡಿದು ನೆಲಬಟ್ಟೆವಿಡಿದು
ಕಿಸುಕದರಿವೆಯ ಪೊದ್ದು ಮಲಮೂತ್ರದಲಿ ಬಿದ್ದು
ವಸುಧೆಯಲಿ ದಿನಗಳೆದೆಯೊ – ಆತ್ಮಾ ॥ ೧ ॥
ಎಳಗೆರೆಯಲಾಡಿ ಯೌವನದ ಊರಿಗೆ ಬಂದು
ಥಳಥಳಿಪ ಹಸ್ತಾದ್ರಿ ನೆಳಲ ಸೇರಿ
ಆಳಲು ಸುತ ಬೆಳೆದು ದಾರಿದ್ರ್ಯ ಪೇಟೆಗೆ ಬಂದು
ಹಳೆಯಬೀಡಿಗೆ ಪಯಣವೊ – ಆತ್ಮಾ ॥ ೨ ॥
ಗನ್ನಗತಕದ ಮಾತು ಇನ್ನು ನಿನಗೇತಕೋ
ಮುನ್ನ ಮಾಡಿದ ಕರ್ಮಭರದೊಡಲಿದೆ
ಉನ್ನತದ ಕಾಗಿನೆಲೆಯಾದಿಕೇಶವ ಸುಪ್ರ-
ಸನ್ನ ಮೂರುತಿಯನ್ನು ಭಜಿಸೆಲೊ – ಆತ್ಮಾ ॥ ೩ ॥

೪. ಜೀವನ ಸಂಸಾರವು ಹೀಗೆ ಅನಾದಿಯಾದ್ದರಿಂದಲೇ ಅವನಿಗೆ ದೊರಕದೇ ಇರುವ ಯಾವುದೂ ಉಳಿದುಕೊಂಡಿಲ್ಲ ಎಂಬಲ್ಲಿ ಜೀವನು ಹುಟ್ಟಿದ ಬಗೆಬಗೆಯ ಯೋನಿಗಳು ಬಗೆಬಗೆಯ ಸ್ಥಳಗಳು, ಆಡಿದ ಬಗೆಬಗೆಯ ಭಾಷೆಗಳು, ತಿಂದ ಬಗೆಬಗೆಯ ಆಹಾರ ಪದಾರ್ಥಗಳು ಮೊದಲಾದವುಗಳಿಗೆ ಕೊನೆಯೇ ಇಲ್ಲ. ಆದ್ದರಿಂದ ಕೇವಲ ಅವುಗಳಿಗಾಗಿ ಹಾತೊರೆಯದೇ ಶ್ರೀಹರಿಯ ಅನುಗ್ರಹಕ್ಕೆ ಪಾತ್ರರಾಗುವ ವಿಚಾರದಲ್ಲಿ ಪ್ರವೃತ್ತರಾಗಬೇಕು ಎಂದರ್ಥ.

೫. ಶ್ರೀಕನಕದಾಸರ ದಾಸನಾಗೋ ಭವಪಾಶ ನೀಗೋ ಎಂಬ ಹಾಡಿನಲ್ಲಿ ಇದಕ್ಕೆ ಪೂರಕವಾದ ಅನೇಕ ಅಂಶಗಳು ಕಂಡುಬರುವವು:

ದಾಸನಾಗೋ ಭವಪಾಶನೀಗೋ – ವಿ– ಶೇಷನಾಗೋ ॥ ಪ ॥
ಏಸೊ ಕಾಯಂಗಳ ಕಳೆದು ಎಂಬತ್ತಾಲ್ಕು ಲಕ್ಷ ಜೀವ-
ರಾಶಿಯನ್ನು ದಾಟಿ ಬಂದ ಈ ಶರೀರ ತಾನಲ್ಲ ತನ್ನದಲ್ಲ
ಆಶೆಯು ತರವಲ್ಲ ಸ್ಥಿರವಲ್ಲ ಮುಂದೆ ಬಾಹೋದಲ್ಲ
ಆಶಾಕ್ಲೇಶ ದೋಷವೆಂಬ ಅಬ್ಧಿಯೊಳು ಮುಳುಗಿ ಯಮನ
ಪಾಶಕ್ಕೊಳಗಾಗದೆ ನಿರ್ದೋಷಿಯಾಗೊ – ಸಂತೋಷಿಯಾಗೊ ॥ ಅ.ಪ.॥
ಕಾಶಿ ವಾರಣಾಸಿ ಕಂಚಿ ಕಾಳಹಸ್ತಿ ರಾಮೇಶ್ವರ
ಏಸು ದೇಶ ತಿರುಗಿದರೆ ಬಾಹೋದೇನೊ – ಅಲ್ಲಿ ಆಹೋದೇನೊ
ದೋಷನಾಶೆ ಕೃಷ್ಣವೇಣಿ ಗಂಗೆ ಗೋದಾವರಿ ಭವ-
ನಾಶಿ ತುಂಗಭದ್ರೆ ಯಮುನೆ ವಾಸದಲ್ಲಿ – ಉಪವಾಸದಲ್ಲಿ

ಮೀಸಲಾಗಿ ಮಿಂದು ಜಪತಪ ಹೋಮನೇಮಗಳ
ಏಸು ಬಾರಿ ಮಾಡಿದರೂ ಫಲವೇನೊ – ಅದು ಛಲವೇನೊ
ವಾಸುದೇವನೆಂಬ ಒಳಗಿಹದ್ದ ಹಂಸನ ಸೇರಿ
ಲೇಸನುಂಡು ಮೋಸಗೊಳದೆ ಮುಕ್ತನಾಗೊ – ನೀ ಶಕ್ತನಾಗೊ ॥ ೧ ॥
ಅತ್ತಲೋ ಇತ್ತಲೋ – ಎತ್ತಲೋ ಈ ಸಂಸಾರ
ಬತ್ತಲೆಗೆ ಬತ್ತಲೆ ನಿತ್ಯವಲ್ಲ – ಪರಿಮಿತಿ ಇಲ್ಲ
ಕತ್ತಲೆ ಕಾವಳದೊಳು ಕಾಣಲಾರದೆ ನೀನು
ಸತ್ಯವೆಂಬ ದಾರಿಯನು ಸೇರಲಿಲ್ಲ – ಲೇಸು ತೋರಲಿಲ್ಲ
ಉತ್ತಮ ಅ ಉ ಮ ಎಂಬ ಓಂಕಾರ ಬೀಜಾಕ್ಷರ
ಚಿತ್ತದಲಿ ಗ್ರಹಿಸು ನೀ ಬಿಡಬೇಡ – ಬಿಟ್ಟು ಕೆಡಬೇಡ
ಹೊತ್ತಾರೆಯೊ ಬೈಗಿನೊಳೊ ಆಗಲೊ ಈಗಲೊ ಕಾಯ
ನಿತ್ಯವೆಂದು ಸ್ಥಿರವೆಂದು ನಂಬಬೇಡ – ನಿನಗೆ ಡಂಬ ಬೇಡ ॥ ೨ ॥
ಆಯಿತೊ ಹೋಯಿತೊ ಏನಾಯಿತೊ ಈ ದೇಹಕ್ಕೆ
ತಾಯಿ ಯಾರೊ ಇನ್ನು ತಂದೆ ಯಾರೊ
ಮಾಯದೊಳು ಸಿಲುಕಿ ಬಲು ಕಾಲದಿಂದ ಶ್ರೀರಘು–
ರಾಯನೆಂಬ ವಸ್ತುವಿನ ಸ್ಮರಣೆ ಬಿಟ್ಟು – ಭವದಿ ಮಮತೆ ಇಟ್ಟು
ನಾಯ ಬಾಯ ಅರಿವೆಯಂತೆ ನಾನಾ ಕೋಟಲೆಯಲಿ ಬಿದ್ದು
ಬಾಯಿ ಬಾಯಿ ಬಿಡುತಲಿ ಸಾವುದೇನೊ – ನೀ ನೋವುದೇನೊ
ತ್ರಾಹಿ ತ್ರಾಹಿ ತ್ರಾಹಿಯೆಂದು ತ್ರೈಲೋಕ್ಯದೊಡೆಯ ಪುಣ್ಯ–
ದಾಯಕನ ಹೊಂದಿ ನೀ ಧನ್ಯನಾಗೊ – ಮುಕ್ತ ಮಾನ್ಯನಾಗೊ ॥ ೩ ॥
ಅಂದಿಗೊ ಇಂದಿಗೊ ಒಮ್ಮೆ ಸಿರಿ ಕಮಲೇಶನನ್ನು
ಒಂದು ಬಾರಿ ಅರುಹಿಂದ ನೆನೆಯಲಿಲ್ಲ – ಮನ ತಣಿಯಲಿಲ್ಲ
ಬಂದು ಬಂದು ಭ್ರಮೆಗೊಂಡು ಮಾಯಾಮೋಹಕೆ ಸಿಕ್ಕಿ
ನೊಂದು ಬೆಂದು ಒಂದರಿಂದ ಉಳಿಯಲಿಲ್ಲ – ಬಂಧ ಕಳೆಯಲಿಲ್ಲ
ಸಂದೇಹವ ಮಾಡದಿರು ಅರಿವು ಎಂಬ ದೀಪ ಹಿಡಿದು
ಇಂದು ಕಾಣು ದೇಹದಲಿ ಪಿಂಡಾಂಡ – ಹಾಗೆ ಬ್ರಹ್ಮಾಂಡ
ಹೊಂದಿ ಹರಿಯ ಧ್ಯಾನವನ್ನು ಮಾಡಿ ವಿವೇಕದಿ ಮು–
ಕುಂದನಿಂದ ಮುಕುತಿ ಬೇಡು ಕಂಡ್ಯ – ನೀ ನೋಡು ಕಾಣೊ ॥ ೪ ॥
ನೂರು ಬಾರಿ ಶರಣು ಮಾಡಿ ನೀರ ಮುಣುಗಲೇಕೆ ಪರ–
ನಾರಿಯರ ನೋಟಕೆ ಗುರಿಯ ಮಾಡಿದಿ – ಮನ ಸೆರೆಯ ಮಾಡಿದಿ
ಸೋರೆಯೊಳು ಸುರೆ ತುಂಬಿ ಮೇಲೆ ಹುವ್ವಿನ ಹಾರ ಹಾಕಿ
ಗೀರುಗಂಧ ಅಕ್ಷತೆಯ ಧರಿಸಿದಂತೆ – ನೀ ಮರೆಸಿದಂತೆ

ಗಾರುಡಿಯ ಮತ ಬಿಟ್ಟು ನಾದಬ್ರಹ್ಮನ ಪಿಡಿದು
ಸಾರಿ ಸೇರಿ ಮುಕ್ತಿಯನ್ನು ಶಮನದಿಂದ – ಮತ್ತೆ ಸುಮನದಿಂದ
ನಾರಾಯಣ ಅಚ್ಯುತಾನಂತಾದಿಕೇಶವನ
ಸಾರಾಮೃತವನುಂಡು ಸುಖಿಸೊ ಲಂಡ ಜೀವವೆ ಎಲೊ ಭಂಡ ಜೀವವೆ ॥ ೫ ॥

**

ಹೇಗೆ ನೀ ದಾಸನಾದೆ ಹೇ ಪ್ರಾಣ ಹೇಗೆ ನೀ ದಾಸನಾದೆ ॥ ಪ ॥
ಹೇಗೆ ನೀ ದಾಸನಾದೆ – ಹೀಗೆ ಸಂಸಾರದೊಳು
ಮಂಗನಂತೆ ಭವಭಂಗವ ಪಡುವವನು ॥ ಅಪ ॥
ಆಸೆಯ ಬಿಡಲಿಲ್ಲ ಕಾಸು ಗಳಿಸುವೆಯಲ್ಲ
ದೋಷಕ್ಕೆ ಗುರಿಯಾಗಿ ಹೇಸಿಕೆಯೊಳು ಬಿದ್ದು ॥ ೧ ॥
ತನುವು ತನ್ನದು ಎಂದು ತನಯ ಮಾನಿನಿಯರ
ಇನಿತು ಎನಗೆ ಗತಿಯೆಂಬುವ ಮೂಢನೆ ॥ ೨ ॥
ಕಾಲನ ದೂತರು ಕರುಣಸಂಪನ್ನರೆ
ಕಾಲ ವ್ಯರ್ಥದಿ ಕಳೆದು ಕೆಡುವಂಥ ಕಪಟ ನೀ ॥ ೩ ॥
ತಲೆ ಹುಳಿತ ನಾಯಂತೆ ಹಲವು ಬೀದಿಯ ತಿರುಗಿ
ಗೆಲುವಿನಿಂದಲಿ ಮೂಲ ಮಲವನಳಿಯದೆ ॥ ೪ ॥
ಉದರಪೋಷಣೆಗಾಗಿ ಮದದಿಂದ ಚರಿಸಿದೆ
ಮದಗರ್ವವೆಂಬುದ ಬದಿಯಲ್ಲಿಟ್ಟುಕೊಂಡು ॥ ೫ ॥
ಹಿರಿಯರ ನಿಂದಿಸಿ ಹರಿದಾಸನೆನಿಸಿದೆ
ಹೊರೆಯ ಹೊಟ್ಟೆಗಾಗಿ ಕೇರಿ ಕೇರಿ ಚರಿಸಿದೆ ॥ ೬ ॥
ಕಾಲುಗೆಜ್ಜೆಯ ಕಟ್ಟಿ ಮೇಲೆ ಕರತಾಳ ತಟ್ಟಿ
ಶ್ರೀಲೋಲನ ಗುಣ ಪೊಗಳದಲೆ ನೀ ॥ ೭ ॥
ಕುಣಿಕುಣಿದು ಮನದಣಿದು ಮಣಿದು ಸಜ್ಜನ ಪದಕೆ
ಅಣಿಮಾದಿ ಅಷ್ಟಸಿದ್ಧಿಯ ಕೈಗೊಳ್ಳದಲೆ ನೀ ॥ ೮ ॥
ವೇದಶಾಸ್ತ್ರಗಳನು ಮೋದದಿಂದೋದದೆ
ಬಾದರಾಯಣಕೃತ ಭಾಗವತ ಕೇಳದೆ ॥ ೯ ॥
ಕಟ್ಟಿ ಕೈ ಪರರಲಿ ಹೊಟ್ಟೆಗೋಸುಗ ಕಂ-
ಗೆಟ್ಟು ಕಿಟ್ಟಗಟ್ಟಿದ ಗಟ್ಟಿಗಬ್ಬಿಣದಂತೆ ॥ ೧೦ ॥
ನೇಮದಿ ಉಪವಾಸ ಆ ಮಹಾ ಏಕಾದಶಿ
ಕಾಮಜನಕನಿಗೆ ನೀನರ್ಪಿಸದೆ ಬರಿದೆ ॥ ೧೧ ॥
ಏಸುದಿನ ಬದುಕಿದರು ಸೂಸುವ ಮರಣವು
ಈಸಿ ದಾಟದೆ ಕಾಸುವೀಸಕೆ ಬಾಳಿದೆ ॥ ೧೨ ॥

ಅಂಗಳದೊಳಡಗಿಪ್ಪ ಮಂಗಳ ಮೂರ್ತಿ ಪಾ-
ದಂಗಳ ಹಿಂಗದೆ ಪೊಂದಿ ಭಜಿಸದಲೆ ॥ ೧೩ ॥
ಬತ್ತಿ ಹೋಯಿತು ನದಿ ಬಿತ್ತದೆ ಬೆಳೆಯದೆ
ಆತ್ತರೆ ಬಾಹುದೇನೊ ರಾಶಿ ಬೆಳೆಯು ಸೂಸಿ ॥ ೧೪ ॥
ಆಡುವ ಮಕ್ಕಳ ಕೈಗೆ ನೀಡದೆ ಕಡಲೆಯ
ಬೇಡಿದರೆ ಕೊಟ್ಟು ಕೂಡಿ ಆಡದ ತೆರದಿ ॥ ೧೫ ॥
ಶೃಂಗಾರ ಬಯಸುತ ಬಂಗಾರದೊಡವೆಯ
ಹಿಂಗದೆ ಶ್ರೀ ತುಲಸಿಯ ರಂಗಗರ್ಪಿಸದೆ ॥ ೧೬ ॥
ಸುತ್ತ ಕತ್ತಲೆ ಚಿಂತೆ ಮತ್ತೆ ಭಯದ ಭ್ರಾಂತಿ
ಚಿತ್ತಜನಯ್ಯ ದೊರಕುವ ಬಗೆಯೆಂತು ॥ ೧೭ ॥
ಡಂಭವ ಮಾಡಿಕೊಂಡು ತುಂಬ ಪಾಪ ಒಳಗೆ
ಹಂಬಲಿಸಿದರಿನ್ನು ಬೆಂಬಲಕಾರುಂಟು ॥ ೧೮ ॥
ದುಂಡು ನಾಮವ ಬರೆದು ಭಂಡತನದಿ ಜಗದಿ
ದಂಡಿಗೆ ಬೆತ್ತ ಪಿಡಿವನು ಹೆಂಡಿರ ಕಾಯ್ವನು ॥ ೧೯ ॥
ಪಕ್ಷಿವಾಹನನ ಗುಣ ಲೆಕ್ಕಿಸಿ ಪೊಗಳದೆ
ಬೆಕ್ಕಸ ಬೆರಗಾಗಿ ಅಕ್ಕಿಗೆ ತಿರುಗುವವ ॥ ೨೦ ॥
ಭೋಗಿಶಯನನ ಪಾದ ರಾಗದಿ ಭಜಿಸದೆ
ಕಾಗಿನೆಲೆಯಾದಿಕೇಶವನ ದಾಸ ನೀನು ॥ ೨೧ ॥

**

ದಾಸ ದಾಸರ ಮನೆಯ ದಾಸಾನುದಾಸ ನಾನು
ಶ್ರೀಶ ಶ್ರೀರಂಗ ನಿಮ್ಮ ಮನೆಯ ದಾಸ ॥ ಪ ॥
ಕಾಳು ದಾಸರ ಮನೆಯ ಆಳುದಾಸ ನಾನಯ್ಯ
ಕೀಳುದಾಸನು ನಾನು ಕಿರಿಯ ದಾಸ
ಫಾಲಾಕ್ಷ ಮುಂತಾಗಿ ಭಜಿಪ ದೇವರ ಮನೆಯ
ಆಳಿನ ಆಳಿನ ಆಳಿನಡಿದಾಸ ನಾನು ॥ ೧ ॥
ಪಂಕಜನಾಭನ ಮನೆಯ ಮಂಕುದಾಸನಯ್ಯ
ಕೊಂಕು ದಾಸನು ನಾನು ಕುರುಡು ದಾಸ
ಸಂಕೀರ್ತನೆಯ ಮಾಡಿ ನೆನೆವ ಭಕ್ತರ ಮನೆಯ
ಬಂಕದ ಬಾಗಿಲ ಕಾಯ್ವ ಬಡದಾಸ ನಾನು ॥ ೨ ॥
ಹಲವು ದಾಸರ ಮನೆಯ ಹೊಲೆ ದಾಸ ನಾನಯ್ಯ
ಕುಲವಿಲ್ಲದ ದಾಸ ಕುನ್ನಿ ದಾಸ

ಮಲಹರ ರಂಗ ನಿನ್ನ ಮನೆಯ ಮಾದಿಗದಾಸ
ಸಲೆ ಮುಕ್ತಿ ಪಾಲಿಸೊ ಆದಿಕೇಶವರಾಯ ॥ ೩ ॥

೬. ಕುರುಬ ಮೊದಲಾದ ಯೋನಿಗಳಲ್ಲೂ ತಿಳಿಯಬಹುದಾದ ಅಂತರಾರ್ಥವನ್ನು ದಾಸರು ಈ ಕೆಳಗಿನ ಪದ್ಯದಲ್ಲಿ ತಿಳಿಸಿರುವರು:

ನಾವು ಕುರುಬರು ನಮ್ಮ ದೇವರು ಬೀರಯ್ಯ
ಕಾವ ನಮ್ಮಜ್ಜ ನರಗುರಿಯ ಹಿಂಡುಗಳ ॥ ಪ ॥
ಅರುಹೆಂಬ ನರಗುರಿಯು ತೆರೆಯೆಂಬ ಜಾವಲಿಯು
ಮರವೆಯಲಿ ಯಮನೆಂಬ ತೋಳ ತುಡುಕಿ
ಅರುಹಿನಾ ಮರೆಯಲ್ಲಿ ಕುರಿಯ ಮುರಿವುದ ಕಂಡು
ಅರಿತು ಅರಿಯದ ಹಾಗೆ ಇರುವ ನಮ್ಮಜ್ಜ ॥ ೧ ॥
ಅಷ್ಟಮದ ಮತ್ಸರಗಳೆಂತೆಂಬ ಟಗರುಗಳು
ಸೃಷ್ಟಿಯೊಳು ಪರಮಾತ್ಮನೆಂಬ ಆಡು
ಜೇಷ್ಠಕರು ಸಿದ್ಧಸಾಧ್ಯರು ಮುನಿಯು ಹೋತುಗಳು
ಕಟ್ಟಿ ಧೃಡಗೋಲಿಂದ ಕಾವ ನಮ್ಮಜ್ಜ ॥ ೨ ॥
ಹುಟ್ಟುವುದು ಮೊದಲಿಲ್ಲ ಸಾವುದಕೆ ಕಡೆಯಿಲ್ಲ
ಹುಟ್ಟುಸಾವಿನ ಹೊಲಬ ಅಜ್ಜ ಬಲ್ಲ
ಅಷ್ಟು ನರಪ್ರಾಣಿಗಳು ನಮ್ಮ ಮನೆಯೊಳಗಿದ್ದು
ಹೊಟ್ಟೆಗೆ ಕೇಳುವವು ನಮ್ಮಜ್ಜನಲ್ಲಿ ॥ ೩ ॥
ವೇದಶಾಸ್ತ್ರ ಪುರಾಣ ಶ್ರುತಿತರ್ಕ ಮಹದಾದಿ
ಸಾಧನದ ಶ್ವಾನ ನಮ್ಮಜ್ಜನ ಹಿಂಡಿನೊಳು
ಭೇದಗೊಳ್ಳದೆ ಬೊಗಳಿ ಬಾಯಾರಿ ಕಾಲ್ಗೆಡಲು
ಆದರಿಸಿ ಅಂಬಲಿಯ ಎರೆವ ನಮ್ಮಜ್ಜ ॥ ೪ ॥
ಮೂರು ಲೋಕಕೆ ಗೌಡ ಸಂಗತಿ ಇಹರು ಮಂತ್ರಿ
ಮೂರುಲೋಕದ ಜನರು ಭಜಿಸುತಿಹರು
ಮಾರಪಿತ ಕಾಗಿನೆಲೆಯಾದಿ ಕೇಶವನಂಘ್ರಿ-
ವಾರಿಜವ ನೆರೆನಂಬದವನೆ ಕುರುಬ ॥ ೫ ॥

*****

## ೮೨. ವಿಶ್ವವ್ಯಾಪಕನು ನೀನಹದು ರಕ್ಷಿಸು

**ಗೋಪುರದ ಭಾರವನು ಗಾರೆಯ**
**ರೂಪುದೋರಿದ ಪ್ರತಿಮೆಯಂದದಿ**
**ಈ ಪರಿಯ ಸಂಸಾರಭಾರವನಾರು ತಾಳುವರು ।**

**ತಾ ಪರಾಕ್ರಮಿಯೆಂದು ಮನುಜನು**
**ಕಾಪಥವನೈದುವನು ವಿಶ್ವ-**
**ವ್ಯಾಪಕನು ನೀನಹದು ರಕ್ಷಿಸು ನಮ್ಮನನವರತ ॥ ೮೨ ॥**

**ಅ: ಗೋಪುರದ ಭಾರವನ್ನುಹೊರುವ ಗಾರೆಯಿಂದ ರೂಪಗೊಳ್ಳುವ ಪ್ರತಿಮೆಯಂತೆ ಈ ರೀತಿಯಾದ ಸಂಸಾರದ ಭಾರವನ್ನು ಯಾರು ತಾನೇ ಧರಿಸಿಯಾರು. ತಾನು ಪರಾಕ್ರಮಿ ಎಂದು ಅಹಂಕಾರ ಪಡುವ ಮನುಷ್ಯನು ಕೆಟ್ಟ ಹಾದಿಯಲ್ಲಿ ಸಾಗುವನು. ವಿಶ್ವವ್ಯಾಪಕನಾದವನು ನೀನು ಮಾತ್ರವೇ ಸರಿ. ಅಂತಹ ಶ್ರೀಹರಿಯೇ! ನೀನು ನಮ್ಮನ್ನು ಸದಾ ರಕ್ಷಿಸು.**

ವಿ.: ೧. ಗೋಪುರದ ಭಾರವನ್ನು ಕಟ್ಟಡ ಹೊರುವುದು. ಅಂತಹ ಕಟ್ಟಡದ ಗೋಪುರ-ಗಳಲ್ಲಿ ಪ್ರತಿಮೆಗಳು ಕೆತ್ತಲ್ಪಡುವವು. ಎಂದರೆ, ಪ್ರತಿಮೆಗೆ ಆಧಾರವಾಗಿ ಗೋಪುರವನ್ನು ಹೊರುವ ಗೋಡೆ ಇರುವುದು. ಆದರೆ, ಜೀವನು ಹೊತ್ತಿರುವ ಸಂಸಾರದ ಭಾರವನ್ನು ಹೊರುವವನು ಸಾಕ್ಷಾತ್ ಶ್ರೀಹರಿಯೇ ಆಗಿರುವುದರಿಂದ ಅವನನ್ನು ಮೊರೆ ಹೊಕ್ಕು ಉದ್ಧಾರ ಹೊಂದಬೇಕು ಎಂದು ಭಾವ.

೨. ಗೋಪುರದ ಭಾರವನ್ನು ಗೋಡೆ ಹೊತ್ತರೆ ಅಂತಹ ಗೋಡೆಯಲ್ಲಿ ಪ್ರತಿಮೆಗೆ ಅವಕಾಶ ದೊರೆಯುವುದು ಅದರಂತೆ ಸಂಸಾರದ ಭಾರವನ್ನು ಮುಖ್ಯವಾಗಿ ಹೊತ್ತು ರಕ್ಷಿಸುವವನು ಸಾಕ್ಷಾತ್ ಶ್ರೀಹರಿ. ಅವನು ಹಾಗೆ ಭಾರ ಹೊತ್ತಾಗ ಮಾತ್ರವೇ ಜೀವ ನೆಲೆಗೊಳ್ಳಲು ಸಾಧ್ಯ.

೩. ಮೇಲ್ನೋಟಕ್ಕೆ ಗೋಪುರದ ಗೋಡೆಯಲ್ಲಿನ ಪ್ರತಿಮೆಗಳೇ ಕಟ್ಟಡದ ಭಾರವನ್ನು ಹೊತ್ತಂತೆ ಕಾಣುವುದು. ಆದರೆ, ವಸ್ತುಸ್ಥಿತಿ ಅದಲ್ಲ, ನಿಜಕ್ಕೂ ಭಾರಹೊತ್ತ ಗೋಡೆಗಳ ಮೇಲೆ ಪ್ರತಿಮೆಗಳು ಕೆತ್ತಲ್ಪಟ್ಟಿರುತ್ತವೆ. ಎಂದರೆ, ಕಟ್ಟಡಕ್ಕೆ ಪ್ರತಿಮೆಗಳು ಆಸರೆಯಾಗಿರದೆ, ಪ್ರತಿಮೆಗಳಿಗೆ ಕಟ್ಟಡದ ಗೋಡೆಗಳೇ ಆಸರೆಯಾಗಿವೆ. ಆಧಾರ ತಪ್ಪಿದಾಗ ಆ ಪ್ರತಿಮೆಗಳು ಪತನಗೊಳ್ಳುವವು. ಇದರಂತೆ ನಮ್ಮ ದೇಹವೂ ಒಂದು ಕಟ್ಟಡ. ಇದನ್ನು ಆಧರಿಸಿ ನಾವು ಜೀವಿಸಿರುವವೇ ಹೊರತು, ಇದಕ್ಕೆ ಆಧಾರವಾಗಿ ಅಲ್ಲ. ಮುಖ್ಯವಾಗಿ ಇದಕ್ಕೆ ಆಧಾರವಾಗಿರುವವನು ದೇಹ ನೀಡಿದ ಶ್ರೀಹರಿಯೇ ಆಗಿರುವನು. ಆ ಶ್ರೀಹರಿಯ ಆಧಾರ ತಪ್ಪಿದಾಗ ದೇಹವು ಬಿದ್ದು ಹೋಗುವುದು; ಜೀವ ದುಃಖಕ್ಕೊಳಗಾಗುವನು. ಆದ್ದರಿಂದ ಈ ದೇಹ ನನ್ನದು ಎಂಬ ಭ್ರಾಂತಿಗೊಳಗಾಗದೇ ಅದು ಶ್ರೀಹರಿ ಕರುಣಿಸಿದ್ದು ಎಂದು ಅರ್ಥಮಾಡಿಕೊಂಡು ಅವನನ್ನು ಸದಾ ಚಿಂತಿಸುವುದೊಂದೇ ಒಳಿತಿನ ಮಾರ್ಗ ಎಂದರ್ಥ; **ಕಾಪಥ** – ದುರ್ಮಾರ್ಗ, ತಪ್ಪುದಾರಿ, ಕೆಟ್ಟದಾರಿ.

೪. ಪ್ರತಿಮೆಯು ತನಗೆ ಯಾವ ಆಧಾರದ ಅಗತ್ಯವೂ ಇಲ್ಲ ಎಂದು ಭಾವಿಸಿದ್ದಲ್ಲಿ ಅದರ ಪತನ ನಿಶ್ಚಿತವಾಗಿರುವಂತೆ, ಜೀವನು ತನಗೆ ಇತರ ಯಾರ ಅನುಗ್ರಹದ ಅಗತ್ಯವೂ ಇಲ್ಲ, ತಾನೇ

ಸ್ವತಂತ್ರ ಎಂದು ಭಾವಿಸಿದಲ್ಲಿ ಅವನಿಗೆ ಸಂಸಾರದಿಂದ ಬಿಡುಗಡೆಯು ಎಂದಿಗೂ ಸಿಗದು. ಆದ್ದರಿಂದ, ಅಹಂಕಾರವನ್ನು ತೊರೆದು ತನ್ನದೇನಿದ್ದರೂ ಸಹ ಭಗವದನುಗ್ರಹದಿಂದ ಆದುದು ಎಂಬ ಸರಿಯಾದ ತಿಳುವಳಿಕೆಯನ್ನು ಹೊಂದಿ ಜೀವನು ವಿನೀತನಾಗಿ ಸಾಧನೆ ಮಾಡಬೇಕು ಎಂಬುದು ಇದರಲ್ಲಿಯ ಸಂದೇಶ.

*****

## ೮೩. ಬೀಜವೃಕ್ಷನ್ಯಾಯವಿದ ಭೇದಿಸುವರಾರಿನ್ನು ರಕ್ಷಿಸು

ಬೀಜ ವೃಕ್ಷದೊಳಾಯ್ತು ವೃಕ್ಷಕೆ
ಬೀಜವಾರಿಂದಾಯ್ತು ಲೋಕದಿ
ಬೀಜವೃಕ್ಷನ್ಯಾಯವಿದ ಭೇದಿಸುವರಾರಿನ್ನು।
ಸೋಜಿಗವ ನೀ ಬಲ್ಲೆ ನಿನ್ನೊಳು
ರಾಜಿಸುತ ಮೊಳೆದೋರುವುದು ಸುರ-
ರಾಜನಂದನನಮಿತ ರಕ್ಷಿಸು ನಮ್ಮನನವರತ ॥ ೮೩ ॥

ಅ: ಬೀಜವು ವೃಕ್ಷದಿಂದ ಹುಟ್ಟುವುದು. ವೃಕ್ಷಕ್ಕೆ ಆ ಬೀಜವು ಕಾರಣವಾಗುವುದು. ಬೀಜದಿಂದ ವೃಕ್ಷವೋ, ವೃಕ್ಷದಿಂದ ಬೀಜವೋ? ಎಂಬುದು ಬೀಜವೃಕ್ಷನ್ಯಾಯವೆನ್ನಿಸಿದೆ. ಇದು ಭೇದಿಸಲಾಗದ ಒಗಟು. ನಿಜಕ್ಕೂ ಇದು ಸೋಜಿಗ. ಇದರ ನಿಜವಾದ ರಹಸ್ಯ ತಿಳಿದವನು ನೀನೊಬ್ಬನೇ. ನಿನ್ನನ್ನು ಆಶ್ರಯಿಸಿ ಈ ಜಗತ್ತು ಹುಟ್ಟನ್ನು ಪಡೆಯುವುದು. ನೀನು ಸುರರಾಜನಾದ ಇಂದ್ರನ ಮಗನಾದ ಅರ್ಜುನನಿಂದ ವಂದಿತನಾದವನು. ಶ್ರೀಹರಿಯೇ ನೀನು ನಮ್ಮನ್ನು ಸದಾ ರಕ್ಷಿಸು.

ವಿ.: ೧. ಬೀಜವೃಕ್ಷನ್ಯಾಯದಂತೆ ಈ ಜಗತ್ತಿನ ರಹಸ್ಯ ಮೇಲ್ನೋಟಕ್ಕೆ ಒಡೆಯಲಾಗದ ಒಗಟು ಎನ್ನಿಸಿದೆ. ಆದರೆ, ನಿಜಕ್ಕೂ ಇದರ ಕಾರಣಪುರುಷ ಸಾಕ್ಷಾತ್ ಶ್ರೀಹರಿ ಎಂಬುದು ಈ ಪದ್ಯದ ಭಾವ.

೨. ಬೀಜವೃಕ್ಷನ್ಯಾಯ ಎಂಬುದು ಸಂಸ್ಕೃತದಲ್ಲಿ ತುಂಬಾ ಪ್ರಸಿದ್ಧವಾಗಿರುವ ಒಂದು ನ್ಯಾಯ. ಬೀಜದಿಂದ ವೃಕ್ಷಗಳು ಹುಟ್ಟುವವು, ಅದರಂತೆ ವೃಕ್ಷಗಳಿಂದ ಬೀಜಗಳು ಲಭಿಸುವವು. ಇದರಿಂದ ಬೀಜಕ್ಕೆ ವೃಕ್ಷ ಕಾರಣವೋ? ವೃಕ್ಷಕ್ಕೆ ಬೀಜ ಕಾರಣವೋ? ಎಂಬ ಗೊಂದಲ ಉಂಟಾಗುವುದು. ಇದು ಶಾಸ್ತ್ರೀಯ ಪರಿಭಾಷೆಯಲ್ಲಿ ಅನ್ಯೋನ್ಯಾಶ್ರಯ ಎನ್ನಿಸುವ ದೋಷ. ಅದರಂತೆ ಬೀಜದಿಂದ ವೃಕ್ಷ, ಅದರಿಂದ ಬೀಜ, ಅದರಿಂದ ಮತ್ತೊಂದು ವೃಕ್ಷ ಎಂಬ ಇನ್ನೊಂದು ಬಗೆಯ ಕೊನೆಗಾಣದ ಕಾರಣಕಾರ್ಯ ಪರಂಪರೆಯು ಅನವಸ್ಥಾ ಎನ್ನಿಸುವ ದೋಷವಾಗಿದೆ.

ಇಂತಹ ದೋಷವನ್ನು ಪರಿಹರಿಸಿ ಶ್ರೀಹರಿಯ ಸರ್ವೋತ್ತಮತ್ವವನ್ನು ತಿಳಿಯುವುದು ನಿಜಕ್ಕೂ ಸಾಧನೆ ಎನ್ನಿಸುವುದು.

೩. ಬೀಜವೃಕ್ಷನ್ಯಾಯವು ಮೇಲ್ನೋಟಕ್ಕೆ ಅನ್ಯೋನ್ಯಾಶ್ರಯ ಅಥವಾ ಅನವಸ್ಥ ಎನ್ನಿಸಿದರೂ, ಮೂಲತಃ ಅವುಗಳಿಗೆ ಮುಖ್ಯಕಾರಣನಾದವನು ಸಾಕ್ಷಾತ್ ಶ್ರೀಹರಿ. ಈ ರಹಸ್ಯವನ್ನು ತಿಳಿದವರಿಗೆ ಬೀಜವೃಕ್ಷನ್ಯಾಯ ದೇವರ ಅಸ್ತಿತ್ವವನ್ನು ಸಮರ್ಥಿಸುವ ಅಪೂರ್ವ ನ್ಯಾಯವಾಗಿದೆ.

೪. ಅನವಸ್ಥೆಯು ಸದನವಸ್ಥಾ ಹಾಗೂ ದುರನವಸ್ಥಾ ಎಂಬುದಾಗಿ ಎರಡು ಬಗೆ. ಮೊದಲನೆಯ ಕಾರ್ಯಕಾರಣಭಾವವೇ ಸಿದ್ಧವಾಗದ ಅನವಸ್ಥಾ ದುರನವಸ್ಥಾ. ಅದು ಅಪರಿಹಾರ್ಯ ಎನ್ನಿಸುವ ದೋಷ: '**ಮೂಲಕ್ಷಯಕರೀಂ ಪ್ರಾಹುರನವಸ್ಥಾಂ ಹಿ ದೂಷಣಮ್**' ಆದರೆ, ಮೊದಲನೆಯ ಕಾರ್ಯಕಾರಣಭಾವ ಸಿದ್ಧವಾದಾಗ ಒದಗುವ ಅನವಸ್ಥಾ ಸದನವಸ್ಥಾ ಅದು ದೂಷಣವೆನ್ನಿಸದು. ಬೀಜವೃಕ್ಷನ್ಯಾಯವು ಸದನವಸ್ಥೆಯ ಗುಂಪಿಗೆ ಸೇರಿದ್ದಾದ್ದರಿಂದ ಅದು ದೋಷವಲ್ಲ ಎಂದು ತಿಳಿಯಬೇಕು.

೫. ಬೀಜವೃಕ್ಷನ್ಯಾಯವು ಹೀಗೆ ಅಗೋಚರವಾಗಿದ್ದರೂ ಮುಖ್ಯಕಾರಣ ಎನ್ನಿಸುವ ಶ್ರೀಹರಿಯ ಮಹಾಮಹಿಮೆಯನ್ನು ತಿಳಿಸುವ ಒಂದು ಸಾಧನವಾಗಿದೆ. ಅದನ್ನು ತಿಳಿಯದ ಜನ ಇದೊಂದು ಅನವಸ್ಥೆಗೆ ಕಾರಣವಾಗುವ ದೊಡ್ಡ ದೋಷ ಎಂದು ತಪ್ಪಾಗಿ ಭಾವಿಸುವ ಸಾಧ್ಯತೆ ಉಂಟು. ದಾಸರು ಅಂತಹ ತಪ್ಪು ತಿಳುವಳಿಕೆಯನ್ನು ಈ ಪದ್ಯದಲ್ಲಿ ದೂರಮಾಡುತ್ತಾ ಮುಖ್ಯವಾಗಿ ಶ್ರೀಹರಿಯೇ ಜಗಜ್ಜನ್ಮಾದಿ ಕರ್ತ ಎಂಬ ಪರಮಸತ್ಯವನ್ನು ತಿಳಿಸಿರುವರು.

೬. ನಿಜಕ್ಕೂ ಜಗತ್ತಿನ ಮುಖ್ಯಕಾರಣವನ್ನು ಇಲ್ಲಿ ಅತ್ಯಂತ ತರ್ಕಬದ್ಧವಾಗಿ ತಿಳಿಸಿ-ಕೊಡಲಾಗಿದೆ. ಇಂತಹ ಶ್ರೀಹರಿಯ ಮಹಿಮೆ ಅತ್ಯಪೂರ್ವ ಎಂದರ್ಥ.

೭. ಸುರರಾಜ ಎಂದರೆ ದೇವೇಂದ್ರ. ಅವನ ನಂದನ ಎಂದರೆ ಅರ್ಜುನ. ಅಂತಹ ಅರ್ಜುನನು ಶ್ರೀಹರಿಯ ವಿಶ್ವರೂಪವನ್ನು ಕಂಡು ಬಗೆಬಗೆಯಲ್ಲಿ ವಂದಿಸಿದ ವಿವರ ಭಗವದ್ಗೀತೆ ಮೊದಲಾದವುಗಳಲ್ಲಿ ಬಂದಿದೆ. ಅದನ್ನು ತಿಳಿದವರಿಗೆ ಬೀಜವೃಕ್ಷನ್ಯಾಯವು ಒಡೆಯಲಾಗದ ಒಗಟೇನಲ್ಲ ಎಂದು ಮನವರಿಕೆಯಾಗುವುದು ಎಂದರ್ಥ.

೮. ಇದರಂತೆ, ದೇವರಿಂದ ಜಗತ್ತೋ, ಜಗತ್ತಿನಿಂದ ದೇವರೋ ಎಂದು ಗೊಂದಲಕ್ಕೀಡಾಗಬೇಕಿಲ್ಲ. ಜಗತ್ತು ಜಡ, ಚೇತನ ಎಂಬುದಾಗಿ ಎರಡು ಬಗೆ, ಜಡಕ್ಕೆ ಕರ್ತೃತ್ವವೇ ಇಲ್ಲ; ಜೀವರಿಗೆ ಸ್ವಾತಂತ್ರ್ಯವಿಲ್ಲ. ನಿಜಕ್ಕೂ ಸ್ವತಂತ್ರ ಕರ್ತೃ ಎಂದರೆ, ಭಗವಂತನೊಬ್ಬನೇ. ಆದ್ದರಿಂದ ಅವನನ್ನೇ ಜಗತ್ಕಾರಣ ಎಂದು ಸರಿಯಾಗಿ ತಿಳಿದುಕೊಂಡು ಆರಾಧಿಸುವುದು ಮೋಕ್ಷಕ್ಕೆ ಹಾದಿ ಎಂದು ಭಾವ.

೯. ಹಿರಣ್ಯಕಶಿಪುವು ಭಗವಂತನಾದ ವಿಷ್ಣುವಿನ ಅಸ್ತಿತ್ವಕ್ಕೆ ಋಷಿಮುನಿಗಳು ಮಾಡುವ ಯಜ್ಞಯಾಗಾದಿಗಳೇ ಆಸರೆ ಎಂದು ತಪ್ಪು ತಿಳಿದು ಅವರನ್ನು ನಾಶಮಾಡುವ ಮೂಲಕ ವಿಷ್ಣುವನ್ನು ಅಳಿಸಬಲ್ಲೆ ಎಂದು ಮಾಡಿದ ಪ್ರಯತ್ನ ಇಂತಹ ತಪ್ಪು ತಿಳುವಳಿಕೆಗೆ ಒಳ್ಳೆಯ ನಿದರ್ಶನ. ಆದರ ಫಲವಾಗಿ ಅವನು ದುರಂತ ಕಂಡಿದ್ದು ಲೋಕವಿಖ್ಯಾತವಾದ ಸಂಗತಿ. ಹಿರಣ್ಯಕಶಿಪುಗಳ ಮಧ್ಯೆ ಬದುಕುವ ಜನ ಇದರಂತೆಯೇ ದೇವರನ್ನು ಅವಗಣನೆ ಮಾಡಿ ನಾಶವಾಗುವರು ಎಂಬ ಸಂದೇಶ ಇದರಲ್ಲಿದೆ.

*****

## ೮೪. ನಿನ್ನ ನಾಮದಿ ಜಗಕೆ ತೋರುತ್ತಿಹವು ರಕ್ಷಿಸು

ತೊಗಲುಬೊಂಬೆಗಳಂತೆ ನಾಲಕು-
ಬಗೆಯ ನಿರ್ಮಾಣದಲಿ ಇದರೊಳು
ನೆಗಳಿದೀ ಚೌಷಷ್ಟಿ ಲಕ್ಷಣಜಾತಿಧರ್ಮದಲಿ ।
ಬಗೆಬಗೆಯ ನಾಮಾಂಕಿತದ ಜೀ-
ವಿಗಳದೆಲ್ಲವು ನಿನ್ನ ನಾಮದಿ
ಜಗಕೆ ತೋರುತ್ತಿಹವು ರಕ್ಷಿಸು ನಮ್ಮನನವರತ ॥ ೮೪ ॥

ಅ: ಶ್ರೀಹರಿಯ ಸೃಷ್ಟಿ ತೊಗಲುಬೊಂಬೆಗಳ ನಿರ್ಮಾಣದಂತೆ ನಾಲ್ಕು ತೆರನಾಗಿದೆ. ಈ ನಿರ್ಮಾಣವು ಸಹ ಪುನಃ ವಿಭಾಗಗೊಂಡು ೬೪ ಬಗೆಯ ಜಾತಿ-ಧರ್ಮಗಳಾಗುವವು. ಅಂತಹ ಜಾತಿ ಧರ್ಮಗಳಿಗೂ ಸಹ ಬಗೆಬಗೆಯ ನಾಮಗಳಿರುವವು. ಇಂತಹ ಜೀವಿಗಳು ಪ್ರಪಂಚದಲ್ಲಿ ನಿನ್ನ ಹೆಸರಿನಿಂದಲೇ ಬಳಕೆಯಲ್ಲಿ ಬಂದಿರುವವು. ಇಂತಹ ಶ್ರೀಹರಿಯೇ ನೀನು ನಮ್ಮನ್ನು ಸದಾ ರಕ್ಷಿಸು.

ವಿ.: ೧. ಜೀವನು ದೇಹ ಪಡೆದು ಹುಟ್ಟಿ ಬರುವ ಅನೇಕ ಬಗೆಯನ್ನು ಇದರಲ್ಲಿ ತಿಳಿಸಲಾಗಿದೆ.

೨. ತೊಗಲುಬೊಂಬೆಗಳಂತೆ ಜೀವನು ಬಗೆಬಗೆಯ ದೇಹಗಳನ್ನು ಹೊಂದುವವನು ಎಂಬುದು ಮೊದಲ ವಿವರ. ತೊಗಲುಬೊಂಬೆಗಳು ಹೇಗೆ ಚರ್ಮದಿಂದ ಮಾಡಲ್ಪಟ್ಟಿರುವವೋ, ಹಾಗೆ ಜೀವನ ಬಾಹ್ಯದೇಹಗಳು ಭೌತಿಕವಾದವು ಎಂದರ್ಥ. ತ್ವಕ್ ಚರ್ಮ ಮೊದಲಾದ ಸಪ್ತಧಾತುಗಳಿಂದ ನಿರ್ಮಾಣಗೊಳ್ಳುವ ದೇಹವು ಭೌತಿಕ ಎಂದರೆ ನಶ್ವರ. ತೊಗಲು ಬೊಂಬೆಗಳು ಹೇಗೆ ನಶ್ವರವೋ ಹಾಗೆ ಜೀವನ ಬಾಹ್ಯದೇಹಗಳು ನಶ್ವರ. ಆದರಲ್ಲೂ ಭೌತಿಕ ದೇಹ ಅತ್ಯಂತ ನಶ್ವರ ಎಂದು ಭಾವ.

೩. ಇಲ್ಲಿನಾಲ್ಕು ಬಗೆಯ ದೇಹಗಳು ಎಂದರೆ, ನಾಲ್ಕು ವರ್ಣಗಳು ಎಂದರ್ಥ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ಬಗೆಯ ದೇಹಗಳು ಸ್ಮೃತಿಗಳಲ್ಲಿ ಪ್ರಸಿದ್ಧವಾಗಿವೆ. ಈ ವ್ಯವಸ್ಥೆಯನ್ನು ಶ್ರೀಹರಿಯೇ ಮಾಡಿರುವವನು ಎಂಬುದು ಭಗವದ್ಗೀತೆಯಲ್ಲಿದೆ: **ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮ ವಿಭಾಗಶಃ.**

೪. ಸ್ವರೂಪದೇಹ, ಲಿಂಗದೇಹ, ಅನಿರುದ್ಧದೇಹ ಮತ್ತು ಸ್ಥೂಲದೇಹ ಎಂಬುದಾಗಿ ಮತ್ತೊಂದು ರೀತಿಯಲ್ಲಿ ನಾಲ್ಕು ಬಗೆಯ ದೇಹಗಳು ಜೀವನಿಗೆ ಇರುವವು. ಆದರೆ, ಇಲ್ಲಿ ಮೇಲೆ ತಿಳಿಸಿದ ಬ್ರಾಹ್ಮಣ ಮೊದಲಾದ ನಾಲ್ಕು ದೇಹಗಳೇ ಮುಖ್ಯವಾಗಿ ವಿವಕ್ಷಿತ.

೫. ಚೌಷಷ್ಟಿ ಎಂದರೆ ಚತುಃಷಷ್ಟಿ ಎಂದರೆ ಅರವತ್ತನಾಲ್ಕು ಎಂದರ್ಥ. ಮುಖ್ಯ ವರ್ಣಗಳು ನಾಲ್ಕು ಬಗೆಯವಾದರೂ, ಮುಂದೆ ಪರಸ್ಪರ ಸಾಂಕರ್ಯದಿಂದಾಗಿ ಒಟ್ಟು ೬೪ ಬಗೆಯ ಜಾತಿಗಳಾಗುವವು ಎಂದರ್ಥ. ಈ ಜಾತಿಗಳು ಸಹ ಅನುಲೋಮ ಮತ್ತು ಪ್ರತಿಲೋಮ ಎಂಬುದಾಗಿ ಎರಡು ಬಗೆ. ಒಟ್ಟು ೬೪ ಬಗೆಯ ಜಾತಿಗಳ ಬಗ್ಗೆ ಹೆಚ್ಚು ವಿವರಗಳು ಶ್ರೀಮನ್ಮಹಾಭಾರತದ ಅನುಶಾಸನಪರ್ವದಲ್ಲಿ ನಿರೂಪಿತವಾಗಿವೆ.

೬. ಹೀಗೆ ೬೪ ಬಗೆಯ ಜಾತಿಗಳಲ್ಲಿ ಹುಟ್ಟಿ ಬರುವ ಜೀವನಿಗೆ ಈ ಜಗತ್ತಿನಲ್ಲಿ ಏನೇ ಇದ್ದರೂ ಸಹ ಅದು ಮೂಲತಃ ಶ್ರೀಹರಿಯ ಆಧೀನ್ಯಕ್ಕೆ ಒಳಪಟ್ಟದ್ದು. ಶ್ರೀಹರಿಯ ಆಧೀನ್ಯಕ್ಕೆ ಒಳಪಡದ ಯಾವ ವಸ್ತುವೂ ಸಹ ಜಗತ್ತಿನಲ್ಲಿ ಎಲ್ಲಿಯೂ ಸರ್ವಥಾ ಇಲ್ಲವೇ ಇಲ್ಲ ಎಂದರ್ಥ. ಇದು '**ಈಶಾವಾಸ್ಯಮಿದಂ ಸರ್ವಂ**' ಮೊದಲಾದ ಶಾಸ್ತ್ರವಾಕ್ಯಗಳ ಭಾವವಾಗಿದೆ.

೭. ಹೀಗೆ ಶ್ರೀಹರಿಯು ಸರ್ವಸ್ವಾಮಿಯಾಗಿರುವುದರಿಂದಲೇ ಅವನು ಸರ್ವರನ್ನು ಸಹ ಸದಾ ರಕ್ಷಿಸಲು ಸಮರ್ಥ ಎಂಬುದು ಇಲ್ಲಿಯ ತಾತ್ಪರ್ಯ.

೮. ಹಿಂದಿನ ಪದ್ಯದಲ್ಲಿ ಬೀಜವೃಕ್ಷನ್ಯಾಯದ ನಿದರ್ಶನವನ್ನು ನೀಡಿ ಶ್ರೀಹರಿಯು ಮೂಲಕಾರಣನು ಎಂಬುದನ್ನು ನಿರೂಪಿಸಿದರೆ, ಇಲ್ಲಿ ಅಸ್ವತಂತ್ರರಾದ ಜೀವಿಗಳು ತೊಗಲುಬೊಂಬೆಗಳಂತೆ ಎಂದು ತಿಳಿಸುವ ಮೂಲಕ ಅದನ್ನು ಇನ್ನಷ್ಟು ಸ್ಫುಟಪಡಿಸಿರುವರು ಎಂದು ತಿಳಿಯಬಹುದು.

*****

## ೮೫. ಕೊಂಪೆಯ ನೋಡಿ ನಂಬಿರಬಹುದೆ ರಕ್ಷಿಸು

**ಹೂಡಿದೆಲುಮರಮುಟ್ಟುಮಾಂಸದ**
**ಗೋಡೆ ಚರ್ಮದ ಹೊದಿಕೆ ನರಗಳ**
**ಕೂಡೆ ಹಿಂಡಿಗೆ ಬಿಗಿದ ಮನೆಯೊಳಗಾತ್ಮನಿರುತಿರಲು ।**

**ಬೀಡು ತೊಲಗಿದ ಬಳಿಕಲಾ ಸುಡು-**
**ಗಾಡಿನಲಿ ಬೆಂದುರಿವ ಕೊಂಪೆಯ**
**ನೋಡಿ ನಂಬಿರಬಹುದೆ ರಕ್ಷಿಸು ನಮ್ಮನನವರತ || ೮೫ ||**

**ಅ: ಜೋಡಿಸಿದ ಎಲುಬುಗಳೆ ಮರಮುಟ್ಟು; ಮಾಂಸಖಂಡಗಳೇ ಗೋಡೆ, ಚರ್ಮವೇ ಹೊದಿಕೆ, ನರಗಳು ಹಿಂಡುಹಿಂಡಾದ ಕಟ್ಟಡದ ಇತರ ಸಲಕರಣೆಗಳು. ಇಂತಹ ದೇಹವೆಂಬ ಮನೆಯಲ್ಲಿ ಜೀವನು ಇರುತ್ತಿರುವನು. ಇಂತಹ ಮನೆಯು ಬಿದ್ದುಹೋಗುತ್ತಿದ್ದಂತೆ ಅದು ಸುಡುಗಾಡಿನಲ್ಲಿ ಬೆಂದು ಉರಿದು ಹೋಗಿ ಕೊಂಪೆಯಾಗಿ ಬಿಡುವುದು. ಇಂತಹ ದೇಹವನ್ನು ನಂಬಿ ನಾವು ಏನನ್ನು ತಾನೆ ಮಾಡಲು ಸಾಧ್ಯ? ಸ್ವಾಮಿಯಾದ ಶ್ರೀಹರಿಯೇ! ನೀನು ಸದಾ ನಮ್ಮನ್ನು ರಕ್ಷಿಸು.**

ವಿ.: ೧. ಈ ಭೌತಿಕ ದೇಹವು ಅದೆಷ್ಟು ನಶ್ವರ ಎಂಬುದನ್ನು ಇದರಲ್ಲಿ ವಿವರಿಸಲಾಗಿದೆ.

೨. ಮನೆಯು ಎಷ್ಟೇ ಭದ್ರವಾಗಿ ಕಟ್ಟಲ್ಪಟ್ಟಿದ್ದರು ಸಹ ಅದು ಒಂದಲ್ಲ ಒಂದು ದಿನ ಬಿದ್ದು ಹೋಗಲೇಬೇಕು. ಅದರಂತೆ ಭೌತಿಕ ದೇಹವು ಎಂತಹುದೇ ಆಗಿದ್ದರು ಅದು ಅಳಿಯುವುದು ನಿಶ್ಚಯ; ಕೊಂಪೆ – ಕುಗ್ರಾಮ, ಜೋಪಡಿ.

೩. ಮನೆಯನ್ನು ಕಟ್ಟಲು ಮರಮುಟ್ಟುಗಳು, ಗೋಡೆ, ಹೊದಿಕೆ ಹಾಗೂ ಇತರ ಸಲಕರಣೆಗಳು ಅತ್ಯಗತ್ಯ. ಈ ದೇಹವೆಂಬ ಮನೆಗೆ ಎಲುಬುಗಳೇ ಮರಮುಟ್ಟುಗಳು, ಮಾಂಸಖಂಡಗಳೇ ಗೋಡೆ, ಚರ್ಮವೇ ಹೊದಿಕೆ, ನರ ಮೊದಲಾದವುಗಳೇ ಉಪಕರಣಗಳು. ಹೀಗಿರುವ ಇದು ಒಂದಲ್ಲ ಒಂದು ದಿನ ಅಳಿಯಲೇಬೇಕು, ಮನೆಯು ಹೇಗೋ ಹಾಗೆ ಎಂದರ್ಥ.

೪. ಈ ದೇಹವು ಅಳಿದ ಮೇಲೆ ಅದರ ಸ್ಥಿತಿ ಹೀನಾಯವಾದುದು. ಮಾನವಜೀವನವು ಎಷ್ಟೇ ಅಮೂಲ್ಯವಾಗಿದ್ದರೂ ಸಹ ದೇಹದ ಬೆಲೆ ಮಾತ್ರ ನಗಣ್ಯ ಎನ್ನಿಸುವಂತಹುದು. ಅಳಿದ ದೇಹವನ್ನು ಬಂಧುಬಾಂಧವರು ಸಹ ಸಂರಕ್ಷಿಸಲಾರರು. ಅದೇನಿದ್ದರು ಸಹ ಸುಡುಗಾಡಿನಲ್ಲಿ ಸುಟ್ಟು ಬೂದಿಯಾಗುವಂತಹುದು. ಎಂದಮೇಲೆ ಅಂತಹ ದೇಹದ ಬಗ್ಗೆ ಅತಿಯಾದ ಅಭಿಮಾನ ಸಲ್ಲದು ಎಂದು ಭಾವ.

೫. ಸುಡುಗಾಡು ಎಂದರೆ, ಅಳಿದ ದೇಹಗಳನ್ನು ಸುಡುವ ಸ್ಥಳ. ಸುಡುಗಾಡು ಎಂಬ ಪದದಿಂದ ಸತ್ತ ದೇಹಗಳೆಲ್ಲ ಸುಟ್ಟು ಬೂದಿಯಾಗುವ ಸ್ಥಳ. ದೇಹ ಯಾರದ್ದೇ ಆಗಿದ್ದರು ಅದನ್ನು ಸುಡುವ ಸ್ಥಳ ಸುಡುಗಾಡು ಮಾತ್ರವೇ ಆಗಿರುತ್ತದೆ. ಕಾಡಿನಲ್ಲಿ ಭಯಂಕರವಾದ ಹುಲಿ, ಸಿಂಹ ಮೊದಲಾದ ಪ್ರಾಣಿಗಳು ತುಂಬಿರುವಂತೆ ಸುಡುಗಾಡಿನಲ್ಲಿ ಪಿಶಾಚಿ, ಭೂತಗಳು, ಬೇತಾಳಗಳು ತುಂಬಿರುವವು ಎಂಬ ಭಾವವು ಇದರಿಂದ ಸೂಚಿತ. ಸುಡುಗಾಡು ಎಂದೂ ಸಹ ವಾಸಸ್ಥಾನ ಎನ್ನಿಸಲಾರದು. ಅದರಂತೆ ಈ ದೇಹವು ಸಹ ಜೀವನಿಗೆ ನಿತ್ಯವಾದ ನೆಲೆ ಅಲ್ಲ.

೬. ದೇಹ ಹೀಗೆ ಅತ್ಯಂತ ನಶ್ವರವಾಗಿರುವುದರಿಂದ ಆ ದೇಹವನ್ನು ಸ್ಥಿರವೆಂದು ನಂಬಿ ಅದರ ಲಾಲನೆ, ಪೋಷಣೆಗಳನ್ನು ಅತಿಯಾಗಿ ಮಾಡುವುದು ಸರ್ವಥಾ ಉಚಿತವಲ್ಲ ಎಂದರ್ಥ. ಇದು

**'ಜಾತಸ್ಯ ಹಿ ಧ್ರುವೋ ಮೃತ್ಯುಃ'** ಎಂಬ ಗೀತಾ ವಾಕ್ಯದ ವಿವರಣೆಯಂತಿದೆ. ಹೀಗೆ ಮೃತ್ಯುವಿಗೆ ಒಳಗಾಗುವ ಈ ದೇಹವನ್ನೇ ಸ್ಥಿರವೆಂದು ಭಾವಿಸಿ ಇತರ ಜೀವಿಗಳಿಗೆ ಕೆಡುಕನ್ನು ಮಾಡುವುದು, ತನ್ನ ಸ್ವಾರ್ಥಕ್ಕಾಗಿ ಇತರರಿಗೆ ಕೇಡೆಣಿಸುವುದು ಅತ್ಯಂತ ಅವಿವೇಕದ ಕಾರ್ಯ ಎಂದರ್ಥ. ಶ್ರೀಪುರಂದರದಾಸರ **'ಕಸಕಿಂತ ಕಡೆಯಾಯಿತೀ ದೇಹ'** ಎಂಬ ಮಾತಿನಲ್ಲಿ ಈ ದೇಹವು ಕೊಂಪೆ ಎಂಬ ವಿವರ ಸ್ಫುಟವಾಗಿ ಕಾಣುವುದು.

೭. ಹೀಗೆ ದೇಹದ ನಶ್ವರತೆಯನ್ನು ಮನಗಾಣುವ ವಿವೇಕಿಗಳು ದೇಹದ ಪೋಷಣೆಗಷ್ಟೇ ಗಮನ ಕೊಡದೆ ಅದನ್ನು ಸಾಧನವನ್ನಾಗಿ ಬಳಸಿಕೊಂಡು ಶ್ರೀಹರಿಯ ಒಲುಮೆಯ ಸಂಪಾದನೆಗಾಗಿ ಅವಿರತವಾಗಿ ದುಡಿಸಿಕೊಳ್ಳುವರು. ಇದಕ್ಕೆಲ್ಲ ಮುಖ್ಯವಾಗಿ ಶ್ರೀಹರಿಯ ಅನುಗ್ರಹ ಅಪೇಕ್ಷಿತ ಎಂಬುದು ಇದರ ಒಟ್ಟು ತಾತ್ಪರ್ಯ.

೮. ಶ್ರೀಕನಕದಾಸರ ಈ ಕೆಳಗಿನ ಪದ್ಯದಲ್ಲಿ ನರದೇಹವು ಕೊಂಪೆ ಎಂಬುದರ ಬಗ್ಗೆ ಹೆಚ್ಚಿನ ವಿವರಗಳು ಬಂದಿವೆ:

ಎಂದಿದ್ದರೀ ಕೊಂಪೆ ಎನಗೆ ನಂಬಿಕೆಯಿರದು ॥ ಪ ॥
ಮುಂದರಿತು ಹರಿಪಾದ ಹೊಂದುವುದು ಲೇಸು ॥ ಅ.ಪ. ॥
ಎಲುವುಗಳು ತೊಲೆ-ಜಂತೆ ನರಗಳವು ಬಿಗಿದಂತೆ
ಬಲಿದ ಚರ್ಮವು ಮೇಲು ಹೊದಿಕೆಯಂತೆ
ಗಳಗಳನೆ ನುಡಿವ ನಾಲಗೆ ಗಂಟೆಯುಲಿಯಂತೆ
ಕೆಲಕಾಲಕೀ ಕೊಂಪೆ ಕಡೆಗಾಹುದಂತೆ ॥ ೧ ॥
ಕಂಡಿಗಳು ಒಂಬತ್ತು ಕಳಬಂಟರೈವರು
ಅಂಡಲೆವುದೊತ್ತಿನಲಿ ಷಡ್ವರ್ಗವು
ಮಂಡಲಕೆ ಹೊಸಪರಿಯು ಮನ್ಮಥನ ಠಾಣವಿದು
ಮಂಡೆ ಹೋಗುವುದನ್ನು ಅರಿಯದೀ ಕೊಂಪೆ ॥ ೨ ॥
ಕೊಂಪೆಯಲಿ ಶೃಂಗಾರ ಕೊಂಡಾಡಲಳವಲ್ಲ
ಕೆಂಪು ಬಣ್ಣಗಳಿಂದ ಚೆನ್ನಾಯಿತು
ಇಂಪಿನಲಿ ಕಾಗಿನೆಲೆಯಾದಿಕೇಶವನನ್ನು
ಸೊಂಪಿನಲಿ ನೆನೆನೆನೆದು ಸುಖಿಯಾಗು ಮನುಜಾ ॥ ೩ ॥

*****

**೮೬. ಇವರವರಾಗಬಲ್ಲರೆ ನೀನೆ ರಕ್ಷಿಸು**

**ಬೀಗಮುದ್ರೆಗಳಿಲ್ಲದೂರಿಗೆ**
**ಬಾಗಿಲುಗಳೊಂಭತ್ತು ಹಗಲಿರು -**
**ಳಾಗಿ ಮುಚ್ಚದೆ ತೆರೆದಿಹುದು ಜೀವಾತ್ಮ ತಾನಿರುತ ।**

**ನೀಗಿ ಎಲ್ಲವ ಬಿಸುಟು ಬೇಗದಿ**
**ಹೋಗುತಿಹ ಸಮಯದಲಿ ಇವರವ-**
**ರಾಗಬಲ್ಲರೆ ನೀನೆ ರಕ್ಷಿಸು ನಮ್ಮನನವರತ || ೮೬ ||**

**ಅ: ಬೀಗ ಹಾಗೂ ಮುದ್ರೆಗಳು ಇಲ್ಲದ ಊರು ಈ ಶರೀರ. ಇದಕ್ಕೆ ಒಂಭತ್ತು ದ್ವಾರಗಳು. ಹಗಲು, ಇರಳು ಸಹ ಮುಚ್ಚದೇ ಸದಾ ತೆರೆದಿರುವುದು ಈ ಊರಿನ ವೈಶಿಷ್ಟ್ಯ. ಇದರೊಳಗೆ ಜೀವಾತ್ಮನು ಸದಾ ನೆಲೆಸಿರುವನು. ಇಂತಹ ಜೀವನು ಎಲ್ಲವನ್ನು ತೊರೆದು ಶೀಘ್ರದಿಂದ ದೇಹವನ್ನು ಬಿಟ್ಟುಹೋಗುವಂತಹ ಸಮಯದಲ್ಲಿ ಇವರಾಗಲೀ, ಅವರಾಗಲೀ ರಕ್ಷಣೆಗೆ ಒದಗಬಲ್ಲರೇ? ಶ್ರೀಹರಿಯೇ ನೀನೇ ನಮ್ಮನ್ನು ಸದಾ ರಕ್ಷಿಸು.**

ವಿ.: ೧. ಸಾಧನಶರೀರದ ವೈಶಿಷ್ಟ್ಯವನ್ನು ಇದರಲ್ಲಿ ತಿಳಿಸಲಾಗಿದೆ.

೨. ಈ ದೇಹಕ್ಕೆ ಒಂಭತ್ತು ದ್ವಾರಗಳು, ಯಾವ ದ್ವಾರಕ್ಕೂ ಸಹ ಬೀಗವಾಗಲೀ, ಮುದ್ರೆಯಾಗಲೀ ಇಲ್ಲವೇ ಇಲ್ಲ ಎಂಬುದು ಇದರ ವಿಶೇಷ. ಸಾಮಾನ್ಯವಾಗಿ ಅಲ್ಪ ಬೆಲೆಬಾಳುವಂತಹ ಮನೆಗಳಿಗೇ ಸಹ ಬೀಗಮುದ್ರೆಯಿಂದ ರಕ್ಷಣೆ ಮಾಡುವುದುಂಟು. ಆದರೆ, ಕೋಟ್ಯಂತರ ಜನ್ಮಗಳ ಸಾಧನೆಯ ಹಿನ್ನೆಲೆಯಲ್ಲಿ ಲಭಿಸಿರುವಂತಹ ಅಮೂಲ್ಯವಾದ ಈ ಸಾಧನಶರೀರಕ್ಕೆ ಮಾತ್ರ ಬೀಗಮುದ್ರಗಳು ಇಲ್ಲ ಎಂಬುದು ಗಮನಿಸಬೇಕಾದ ಸಂಗತಿ.

೩. ನವದ್ವಾರಗಳು ಎಂದರೆ, ಎರಡು ಕಣ್ಣು ಎರಡು ಕಿವಿ, ಎರಡು ಮೂಗು, ಒಂದು ಬಾಯಿ, ಒಂದು ಪಾಯು, ಒಂದು ಉಪಸ್ಥ. ಇವ್ಯಾವಕ್ಕೂ ಸಹ ಬೀಗಮುದ್ರೆಗಳಿಲ್ಲ.

೪. ಕಣ್ಣುಗಳಿಗೆ ಬೀಗಮುದ್ರೆಗಳಿಲ್ಲ ಎಂದರೆ, ಅದನ್ನು ಬೇಕೆಂದಾಗ ತೆಗೆಯಬಹುದು, ಮುಚ್ಚಬಹುದು. ಅದರಂತೆ ಕಿವಿಗೆ ಬೀಗಮುದ್ರೆಗಳಿಲ್ಲ ಎಂದರೆ, ಅದಕ್ಕೆ ಕಣ್ಣಿಗಿರುವಂತೆ ರೆಪ್ಪೆಗಳು ಸಹ ಇಲ್ಲ, ಎಂದರೆ, ಕಿವಿಗಳಿಂದ ಸದಾ ಕಾಲವು ಸಹ ಸದ್ವಿಚಾರಗಳನ್ನು ಕೇಳುತ್ತಲೇ ಇರಬೇಕು ಎಂದರ್ಥ. ಮೂಗಿಗೂ ಬೀಗ ಇಲ್ಲ, ಸದಾ ಉಸಿರಾಟ ನಡದೇ ಇರುತ್ತದೆ ಎಂದು ಇದರ ಅರ್ಥ. ಉಸಿರಾಟ ನಿಂತಲ್ಲಿ ಜೀವನಿಗೆ ಮೃತ್ಯುವೇ ಗತಿ. ಒಂದು ಬಾಯಿ, ಅದು ಸಹ ಅಷ್ಟೆ ಬೇಕೆಂದಾಗ ತೆರೆಯಬಹುದು, ಬೇಡವಾದಾಗ ಮುಚ್ಚಬಹುದು. ಪಾಯು ಎಂದರೆ, ಮಲವಿಸರ್ಜನೆಯ ದ್ವಾರ, ಉಪಸ್ಥ ಎಂದರೆ ಮೂತ್ರ ವಿಸರ್ಜನೆ ದ್ವಾರ.

೫. ಕಣ್ಣಿಗೆ ರೆಪ್ಪೆ ಇರುವುದರಿಂದ ನೋಡಬೇಕಾದ್ದನ್ನು ನೋಡಲು, ನೋಡಕೂಡದ್ದನ್ನು ನೋಡದಿರಲು ಅದಕ್ಕೆ ರೆಪ್ಪೆಯ ರಕ್ಷಣೆ ಇದೆ. ಉಸಿರಾಟವಂತೂ ಜೀವನಕ್ಕೆ ಆಧಾರವಾದ ಮುಖ್ಯ ಕ್ರಿಯೆ. ಆದ್ದರಿಂದ ಅದು ಸದಾ ಕಾರ್ಯನಿರತವಾಗಿರುವುದರಿಂದ ಬೀಗಮುದ್ರೆಗಳ ಅಗತ್ಯವೇ ಇಲ್ಲ. ಎರಡು ಕಿವಿಗಳಲ್ಲಿ ಸದಾ ಕಾಲ ಭಗವಂತನ ಕಥೆಯ ಶ್ರವಣ ಎಡೆಬಿಡದೆ ನಡೆದಿರಬೇಕು ಎಂಬ ಅರ್ಥ ಸೂಚಿತ.

೬. ಕಣ್ಣು ಕಿವಿ, ಮೂಗು ಎರಡೆರಡಾದರೆ ಬಾಯಿ ಮಾತ್ರ ಒಂದೇ. ಎರಡು ಕಣ್ಣುಗಳಿಂದ ಜಗತ್ತನ್ನು ಸರಿಯಾಗಿ ಗಮನಿಸಿದಲ್ಲಿ ಇದರ ವಿಚಿತ್ರತೆಯು ಅರ್ಥವಾಗಿ ಜಗತ್ತನ್ನು ಸೃಷ್ಟಿಸಿದ ಜಗನ್ನಾಥನಾದ ದೇವರ ಮಹಿಮೆಯನ್ನು ಅರಿಯಲು ಸಾಧ್ಯವಾಗುವುದು. ಎರಡು ಮೂಗುಗಳಿಂದಾಗಿ ನಡೆದಿರುವ ಉಸಿರಾಟ ನಮ್ಮ ಜೀವನದಲ್ಲಿ ಪ್ರಾಣತತ್ವದ ಹಿರಿಮೆಯನ್ನು ತಿಳಿಯಲು ಸಹಕಾರಿಯಾಗುವುದು. ಎರಡು ಕಿವಿಗಳು ಸದಾ ಕಾಲ ದೇಹ, ಅದಕ್ಕೆ ಇಂದ್ರಿಯಗಳು, ಅವುಗಳಿಗೆ ವಿಷಯಗಳು ಮೊದಲಾಗಿ ಎಲ್ಲವನ್ನೂ ನೀಡುವ ಭಗವಂತನ ಮಹಿಮೆಯನ್ನು ಸದಾ ಕೇಳಲು ಸಾಧನವಾಗಿದೆ: **'ಆ ನೋ ಭದ್ರಾಣಿ ಕ್ರತವೋ ಯಂತು ವಿಶ್ವತಃ'**, **'ಭದ್ರಂ ಕರ್ಣೇಭಿಃ ಶ್ರುಣುಯಾಮ ದೇವಾಃ'** ಎಂಬ ಶ್ರುತಿ ವಚನಗಳು ಹೇಳುವುದು ಇದನ್ನೇ.

೭. ಬಾಯಿ ಒಂದೇ. ಮೂಗು, ಕಿವಿಗಳು ಸದಾ ತೆರೆದಿರುವಂತೆ, ಇದನ್ನು ಸದಾ ತೆರೆಯುವಂತಿಲ್ಲ. ಅಗತ್ಯವಿದ್ದಾಗ ಮಾತ್ರ ತೆರೆದು ಉಳಿದಂತೆ ಮುಚ್ಚುವುದು ಶ್ರೇಯಸ್ಕರ. ಬಾಯಿಯ ಕೆಲಸ ಎರಡು, ಒಂದು ಮಾತು, ಇನ್ನೊಂದು ತಿನ್ನುವುದು. ತಿನ್ನುವ ಆಹಾರ ಮಿತಿಯಲ್ಲಿರಲಿ ಎಂಬುದಕ್ಕಾಗಿ ಅದನ್ನು ಹೆಚ್ಚಾಗಿ ಮುಚ್ಚಿಯೇ ಇರುವುದು ಅಗತ್ಯ. ಅದರಂತೆ ಆಡುವ ಮಾತು ಸಹ ಹಿತಮಿತವಾಗಿರಲಿ, ಸತ್ಯವಚನವಾಗಿರಲಿ ಎಂಬ ಸಂದೇಶವು ಇದರಿಂದ ಸೂಚಿತ. ಬಾಯಿ ಒಂದೇ ಇರಲು, ಮತ್ತು ಅದು ಹೆಚ್ಚಾಗಿ ಮುಚ್ಚಿಯೇ ಇರಲು ಇದೇ ಮುಖ್ಯ ಕಾರಣ.

೮. ಪಾಯು, ಉಪಸ್ಥಗಳು ಒಂದೊಂದಾಗಿಯೇ ಇರುವುದು ಸಹ ಇದೇ ತತ್ತ್ವಕ್ಕೆ ಸೂಚಕ. ಎಂದರೆ, ಕಡಿಮೆ ಆಹಾರದ ಸೇವನೆಯಿಂದಾಗಿ ಮಲ,ಮೂತ್ರಗಳ ನಿಯಂತ್ರಣವು ಸಹ ಸಾಧ್ಯ ಎಂದರ್ಥ.

೯. ಒಟ್ಟಾಗಿ ಇದು **'ನವದ್ವಾರೇ ಪುರೇ ದೇಹೀ ನೈವ ಕುರ್ವನ್ ನ ಕಾರಯನ್'** **(೫/೧೩)** ಎಂಬ ಗೀತಾ ಶ್ಲೋಕದ ವಿವರಣೆಯಾಗಿದೆ.

೧೦. ಇಂತಹ ದೇಹವನ್ನು ಊರು ಎಂದು ಕರೆದಿರುವುದು ಸಹ ಪುರೇ ಎಂಬ ಗೀತೆಯ ಮಾತಿನ ಭಾವವಾಗಿದೆ; ಇಂತಹ ಊರಿನಲ್ಲಿ ಜೀವನ ವಾಸ ನಡೆದಿರುವುದು.

೧೧. ಮುಂದೆ ಮರಣ ಒದಗಿದಾಗ ಇಂತಹ ನವದ್ವಾರಗಳ ದೇಹವನ್ನು ತೊರೆದು ಜೀವ ಹೊರಟು ನಿಲ್ಲುವನು. ಆಗ ಇವನ ಹಿಂದೆ ತೆರಳುವವರು ಯಾರೂ ಇರರು. ತಂದೆ, ತಾಯಿ, ಬಂಧು, ಬಳಗ ಮೊದಲಾಗಿ ಯಾರೂ ಸಹ ಮೃತನಾಗಿ ತೆರಳುವ ಜೀವನ ಹಿಂದೆ ಹೋಗಲು ಸಾಧ್ಯವಿಲ್ಲ.

೧೨. ಅವರಿವರು ಎಂದರೆ, (ಇವರು) ಹತ್ತಿರದವರು ಹಾಗೂ ಅವರು (ದೂರದವರು) ಎಂದರ್ಥ. ಹತ್ತಿರದವರು ಎಂದರೆ, ದೇಹಸಂಬಂಧಿಗಳಾದ ಬಂಧು-ಬಾಂಧವರು. ದೂರದವರು ಎಂದರೆ ಮಿತ್ರರು ಮೊದಲಾದವರು. ಅಥವಾ ಅವರು ಇವರು ಎಂಬುದಕ್ಕೆ

ನಮಗೆ ಸಂಬಂಧಿಸಿದ ಹೊರಗಿನ ಜನರು. ಸಾಧನೆಗೆ ಅನುಕೂಲವನ್ನು ಕಲ್ಪಿಸದ ಜನರು ಎಂದು ಒಟ್ಟು ಅರ್ಥ. ಎಂದರೆ, ಯಾರದೋ ಮಾತನ್ನು ಕೇಳಿ ಏಕಾದಶ್ಯಾದಿ ವ್ರತಗಳನ್ನು ತೊರೆಯುವುದು, ದೇವಪೂಜೆಯನ್ನು ಕೈಬಿಡುವುದು, ಸಚ್ಛಾಸ್ತ್ರಶ್ರವಣವನ್ನು ಮಾಡದಿರುವುದು ಘೋರ ಅಪರಾಧ ಎಂದರ್ಥ. ತಮಗೆ ತೋಚಿದಂತೆ ಸಲಹೆ ನೀಡುವ ಮೂರ್ಖಜನರು ಅಂತ್ಯಕಾಲದಲ್ಲಿ ಜತೆಗೆ ಬರಲಾರದವರು. ತಾನು ಮಾಡಿದ ಪಾಪಕಾರ್ಯಗಳಿಗೆ ಅವರು ಹೊಣೆ ಹೊರುವವರಲ್ಲ. ಆದ್ದರಿಂದ ಅಂತಹ ಜನರ ಮಾತನ್ನು ನಂಬಿ ಶಾಸ್ತ್ರೋಕ್ತವಾದ ಕರ್ಮಾಚರಣೆಯನ್ನು, ಧರ್ಮಾಚರಣೆಯನ್ನು ತೊರೆಯುವುದು ಅವಿವೇಕ ಎಂದರ್ಥ.

೧೩. ಈ ಪದ್ಯದ ಈ ಭಾಗವು ಮುಖ್ಯವಾಗಿ ಈ ಕೆಳಗಿನ ಪುರಾಣಶ್ಲೋಕವನ್ನು ಆಧರಿಸಿದೆ:

**ಧನಾನಿ ಭೂಮೌ ಪಶವಶ್ಚ ಗೋಷ್ಠೇ ಭಾರ್ಯಾ ಗೃಹದ್ವಾರಿ ಸುತಃ ಸ್ಮಶಾನೇ ।**
**ದೇಹಶ್ಚಿತಾಯಾಂ ಪರಲೋಕಮಾರ್ಗೇ ಕರ್ಮಾನುಗೋ ಗಚ್ಛತಿ ಜೀವ ಏಕಃ ॥**

೧೪. ಶ್ರೀಪುರಂದರದಾಸರ ಈ ಕೆಳಗಿನ ಮಾತುಗಳ ಭಾವವು ಇದರಲ್ಲಿ ಅಡಗಿದೆ[೧]:

---

೧. ಶ್ರೀಕನಕದಾಸರ ಈ ಕೆಳಗಿನ ಪದವೂ ಇದರ ವಿವರಣೆಯಂತಿದೆ :

ಆರೂ ಆರು ಸಂಗಡ ಬಾಹೋರಿಲ್ಲ ಸಿರಿ–
ನಾರಾಯಣನ ಸ್ಮರಣೆ ನೆರೆ ಬಾಹೋದಲ್ಲದೆ ॥ ಪ ॥
ಹೊತ್ತು ನವಮಾಸ ಪರಿಯಂತ ಗರ್ಭದೊಳು
ಅತ್ಯಂತ ನೋವು ಬೇನೆಗಳಿಂದಲಿ
ತುತ್ತು ವಸ್ತ್ರವನಿಕ್ಕಿ ಸಲಹಿದಾ ತಾಯ್ತಂದೆ
ಅತ್ತು ಕರೆದುಳಿವರು ಮತ್ತೆ ಬೆನ್ನಲಿ ಬಾಹರೆ ॥ ೧ ॥
ಮನೆ ಮಕ್ಕಳಿವರೆನ್ನ ತನುವಿಗೊಡೆಯರೆಂದು
ಘನವಾಗಿ ಬಲುನಂಬಿ ನೆಚ್ಚುತಿಹರು
ಅನುಮಾನವಾಗಿ ಜೀವನ ತೊಳಲಿದಾಕ್ಷಣದಿ
ಮನೆಯೊಳೊಂದರಗಳಿಗೆ ನಿಲ್ಲಿಸಿಕೊಳ್ಳರು ॥ ೨ ॥
ಸುತ್ತ ಮುತ್ತಲು ಕುಳಿತಿದ್ದ ಬಂಧುಜನರು
ಹೊತ್ತು ಹೋಯಿತೇಳಿರೇಳೆಂಬರು
ಒತ್ತಿದ ಕಸಕಿಂತ ಕಡುಕಷ್ಟದೀ ದೇಹ
ಹೊತ್ತೊಯ್ದು ಅಗ್ನಿಯೊಳು ಬಿಸುಟಿ ಬಹರೊ ॥ ೩ ॥
ಹರಣ ಹಿಂಗದ ಮುನ್ನ ಹರಿಯ ಸೇವೆಯ ಮಾಡು
ಪರಲೋಕ ಸಾಧನವನು ಮಾಡು
ಕರುಣಾನಿಧಿ ಕಾಗಿನೆಲೆಯಾದಿಕೇಶವನ
ಚರಣಕಮಲವ ನಂಬಿ ಸುಖಿಯಾಗು ಮನವೆ ॥ ೪ ॥

**

ಆರು ಸಮಯಕ್ಕೊದಗಲಿಲ್ಲ
ಮೋರೆ ನೋಡುತ ಸುಮ್ಮನಿರುತಿಹರೆಲ್ಲ ॥ ಪ ॥
ಮಗಳು ಮಹಾಲಕುಮಿ ಮೊಮ್ಮಗನು ಸರಸಿಜಭವನು
ಖಗರಾಜವಾಹನನು ತನ್ನಳಿಯನು
ಅಗಜನಂದು ತನ್ನೊಡಲೊಳಗಿಟ್ಟು ಮೂ-
ರ್ಜೆಗಸೆ ಮಾಡಿದ ಮುನಿಯ ಬಿಡಿಸಲಿಲ್ಲ ॥ ೧ ॥
ಶ್ರೀದೇವಿ ಭೂದೇವಿ ಮಾತೆಯರು ತಾವಿರಲು
ಯಾದವರಾಯ ಮೋಹದ ತಂದೆಯು
ವೇದಮುಖದಣ್ಣನಿರೆ ಉರಿನಯನದಿಂದ ಸ್ಮರನು
ಬೂದಿಯಾಗುವಾಗ ಲೆಕ್ಕಿಸಲಿಲ್ಲವೇಕೆ ॥ ೨ ॥
ಪಿತನು ಸಾಗರರಾಜ ಹಿತದಕ್ಕ ಶ್ರೀದೇವಿ
ಅತಿ ಬೀಗನಾದವ ನಾರಾಯಣ
ಜತೆ ಅಳಿಯರು ಬ್ರಹ್ಮ ಮನ್ಮಥರಿವರಿರಲು
ಕ್ಷಿತಿಯೊಳಗೆ ಶಶಿ ತಾನು ಹತವಾಹ ಸಮಯದಲಿ ॥ ೩ ॥
ತೆತ್ತೀಸ ಕೋಟಿ ದೇವರ್ಕಳು ತಾವಿರಲು
ಒತ್ತಿನಲಿ ಇಂದ್ರ ಉಪೇಂದ್ರರಿರಲು
ಮತ್ತೆ ಪಾರ್ವತಿ ಪುತ್ರ ಮಗ ವೀರೇಶ ದಕ್ಷನ
ನೆತ್ತಿ ಹರಿಗಡಿವಾಗ ನೋಡುತಿಹರೆಲ್ಲ ॥ ೪ ॥
ಇಂಥಿಂಥವರಿಗೆಲ್ಲ ಈ ಪಾಟವಿರಲಾಗಿ
ಭ್ರಾಂತ ಮನುಜರಿಗೆ ಪೇಳಲಿನ್ನೆಷ್ಟು
ಕಂತುಪಿತ ಕಾಗಿನೆಲೆಯಾದಿಕೇಶವರಾಯನ
ಸಂತೋಷದಲಿ ಪಾಡಿ ಸುಖಿಯಾಗೊ ಮನುಜ ॥ ೫ ॥

**

ಆರು ಹಿತವರು ಎಂದು ನಂಬಬೇಡ ॥ ಪ ॥
ಆರಿಗಾರಿಲ್ಲ ಆಪತ್ತು ಬಂದೊದಗಿದಡೆ ॥ ಅಪ ॥
ಜನಕ ಹಿತದವನೆಂದು ನಂಬಬಹುದೇ ಹಿಂದೆ
ತನಯ ಪ್ರಹ್ಲಾದನಿಗೆ ಪಿತ ಮುನಿದನು
ಜನನಿ ರಕ್ಷಿಸುವಳೆಂತೆಂಬೆನೆ ಆ ಕುಂತಿ-
ತನಯ ರಾಧೇಯನಿಗೆ ಎರಡನೆಣಿಸಿದ ಮೇಲೆ ॥ ೧ ॥
ಮಗನು ತೆತ್ತಿಗನೆನಲೆ ಕಂಸ ತನ್ನಯ ಪಿತನ
ನಿಗಳಬಂಧನದಿಂದ ಬಂಧಿಸಿದನು
ಜಗವರಿಯೆ ಸೋದರನು ಮಮತೆಯುಳ್ಳವನೆನಲೆ
ಹಗೆವೆರಸಿ ವಾಲಿಯನು ಅನುಜ ಕೊಲಿಸಿದ ಮೇಲೆ ॥ ೨ ॥
ತನಗೆ ದೇಹಾನುಬಂಧಿಗಳೆ ಬಂಧುಗಳೆಂದು
ಮನದಿ ನಿಚ್ಚಳವಾಗಿ ನಂಬಬೇಡ
ಘನ ಕೃಪಾನಿಧಿ ಕಾಗಿನೆಲೆಯಾದಿಕೇಶವನ
ಅನುದಿನದಿ ನಂಬಿದವಗಿಹಪರದ ಸುಖವು ॥ ೩ ॥

**ಮಂಚ ಬಾರದು ಮಡದಿ ಬಾರಳು ಕಂಚುಕನ್ನಡಿ ಬಾರವು।**
**ಸಂಚಿತಾರ್ಥವು ಕಿಂಚ ಬಾರದು ಮುಂಚೆ ಮಾಡಿರೋ ಧರ್ಮವ॥**

೧೫. ನಿಜಕ್ಕೂ ಸಹ ನಮ್ಮ ಅನಾದಿಕಾಲದ ಬಂಧುವಾಗಿ ಜನ್ಮಜನ್ಮದಲ್ಲಿಯೂ ಸದಾಕಾಲ ನಮ್ಮೊಂದಿಗಿರುವ ಅತ್ಯಂತ ಮುಖ್ಯ ಬಂಧು ಎಂದರೆ ಶ್ರೀಹರಿಯೇ ಆಗಿರುವನು. ಅಂತಹವನನ್ನೇ ಸರ್ವವಿಧದ ರಕ್ಷಣೆಗಾಗಿ ನಾವು ಶರಣು ಹೊಂದಬೇಕು ಎಂಬುದು ಇಲ್ಲಿಯ ಮುಖ್ಯ ಸಂದೇಶ.

೧೬. ಮಹಾಭಾರತದ ಶಾಂತಿಪರ್ವದಲ್ಲಿ ಬರುವ ನರಿ–ಹದ್ದುಗಳ ಸಂವಾದರೂಪವಾದ ಉಪಾಖ್ಯಾನದಲ್ಲಿ ಈ ದೇಹದ ನಶ್ವರತೆಯು ವಿಶಿಷ್ಟರೀತಿಯಲ್ಲಿ ವರ್ಣಿತವಾಗಿದೆ.

*****

## ೮೭. ಆದರನುಕೂಲ ನಿನ್ನೊಳಗಿಹುದು ರಕ್ಷಿಸು

**ಕೀಲು ಬಲಿದಿಹುದೈದು ತಿರುಗುವ**
**ಗಾಲಿ ಎರಡರ ರಥದಿ ತ್ರೈಗುಣ-**
**ಶೀಲನೋರ್ವನು ಸಂಚರಿಸುತಿಹನಾ ರಥಾಗ್ರದಲಿ।**
**ಕೀಲು ಕಡೆಗೊಂದೂಡಿ ಬೀಳಲು**
**ಕಾಲಗತಿ ತಪ್ಪುವುದು ಆದರನು-**
**ಕೂಲ ನಿನ್ನೊಳಗಿಹುದು ರಕ್ಷಿಸು ನಮ್ಮನನವರತ ॥ ೮೭ ॥**

**ಅ: ದೇಹವೆಂಬ ರಥಕ್ಕೆ ಐದು ಬಗೆಯ ಬಲವಾದ ಕೀಲುಗಳಿರುವವು. ತಿರುಗುವ ಗಾಲಿಗಳು ಎರಡು. ಈ ರಥದಲ್ಲಿ ಮೂರುಗುಣದ ಶರೀರವನ್ನು ಹೊಂದಿರುವ ಜೀವನು ಸಂಚಾರ ಮಾಡುತ್ತಿರುವನು. ರಥದ ಮುಂಭಾಗದಲ್ಲಿ ಭಗವಂತನಿರುವನು. ಕಡೆಗೆ ಇದರ ಒಂದು ಕೀಲು ಕಳಚಿ ಬೀಳುತ್ತಿದ್ದಂತೆಯೇ ಕಾಲದ ಗತಿ ತಪ್ಪಿಹೋಗುವುದು. ಅದನ್ನು ಅನುಕೂಲ ಮಾಡಿಕೊಂಡು, ಸದುಪಯೋಗಪಡಿಸಿಕೊಳ್ಳುವಂತೆ ಮಾಡುವ ಸ್ವಾಮಿ ನೀನು; ಅಂತಹ ಶ್ರೀಹರಿ ನೀನು ನಮ್ಮನ್ನು ರಕ್ಷಿಸು.**

ವಿ.: ೧. ಮತ್ತೊಂದು ರೀತಿಯಲ್ಲಿ ಈ ದೇಹವನ್ನು ರಥ ಎಂದು ಕರೆಯುತ್ತಾ ಅದರ ಸದುಪಯೋಗವನ್ನು ಮಾಡಿಕೊಳ್ಳುವುದು ವಿವೇಕ ಎಂಬ ತತ್ತ್ವವನ್ನು ಇದರಲ್ಲಿ ತಿಳಿಸುತ್ತಿರುವರು.

೨. ರಥದ ಕೀಲುಗಳು ಎಂದರೆ, ಹಗಲಿನ ಒಟ್ಟು ಐದು ಭಾಗಗಳು. ಪ್ರಾತಃ, ಸಂಗವ, ಮಧ್ಯಾಹ್ನ, ಅಪರಾಹ್ಣ ಹಾಗೂ ಸಾಯಂಕಾಲ ಎಂಬ ಐದು ಕೀಲುಗಳು ಈ ಕಾಲಚಕ್ರಕ್ಕೆ

ಆರು ಸಮಯಕ್ಕೊದಗಲಿಲ್ಲ
ಮೋರೆ ನೋಡುತ ಸುಮ್ಮನಿರುತಿಹರೆಲ್ಲ ॥ ಪ ॥
ಮಗಳು ಮಹಾಲಕುಮಿ ಮೊಮ್ಮಗನು ಸರಸಿಜಭವನು
ಖಗರಾಜವಾಹನನು ತನ್ನಳಿಯನು
ಅಗಜನಂದು ತನ್ನೊಡಲೊಳಗಿಟ್ಟು ಮೂ-
ರ್ಬೊಗಸೆ ಮಾಡಿದ ಮುನಿಯ ಬಿಡಿಸಲಿಲ್ಲ ॥ ೧ ॥
ಶ್ರೀದೇವಿ ಭೂದೇವಿ ಮಾತೆಯರು ತಾವಿರಲು
ಯಾದವರಾಯ ಮೋಹದ ತಂದೆಯು
ವೇದಮುಖದಣ್ಣನಿರೆ ಉರಿನಯನದಿಂದ ಸ್ಮರನು
ಬೂದಿಯಾಗುವಾಗ ಲೆಕ್ಕಿಸಲಿಲ್ಲವೇಕೆ ॥ ೨ ॥
ಪಿತನು ಸಾಗರರಾಜ ಹಿತದಕ್ಕ ಶ್ರೀದೇವಿ
ಅತಿ ಬೀಗನಾದವ ನಾರಾಯಣ
ಜತೆ ಅಳಿಯರು ಬ್ರಹ್ಮ ಮನ್ಮಥರಿವರಿರಲು
ಕ್ಷಿತಿಯೊಳಗೆ ಶಶಿ ತಾನು ಹತವಾಹ ಸಮಯದಲಿ ॥ ೩ ॥
ತೆತ್ತೀಸ ಕೋಟಿ ದೇವರ್ಕಳು ತಾವಿರಲು
ಒತ್ತಿನಲಿ ಇಂದ್ರ ಉಪೇಂದ್ರರಿರಲು
ಮತ್ತೆ ಪಾರ್ವತಿ ಪುತ್ರ ಮಗ ವೀರೇಶ ದಕ್ಷನ
ನೆತ್ತಿ ಹರಿಗಡಿವಾಗ ನೋಡುತಿಹರೆಲ್ಲ ॥ ೪ ॥
ಇಂಥಿಂಥವರಿಗೆಲ್ಲ ಈ ಪಾಟವಿರಲಾಗಿ
ಭ್ರಾಂತ ಮನುಜರಿಗೆ ಪೇಳಲಿನ್ನೆಷ್ಟು
ಕಂತುಪಿತ ಕಾಗಿನೆಲೆಯಾದಿಕೇಶವರಾಯನ
ಸಂತೋಷದಲಿ ಪಾಡಿ ಸುಖಿಯಾಗೊ ಮನುಜ ॥ ೫ ॥

**

ಆರು ಹಿತವರು ಎಂದು ನಂಬಬೇಡ ॥ ಪ ॥
ಆರಿಗಾರಿಲ್ಲ ಆಪತ್ತು ಬಂದೊದಗಿದಡೆ ॥ ಅಪ ॥
ಜನಕ ಹಿತದವನೆಂದು ನಂಬಬಹುದೇ ಹಿಂದೆ
ತನಯ ಪ್ರಹ್ಲಾದನಿಗೆ ಪಿತ ಮುನಿದನು
ಜನನಿ ರಕ್ಷಿಸುವಳೆಂತೆಂಬೆನೆ ಆ ಕುಂತಿ-
ತನಯ ರಾಧೇಯನಿಗೆ ಎರಡನೆಣಿಸಿದ ಮೇಲೆ ॥ ೧ ॥
ಮಗನು ತೆತ್ತಿಗನೆನಲೆ ಕಂಸ ತನ್ನಯ ಪಿತನ
ನಿಗಳಬಂಧನದಿಂದ ಬಂಧಿಸಿದನು
ಜಗವರಿಯೆ ಸೋದರನು ಮಮತೆಯುಳ್ಳವನೆನಲೆ
ಹಗೆವೆರಸಿ ವಾಲಿಯನು ಅನುಜ ಕೊಲಿಸಿದ ಮೇಲೆ ॥ ೨ ॥
ತನಗೆ ದೇಹಾನುಬಂಧಿಗಳೆ ಬಂಧುಗಳೆಂದು
ಮನದಿ ನಿಚ್ಚಳವಾಗಿ ನಂಬಬೇಡ
ಘನ ಕೃಪಾನಿಧಿ ಕಾಗಿನೆಲೆಯಾದಿಕೇಶವನ
ಅನುದಿನದಿ ನಂಬಿದವಗಿಹಪರದ ಸುಖವು ॥ ೩ ॥

**ಮಂಚ ಬಾರದು ಮಡದಿ ಬಾರಳು ಕಂಚುಕನ್ನಡಿ ಬಾರವು।**
**ಸಂಚಿತಾರ್ಥವು ಕಿಂಚ ಬಾರದು ಮುಂಚೆ ಮಾಡಿರೋ ಧರ್ಮವ॥**

೧೫. ನಿಜಕ್ಕೂ ಸಹ ನಮ್ಮ ಅನಾದಿಕಾಲದ ಬಂಧುವಾಗಿ ಜನ್ಮಜನ್ಮದಲ್ಲಿಯೂ ಸದಾಕಾಲ ನಮ್ಮೊಂದಿಗಿರುವ ಅತ್ಯಂತ ಮುಖ್ಯ ಬಂಧು ಎಂದರೆ ಶ್ರೀಹರಿಯೇ ಆಗಿರುವನು. ಅಂತಹವನನ್ನೇ ಸರ್ವವಿಧದ ರಕ್ಷಣೆಗಾಗಿ ನಾವು ಶರಣು ಹೊಂದಬೇಕು ಎಂಬುದು ಇಲ್ಲಿಯ ಮುಖ್ಯ ಸಂದೇಶ.

೧೬. ಮಹಾಭಾರತದ ಶಾಂತಿಪರ್ವದಲ್ಲಿ ಬರುವ ನರಿ–ಹದ್ದುಗಳ ಸಂವಾದರೂಪವಾದ ಉಪಾಖ್ಯಾನದಲ್ಲಿ ಈ ದೇಹದ ನಶ್ವರತೆಯು ವಿಶಿಷ್ಟರೀತಿಯಲ್ಲಿ ವರ್ಣಿತವಾಗಿದೆ.

*****

## ೮೭. ಅದರನುಕೂಲ ನಿನ್ನೊಳಗಿಹುದು ರಕ್ಷಿಸು

**ಕೀಲು ಬಲಿದಿಹುದೈದು ತಿರುಗುವ**
**ಗಾಲಿ ಎರಡರ ರಥದಿ ತ್ರೈಗುಣ-**
**ಶೀಲನೋರ್ವನು ಸಂಚರಿಸುತಿಹನಾ ರಥಾಗ್ರದಲಿ।**
**ಕೀಲು ಕಡೆಗೊಂದೂಡಿ ಬೀಳಲು**
**ಕಾಲಗತಿ ತಪ್ಪುವುದು ಅದರನು-**
**ಕೂಲ ನಿನ್ನೊಳಗಿಹುದು ರಕ್ಷಿಸು ನಮ್ಮನನವರತ ॥ ೮೭ ॥**

**ಅ: ದೇಹವೆಂಬ ರಥಕ್ಕೆ ಐದು ಬಗೆಯ ಬಲವಾದ ಕೀಲುಗಳಿರುವವು. ತಿರುಗುವ ಗಾಲಿಗಳು ಎರಡು. ಈ ರಥದಲ್ಲಿ ಮೂರುಗುಣದ ಶರೀರವನ್ನು ಹೊಂದಿರುವ ಜೀವನು ಸಂಚಾರ ಮಾಡುತ್ತಿರುವನು. ರಥದ ಮುಂಭಾಗದಲ್ಲಿ ಭಗವಂತನಿರುವನು. ಕಡೆಗೆ ಇದರ ಒಂದು ಕೀಲು ಕಳಚಿ ಬೀಳುತ್ತಿದ್ದಂತೆಯೇ ಕಾಲದ ಗತಿ ತಪ್ಪಿಹೋಗುವುದು. ಅದನ್ನು ಅನುಕೂಲ ಮಾಡಿಕೊಂಡು, ಸದುಪಯೋಗಪಡಿಸಿಕೊಳ್ಳುವಂತೆ ಮಾಡುವ ಸ್ವಾಮಿ ನೀನು; ಅಂತಹ ಶ್ರೀಹರಿ ನೀನು ನಮ್ಮನ್ನು ರಕ್ಷಿಸು.**

ವಿ.: ೧. ಮತ್ತೊಂದು ರೀತಿಯಲ್ಲಿ ಈ ದೇಹವನ್ನು ರಥ ಎಂದು ಕರೆಯುತ್ತಾ ಅದರ ಸದುಪಯೋಗವನ್ನು ಮಾಡಿಕೊಳ್ಳುವುದು ವಿವೇಕ ಎಂಬ ತತ್ತ್ವವನ್ನು ಇದರಲ್ಲಿ ತಿಳಿಸುತ್ತಿರುವರು.

೨. ರಥದ ಕೀಲುಗಳು ಎಂದರೆ, ಹಗಲಿನ ಒಟ್ಟು ಐದು ಭಾಗಗಳು. ಪ್ರಾತಃ, ಸಂಗವ, ಮಧ್ಯಾಹ್ನ, ಅಪರಾಹ್ಣ ಹಾಗೂ ಸಾಯಂಕಾಲ ಎಂಬ ಐದು ಕೀಲುಗಳು ಈ ಕಾಲಚಕ್ರಕ್ಕೆ

ಇರುವವು ಎಂದರ್ಥ; ಐದು ಕೀಲುಗಳು ಎಂದರೆ ಐದು ಜ್ಞಾನೇಂದ್ರಿಯಗಳು ಎಂದು ಸಹ ತಿಳಿಯಬಹುದು.

೩. ಇದರ ಎರಡು ಗಾಲಿಗಳು ಎಂದರೆ ಹಗಲು–ರಾತ್ರಿಗಳು, ಶುಕ್ಲ-ಕೃಷ್ಣ ಪಕ್ಷಗಳು, ದಕ್ಷಿಣ–ಉತ್ತರಾಯಣಗಳು ಎಂದು ತಿಳಿಯಬೇಕು. ಕಾಲಚಕ್ರವು ಕ್ರಮವಾಗಿ ಮುಂದೆ ಹೋಗುವುದು ಈ ಗಾಲಿಗಳ ಮೂಲಕ, ಎಂಬುದನ್ನು ಇಂತಹ ರೂಪಕದಿಂದ ತಿಳಿಸಿರುವರು[೧].

೪. ಇದರಲ್ಲಿ ತ್ರೈಗುಣ್ಯಶೀಲನಾದವನು ಎಂದರೆ, ಸತ್ತ್ವ, ರಜಸ್ಸು ತಮೋಗುಣಗಳೆಂಬ ಮೂರು ಪ್ರಕೃತಿಯ ಗುಣಗಳಿಂದ ಬದ್ಧನಾದ ಜೀವನು ಈ ಕಾಲಚಕ್ರದಲ್ಲಿ ಇರುವನು ಎಂದರ್ಥ. ಇದರ ಮೂಲಕವಾಗಿ ಜೀವ ತನ್ನ ಸಾಧನೆಯನ್ನು ಮಾಡಿಕೊಳ್ಳುತ್ತಿರುವನು.

೫. ತ್ರೈಗುಣ್ಯಶೀಲ ಎಂಬುದಕ್ಕೆ ಮೂರು ಗುಣಗಳಿಂದ ಕೂಡಿದ ಪ್ರಕೃತಿಯನ್ನು ನಿಯಂತ್ರಿಸುವ ಭಗವಂತ ಎಂಬ ಅರ್ಥವೂ ವಿವಕ್ಷಿತ. ಜೀವನೊಂದಿಗೆ ದೇವನು ಸಹ ನೆಲೆಸಿದ್ದು ಕಾಲಚಕ್ರದ ಮೂಲಕ ಅವನನ್ನು ಸಾಧನೆಯ ಪಥದಲ್ಲಿ ಮಾರ್ಗದರ್ಶಕನಾಗಿ ಮುನ್ನಡೆಸುತ್ತಿರುವನು ಎಂದರ್ಥ; ಅರ್ಜುನನಿಗೆ ಸಾರಥಿಯಾಗಿ ರಥ ನಡೆಸಿದ್ದು ಇದಕ್ಕೆ ಸಂಕೇತದಂತಿದೆ.

೬. ಇದರಲ್ಲಿ ಒಂದು ಕೀಲು ತಪ್ಪುವುದು ಎಂದರೆ, ಹಗಲು ಅಥವಾ ರಾತ್ರಿಯಲ್ಲಿ ಜೀವನು ದೇಹಬಿಟ್ಟು ತೆರಳುವುದು ಖಚಿತ. ಅಲ್ಲಿಗೆ ಕಾಲಗತಿಯ ಒಂದು ಗಾಲಿ ಬಿದ್ದುಹೋದಂತೆ. ಅಲ್ಲಿಗೆ ಆದರ ಗತಿ ಮುಗಿವುದು. ಎಂದರೆ, ಜೀವನ ಆಯುಷ್ಯ ಮುಗಿಯುವುದು ಎಂದರ್ಥ.

೭. ಹೀಗೆ ಆಯುಷ್ಯ ಮುಗಿಯುವ ಮುನ್ನ ಈ ಕಾಲದ ಸದುಪಯೋಗವನ್ನು ಮಾಡಿಕೊಳ್ಳುವ ವಿವೇಕವನ್ನು ಸುಜೀವಿಗಳು ತೋರಬೇಕು. ಇದಕ್ಕೆಲ್ಲ ಮುಖ್ಯವಾಗಿ ಶ್ರೀಹರಿಯ ಅನುಗ್ರಹ ಸದಾ ಅಪೇಕ್ಷಿತ ಎಂಬುದು ಇದರ ಒಟ್ಟು ಭಾವ.

*****

## ೮೮. ಮುತ್ತಿಗೆಯನಿದ ಪರಿಹರಿಸಿ ರಕ್ಷಿಸು

[೨]ಬಿಗಿದರಕುತದ ರೋಮಕೂಪದ
ತೊಗಲಕೋಟೆಯ ನಂಬಿ ರೋಗಾ-
ದಿಗಳ ಮುತ್ತಿಗೆ ಬಲಿದು ಜೀವನ ಪಿಡಿಯಲನುವಾಯ್ತು ।

---

೧. ಮಹಾಭಾರತದ ಆದಿಪರ್ವದಲ್ಲಿ ಉದಂಕರ ಕಥೆಯಲ್ಲಿ ಈ ದೇಹವು ರಥ ಎಂಬುದರ ವಿವರಣೆ ಬರುವುದು. ಕಠೋಪನಿಷತ್ತಿನಲ್ಲಿ ಈ ದೇಹ ರಥದ ಪರಿಕಲ್ಪನೆ ಇದೆ.

೨. ಉಗುವರಕುತದ (ಪಾ.)

ವಿಗಡಯಮನಾಳುಗಳು ಬರುತಿರೆ
ತೆಗೆಸು ಕಾಲನ ಬಲವ ಬಲು ಮು-
ತ್ತಿಗೆಯನಿದ ಪರಿಹರಿಸಿ ರಕ್ಷಿಸು ನಮ್ಮನನವರತ ॥ ೮೮ ॥

**ಅ: ಈ ದೇಹದಲ್ಲಿ ರಕ್ತವು ತುಂಬಿದೆ. ರೋಮಕೂಪಗಳನ್ನೊಳಗೊಂಡ ಚರ್ಮದ ಕೋಟೆ ಇದಕ್ಕಿದೆ. ಇದನ್ನು ನಂಬಿ ಸ್ಥಿರವೆಂದು ಭಾವಿಸಿ ಬದುಕುವುದು ಒಳಿತಲ್ಲ. ರೋಗಾದಿಗಳು ಇದನ್ನು ಮುತ್ತುವವು; ಅದರಲ್ಲಿ ನೆಲೆಗೊಂಡು ಜೀವನನ್ನು ಹಿಡಿದು ಹಿಂಡುವವು. ಕ್ರೂರಿಗಳಾದ ಯಮದೂತರು ಬರುವಾಗ ಕಾಲದ ಬಲದಿಂದಾಗಿ ಒದಗುವ ಮುತ್ತಿಗೆಯನ್ನು ನೀನು ಪರಿಹರಿಸು; ಒಟ್ಟಾಗಿ ಈ ದೇಹದ ಬಂಧನವನ್ನು ನೀನು ಬಿಡಿಸಿ ಉದ್ಧಾರ ಮಾಡು. ಎಲೇ! ಶ್ರೀಹರಿಯೇ ನೀನು ಸದಾ ನಮ್ಮನ್ನು ರಕ್ಷಣೆ ಮಾಡು.**

ವಿ.: ೧. ಮಾನವ ಶರೀರದ ಇತಿಮಿತಿಗಳನ್ನು ಈ ಪದ್ಯದಲ್ಲಿ ಮತ್ತೊಂದು ಬಗೆಯಲ್ಲಿ ವರ್ಣಿಸಲಾಗಿದೆ.

೨. ರಕ್ತ ತುಂಬಿರುವ ಈ ದೇಹ ರೋಮಕೂಪಗಳನ್ನೊಳಗೊಂಡ ಚರ್ಮದ ಹೊದಿಕೆಯನ್ನು ಹೊಂದಿದೆ. ಇದು ನಶ್ವರ ಎಂಬುದನ್ನು ಅರ್ಥಮಾಡಿಕೊಳ್ಳದೆ ಶಾಶ್ವತ ಎಂದು ಭ್ರಮಿಸಿ ಬದುಕುವುದು ಅವಿವೇಕ. ಇದನ್ನು ನಾಶಪಡಿಸಲು ಸದಾ ರೋಗಾದಿಗಳು ಮುತ್ತಲು ಕಾಯುತ್ತಿರುವವು. ಕೊನೆಗೆ ಇದನ್ನು ನಾಶಪಡಿಸುವ ಯಮನ ದೂತರಂತೂ ಅತ್ಯಂತ ಭಯಂಕರರು. ಅವರ ಮುತ್ತಿಗೆಯನ್ನು ತಡೆದುಕೊಳ್ಳುವುದು ಅಸಾಧ್ಯ. ಅದನ್ನು ಬಿಡಿಸಿ ರಕ್ಷಿಸಲು ಸಮರ್ಥನಾದವನು ಶ್ರೀಹರಿ ಒಬ್ಬನೇ ಎಂಬುದು ಭಾವ.

೩. ಈ ದೇಹದಲ್ಲಿ ರಕ್ತವು ತುಂಬಿದೆ. ಇದಕ್ಕೆ ಚರ್ಮದ ಹೊದಿಕೆ ಇದೆ. ಆ ಹೊದಿಕೆಗೆ ಕೋಟಿ ಸಂಖ್ಯೆಯ ರೋಮಕೂಪಗಳಿರುವವು. ಆದರೆ, ಇದು ಶಾಶ್ವತವಲ್ಲದ ಅತ್ಯಂತ ನಶ್ವರವಾದ ದೇಹ ಎಂದರ್ಥ.

೪. ಸದಾ ರೋಗದ ಬೀಡಾಗಿರುವ ಈ ದೇಹವನ್ನು ಅತ್ಯಂತ ನಿಷ್ಠುರಿಗಳಾದ ಯಮದೂತರು ನಾಶಪಡಿಸಲು ಕಾದಿರುವರು. ಅವರು ಬರುವಾಗ ಇದರ ಬಂಧನವನ್ನು ಬಿಡಿಸಿ ರಕ್ಷಿಸಲು ಬೇರೆ ಯಾರಿಗೂ ಸಾಧ್ಯವಿಲ್ಲ. ಅಜಾಮಿಳನ ಕಥೆಯಲ್ಲಿ ಯಮದೂತರ ಆಕ್ರಮಣದಿಂದ ವಿಷ್ಣುದೂತರು ಅವನನ್ನು ಪಾರುಮಾಡಿದ ಪ್ರಸಂಗ ಇದಕ್ಕೆ ನಿದರ್ಶನವಾಗಿದೆ; **ವಿಗಡ** – ಕ್ರೂರ, ಉಗ್ರ.

೫. ಸರ್ವತಂತ್ರ ಸ್ವತಂತ್ರನಾದ ಶ್ರೀಹರಿ ಒಬ್ಬನೇ ಇಂತಹ ನಶ್ವರವಾದ, ರೋಗದ ಬೀಡಾದ, ಯಮದೂತರ ವಶಕ್ಕೆ ಒಳಗಾಗುವಂತಹ ಈ ದೇಹದ ಬಂಧನವನ್ನು ಪರಿಹರಿಸಲು

ಸಮರ್ಥನಾದವನು. ಆದುದರಿಂದ ವಿವೇಕಿಗಳೆಲ್ಲರು ಅವನಿಗೆ ಶರಣಾಗಿ ಬದುಕಬೇಕು ಎಂಬುದು ಇದರ ಭಾವ.

*****

## ೮೯. ಬರಿ ದೂರು ಜೀವನಿಗುಂಟೆ ರಕ್ಷಿಸು

ವಾರಣಗಳೆಂಟೆಸೆವ ನಗರಕೆ
ದ್ವಾರ ಒಂಭತ್ತದಕೆ ಬಲು ಮೊನೆ-
ಗಾರರಾದಾಳುಗಳ ಕಾವಲುಗಾರರನು ಮಾಡಿ ।
ಆರರಿಯದಂತದರೊಳಗೆ ಹೃದ-
ಯಾರವಿಂದದಿ ನೀನಿರಲು ಬರಿ
ದೂರು ಜೀವನಿಗುಂಟೆ ರಕ್ಷಿಸು ನಮ್ಮನನವರತ ॥ ೮೯ ॥

**ಅ: ಎಂಟು ಆನೆಗಳು ಹೊತ್ತಿರುವಂತಹ ಈ ದೇಹವೆಂಬ ನಗರಕ್ಕೆ ಒಂಭತ್ತು ದ್ವಾರಗಳು. ಅದಕ್ಕೆ ಕಾವಲುಗಾರರಾಗಿ ಒಂಭತ್ತು ಜನ ಯೋಧರನ್ನು ನೀನು ಇರಿಸಿರುವಿ. ಅದರಲ್ಲಿ ಯಾರಿಗೂ ತಿಳಿಯದಂತೆ ಹೃದಯಕಮಲದಲ್ಲಿ ನೆಲೆಸಿರುವಿ. ಹಾಗೆ ನೆಲೆಸಿದ್ದು ನೀನು ಸಕಲ ಕಾರ್ಯಗಳನ್ನು ಸಹ ಮಾಡಿ ಮಾಡಿಸುವಿ. ಎಂದ ಮೇಲೆ ಜೀವನು ಮಾಡಿದ ಎಂದು ದೂರುವುದು ಸಾಧ್ಯವೇ? ಇಂತಹ ಶ್ರೀಹರಿಯೇ! ನೀನು ನಮ್ಮನ್ನು ಸದಾ ರಕ್ಷಿಸು.**

ವಿ.: ೧. ದೇಹವು ಒಂಭತ್ತು ದ್ವಾರಗಳ ಒಂದು ಪಟ್ಟಣ ಎಂಬ ವಿವರಣೆಯನ್ನು ಇದರಲ್ಲಿ ಮುಂದುವರೆಸಲಾಗಿದೆ. ಕಣ್ಣುಗಳು(೨), ಕಿವಿಗಳು(೨), ಮೂಗು(೨), ಬಾಯಿ(೧), ಪಾಯು(೧) ಹಾಗೂ ಉಪಸ್ಥ(೧) ಇವು ನವದ್ವಾರಗಳು

೨. ಈ ದೇಹವೆಂಬ ನಗರಕ್ಕೆ ಎಂಟು ದಿಕ್ಕುಗಳು ಆನೆಗಳಂತೆ ಇವೆ.ಸಾಮಾನ್ಯವಾಗಿ ದಿಗ್ಗಜ ಎಂದು ಕರೆಯುವುದು ರೂಢಿ. ಆ ಹಿನ್ನೆಲೆಯಲ್ಲಿ ಇಲ್ಲಿ ಎಂಟು ಎಂಬುದು ದಿಕ್ಕಿನ ಸಂಕೇತವಾಗಿದ್ದು ಅವು ಆನೆಯಂತಿವೆ ಎನ್ನಲಾಗಿದೆ.

೩. ಒಂಭತ್ತು ದ್ವಾರಗಳಿಗೆ ಅತ್ಯಂತ ನಿಪುಣರಾದಂತಹ ದೇವತೆಗಳನ್ನು ಶ್ರೀಹರಿಯು ಕಾವಲುಗಾರರನ್ನಾಗಿ ಎಂದರೆ, ಅಭಿಮಾನಿದೇವತೆಗಳನ್ನಾಗಿ ನೇಮಿಸಿರುವನು. ಕಿವಿಗಳಿಗೆ ದಿಗ್ದೇವತೆಗಳು, ಕಣ್ಣುಗಳಿಗೆ ಸೂರ್ಯಚಂದ್ರರು, ಮೂಗುಗಳಿಗೆ ಅಶ್ವಿನೀದೇವತೆಗಳು ಬಾಯಿಗೆ ಅಗ್ನಿ ಪಾಯುವಿಗೆ ಮಿತ್ರನಾಮಕ ಸೂರ್ಯ ಹಾಗೂ ಉಪಸ್ಥಕ್ಕೆ ಸ್ವಾಯಂಭುವ ಮನು ಹೀಗೆ ನವದ್ವಾರಗಳಿಗೂ ಸಮರ್ಥರಾದಂತಹ ಅಭಿಮಾನಿದೇವತೆಗಳನ್ನು ರಕ್ಷಕರನ್ನಾಗಿ ಶ್ರೀಹರಿಯು ನೇಮಿಸಿರುವನು ಎಂದರ್ಥ; **ಮೊನೆಗಾರ** – ಯೋಧ.

೪. ಹೀಗೆ ಪುರವೆನ್ನಿಸಿರುವ ದೇಹಕ್ಕೆ ವ್ಯವಸ್ಥೆಯನ್ನು ಮಾಡಿದ ಪರಮಾತ್ಮ ಅದರ ಹೃದಯದಲ್ಲಿ ಎಂದರೆ, ಅರಮನೆಯಂತಹ ಹೃದಯಕಮಲದಲ್ಲಿ ಸ್ವತಃ ತಾನೇ ನೆಲೆಸಿರುವನು. ಪುರ ಎಂಬುದಕ್ಕೆ ರಾಜಧಾನಿ ಎಂದರ್ಥ: **ರಾಜರಾಜಾಶ್ರಯಂ ಪುರಂ** (ಭಾ.ತಾ). ಪುರದ ಅರಮನೆಯ ಸ್ಥಾನ ಹೃದಯದ್ದು ಎಂದು ಇಲ್ಲಿ ತಿಳಿಯಬೇಕು. ಭಗವಂತನು ಬಿಂಬರೂಪಿಯಾಗಿ ಹೃದಯದಲ್ಲಿ ನೆಲೆಸಿರುವನು ಎಂಬುದು ಶಾಸ್ತ್ರ ಸಾರಿರುವ ಬಹು-ಮುಖ್ಯ ಪ್ರಮೇಯಗಳಲ್ಲಿ ಒಂದು. ಅದರಂತೆ ಹೃದಯವನ್ನು ಕಮಲ ಎಂದು ಕರೆಯುವುದು ಸಹ ಶಾಸ್ತ್ರದ ರೀತಿಯೇ ಆಗಿದೆ.

೫. ಹೃದಯಕಮಲಕ್ಕೂ ಸಹ ಎಂಟು ದಳಗಳಿದ್ದು ಆ ದಳಗಳಲ್ಲಿ ಕ್ರಮವಾಗಿ ಇಂದ್ರ, ಅಗ್ನಿ, ಯಮ, ನಿರ್ಋತಿ, ವರುಣ, ವಾಯು, ಚಂದ್ರ (ಕುಬೇರ) ಹಾಗೂ ರುದ್ರದೇವರು ಅಭಿಮಾನಿದೇವತೆಗಳಾಗಿ ನೆಲೆಸಿರುವರು. ಶ್ರೀಹರಿಯು ಆಯಾ ದಳಗಳಲ್ಲಿ ಸಂಚರಿಸುತ್ತಾ ಜೀವನಿಗೆ ಅದಕ್ಕೆ ಸಂಬಂಧಿಸಿದ ಕಾರ್ಯಗಳನ್ನು ಮಾಡಿಸುವನು ಎಂಬ ಶಾಸ್ತ್ರಪ್ರಮೇಯವನ್ನು ಶ್ರೀಹರಿಕಥಾಮೃತಸಾರದಲ್ಲಿ ಸಂಗ್ರಹಿಸಿ ಕೊಟ್ಟಿರುವರು:

**ಸುರಪನಾಲಯಕೈದಿದರೆ ಮನವೆರಗುವುದು ಸತ್ಪುಣ್ಯಮಾರ್ಗದಿ**
**ಬರಲು ವಹ್ನಿಯ ಮನೆಗೆ ನಿದ್ರಾಲಸ್ಯಹಸಿ ತೃಷೆಯು ।**
**ತರಣಿತನಯ ನಿಕೇತನದಿ ಸಂಭರಿತ ಕೋಪಾಟೋಪ ತೋರುವು-**
**ದರವಿದೂರನು ನಿಋತಿಯಲಿ ಬರೆ ಪಾಪಗಳ ಮಾಳ್ಪ॥** (೯/೨೨)

೬. ದೇಹವೇ ಪಟ್ಟಣ, ಅದಕ್ಕೆ ಒಂಭತ್ತು ದ್ವಾರಗಳು, ಅದಕ್ಕೆ ನಿಯಾಮಕರು ದೇವತೆಗಳು, ಜೀವನು ಅದರ ನಿವಾಸಿ, ಹೃದಯವೇ ಅದರ ಅರಮನೆ, ಆ ಹೃದಯಕಮಲದಲ್ಲಿ ಭಗವಂತನ ವಾಸ. ಹೀಗೆ ದೇಹವು ಜಡ, ಅದರಂತೆ ನಮ್ಮ ದ್ವಾರಗಳೂ ಸಹ. ನಿಯಾಮಕರಾದವರು ದೇವತೆಗಳು, ಅವರು ಅಸ್ವತಂತ್ರರು. ಜೀವನಂತೂ ಅವರೆಲ್ಲರಿಗೂ ಅಧೀನನಾಗಿರುವ ಅತ್ಯಂತ ಅಸ್ವತಂತ್ರ. ಹೃದಯಕಮಲದಲ್ಲಿ ನೆಲೆಸಿರುವ ಶ್ರೀಹರಿಯು ಮಾತ್ರವೇ ಸರ್ವತಂತ್ರಸ್ವತಂತ್ರ ಸ್ವಾಮಿ ಎಂಬುದು ಇಲ್ಲಿಯ ಒಟ್ಟು ಭಾವ.

೭. ಒಂದು ರಾಜ್ಯದ ಸಂಪೂರ್ಣವಾದಂತಹ ನಿಯಾಮಕತ್ವ ಸಾಮ್ರಾಟನದು. ಅದರಂತೆ ದೇಹವೆಂಬ ಪಟ್ಟಣದ ಸಂಪೂರ್ಣ ನಿಯಾಮಕನಾದವನು ಸಾಕ್ಷಾತ್ ಶ್ರೀಹರಿ. ದೇವತೆಗಳು ಏನೇ ಮಾಡಿಸಿದರೂ ಅದು ಶ್ರೀಹರಿಯ ಆದೇಶದಂತೆ ಮಾತ್ರ. ಆದ್ದರಿಂದ ಅವರಿಗೆ ಯಾವುದೇ ಪಾಪ ತಗಲುವ ಭೀತಿ ಸರ್ವಥಾ ಇಲ್ಲ. ಜೀವನಿಂದ ಪಾಪಕಾರ್ಯಗಳೇನಾದರೂ ನಡೆದರೆ ಅದರ ಮುಖ್ಯ ಹೊಣೆಗಾರಿಕೆ ಶ್ರೀಹರಿಯದೇ ಆಗಿದೆ. ಆದ್ದರಿಂದ ಅಸ್ವತಂತ್ರನಾದ ಜೀವನನ್ನು ಅದಕ್ಕೆ ಹೊಣೆಗಾರನನ್ನಾಗಿಸುವುದು ಸರಿಯಲ್ಲ ಎಂಬುದು ಇದರ ಮೇಲ್ನೋಟದ ಅರ್ಥ.

೮. ದೇಹದಲ್ಲಿ ನೆಲೆಸಿರುವ ಜೀವನು ತನ್ನ ಸ್ವರೂಪ, ಅನಾದಿ ಕರ್ಮ ಹಾಗೂ ಪ್ರಯತ್ನಗಳಿಗನುಗುಣವಾಗಿ ವರ್ತಿಸುವಂತೆ ಶ್ರೀಹರಿಯು ತತ್ತ್ವಾಭಿಮಾನಿ ದೇವತೆಗಳ

ಮೂಲಕವಾಗಿ ತಾನೇ ಸ್ವಾಮಿಯಾಗಿ ಮಾಡಿಸುವನು. ಅವನು ಸರ್ವತಂತ್ರಸ್ವತಂತ್ರ ಎಂಬುದು ಇದರ ಮುಖ್ಯ ಭಾವ.

೯. ಜೀವನನ್ನು ದೂರುವುದು ತರವಲ್ಲ ಎಂದರೆ, ಜೀವನಿಂದ ಪಾಪಕರ್ಮಗಳು ನಡೆದಾಗ ಅದಕ್ಕೆ ಅಭಿಮಾನಿಗಳಾದ ದೈತ್ಯರ ಪಾಲು ಹೆಚ್ಚಾಗಿಯೇ ಇರುವುದು. ಆದ್ದರಿಂದ ಅದಕ್ಕೆ ಜೀವನನ್ನು ಮಾತ್ರವೇ ಹೊಣೆಗಾರನನ್ನಾಗಿ ಮಾಡಿಸುವುದು ಉಚಿತವಲ್ಲ ಎಂದರ್ಥ.

೧೦. ಇದರಲ್ಲಿ ಜೀವನಿಗೆ ಪಾಪಕರ್ಮಗಳ ಲೇಪ ಇಲ್ಲ ಎಂಬ ವಾದವೇನಿಲ್ಲ. ಜೀವ-ನೊಬ್ಬನೇ ಅದಕ್ಕೆ ಭಾಗಿಯಲ್ಲ ಎಂಬುದಷ್ಟೇ ತಾತ್ಪರ್ಯ.

೧೧. ಶ್ರೀಹರಿಯು ಸರ್ವತಂತ್ರಸ್ವತಂತ್ರನಾದ್ದರಿಂದ ಅವನಿಗೆ ಪುಣ್ಯ-ಪಾಪಗಳ ಲೇಪಗಳ ಪ್ರಸಕ್ತಿಯೇ ಇಲ್ಲ. ಇನ್ನು ತತ್ತ್ವಾಭಿಮಾನಿ ದೇವತೆಗಳು ಶ್ರೀಹರಿಯ ಆದೇಶದಂತೆ ಪ್ರೇರಿಸುವುದರಿಂದ ಅವರಿಗೆ ಪಾಪದ ಪ್ರಸಕ್ತಿ ಇಲ್ಲ. ಆ ಪ್ರಸಕ್ತಿ ಏನಿದ್ದರೂ ಸಹ ಅದಕ್ಕೆ ಕಾರಣರಾದ ದೈತ್ಯರದು ಮಾತ್ರ. ಜೀವನು ಅಸ್ವತಂತ್ರನಾದರೂ ಅವನಿಂದಾಗುವ ಕರ್ಮಗಳ ಬಗ್ಗೆ ಸ್ವತಂತ್ರನಾದ ಶ್ರೀಹರಿಯು ಮೇಲೆ ಹೇಳಿದಂತೆ ಜೀವನ ಸ್ವರೂಪ ಮೊದಲಾದವುಗಳನ್ನು ನಿಮಿತ್ತ ಮಾಡಿಕೊಂಡು ನೀಡುವನು. ಆದ್ದರಿಂದ ಪ್ರತಿಯೊಂದಕ್ಕೂ ಜೀವನನ್ನು ಮಾತ್ರ ಕರ್ತೃ ಎಂದು ತಿಳಿಯುವುದು ಸರಿಯಲ್ಲ ಎಂಬುದು ಇದರ ಮುಖ್ಯ ಭಾವ.

*****

## ೯೦. ಕೋಟೆ ಅವರಿಗೆ ಕೋಳು ಹೋಗದ ಮುನ್ನ ರಕ್ಷಿಸು

ಪೇಳಲೆನ್ನಳವಲ್ಲವೀ ಯಮ-
ನಾಳುಗಳು ನೆರೆಯಂಗದೇಶವ
ದಾಳಿಮಾಡುವರಕಟಕಟ ಸೆರೆಸೂರೆಗಳ ಪಿಡಿದು ।
ಕಾಳು ಮಾಡುವರಿನ್ನು ತನುವಿದು
ಬಾಳಲರಿಯದು ಕೋಟೆ ಅವರಿಗೆ
ಕೋಳು ಹೋಗದ ಮುನ್ನ ರಕ್ಷಿಸು ನಮ್ಮನನವರತ ॥ ೯೦ ॥

ಅ: ಹೇಳುವುದು ನನ್ನಿಂದ ಸಾಧ್ಯವೇ ಇಲ್ಲ. ಈ ಯಮನ ದೂತರು ನಮಗೆ ಹತ್ತಿರವಿರುವ ಅಂಗರೂಪದ ಈ ದೇಹವನ್ನು ಆಕ್ರಮಿಸುವರು. ಅಯ್ಯೋ! ಕೊನೆಗೆ ಜೀವನನ್ನು ಸೆರೆಹಿಡಿಯುವರು. ಅವನ ವಸ್ತುಗಳನ್ನು ಅವನಿಂದ ದೂರ ಮಾಡುವರು. ಮತ್ತು ಜೀವನನ್ನು ಹಿಡಿದು ಅವನಿಗೆ ಅವನ ಪಾಪ-ಕರ್ಮಗಳಿಗನುಗುಣವಾಗಿ ಬಗೆಬಗೆಯ ಹಿಂಸೆಗಳನ್ನು ನೀಡಿ ನೋಯಿಸುವರು. ಈ ದೇಹ ನಿಜಕ್ಕೂ ಶಾಶ್ವತವಾಗಿರಲು

**ಸಾಧ್ಯವೇ ಇಲ್ಲ. ಇಂತಹ ದೇಹವು ಅಂತಹ ಯಮದೂತರ ವಶವಾಗುವ ಮುನ್ನ ಎಲೇ! ಶ್ರೀಹರಿಯೇ ನೀನು ನಮ್ಮನ್ನು ರಕ್ಷಿಸು.**

ವಿ.: ೧. ಈ ದೇಹವು ಇರುವಾಗಲೇ ಸಾಧನೆ ಮಾಡಿಕೊಳ್ಳುವುದು ವಿವೇಕ ಎಂಬುದನ್ನು ಇಲ್ಲಿ ವಿವರಿಸಲಾಗಿದೆ.

೨. ಶತ್ರುಗಳು ಒಂದು ಪಟ್ಟಣವನ್ನು ಆಕ್ರಮಿಸಿ ಅದರಲ್ಲಿನ ಜನರನ್ನು ಸೆರೆಹಿಡಿದು ಬಗೆಬಗೆಯ ಹಿಂಸೆಗಳನ್ನು ನೀಡಿ ನೋಯಿಸುವಂತೆ ಯಮದೂತರಿಂದ ಶಿಕ್ಷೆ ಲಭಿಸುವುದು ಎಂದರ್ಥ. ಅಂಗದೇಶ ಎಂದರೆ ಅಂಗಾಂಗರೂಪಗಳ ಈ ದೇಹ ಎಂದರ್ಥ. ಅಂಗದೇಶದ ದೊರೆಯಾಗಿದ್ದ ಕರ್ಣನನ್ನು ಜರಾಸಂಧ ಗೆದ್ದು ತನ್ನ ಅಧೀನನ್ನಾಗಿ ಮಾಡಿಕೊಂಡಿದ್ದ ವಿವರ ಇದಕ್ಕೆ ನಿದರ್ಶನದಂತಿದೆ. ಅಂಗದೇಶ ಎಂದರೆ ದೇಹ, ಜರಾಸಂಧ ಎಂದರೆ ತಪ್ಪು ತಿಳುವಳಿಕೆಯ ರೂಪದ ಮುಪ್ಪು; ಕರ್ಣ ಎಂದರೆ ಜೀವನಿಗೆ ಅಗತ್ಯವಾದ ಶ್ರವಣಾದಿಗಳ ಕಾರ್ಯ ಎಂದು ತಿಳಿದಲ್ಲಿ ಆ ಕಥೆಯ ಸ್ವಾರಸ್ಯ ಅರ್ಥವಾಗುವುದು.

೩. ಅನಿತ್ಯವಾದ ದೇಹವನ್ನು ತಮ್ಮ ವಶಕ್ಕೆ ತೆಗೆದುಕೊಳ್ಳಲು ಯಮದೂತರು ಕಾಯುತ್ತಿರುತ್ತಾರೆ. ದಿನಕಳೆಯುತ್ತಾ ಹೋದಂತೆ ರೋಗರುಜಿನಗಳ ರೂಪದಲ್ಲಿ ಆಕ್ರಮಿಸಲು ಕಾಯುತ್ತಿರುವರು. ಕೊನೆಗೂ ಅವರು ದೇಹವನ್ನು ತಮ್ಮ ವಶಕ್ಕೆ ಪಡೆಯುವುದು ನಿಶ್ಚಯ. ಅದರೊಂದಿಗೆ ಅವನು ಮಾಡಿದಂತಹ ಪಾಪ-ಕರ್ಮಗಳಿಗನುಗುಣವಾಗಿ ಬಗೆಬಗೆಯ ಹಿಂಸೆಗಳನ್ನು ನೀಡಿ ಅವನನ್ನು ಶಿಕ್ಷಿಸುವರು.

೪. ಇಂತಹ ಸಮಯದಲ್ಲಿ ಅಂತಹ ಜೀವನನ್ನು ರಕ್ಷಿಸಲು ಸ್ವತಂತ್ರನಾದ ಶ್ರೀಹರಿಗೆ ಮಾತ್ರವೇ ಸಾಧ್ಯ. ಅವನು ಆ ಕಾರ್ಯವನ್ನು ಬೇಗನೆ ಮಾಡಿ ಅನುಗ್ರಹಿಸಬೇಕು ಎಂಬುದು ಇದರ ಭಾವ.

೫. ಶತ್ರುಗಳು ಆಕ್ರಮಿಸಿ ಕೋಟೆಯನ್ನು ತಮ್ಮ ವಶಕ್ಕೆ ತೆಗೆದುಕೊಳ್ಳುವ ಮುನ್ನ ಅದರ ಬಾಗಿಲುಗಳನ್ನು ಭದ್ರಪಡಿಸಿ ಅವರಿಂದ ಪಟ್ಟಣವನ್ನು ರಕ್ಷಿಸಿಕೊಳ್ಳುವುದು ವಿವೇಕಿಯಾದ ರಾಜನ ಕರ್ತವ್ಯ[೧]. ಅದರಂತೆ, ರೋಗರುಜಿನಗಳು ಒದಗಿ ಮುಂದೆ ಮೃತ್ಯು ಆಕ್ರಮಿಸುವ ಮುನ್ನವೇ ಜೀವನು, ಈ ದೇಹವನ್ನು ಸಾರ್ಥಕ ಮಾಡಿಕೊಳ್ಳಬೇಕು. '**ಕಣ್ಣು ಕೈ-ಕಾಲು, ಕಿವಿ ನಾಲಿಗೆ ಇರಲಿಕ್ಕೆ ಮಣ್ಣುಮುಕ್ಕಿ ಮರಳಾಗುವರೇ**' ಎಂಬ ಶ್ರೀ ಪುರಂದರದಾಸರ ಮಾತನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. '**ಅಂತಕನ ದೂತರಿಗೆ ಕಿಂಚಿತ್ತು ದಯವಿಲ್ಲ**' ಎಂಬ ಶ್ರೀಪುರಂದರದಾಸರ ಮಾತಿನಲ್ಲಿ ಯಮನಾಳುಗಳು ಅದೆಷ್ಟು ನಿಷ್ಠುರರು ಎಂಬ ವಿವರ ಬಂದಿದೆ.

---

೧. ಶಕ್ನೋತೀಹೈವ ಯಃ ಸೋಢುಂ ಪ್ರಾಕ್ ಶರೀರವಿಮೋಕ್ಷಣಾತ್ ।
ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ ॥ – (ಗೀತಾ ೫/೨೩)
ನರಜನ್ಮ ಬಂದಾಗ ನಾಲಿಗೆ ಇರುವಾಗ ಕೃಷ್ಣಾ ಎನಬಾರದೆ। – ಶ್ರೀಪುರಂದರದಾಸರು

೬. ಇಲ್ಲಿ **ಕೋಟೆ** ಎಂಬುದಕ್ಕೆ ದೇಹ ಎಂಬ ಅರ್ಥದಂತೆ ಇತರ ಜ್ಞಾನೇಂದ್ರಿಯಗಳು ಹಾಗೂ ಕರ್ಮೇಂದ್ರಿಯಗಳು ಮೊದಲಾದಿ ಎಲ್ಲವೀ ವಿವಕ್ಷಿತ. ಮೃತ್ಯು ಬರುವ ಮುನ್ನ ದೇಹವನ್ನು ಸಾರ್ಥಕ ಮಾಡಿಕೊಳ್ಳುವಂತೆ, ಇಂದ್ರಿಯಗಳು ಇರುವಾಗಲೇ ಅವುಗಳಿಂದ ನಿರೀಕ್ಷಿತವಾದ ಪ್ರಯೋಜನವನ್ನು ಪಡೆಯಬೇಕು ಎಂದರ್ಥ; **ಕೋಳು ಹೋಗು** - ವಶವಾಗು, ಸೂರೆಹೋಗು, ನಾಶವಾಗು.

೭. ಶ್ರೀಮದಾಚಾರ್ಯರ ಶ್ರೀಕೃಷ್ಣಾಮೃತಮಹಾರ್ಣವದ ಈ ಕೆಳಗಿನ ಮಾತಿನ ವಿವರಣೆಯಂತೆ ಈ ಪದ್ಯವಿದೆ:

**ಯಾವತ್ ಸ್ವಾಸ್ಥ್ಯಂ ಶರೀರೇಷು ಕರಣೇಷು ಚ ಪಾಟವಮ್ ।**
**ತಾವದರ್ಚಯ ಗೋವಿಂದಂ ಆಯುಷ್ಯಂ ಸಾರ್ಥಕಂ ಕುರು**
**ಅರ್ಚನೀಯೋ ಹೃಷೀಕೇಶಃ ಇಂದ್ರಿಯೇಷು ದೃಢೇಷು ವೈ ।**
**ಅದೃಢೇಷು ಹೃಷಿಕೇಷು ಹೃಷೀಕೇಶಂ ಸ್ಮರಂತಿ ಕೇ ॥**

೮. ಶ್ರೀಕೃಷ್ಣಾಮೃತಮಹಾರ್ಣವದಲ್ಲಿ ಆ ಇಂದ್ರಿಯಗಳನ್ನು ಸಾರ್ಥಕ ಮಾಡಿಕೊಳ್ಳುವ ಬಗೆ ನಿರೂಪಿತವಾಗಿದೆ[೧].

೯. ಹರಿದಾಸರ ಅನೇಕ ಹಾಡುಗಳು ಅದರ ಸಾರವನ್ನು ನಿರೂಪಿಸಿವೆ. ಅವುಗಳಲ್ಲಿ ಶ್ರೀಪಾದರಾಜರ ಈ ಕೆಳಗಿನ ಕೀರ್ತನೆ ಒಂದು ನಿದರ್ಶನ:

ಭೂಷಣಕೆ ಭೂಷಣ ಇದು ಭೂಷಣ
ಶೇಷಗಿರಿವಾಸ ಶ್ರೀವೇಂಕಟೇಶ ॥ ಪ ॥
ನಾಲಿಗೆಗೆ ಭೂಷಣ ನಾರಾಯಣ ನಾಮ
ಕಾಲಿಗೆ ಭೂಷಣ ಹರಿಯಾತ್ರೆಯು
ಆಲಯಕೆ ಭೂಷಣ ತುಲಸಿ ವೃಂದಾವನ ವಿ-
ಶಾಲ ಕರ್ಣಕೆ ಭೂಷಣ ವಿಷ್ಣು ಕಥೆಯು ॥ ೧ ॥
ದಾನವೇ ಭೂಷಣ ಇರುವ ಹಸ್ತಂಗಳಿಗೆ
ಮಾನವೇ ಭೂಷಣ ಮಾನವರಿಗೆ
ಜ್ಞಾನವೇ ಭೂಷಣ ಮುನಿಯೋಗಿವರರಿಗೆ
ಮಾನಿನಿಗೆ ಭೂಷಣ ಪತಿಭಕ್ತಿಯು ॥ ೨ ॥
ರಂಗನನು ನೋಡುವುದೆ ಕಂಗಳಿಗೆ ಭೂಷಣ
ಮಂಗಳಾಂಗಗೆ ಮಣಿವ ಶಿರ ಭೂಷಣ

---

೧. ದುಃಸಹೋ ನಾರಕೋ ವಹ್ನಿರ್ದುಃಸಹಾ ಯಮಕಿಂಕರಾಃ ।
ವಿಷಮಶ್ಚಾಂತಕಪಥಃ ಪ್ರೇತತ್ವಂ ಚಾತಿದಾರುಣಮ್ ॥
ವಿಚಿಂತ್ಯ ಮನಸಾಽಪ್ಯೇವಂ ಪಾತಕಾದ್ವಿನಿವರ್ತಯೇತ್ ।
ಸ್ಮರಣಂ ಕೀರ್ತನಂ ವಿಷ್ಣೋಃ ಸದೈವ ನ ಪರಿತ್ಯಜೇತ್ ॥ - ಕೃಷ್ಣಾಮೃತಮಹಾರ್ಣವ (೨೦೪,೨೦೫)

ಶೃಂಗಾರ ತುಲಸಿ ಮಣಿ ಕೊರಳಿಗೆ ಭೂಷಣ
ರಂಗವಿಠಲ ನಿಮ್ಮ ನಾಮ ಅತಿ ಭೂಷಣ ॥ ೩ ॥

*****

## ೯೧. ಬಳಿಕಲದರನುಕೂಲ ನಿನ್ನೊಳಗಿಹುದು ರಕ್ಷಿಸು

ನಾಲಿಗೆಯು ನಾಸಿಕವು ನಯನಕ-
ಪಾಲ ಪದ ಪಾಣಿಗಳು ತನುವಿನ
ಮೂಲಕರ್ತೃವಿನಲ್ಲಿ ಪರಿಚಾರಕರು ತಾವಾಗಿ ।
ಲೀಲೆಯಿಂದಿರುತಿರ್ದು ಕಡೆಯಲಿ
ಕಾಲ ತೀರಿದ ಬಳಿಕಲದರನು-
ಕೂಲ ನಿನ್ನೊಳಗಿಹುದು ರಕ್ಷಿಸು ನಮ್ಮನನವರತ ॥ ೯೧ ॥

ಅ: ನಾಲಿಗೆ, ಮೂಗು, ಕಣ್ಣು, ತಲೆ, ಕಾಲುಗಳು, ಕೈಗಳು ಎಂಬ ಈ ಎಲ್ಲವೂ ಈ ದೇಹದ ಮೂಲಕರ್ತೃವಾದ ಶ್ರೀಹರಿಯಲ್ಲಿ ಪರಿಚಾರಕರಾಗಿ ಇರುವರು; ತಮ್ಮ ಕಾರ್ಯವನ್ನು ಲೀಲೆಯಿಂದ ನಿರ್ವಹಿಸುತ್ತಾ ಕೊನೆಯಲ್ಲಿ ಸಮಯ ಮುಕ್ತಾಯವಾದ ಮೇಲೆ ಅದನ್ನು ಬಿಟ್ಟು ತೆರಳಿಬಿಡುವರು. ಅಷ್ಟರೊಳಗೆ ಇವುಗಳನ್ನು ಅನುಕೂಲ ಮಾಡಿಕೊಳ್ಳುವುದು ನಿನ್ನ ಅನುಗ್ರಹದಿಂದ ಮಾತ್ರ ಸಾಧ್ಯ. ಅಂತಹ ಶ್ರೀಹರಿಯೇ ಸದಾ ನಮ್ಮನ್ನು ರಕ್ಷಿಸು.

ವಿ.: ೧. ಹಿಂದೆ ತಿಳಿಸಿದ ನವದ್ವಾರಗಳ ಬಗ್ಗೆ ಹೆಚ್ಚಿನ ವಿವರಣೆ ಈ ಪದ್ಯದಲ್ಲಿದೆ.

೨. ನಾಲಿಗೆ ಮೊದಲಾದ ನವದ್ವಾರಗಳಿಗೆ ಅಭಿಮಾನಿಗಳಾದ ದೇವತೆಗಳು ಮುಖ್ಯ ಕರ್ತೃವಾದ ನಿನ್ನ ಸೇವಕರಾಗಿ ಕಾರ್ಯವನ್ನು ನಿರ್ವಹಿಸುವರು. ಅವರಿಗೆ ಈ ಕಾರ್ಯದ ನಿರ್ವಹಣೆ ಆಯಾಸ ನೀಡುವಂತಹುದಲ್ಲ ಎಂಬುದು ವಿಶೇಷ.

೩. ಜೀವನ ಆಯುಷ್ಯದ ಅವಧಿ ತೀರುವುದು ಎಂಬುದು, ಕಾಲ ತೀರಿದ ಬಳಿಕ ಎಂಬ ಮಾತಿನ ಅರ್ಥ. ಆ ಕಾಲವು ಪೂರೈಸುತ್ತಲೇ ಅವರು ಇವುಗಳನ್ನು ಬಿಟ್ಟು ತೆರಳಿ ಬಿಡುವರು.

೪. ಹೀಗೆ ಶ್ರೀಹರಿಯ ಸೇವಕರಾಗಿರುವ ದೇವತೆಗಳು ನಮ್ಮ ದೇಹದಲ್ಲಿ ಅನುಗ್ರಾಹಕರಾಗಿ ನೆಲೆಸಿರುವಾಗಲೇ ಮುಖ್ಯಸ್ವಾಮಿಯಾದ ಶ್ರೀಹರಿಯ ಸೇವೆಗೆ ಅವುಗಳನ್ನು ಅನುಕೂಲ ಮಾಡಿಕೊಳ್ಳುವುದು ನಿಜವಾದ ಸಾಧನೆ ಎಂದರ್ಥ.

೫. ಆದರೆ, ಇದಕ್ಕೆ ಜೀವನ ಪ್ರಯತ್ನಾದಿಗಳು ಎಷ್ಟು ಮುಖ್ಯವೋ, ಅದೆಲ್ಲಕ್ಕಿಂತ ಮುಖ್ಯವಾಗಿ ಶ್ರೀಹರಿಯ ಅನುಗ್ರಹವೇ ಪರಮಮುಖ್ಯವಾದ ಸಾಧನ ಎಂದು ಒಟ್ಟು ತಾತ್ಪರ್ಯ; ನಾಸಿಕ – ಮೂಗು, ಪಾಣಿ – ಕೈ, ನಯನ – ಕಣ್ಣು ಕಪಾಲ – ಕಪೋಲ, ಕೆನ್ನೆ

*****

## ೯೨. ಪೂರ್ವದ ತೆತ್ತಿಗನು ನೀನೀಗ ರಕ್ಷಿಸು

ಸತ್ತವರಿಗಳಲೇಕೆ ತನ್ನನು
ಹೊತ್ತವರು ಹೆತ್ತವರುಗಳು ತಾವ್-
ಸತ್ತು ಹೋಗುವರಲ್ಲದುಳಿವರೆ ಮರುಗಲೇಕಿನ್ನು।
ಮೃತ್ಯು ಬೆನ್ನಿನೊಳಿಹುದು ತಾವಿ-
ನ್ನತ್ತು ಮಾಡುವುದೇನು ಪೂರ್ವದ
ತೆತ್ತಿಗನು ನೀನೀಗ ರಕ್ಷಿಸು ನಮ್ಮನನವರತ ॥ ೯೨ ॥

**ಅ: ಸತ್ತವರಿಗೆ ಅಳುವುದೇತಕ್ಕೆ? ತನ್ನನ್ನು ಹೊತ್ತವರು ಹಾಗೂ ಹೆತ್ತವರು ಸಹ ಸತ್ತು ಹೋಗುವರಲ್ಲದೆ ಉಳಿದುಕೊಳ್ಳಲು ಸಾಧ್ಯವೇ? ಇನ್ನು ಏತಕ್ಕೆ ಮರುಗುವುದು. ಸಾವು ಬೆನ್ನ ಹಿಂದೆಯೇ ಇರುವುದು. ಆದ್ದರಿಂದ ಜನರು ತಾವು ಅಳುವ ಮೂಲಕ ಏನನ್ನು ತಾನೆ ಸಾಧಿಸಲಾದೀತು? ಶ್ರೀಹರಿಯೇ! ನೀನು ಎಂದಿನಿಂದಲೂ ನಮ್ಮನ್ನು ರಕ್ಷಿಸುವ ಬಂಧು. ಈಗಲೂ ನಮ್ಮನ್ನು ಸದಾ ರಕ್ಷಿಸು.**

ವಿ: ೧. ಸಾವು ಅನಿವಾರ್ಯ ಎಂಬುದನ್ನು ರೋಚಕವಾಗಿ ತಿಳಿಸುವ ಪದ್ಯ ಇದು.

೨. ಸತ್ತವರಿಗಾಗಿ ಅಳುವುದು ಜನರ ಸ್ವಭಾವ. ಆದರೆ, ಹಾಗೆ ಅಳುವುದರಿಂದ ಏನು ಪ್ರಯೋಜನ ಎಂಬ ವಿಚಾರವನ್ನು ಅವರು ಮಾಡುವುದಿಲ್ಲ. ಅಳುವುದರಿಂದ ಸತ್ತವರಂತೂ ಖಂಡಿತವಾಗಿ ಬದುಕುವುದಿಲ್ಲ. ಹಾಗೆ ಬದುಕಿಯಾರು ಎಂಬ ನಿರೀಕ್ಷೆ ಅಳುವವರಿಗೆ ಇರುವುದೂ ಇಲ್ಲ. ಒಂದು ರೀತಿಯಲ್ಲಿ ಅವರ ಅಗಲುವಿಕೆಯ ನೋವನ್ನು ಹಾಗೆ ಅಳುವ ಮೂಲಕ ಸೂಚಿಸುವರು ಮಾತ್ರ.

೩. ಸಾವು ಅನಿವಾರ್ಯ ಎನ್ನುವುದಕ್ಕೆ ಸತ್ತವನನ್ನು ಪಾಲಿಸಿದವರು ಹಾಗೂ ಹೆತ್ತವರೂ ಸಹ ಸಾಯುವುದೇ ನಿದರ್ಶನ. ಇಲ್ಲಿ ಹೊತ್ತವರು ಎಂದರೆ, ಪೋಷಿಸಿದವರು ಎಂದರ್ಥ. ಹೆತ್ತವರು ಎಂದರೆ ತಂದೆ ತಾಯಿಗಳು. ಹೊತ್ತವರು–ಹೆತ್ತವರು ಸಾಯುವುದು ಎಲ್ಲರೂ ಕಂಡಿರುವ ಸತ್ಯ. ಎಂದ ಮೇಲೆ ಅದು ಅನಿವಾರ್ಯ ಎಂದರ್ಥ. ಅನಿವಾರ್ಯವಾದದ್ದರ ಬಗ್ಗೆ ಅಳುವುದರಿಂದ ಯಾವ ಪ್ರಯೋಜನವು ಇರದು.

೪. ಸಾವು ಅನಿವಾರ್ಯ ಎಂಬ ಮಾತು ಗೀತೆಯ ಈ ಕೆಳಗಿನ ಶ್ಲೋಕದ ಸಂದೇಶ: **ಜಾತಸ್ಯ ಹಿ ಧ್ರುವೋ ಮೃತ್ಯುಃ** (೨/೨೨); ಅದರಂತೆ ತಾನು ಪರಿಹರಿಸಲಾಗದ ವಿಷಯದ ಬಗ್ಗೆ ಅಳುವುದು ಸಹ ತರವಲ್ಲ ಎಂಬ ಮಾತು ಗೀತೆಯದೇ:

**ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ। (೨/೨೭)**

೫. ಆದ್ದರಿಂದ ಸತ್ತವರಿಗಾಗಿ ಮರುಗುವುದು ನಿರರ್ಥಕ ಎಂದರ್ಥ.

೬. ಸಾವು ಹುಟ್ಟಿದೊಡನೆಯೇ ಜೊತೆಯಾಗಿ ಬರುವುದು. ನಿಜ ಹೇಳಬೇಕೆಂದರೆ ಮನುಷ್ಯನ ಬದುಕು ಸಾಗುತ್ತಿರುವುದು ಅದರ ಜೊತೆಯಲ್ಲಿಯೇ. ಬೆನ್ನಿನಲ್ಲಿ ಬಂದಿರುವುದು ಎಂಬುದಕ್ಕೆ, ಸದಾ ಹಿಂದೆಯೇ ಇರುವುದು ಎಂಬುದು ಒಂದು ಬಗೆಯ ಅರ್ಥ. ಇದು ಶ್ರೀಮದ್ಭಾಗವತ ಮಹಾಪುರಾಣದ ಈ ಕೆಳಗಿನ ಮಾತನ್ನು ಆಧರಿಸಿದೆ[1]: **ಮೃತ್ಯುರ್ಜನ್ಮವತಾಂ ವೀರ ದೇಹೇನ ಸಹ ಜಾಯತೇ । ಅದ್ಯ ವಾऽಬ್ದಶತಾಂತೇವ ಮೃತ್ಯುರ್ವೈ ಪ್ರಾಣಿನಾಂ ಧ್ರುವಃ ॥ (೧೦/೧/೩೮)**

ಬೆನ್ನಿನೊಳಿಹುದು ಇರುವುದು ಎಂಬುದಕ್ಕೆ ನಮಗೆ ಕಾಣದಂತೆ ಆಕ್ರಮಿಸುವುದು ಎಂಬುದು ಇನ್ನೊಂದು ಅರ್ಥ. ಸಾವು ಅನಿವಾರ್ಯ ಎಂಬಷ್ಟೇ ಸತ್ಯ, ಅದು ಬರುವ ಕಾಲ, ರೀತಿ ಎಲ್ಲವೂ ಸಹ ಸಂಪೂರ್ಣವಾಗಿ ತಿಳುವಳಿಕೆಗೆ ಮೀರಿದ್ದು ಎಂಬುದು ಸಹ. ಹುಟ್ಟಿನೊಂದಿಗೆ ಸಾವು ಅನುಸರಿಸಿ ಇರುವುದು ಎಂಬ ಅರ್ಥವನ್ನು ಇದು ಹೊಂದಿದೆ. ಆದ್ದರಿಂದ ಅತ್ಯಂತ ಅನಿವಾರ್ಯವೂ, ಯಾರಿಗೂ ತಪ್ಪಿಸಲಾಗದಂತುಹುದು ಆದ ಸಾವಿನ ಬಗ್ಗೆ ಶೋಕಿಸುವುದು ತರವಲ್ಲ ಎಂದು ಭಾವ.

೭. ಅಳುವುದರಿಂದ ಯಾವ ಸಾಧನೆಯೂ ಆಗದು ಎಂದ ಮೇಲೆ ಅದರಲ್ಲಿ ಅರ್ಥವಿಲ್ಲ. ಅರ್ಥವಿಲ್ಲದ್ದನ್ನು ಮಾಡುವುದು ವಿವೇಕವೂ ಅಲ್ಲ; **ಧೀರಸ್ತತ್ರ ನ ಮುಹ್ಯತಿ (ಗೀತಾ ೨/೧೩).**

೮. ತೆತ್ತಿಗ ಎಂದರೆ ಬಂಧು ಎಂದರ್ಥ. ಹಿಂದೆ ಮಾಡಿದ ಕರ್ಮ ತನ್ನದೇ ಆದ ರೀತಿಯಲ್ಲಿ ಸಾವಿಗೆ ಕಾರಣವಾಗುವುದು. ಆದ್ದರಿಂದ ಶಾಸ್ತ್ರೋಕ್ತವಾದ ಸರಿಯಾದ ಕರ್ಮವನ್ನು ಆಚರಿಸಿದವರಿಗೆ ಮೃತ್ಯುವಿನ ಭಯ ಅನಗತ್ಯ: '**ಕೃತಕೃತ್ಯಾಃ ಪ್ರತೀಕ್ಷಂತೇ ಮೃತ್ಯುಂ ಪ್ರಿಯಮಿವಾತಿಥಿಮ್ ।**' ಎಂಬ ಮಹಾಭಾರತದ ಮಾತು ಉತ್ತಮವಾದ ಬಾಳನ್ನು ಬಾಳಿದವರಿಗೆ ಸಾವು ಪ್ರಿಯ ಅತಿಥಿಯಂತೆ ಆನಂದದಾಯಕವೇ ಹೊರತು ದುಃಖಕರವಲ್ಲ ಎಂಬ ಸೂಚನೆಯೂ ಇಲ್ಲಿದೆ; **ತೆತ್ತಿಗ** – ಬಂಧು, ನೆಂಟ, ಸೇವಕ, ರಕ್ಷಕ.

೯. ಎಲ್ಲಕ್ಕೂ ಮುಖ್ಯ ಕಾರಣನು ಶ್ರೀಹರಿ. ಸಾವಿಗೆ ಕಾರಣವಾಗುವ ಕರ್ಮ ಮೊದಲಾದ ಎಲ್ಲವುಗಳನ್ನೂ ಸಹ ಮುಖ್ಯವಾಗಿ ನಿಯಂತ್ರಿಸುವವನು ಅವನೇ ಆಗಿರುವನು. ಅದಕ್ಕೆಂದೆ ದಾಸರು ಇದರ ಬಗ್ಗೆ ಚಿಂತಿಸಬೇಡ ಎಂಬ ಸಂದೇಶವನ್ನು ನೀಡಿರುವರು ಎಂದು ತಿಳಿಯಬೇಕು.

೧೦. ಭಗವದ್ಗೀತೆಯ ಎರಡನೇ ಅಧ್ಯಾಯದಲ್ಲಿ ಸಾವಿನ ವಿಶ್ಲೇಷಣೆ ಬಂದಿದೆ. ಅದರಂತೆ ಜೀವಕ್ಕೆ ಎಂದೂ ಸಾವಿಲ್ಲ, ಅದರಂತೆ ದೇಹಕ್ಕೆ ಸಾವು ತಪ್ಪಿದ್ದೂ ಅಲ್ಲ, ಆದ್ದರಿಂದ ಸಾವಿನ ಬಗ್ಗೆ

---

೧. ಗೃಹೀತ ಇವ ಕೇಶೇಷು ಮೃತ್ಯುನಾ ಧರ್ಮಮಾಚರೇತ್ । – ಪುರಾಣವಾಕ್ಯ

ದುಃಖಪಡದಿರುವುದು ವಿವೇಕಿಗಳ ಲಕ್ಷಣ ಎಂದರ್ಥ. ಮುಖ್ಯವಾಗಿ ಭಗವಂತ ಎಲ್ಲಕ್ಕೂ ನಿಯಾಮಕನಾಗಿರುವುದರಿಂದ ಅವನನ್ನು ಶರಣು ಹೊಂದಿದವರಿಗೆ ಸಾವಿನ ಚಿಂತೆ ಅನಗತ್ಯ ಎಂದು ಭಾವ.

೧೧. ಸ್ವಾಮಿಯಾದ ಶ್ರೀಹರಿಯಲ್ಲಿ ನಿರ್ಮಲಭಕ್ತಿಯನ್ನು ಹೊಂದಿದವರಿಗೆ ಸಾವು ಸುಖಕರವಾದೀತೇ ಹೊರತು ದುಃಖಕರವಲ್ಲ.

೧೨. ಇದು ಒಂದು ರೀತಿಯಲ್ಲಿ ಕನಕದಾಸರೇ ಹೇಳಿರುವ ಈ ಕೆಳಗಿನ ಮಾತಿನ ವಿವರಣೆಯಂತಿದೆ:

ಶರಣು ಹೊಕ್ಕೆನಯ್ಯ ಎನ್ನ ಮರಣಕಾಲದಲ್ಲಿ ನಿನ್ನ ।
ಚರಣಸ್ಮರಣೆ ಕರುಣಿಸಯ್ಯ ನಾರಾಯಣ ॥

*****

## ೯೩. ಜ್ಞಾನದ ಕಣ್ಣು ದೃಷ್ಟಿಯನಿತ್ತು ರಕ್ಷಿಸು

ಮಣ್ಣು ಮಣ್ಣಿನೊಳುದಿಸಲದರಲಿ
ಮಣ್ಣುಬೊಂಬೆಗಳಾಗಿ ರಂಜಿಸಿ
ಮಣ್ಣಿನಾಹಾರದಲಿ ಜೀವವ ಹೊರೆದು ಉಪಚರಿಸಿ ।
ಮಣ್ಣಿನಲಿ ಬಂಧಿಸಿದ ದೇಹವ
ಮಣ್ಣುಕೂಡಿಸಬೇಡ ಜ್ಞಾನದ
ಕಣ್ಣು ದೃಷ್ಟಿಯನಿತ್ತು ರಕ್ಷಿಸು ನಮ್ಮನನವರತ ॥ ೯೩ ॥

ಅ: ಮಣ್ಣು ಮಣ್ಣಿನೊಳಗೆ ಹುಟ್ಟುವುದು. ಅದರಲ್ಲಿ ದೇಹಗಳು ಮಣ್ಣಿನ ಬೊಂಬೆಗಳಂತೆ ಮೂಡಿ ಬರುವುವು. ಬಗೆಬಗೆಯ ರಂಜನೆಯನ್ನು ನೀಡಿ ಅವು ಮಣ್ಣನ್ನೇ ಆಹಾರವನ್ನಾಗಿ ಪಡೆದು ಬೆಳೆಯುವವು. ಜೀವ ಅವುಗಳನ್ನು ಆಧರಿಸಿ ಬದುಕುವನು. ಅದಕ್ಕೆ ಬಗೆಬಗೆಯ ಉಪಚಾರವನ್ನು ಮಾಡುವನು. ಕೊನೆಗೆ ಮಣ್ಣಿನಲ್ಲಿ ಬಂಧಿತವಾದ ಈ ದೇಹ ಮಣ್ಣನ್ನೇ ಹೊಂದಿ ಬಿಡುವುದು. ಅದರಿಂದ ನಡೆದ ಸಾಧನೆ ಮಾತ್ರ ಮಣ್ಣಿನಂತೆ ಆಗಕೂಡದು. ಅದಕ್ಕೆ ಜ್ಞಾನದ ಕಣ್ಣು ನಿಜವಾದ ದೃಷ್ಟಿಯಾಗಿದೆ; ಅದನ್ನು ಶ್ರೀಹರಿಯೇ! ನೀನು ನೀಡಿ ನಮ್ಮನ್ನು ಸದಾ ರಕ್ಷಿಸು.

ವಿ.: ೧. ಹಿಂದಿನ ಪದ್ಯದಲ್ಲಿ ಬಂದಿರುವ ದೇಹದ ಅನಿತ್ಯತೆಯನ್ನು ಈ ಪದ್ಯ ವಿವರಿಸುವುದು.

೨. ಮಣ್ಣಿನಿಂದ ಮಣ್ಣಿನ ಗೊಂಬೆಯನ್ನು ಮಾಡಿ, ಅದಕ್ಕೆ ಬಗೆಬಗೆಯ ಅಲಂಕಾರಾದಿಗಳನ್ನು ಮಾಡಿ ನಲಿದು ಕೊನೆಗೆ ಅದು ನಾಶವಾಗಿ ಪುನಃ ಮಣ್ಣಿನ ರೂಪವನ್ನೇ ತಳೆಯುವಂತೆ ಈ ದೇಹ ಇರುವುದು ಎಂದರ್ಥ.

೩. ಇಲ್ಲಿ ಮಣ್ಣು ಎಂಬುದು ಪಂಚಭೂತಗಳಲ್ಲಿ ಒಂದಾದ ಪೃಥ್ವಿಯ ಸಂಕೇತ. ಇದರಲ್ಲಿ ನೀರು, ಅಗ್ನಿ, ವಾಯು ಹಾಗೂ ಆಕಾಶ ಎಂಬ ಇತರ ನಾಲ್ಕು ಭೂತಗಳು ಸಹ ಇದ್ದರೂ ಪ್ರಧಾನವಾಗಿ ಪೃಥ್ವಿಯಲ್ಲಿರುವುದರಿಂದ ಪೃಥ್ವಿಯ ಅಂಶವನ್ನೇ ಗ್ರಹಿಸಿರುವರು ಎಂದು ತಿಳಿಯಬೇಕು.

೪. ಪಾರ್ಥಿವ ಶರೀರ ಎಂಬ ಮಾತಿನ ಅರ್ಥ ಇದರಲ್ಲಿ ವಿವರವಾಗಿ ಬಂದಿದೆ. ಮಣ್ಣಿನಿಂದ ಬೀಜಗಳು ಮೊಳೆತು, ಸಸ್ಯ, ವೃಕ್ಷಗಳಾಗಿ ಬೆಳೆಯುವಂತೆ, ಪೃಥ್ವಿಯಿಂದ ಈ ದೇಹ ರೂಪುಗೊಳ್ಳುವುದು. ಇಲ್ಲಿ ಪೃಥ್ವಿ ಎಂಬುದು ಇತರ ಭೂತಗಳಿಗೆ ಉಪಲಕ್ಷಣ. ದೇಹದಲ್ಲಿ ನೀರು ಮೊದಲಾದ ಇತರ ಭೂತಗಳ ಅಂಶವಿದ್ದರೂ ಗೋಚರಿಸುವುದು ಪ್ರಧಾನವಾಗಿ ಪೃಥ್ವಿಯ ಅಂಶವೇ.

೫. ಹೀಗೆ ಈ ಪಾರ್ಥಿವ ದೇಹವು ಅತ್ಯಂತ ನಶ್ವರವಾದುದು. ಮಣ್ಣಿನ ಬೊಂಬೆ ಹೇಗೋ ಹಾಗೆ. ಆದರೆ, ಇದರಿಂದ ಮೋಕ್ಷಸಾಧನೆಗೆ ಅಗತ್ಯವಾದ ಜ್ಞಾನದ ಸಂಪಾದನೆ ಆಗುವುದು. ಅದಕ್ಕೆ ಇದನ್ನು ಸಾಧನಶರೀರ ಎಂದು ಶಾಸ್ತ್ರಗಳು ಕರೆದಿವೆ. ಮಣ್ಣಿನಿಂದ ಹುಟ್ಟಿ ಕೊನೆಗೆ ಮಣ್ಣಾಗಿ ಹೋಗುವ ಈ ದೇಹ ಜ್ಞಾನಸಾಧನೆಯನ್ನು ಮಾಡಿದಾಗ ಮಾತ್ರ ಅದರ ಉದ್ದೇಶ ಸಾರ್ಥಕವಾಗುವುದು. ಹಾಗೆ ಮಾಡದೇ ಐಹಿಕ ಭೋಗಗಳ ಬಗ್ಗೆ ಗಮನವಿತ್ತು ಜ್ಞಾನಸಾಧನೆಯಲ್ಲಿ ವಿಮುಖನಾಗುವುದು ಮೂರ್ಖನ ಲಕ್ಷಣ. ಅಂತಹವನ ಬಾಳು ಬರೀ ಮಣ್ಣು ಪಾಲಾಗುವ ಬಾಳೇ ಸರಿ. ಹಾಗೆ ಆಗದೆ ಇರಲು ಸೂಕ್ತ ಸಾಧನೆ ಸದಾ ಆಗುತ್ತಲೇ ಇರಬೇಕು. ಅದು ನಡೆಯಲು ಶ್ರೀಹರಿಯ ಅನುಗ್ರಹ ಅತ್ಯಗತ್ಯ. ಆದ್ದರಿಂದ ಅವನನ್ನು ನಂಬಿಯೇ ಸದಾ ಬದುಕನ್ನು ಸಾಗಿಸಬೇಕು ಎಂಬುದು ಇಲ್ಲಿಯ ಸಂದೇಶ.

೬. ಪರೀಕ್ಷಾ ಕೇಂದ್ರಗಳಲ್ಲಿ ವಿದ್ಯಾರ್ಥಿಯು ಉತ್ತರಪತ್ರಿಕೆಯಲ್ಲಿ ಯೋಗ್ಯವಾದ ಉತ್ತರ-ಗಳನ್ನು ಬರೆದು ಅದನ್ನು ಮೌಲ್ಯಮಾಪನಕ್ಕಾಗಿ ಒಪ್ಪಿಸುತ್ತಾನೆ. ಕೊನೆಗೆ ಅವನಿಗೆ ಪ್ರತಿಫಲವಾಗಿ ಲಭಿಸುವುದು ಅಂಕಪಟ್ಟಿಯೇ ಹೊರತು ತಾನು ನೀಡಿದ ಉತ್ತರಪತ್ರಿಕೆಯಲ್ಲ. ಎಂದರೆ, ಉತ್ತರ ಪತ್ರಿಕೆ ನಶ್ವರ, ಗಳಿಸುವ ಅಂಕಗಳು ಮಾತ್ರ ಶಾಶ್ವತ. ಅದರಂತೆ, ಬಿದ್ದು ಹೋಗುವ ಈ ಶರೀರ ನಶ್ವರವಾದರೂ, ಇದರಿಂದ ನಡೆಯುವ ಸಾಧನೆ ಮಾತ್ರ ಪ್ರಧಾನವೆನ್ನಿಸಿ ಸಾರ್ಥಕಬದುಕಿಗೆ ಕಾರಣವಾಗುವುದು ಎಂದರ್ಥ. ಶ್ರೀಜಗನ್ನಾಥದಾಸರ ಫಲವಿದು ಬಾಳ್ದುದಕೆ ಎಂಬ ಮಾತಿನಲ್ಲಿ ಇದರ ವಿವರಣೆಯನ್ನು ಕಾಣಬಹುದು.

೭. ಶ್ರೀಪುರಂದರದಾಸರ **'ಮಣ್ಣಿಂದ ಕಾಯ ಮಣ್ಣಿಂದ'** ಎಂಬ ಕೀರ್ತನೆಯಲ್ಲಿ ಈ ದೇಹವು ಮಣ್ಣಿಂದಾಗುವ ಪರಿ ನಿರೂಪಿತವಾಗಿದೆ:

ಮಣ್ಣಿಂದ ಕಾಯ ಮಣ್ಣಿಂದ
ಮಣ್ಣಿಂದ ಸಕಲ ವಸ್ತುಗಳೆಲ್ಲ ॥ ಪ ॥
ಮಣ್ಣ ಬಿಟ್ಟವರಿಗಾಧಾರವಿಲ್ಲ
ಅಣ್ಣಗಳಿರೆಲ್ಲರು ಕೇಳಿರಯ್ಯ ॥ ಅ.ಪ ॥
ಅನ್ನ ಉದಕ ಊಟವೀಯುದು ಮಣ್ಣು
ಬಣ್ಣ ಬಂಗಾರ ಬೊಕ್ಕಸವೆಲ್ಲ ಮಣ್ಣು
ಉನ್ನತವಾದ ಪರ್ವತವೆಲ್ಲ ಮಣ್ಣು
ಕಣ್ಣು ಮೂರುಳ್ಳನ ಕೈಲಾಸ ಮಣ್ಣು ॥ ೧ ॥
ದೇವರಗುಡಿ ಮಠ ಮನೆಯೆಲ್ಲ ಮಣ್ಣು
ಆವಾಗ ಆಡುವ ಮಡಕೆಯು ತಾ ಮಣ್ಣು
ಕೋವಿದರಸರ ಕೋಟೆಗಳೆಲ್ಲ ಮಣ್ಣು
ಪಾವನಗಂಗೆಯ ತಡಿಯೆಲ್ಲ ಮಣ್ಣು ॥ ೨ ॥
ಭಕ್ತ ಭರಣ ಧಾನ್ಯ ಬೆಳೆವುದೇ ಮಣ್ಣು
ಸತ್ತವರಸು ಹೂಳಿಸಿಡುವುದೇ ಮಣ್ಣು
ಉತ್ತಮವಾದ ವೈಕುಂಠವೇ ಮಣ್ಣು
ಶಕ್ತ ಪುರಂದರವಿಠಲನ ಪುರವೆಲ್ಲ ಮಣ್ಣು ॥ ೩ ॥

*****

## ೯೪. ಚಿಂತಾಯಕನೆ ಬಿಡಬೇಡ ರಕ್ಷಿಸು

ಬೀಯವಾಗುವ ತನುವಿನಲಿ ನಿ-
ರ್ದಾಯಕನು ನೀನಿರ್ದು ಅತಿಹಿರಿ-
ದಾಯಸಂ ಬಡಿಸುವರೆ ನೀನನುಕೂಲವಾಗಿರ್ದು ।
ತಾಯನಗಲಿದ ಶಿಶುವಿನಂದದಿ
ಬಾಯ ಬಿಡುವಂತಾಯ್ತಲೇ ಚಿಂತಾ-
ದಾಯಕನೆ ಬಿಡಬೇಡ ರಕ್ಷಿಸು ನಮ್ಮನನವರತ ॥ ೯೪ ॥

ಅ: ಶ್ರೀಹರಿಯೇ! ನಾಶವಾಗುವಂತಹ ಇಂತಹ ದೇಹದಲ್ಲಿ ಯಾವರೀತಿಯ ನಾಶವೂ ಇಲ್ಲದ ನೀನು ನೆಲೆಸಿರುವಿ. ಇಂತಹ ನೀನು ನಮ್ಮನ್ನು ಅತಿಯಾದ ಆಯಾಸಕ್ಕೆ ಗುರಿಮಾಡುವುದು ಸರಿಯೆ? ನೀನು ಅನುಕೂಲನಾಗಿದ್ದು ಸೂಕ್ತ ಕಾರ್ಯಗಳನ್ನು ಮಾಡಿಸಿದಾಗ ಈ ದೇಹ ಸಾರ್ಥಕವಾಗುವುದು. ಇಲ್ಲವಾದಲ್ಲಿ ತಾಯಿಯಿಂದ ದೂರವಾದ ಮಗು ರಕ್ಷಣೆಗಾಗಿ ಬಾಯಿಬಿಡುವಂತಾಗುವುದು. ನಮ್ಮ ಸ್ಥಿತಿ ಇಂದು

**ಹಾಗಿದೆ. ಚಿಂತನೆಗೆ ನಿಲುಕುವ ನೀನು ನಮ್ಮ ಕೈಯನ್ನು ಬಿಡಬೇಡ,ಸದಾ ನಮ್ಮನ್ನು ರಕ್ಷಿಸು.**

ವಿ.: ೧. ನಶ್ವರವಾದ ದೇಹವನ್ನು ಸಾರ್ಥಕಪಡಿಸಿಕೊಳ್ಳುವುದು ವಿವೇಕ ಎಂದು ಹಿಂದಿನ ಪದ್ಯಗಳಲ್ಲಿ ಸೂಚಿತವಾದ ಸಾಧನೆಗೆ ಶ್ರೀಹರಿಯ ಅನುಗ್ರಹ ಅತ್ಯಗತ್ಯ ಎಂಬ ವಿಷಯ ಇದರಲ್ಲಿ ಬಂದಿದೆ; **ಬೀಯ** – ನಾಶ, ಹಾಳು.

೨. ಈ ದೇಹದಿಂದ ನಡೆಯುವ ಪ್ರತಿಯೊಂದು ಕಾರ್ಯಕ್ಕೂ ಶ್ರೀಹರಿಯ ಅನುಗ್ರಹ ಅತ್ಯಗತ್ಯ. ಆದರೆ, ಇದರಿಂದ ನಡೆಯುವ ಯಾವುದೇ ಕಾರ್ಯದ ಲೇಪವು ಮಾತ್ರ ಅವನಿಗೆ ಸರ್ವಥಾ ಇಲ್ಲ. ಹೀಗೆ ನಿರ್ಲಿಪ್ತನಾಗಿದ್ದರೂ, ಕೇವಲ ಭಕ್ತಾನುಗ್ರಹಕ್ಕಾಗಿ ಸಾಧನೆ ಮಾಡಿಸುವುದು ಶ್ರೀಹರಿಯ ಕಾರುಣ್ಯ ಮಾತ್ರ. ಅವನು ಅನುಗ್ರಹ ಮಾಡಿದಾಗ ಸದಾ ಸೂಕ್ತ ಸಾಧನೆಯನ್ನೇ ಮಾಡಿಸಿ ಉದ್ಧರಿಸುವನು. ಇಲ್ಲವಾದಾಗ ಸಾಧನೆ ನಡೆಯದಂತಾಗಿ ದೇಹ ವ್ಯರ್ಥವೆನ್ನಿಸುವುದು.

೩. ಶ್ರೀಹರಿಯ ಅನುಗ್ರಹ ತಪ್ಪಿದಾಗ ಜೀವರ ಸ್ಥಿತಿಯು ತಾಯಿಯನ್ನು ಅಗಲಿದ ಮಗುವಿನ ಸ್ಥಿತಿಯಂತಾಗುವುದು. ಎಂದರೆ ತನ್ನ ಪ್ರತಿಯೊಂದು ಕಾರ್ಯಕ್ಕೂ ತಾಯಿಯನ್ನು ಅವಲಂಬಿಸಿದ ಮಗು ತಾಯಿಯಿಂದ ದೂರವಾದಾಗ ಅನಾಥವಾಗಿ ರಕ್ಷಣೆಗಾಗಿ ಮೊರೆ ಇಡುವಂತಾಗುವುದು. ಪ್ರಸ್ತುತ ಜೀವನ ಪರಿಸ್ಥಿತಿಯು ಶ್ರೀಹರಿಯ ಅನುಗ್ರಹಕ್ಕೆ ಎರವಾದಾಗ ಹಾಗೆಯೇ ಆಗುವುದು. ಹಾಗಾಗದಂತಿರಲು ಸಕಲ ಚಿಂತೆಗಳನ್ನು ಪರಿಹರಿಸಲು ಅವನ ಅನುಗ್ರಹವನ್ನು ಪ್ರಾರ್ಥಿಸಿಕೊಳ್ಳಬೇಕು ಎಂಬುದು ಇಲ್ಲಿ ಮುಖ್ಯ ಭಾವ.

೪. **ಚಿಂತಾದಾಯಕ** ಎಂದರೆ, ಚಿಂತಿಸಿದ್ದನ್ನು ನೀಡುವವನು; ಚಿಂತೆ ಎಂದರೆ ಜಿಜ್ಞಾಸೆಗೆ ಎಡೆಮಾಡಿಕೊಡುವವನು ಎಂದೂ ಎಂದರ್ಥ. ಇಲ್ಲಿ ಚಿಂತನೆ ಎಂದರೆ ಬ್ರಹ್ಮಜಿಜ್ಞಾಸೆ ಎಂದರ್ಥ. ಬಾದರಾಯಣರ ಬ್ರಹ್ಮಮೀಮಾಂಸ ಶಾಸ್ತ್ರವು ಶ್ರೀಹರಿಯ ಚಿಂತನೆಗೆ ಸಕಲಬಗೆಯಲ್ಲೂ ನೆರವಾಗುವ ಅಪೂರ್ವ ಶಾಸ್ತ್ರ. ಅದರಿಂದ ಪ್ರತಿಪಾದಿತನಾದವನು ಶ್ರೀಹರಿ ಎಂದು ಭಾವ; ಬ್ರಹ್ಮಸೂತ್ರಾದಿಗಳ ಅಧ್ಯಯನಾದಿಗಳ ಯೋಗವನ್ನು ಕರುಣಿಸುವನು ಎಂದರ್ಥ.

೫. ಶ್ರೀಹರಿಯು ಎಂದೂ ಸಹ ಭಕ್ತನ ಕೈಬಿಡದೇ ಪಾಲಿಸಬೇಕು ಎಂಬ ಪ್ರಾರ್ಥನೆ ಇದರಲ್ಲಿದೆ. ಶ್ರೀಹರಿಯು ತಂದೆ, ತಾಯಿ ಮೊದಲಾಗಿ ಸಕಲವಿಧ ರಕ್ಷಕನೂ ಆಗಿರುವನು. ಆದ್ದರಿಂದ ಅವನನ್ನು ಮರೆತ ಜೀವಿಯು, ತಾಯಿಯಿಂದ ದೂರವಾದ ಮಗುವಿನಂತಾಗುವನು ಎಂಬ ಮಾತು ತುಂಬಾ ಅರ್ಥವತ್ತಾದುದು: **ಹರಿರೇವ ಪರೋ ಹರಿರೇವ ಗುರುರ್ಹರಿರೇವ ಜಗತ್ಪಿತೃಮಾತೃಗತಿಃ.**

೬. ಶ್ರೀಜಗನ್ನಾಥದಾಸರ ಈ ಕೆಳಗಿನ ಪದ್ಯವು ಇದರ ವಿಶೇಷಾರ್ಥವನ್ನು ತಿಳಿಯಲು ಸಹಕಾರಿಯಾಗಿದೆ:

ಜನನಿಯನು ಕಾಣದಿಹ ಬಾಲಕ ನೆನೆನೆನೆದು ಹಲಬುತಿರೆ ಕತ್ತಲೆ
ಮನೆಯೊಳಡಗಿದ್ದವನ ನೋಡುತ ನಗುತ ಹರುಷದಲಿ ।
ತನಯನಂ ಬಿಗಿದಪ್ಪಿ ರಂಬಿಸಿ ಕನಲಿಕೆಯ ಕಳೆವಂತೆ ಮಧುಸೂ
ದನನು ತನ್ನವರಿದ್ದೆಡೆಗೆ ಬಂದೊದಗಿ ಸಲಹುವನು ॥

*****

೯೫. ನಿನ್ನಯ ಪದಯುಗವ ಬಯಸುವೆನು ರಕ್ಷಿಸು

ಮೊದಲು ಜನನವನರಿಯೆ ಮರಣದ
ಹದನ ಕಡೆಯಲಿ ತಿಳಿಯೆ ನಾ ಮ-
ಧ್ಯದಲಿ ನೆರೆ ನಾ ನಿಪುಣನೆಂಬುದು ಬಳಿಕ ನಗೆಗೇಡು ।
ಮೊದಲು ಕಡೆ ಮಧ್ಯಗಳ ಬಲ್ಲವ
ಮದನಜನಕನು ನೀನು ನಿನ್ನಯ
ಪದಯುಗವ ಬಯಸುವೆನು ರಕ್ಷಿಸು ನಮ್ಮನನವರತ ॥ ೯೫ ॥

ಅ: ಮೊದಲು ನಾನು ಜನನದ ರೀತಿಯನ್ನೇ ಅರಿಯೆನು. ಕೊನೆಗೆ ನಡೆಯುವ ಮರಣದ ರೀತಿಯೂ ನನಗೆ ತಿಳಿಯದು. ಮಧ್ಯದಲ್ಲಿ ನನ್ನ ಬದುಕು ಸಾಗಿದೆ. ಅಂತಹ ನಾನು ತುಂಬಾ ನಿಪುಣನಾದವನು ಎಂದು ತಿಳಿದುಕೊಳ್ಳುವುದು ಹಾಸ್ಯಾಸ್ಪದವಾದ ಸಂಗತಿ. ಹುಟ್ಟು, ಸಾವು ಹಾಗೂ ಬದುಕುಗಳ ರಹಸ್ಯವನ್ನು ತಿಳಿದವನು ನೀನೊಬ್ಬನೆ. ಮನ್ಮಥನ ಜನಕ ನೀನು. ನಿನ್ನಯ ಪಾದದ್ವಂದ್ವಗಳನ್ನೇ ನಾನು ಸದಾ ಬಯಸುವೆನು. ನೀನು ಸದಾ ನಮ್ಮನ್ನು ರಕ್ಷಿಸು.

ವಿ.: ೧. ಹುಟ್ಟು ಸಾವುಗಳಿಗೆ ಒಳಗಾಗುವ ಜೀವನಿಗೆ ಅವುಗಳ ಅರಿವು ಇರುವುದಿಲ್ಲ. ಅವುಗಳನ್ನು ಸಮಗ್ರವಾಗಿ ತಿಳಿದವನು ಶ್ರೀಹರಿ. ಆದ್ದರಿಂದ ಅವನನ್ನು ಆಶ್ರಯಿಸಿಯೇ ಜೀವನು ತನ್ನ ಉದ್ಧಾರವನ್ನು ಹೊಂದಬೇಕು ಎಂಬುದು ಇಲ್ಲಿಯ ಭಾವ.

೨. ಮೊದಲು ಜನನವನರಿಯೆ ಎಂದರೆ, ನಮ್ಮ ಹುಟ್ಟು ಮೊದಲನೆಯ ಸಂಗತಿ, ಅದೇ ನಮಗೆ ತಿಳಿದಿರುವುದಿಲ್ಲ. ಇಲ್ಲಿ, ಹುಟ್ಟು ತಿಳಿದಿಲ್ಲ ಎಂದರೆ ಹುಟ್ಟುವ ರೀತಿ, ಹುಟ್ಟುವ ಸ್ಥಳ, ಸಮಯ, ಅದಕ್ಕೆ ಕಾರಣವಾಗುವ ತಂದೆ-ತಾಯಿಗಳು ಮೊದಲಾದ ಸಕಲ ವಿವರಗಳೂ ಗ್ರಾಹ್ಯ.

೩. ಕೊನೆಯ ಪರಿಸ್ಥಿತಿ ಸಾವು. ಅದೂ ಸಹ ಜೀವರಿಗೆ ತಿಳಿಯದು. ಈ ವಿವರ ಹಿಂದಿನ ಪದ್ಯಗಳಲ್ಲಿ ನಿರೂಪಿತವಾಗಿದೆ. ಹುಟ್ಟು ಸಾವುಗಳ ಮಧ್ಯದ ಪರಿಸ್ಥಿತಿ. ಇಲ್ಲಿ ಮಧ್ಯ ಎಂದರೆ,

ಸ್ಥಿತಿ ಎಂದೇ ಅರ್ಥ. ಇಂತಹ ಕಾಲದಲ್ಲಿ ಅದೂ ಸಹ ಶ್ರೀಹರಿಯ ಅಧೀನ. ಅದರಂತೆ ಹುಟ್ಟು ಸಾವು ಮೊದಲಾದ ಸಕಲಕ್ಕೂ ಅವನೇ ಕಾರಣ ಎಂಬುದನ್ನು ತಿಳಿಯದೇ ತಾನೇ ಸ್ವತಂತ್ರ ಎಂದು ಭ್ರಮಿಸುವುದು ನಗೆಪಾಟಲಿಗೆ ಕಾರಣವಾಗುವ ಮಹಾಮೂರ್ಖತನ ಎಂದು ಭಾವ.

೪. ಹೀಗೆ ಹುಟ್ಟು-ಸಾವು-ಸ್ಥಿತಿ ಮೊದಲಾದ ಸಕಲವನ್ನೂ ಸಹ ಸಂಪೂರ್ಣವಾಗಿ ಬಲ್ಲ ಹಿರಿಮೆ ಶ್ರೀಹರಿಯದು. ಅವನೇ ಎಲ್ಲಕ್ಕೂ ಮುಖ್ಯ ಕಾರಣ. ಆದ್ದರಿಂದ ಅವನನ್ನು ಸದಾ ಆಶ್ರಯಿಸಿ ಬದುಕುವುದೇ ನಿಜವಾದ ಸಾಧನೆಯ ಆಂತರ್ಯ.

೫. ಇಲ್ಲಿ ಮದನಜನಕ ಎಂಬ ಪದ ತುಂಬಾ ಅರ್ಥವತ್ತಾದುದು. ಹುಟ್ಟಿನ ಮೂಲ ಇರುವುದೇ ಕಾಮನಲ್ಲಿ. ಮನ್ಮಥ ಎಂದರೆ ಕಾಮ. ಅಂತಹ ಕಾಮನಿಗೂ ಜನಕನಾದವನು ಶ್ರೀಹರಿ. ಎಂದರೆ, ಸೃಷ್ಟಿಯ ಮೂಲಸಂಕಲ್ಪವೇ ಶ್ರೀಹರಿಯ ಆಧೀನ. ಆದ್ದರಿಂದ ಅವನನ್ನು ನಂಬಿ ಬದುಕುವುದೇ ನಿಜವಾದ ಸಾಧನೆ ಎಂಬುದು ಇಲ್ಲಿ ಭಾವ.

೬. ಇದು ಈ ಕೆಳಗಿನ ಭಗವದ್ಗೀತೆಯ ಶ್ಲೋಕದ ಭಾವವಾಗಿದೆ:

**ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ ।**
**ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿದೇವನಾ ॥ - ೨/೨೮**

೭. ಜೀವರಿಗೆ ಅವರ ಹುಟ್ಟು-ಸಾವುಗಳ ಪರಿವೆ ಇಲ್ಲ. ಶ್ರೀಹರಿಗೆ ಮಾತ್ರವೇ ಸಕಲರ ಹುಟ್ಟು-ಸಾವುಗಳ ಸಂಪೂರ್ಣವಾದ ಪರಿಜ್ಞಾನ ಸದಾ ಇರುವುದು ಎಂಬ ಇಲ್ಲಿಯ ಈ ಮಾತು ಈ ಕೆಳಗಿನ ಗೀತಾವಾಕ್ಯಗಳನ್ನು ಆಧರಿಸಿದೆ:

**ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ ।**
**ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ॥ - ೪/೫**

**ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ ।**
**ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ ॥ - ೭/೨೬**

೮. ಶ್ರೀಹರಿಯ ಪಾದಮಹಿಮೆಯನ್ನು ಶ್ರೀಕನಕದಾಸರು ಪ್ರತ್ಯೇಕ ಪದವೊಂದರಲ್ಲಿ ತಿಳಿಸಿರುವರು:

ಭಜಿಸಿ ಬದುಕೆಲೊ ಮನುಜ ಮನ ಮುಟ್ಟಿ ಶ್ರೀಹರಿಯ ॥ ಪ ॥
ಅಜಭವಸುರೇಂದ್ರಾದಿ ವಂದಿತ ಪಾದ ॥ ಅಪ ॥

ಪಾಕಶಾಸನಗೊಲಿದು ಬಲಿಯ ಮೆಟ್ಟಿದ ಪಾದ
ಕಾಕು ಶಕಟನ ತುಳಿದು ಕೊಂದ ಪಾದ
ಲೋಕೇಶನಿಗೆ ಒಲಿದು ಪೂಜೆಗೊಂಬುವ ಪಾದ
ಲೋಕ ಪಾವನ ಗಂಗೆ ಜನಿಸಿದಾ ಪಾದ ॥ ೧ ॥

ಶಿಲೆಯ ಸತಿಯಳನು ಸೌಂದರ್ಯಗೊಳಿಸಿದ ಪಾದ
ಒಲಿದು ಪಾರ್ಥಗೆ ಧರೆಯನೊತ್ತಿದ ಪಾದ
ಕೊಲಿಸಿ ಕೌರವರ ಕಾಳಗದಿ ಕೆಡಹಿದ ಪಾದ
ಬಲಿದ ಕಾಲಿಂಗನ ಪೆಡೆ ತುಳಿದ ಪಾದ ॥ ೨ ॥

ಗರುಡ ಶೇಷಾದಿಗಳು ಪೊತ್ತುಕೊಂಡಿಹ ಪಾದ
ಧರೆಯ ಈರಡಿ ಮಾಡಿ ಅಳೆದ ಪಾದ
ಸಿರಿ ತನ್ನ ತೊಡೆಯ ಮೇಲಿರಿಸಿ ಸೇವಿಪ ಪಾದ
ವರ ಕಾಗಿನೆಲೆಯಾದಿಕೇಶವನ ಪಾದ ॥ ೩ ॥

*****

## ೯೬. ಇದನಾರು ಮೆಚ್ಚುವರಕಟ ರಕ್ಷಿಸು

**ಸಾರವಿಲ್ಲದ ದೇಹವಿದು ನಿ-**
**ಸ್ಸಾರವಾಗಿಹ ತನುವಿನಲಿ ಸಂ-**
**ಚಾರಿಯಹ ನೀನಿರ್ದು ಕಡೆಯಲಿ ತೊಲಗಿ ಹೋಗುತಲಿ ।**
**ದೂರ ತಪ್ಪಿಸಿಕೊಂಡು ಬರಿಯಪ-**
**ದೂರ ಹೊರಿಸಿದೆ ಜೀವನಲಿ ಇದ-**
**ನಾರು ಮೆಚ್ಚುವರಕಟ ರಕ್ಷಿಸು ನಮ್ಮನನವರತ ॥ ೯೬ ॥**

**ಅ: ಇದು ಸಾರವಿಲ್ಲದ ದೇಹ. ಈ ನಿಸ್ಸಾರವಾದ ದೇಹದಲ್ಲಿ ಸದಾ ಸಂಚರಿಸುವ ನೀನು ನೆಲೆಸಿದ್ದು ಕಡೆಯಲ್ಲಿ ಇದನ್ನು ತೊಲಗಿ ಹೋಗುವಾಗ ನೀನು ಎಲ್ಲ ವಿಧವಾದ ದೂರಿಗೆ ಹೊರತಾಗಿ ಉಳಿದುಕೊಂಡು ಈ ದೇಹದಲ್ಲಿನ ಜೀವಿಗೆ ಮಾತ್ರವೇ ಆ ದೇಹದಿಂದ ನಡೆಯುವ ಕರ್ಮಫಲಗಳಿಗೆ ಹೊಣೆಯನ್ನಾಗಿಸುವಿ. ಇದನ್ನು ಯಾರು ತಾನೆ ಮೆಚ್ಚಿಯಾರು? ಅಯ್ಯೋ! ಶ್ರೀಹರಿಯೇ! ನೀನು ನಮ್ಮನ್ನು ರಕ್ಷಿಸು.**

ವಿ.: ೧. ದೇಹದಿಂದ ನಡೆಯುವ ಕರ್ಮಗಳ ಬಂಧನ ಆದರಲ್ಲಿನ ಜೀವಿಗೆ ಹೊರತು, ಅಂತರ್ಯಾಮಿಯಾಗಿ ನೆಲೆಸಿದ ಶ್ರೀಹರಿಗೆ ಮಾತ್ರ ಸರ್ವಥಾ ಅಲ್ಲ ಎಂಬ ಪ್ರಮೇಯವು ಇದರಲ್ಲಿ ನಿರೂಪಿತವಾಗಿದೆ.

೨. ಈ ದೇಹ ನಿಸ್ಸಾರವಾದುದು. ಎಂದರೆ, ಯಾವುದೇ ವಿಧವಾದಂತಹ ಸಾರವನ್ನು ಸಹ ಹೊಂದಿಲ್ಲದಂತಹುದು ಎಂದರ್ಥ. ಈ ಮಾತು ಅತ್ಯಂತ ಅರ್ಥವತ್ತಾದುದು. ಬೇರೆ ಪ್ರಾಣಿಗಳ ಚರ್ಮ, ದಂತ, ಕೇಶ, ನಖ ಮೊದಲಾದವುಗಳಿಗೆ ಇರುವ ಬೆಲೆ ಮನುಷ್ಯ

ದೇಹಕ್ಕೆ ಸರ್ವಥಾ ಇಲ್ಲ ಎಂಬುದು ಅಚ್ಚರಿಯಾದರೂ ನಿಜ. ಆನೆಯ ದಂತಕ್ಕೆ ಇರುವ ಬೆಲೆ ಅಪಾರವಾದುದು. ಜಿಂಕೆಯ ಚರ್ಮ ಪವಿತ್ರವೆನ್ನಿಸುವ ಮಹತ್ವ ಪಡೆದಿದೆ. ಹುಲಿಯ ಉಗುರು, ಚಮರೀಮೃಗದ ಬಾಲ, ನವಿಲಿನ ಗರಿ ಮೊದಲಾದ ವಸ್ತುಗಳ ಮಹತ್ವ ಎಲ್ಲರಿಗೂ ತಿಳಿದದ್ದೆ ಆಗಿದೆ. ಆದರೆ, ಮನುಷ್ಯ ದೇಹಕ್ಕೆ ಒಟ್ಟಾಗಿಯೇ ಆಗಲಿ, ಅವಯವಶಃ ಆಗಲಿ ಇಂತಹ ಬೆಲೆ ಇಲ್ಲವೇ ಇಲ್ಲ. ಇದನ್ನು ಗಮನಿಸಿದವರಿಗೆ ಈ ದೇಹದಲ್ಲಿ ಸಾರವಿಲ್ಲ ಎಂಬುದು ಮನವರಿಕೆಯಾಗುವುದು. ಶ್ರೀಮದ್ಭಾಗವತದ ಕಪಿಲಗೀತೆಯಲ್ಲಿ ಈ ದೇಹದ ನಶ್ವರತೆಯನ್ನು ಬಗೆಬಗೆಯಾಗಿ ವರ್ಣಿಸಲಾಗಿದೆ.

೩. ಇದು ಸಾರವಿಲ್ಲದ ದೇಹ ಎಂದು ಮಾತ್ರ ವರ್ಣಿಸದೆ ಇದು ನಿಸ್ಸಾರವಾದುದು ಎಂದು ಮತ್ತೊಮ್ಮೆ ಹೇಳುವ ಮೂಲಕ ಇದು ಸರ್ವಾತ್ಮನ ಹೇಯ ಎಂಬ ವಿಶೇಷಾಂಶ ಸೂಚಿತ. ಆದರೂ ಈ ದೇಹದಿಂದ ನಡೆಯುವ ಕಾರ್ಯಗಳು ಮಾತ್ರ ಅತ್ಯದ್ಭುತವಾದುದು. ಇತರ ಯಾವ ಪ್ರಾಣಿಯು ಸಹ ಸಾಧಿಸಲಾಗದ್ದನ್ನು ಈ ಮನುಷ್ಯದೇಹದಿಂದ ಸಾಧಿಸಲು ಸಾಧ್ಯ. ಅದಕ್ಕೆ ಇದರಲ್ಲಿ ಶ್ರೀಹರಿಯ ವಿಶೇಷ ಸನ್ನಿಧಾನವಿರುವುದೇ ಕಾರಣ. ಅಂತಹ ಸನ್ನಿಧಾನವು ಮರೆಯಾಗುತ್ತಲೆ ಈ ದೇಹವು ಶವವೆನ್ನಿಸುವುದು. ಅದನ್ನು ಪ್ರಾಣಿಗಳು ಭಕ್ಷಿಸುವವು, ಇಲ್ಲವೆ ಬೆಂಕಿಯು ಸುಟ್ಟು ಹಾಕುವುದು, ಭೂಮಿಯು ಮಣ್ಣು ಮಾಡುವುದು.

೪. ಶ್ರೀಹರಿಯನ್ನು '**ಸಂಚಾರಿ**' ಎಂದು ಕರೆಯುವ ಮೂಲಕ ಜೀವನಿಗೆ ಅವನು ನೀಡುವ ಪ್ರತಿಯೊಂದು ದೇಹದಲ್ಲೂ ಸಹ ಅವನು ತಪ್ಪದೆ ನೆಲೆಸಿ ಅದರ ಪ್ರವೃತ್ತಿಯನ್ನು ಮಾಡಿಸುವನು ಹಾಗೂ ದೇಹದಿಂದ ಮತ್ತೊಂದು ದೇಹಕ್ಕೆ ಅವನನ್ನು ತಾನೇ ಕರೆದೊಯ್ಯುವನು[೧] ಎಂಬ ವಿಶೇಷಾಂಶ ಸೂಚಿತ.

೫. ದೇಹದಲ್ಲಿ ಹೀಗೆ ಜೀವನೊಂದಿಗೆ ಅವನ ಅಂತರ್ಯಾಮಿಯಾಗಿ ಶ್ರೀಹರಿಯು ನೆಲೆಸಿದ್ದರೂ ಅವನಿಗೆ ಮಾತ್ರ ಯಾವುದೇ ವಿಧವಾದ ಪುಣ್ಯಪಾಪ ರೂಪದ ಕರ್ಮದ ಫಲ ಸರ್ವಥಾ ಇಲ್ಲ; ಅದಕ್ಕೆ ಅವನು ನಿರಂಜನನಾಗಿರುವುದೇ ಮುಖ್ಯ ಕಾರಣ.

೬. ಆದರೆ, ದೇಹದಲ್ಲಿನ ಜೀವನಿಗೆ ಅದರಿಂದ ನಡೆಯುವ ಪುಣ್ಯ-ಪಾಪಗಳ ಲೇಪ ಎಂದೂ ತಪ್ಪದು. ಶ್ರೀಹರಿಯು ಸ್ವತಂತ್ರನಾಗಿ ಕರ್ಮಫಲಕ್ಕೆ ಅತೀತನೆನ್ನಿಸಿದರೆ, ಶ್ರೀಹರಿಯ ಅಧೀನ್ಯಕ್ಕೊಳಪಟ್ಟ ಜೀವ ಆ ಶ್ರೀಹರಿಯೇ ನೀಡುವ ದೇಹದಲ್ಲಿದ್ದು ತನ್ನ ಸ್ವರೂಪ

---

೧. ಪುರುಷಸ್ಯ ಮೃತೌ ಬ್ರಹ್ಮನ್ ಪ್ರಾಣಾ ಭಾಗತ ಏವ ತು ।
ಅಧಿದೈವಂ ಪ್ರಾಪ್ನುವಂತಿ ಭಾಗತೋಽನುವ್ರಜಂತಿ ತಮ್ ।
ಪುನಃ ಶರೀರಸಂಪ್ರಾಪ್ತೌ ತಮೇವಾನುವಿಶಂತಿ ಚ ॥ ಇತಿ ಬ್ರಾಹ್ಮೇ ॥
ಬ್ರಹ್ಮಾಂಡೇ ಚ –
ಮೃತಿಕಾಲೇ ಜಹತ್ಯೇನಂ ಪ್ರಾಣಾ ಭೂತಾನಿ ಪಂಚ ಚ ।
ಭಾಗತೋ ಭಾಗತಸ್ತ್ವೇನಮನುಗಚ್ಛಂತಿ ಸರ್ವಶಃ ॥ ಇತಿ ॥ – ಬ್ರಹ್ಮಸೂತ್ರಭಾಷ್ಯ (೩/೧/೪)

ಯೋಗ್ಯತೆ, ಅನಾದಿಕರ್ಮಗಳಿಗನುಗುಣವಾಗಿ ಸೂಕ್ತಪ್ರಯತ್ನವನ್ನು ನಡೆಸಿ ಕರ್ಮಫಲಕ್ಕೆ ಭಾಗಿಯಾಗುವುದು ಎಂಬುದು ವಿಶೇಷ.

೭. ಮೇಲ್ನೋಟಕ್ಕೆ ಒಂದೇ ದೇಹದಲ್ಲಿ ಜೀವ ಹಾಗೂ ದೇವ ಇಬ್ಬರು ನೆಲೆಸಿದ್ದರೂ ಮುಖ್ಯವಾಗಿ ಸಕಲ ಕರ್ಮಪ್ರೇರಕನಾದ ಸ್ವತಂತ್ರಕರ್ತೃ ಶ್ರೀಹರಿಯೇ ಆದರೂ ಕರ್ಮಫಲ ಮಾತ್ರ ಅವನಿಗೆ ಎಷ್ಟು ಮಾತ್ರಕ್ಕೂ ಇರದೇ ಅಸ್ವತಂತ್ರನಾದ ಜೀವನಿಗೆ ಮಾತ್ರವೇ ಅನ್ವಯಿಸುವುದು ಎಂಬ ಮಾತು ನ್ಯಾಯವೆಂದು ತೋರದು. ಇದನ್ನೇ ಶ್ರೀದಾಸರು ಇದನಾರು ಮೆಚ್ಚುವರು ಎಂಬುದಾಗಿ ತಿಳಿಸಿ ಅಕಟ ಎಂಬ ಉದ್ಗಾರವನ್ನು ತೆಗೆದಿರುವರು.

೮. ಶ್ರೀಹರಿಯು ಸರ್ವತಂತ್ರಸ್ವತಂತ್ರನೂ, ಅನಂತಾನಂತಕಲ್ಯಾಣಗುಣಪರಿಪೂರ್ಣನು, ಸಕಲದೋಷದೂರನು ಆಗಿರುವುದೇ ಅವನು ಕರ್ಮಫಲಕ್ಕೆ ಅತೀತನಾಗಲು ಕಾರಣ; ಜೀವನು ಅದಕ್ಕೆ ವಿರುದ್ಧವಾಗಿ ಅಣುವು, ಅಲ್ಪಜ್ಞನು, ಅಲ್ಪಶಕ್ತನು ಆಗಿರುವುದೇ ಅವನು ಫಲಭಾಗಿಯಾಗುವುದಕ್ಕೆ ಕಾರಣ ಎಂಬುದು ಶಾಸ್ತ್ರಗಳು ಸಾರಿರುವ ತತ್ತ್ವ. ಆ ತತ್ತ್ವದತ್ತ ಗಮನಹರಿಸಲೆಂದು ಶ್ರೀಕನಕದಾಸರು ಇದನಾರು ಮೆಚ್ಚುವರು ಎಂಬ ಮಾತನ್ನು ಪೀಠಿಕೆಯ ರೂಪದಲ್ಲಿ ತಿಳಿಸಿರುವರು.

೯. ಶ್ರೀಪುರಂದರದಾಸರ '**ಮನುಜಶರೀರವಿದೇನು ಸುಖ**' ಎಂಬ ಕೀರ್ತನೆಯಲ್ಲಿ ಈ ದೇಹದ ನಿಸ್ಸಾರತೆ ವಿವರವಾಗಿ ನಿರೂಪಿತವಾಗಿದ್ದು ಈ ಪದ್ಯವನ್ನು ಅರ್ಥಮಾಡಿಕೊಳ್ಳಲು ಉಪಯುಕ್ತವಾಗಿದೆ:

ಮನುಜ ಶರೀರವಿದೇನು ಸುಖ – ಇದ–
ನೆನೆದರೆ ಘೋರವಿದೇನು ಸುಖ ? ॥ ಪ ॥
ಜನನ – ಮರಣ ಮಲಕೂಪದಲ್ಲಿದ್ದು
ಅನುಭವಿಸುವುದು ಇದೇನು ಸುಖ ?
ತನುವಿದ್ದಾಗಲೇ ಹೃದಯದ ಶೌಚದ
ಸ್ತನಗಳನುಂಬುವುದೇನು ಸುಖ ? ॥ ೧ ॥
ದಿನವು ಹಸಿವು ತೃಷೆ ಘನ ರೋಗಂಗಳ
ಅನುಭವಿಸುವುದು ಇದೇನು ಸುಖ
ನೆನೆಯಲು ನಿತ್ಯ ನೀರ್ಗುಳ್ಳೆಯಂತಿಪ್ಪ
ತನು ಮಲಭಾಂಡವಿದೇನು ಸುಖ ? ॥ ೨ ॥
ಪರಿಪರಿ ವಿಧದಲಿ ಪಾಪವ ಗಳಿಸುತ
ನರಕಕೆ ಬೀಳುವುದೇನು ಸುಖ ?
ಪುರಂದರವಿಠಲನ ಮನದಿ ನೆನೆದು ಸ
ದ್ಧರುಮದೊಳ್ ನಡೆದರೆ ಆಗ ಸುಖ ॥ ೩ ॥

*****

## ೯೭. ಬ್ರಹ್ಮಾಂಡನಾಯಕ ನೀನು ರಕ್ಷಿಸು

ಅಂಡವೆರಡುದ್ಭವಿಸಿದವು ಬ್ರ-
ಹ್ಮಾಂಡವದರೋಪಾದಿಯಲಿ ಪಿಂ-
ಡಾಂಡವೆಸೆದುದು ಸ್ಥೂಲಕಾರಣ ಸೂಕ್ಷ್ಮತನುವಿನಲಿ ।
ಅಂಡ ನಿನ್ನಯ ರೋಮಕೂಪದೊ-
ಳಂಡಲಿದವಖಿಲಾಂಡವಿದು ಬ್ರ-
ಹ್ಮಾಂಡನಾಯಕ ನೀನು ರಕ್ಷಿಸು ನಮ್ಮನನವರತ ॥ ೯೭ ॥

ಅ: ಎರಡು ಅಂಡಗಳು ಉದ್ಭವಿಸಿವೆ. ಒಂದು ಬ್ರಹ್ಮಾಂಡವಾದರೆ, ಇನ್ನೊಂದು ಪಿಂಡಾಂಡ. ಬ್ರಹ್ಮಾಂಡದ ಸಕಲತತ್ತ್ವಗಳನ್ನು ಒಳಗೊಂಡಿರುವುದು ಪಿಂಡಾಂಡದ ವೈಶಿಷ್ಟ್ಯ. ಕಾರಣವಾದ ಬ್ರಹ್ಮಾಂಡವು ಸ್ಥೂಲವಾದರೂ ಪಿಂಡಾಂಡ ಅತ್ಯಂತ ಸೂಕ್ಷ್ಮವಾದುದು. ಇಂತಹ ಬ್ರಹ್ಮಾಂಡಗಳು ನಿನ್ನ ರೋಮಕೂಪದಲ್ಲಿ ಆಶ್ರಯವನ್ನು ಪಡೆದಿರುವವು. ನೀನು ಇಂತಹ ಬ್ರಹ್ಮಾಂಡಕ್ಕೆ ನಾಯಕನಾದವನು. ಶ್ರೀಹರಿಯೇ! ಅಂತಹ ನೀನು ನಮ್ಮನ್ನು ಸದಾ ರಕ್ಷಿಸು.

ವಿ.: ೧. ಬ್ರಹ್ಮಾಂಡ-ಪಿಂಡಾಂಡಗಳ ವಿವೇಚನೆ ಈ ಪದ್ಯದಲ್ಲಿ ಬಂದಿದೆ.

೨. ಬ್ರಹ್ಮಾಂಡ ಎಂಬುದು ಶ್ರೀಹರಿಯು ಸೃಷ್ಟಿ ಮಾಡಿದ ಇಡೀ ವಿಶ್ವ. ಬ್ರಹ್ಮ ಶಬ್ದ ವಾಚ್ಯನಾದ ಅವನಿಂದ ನಿರ್ಮಾಣವಾದ್ದರಿಂದ ಇದು ಬ್ರಹ್ಮಾಂಡ ಎಂಬುದು ಒಂದು ಬಗೆಯ ಅರ್ಥವಾದರೆ, ಬ್ರಹ್ಮದೇವರನ್ನು ಅಧಿಪತಿಯನ್ನಾಗಿ ಹೊಂದಿರುವ ಅಂಡ ಎಂಬ ಕಾರಣದಿಂದಲೂ ಬ್ರಹ್ಮಾಂಡ ಎಂಬ ಹೆಸರು ಇದಕ್ಕೆ ಸಾರ್ಥಕ. ಮುಂದಿನ ಎಲ್ಲ ವಿಧವಾದ ಸೃಷ್ಟಿಗೂ ಮುಖ್ಯವಾಗಿ ಆಸರೆ ಈ ಬ್ರಹ್ಮಾಂಡವೇ ಆಗಿದೆ.

೩. ಪಿಂಡ ಎಂದರೆ ದೇಹ ಎಂದರ್ಥ. ಪಿಂಡಾಂಡ ಎಂದರೆ, ಬ್ರಹ್ಮಾಂಡದ ಸಕಲ ತತ್ತ್ವಗಳನ್ನು ಸಹ ಒಳಗೊಂಡಿರುವ ದೇಹ. ಬ್ರಹ್ಮಾಂಡದಲ್ಲಿನ ಒಟ್ಟು ೨೪ ತತ್ತ್ವಗಳು ಸಹ ಈ ಪಿಂಡಾಂಡದಲ್ಲಿ ನೆಲೆಸಿವೆ. ಪಿಂಡಾಂಡವನ್ನು ಸರಿಯಾಗಿ ಅರ್ಥಮಾಡಿಕೊಳ್ಳುವುದು ಬ್ರಹ್ಮಾಂಡದ ಪರಿಜ್ಞಾನಕ್ಕೆ ಸಾಧನವಾಗುವುದು. ಪಿಂಡಾಂಡದಲ್ಲಿ ಬ್ರಹ್ಮಾಂಡವನ್ನು ಕಂಡು ಅದು ಭಗವದಧೀನ ಎಂದು ಚಿಂತಿಸಿ ಶ್ರೀಹರಿಗಾಗಿ ತನ್ನ ಬದುಕನ್ನು ಸಮರ್ಪಿಸಿಕೊಳ್ಳುವುದು ನಿಜ ಅರ್ಥದಲ್ಲಿ ಸಾಧನೆ ಎನ್ನಿಸುವುದು.

೪. ಇಂತಹ ಅಪಾರ ವ್ಯಾಪ್ತಿಯ ಬ್ರಹ್ಮಾಂಡವನ್ನು ಶ್ರೀಹರಿ ತನ್ನ ಒಂದು ರೋಮಕೂಪದಲ್ಲಿ ಧರಿಸುವನು ಎಂಬುದು ಅವನ ಅಪಾರವಾದ ಹಿರಿಮೆಗೆ ದ್ಯೋತಕ. ಅವನ ಒಂದೊಂದು ರೋಮಕೂಪದಲ್ಲೂ ಒಂದೊಂದು ಬ್ರಹ್ಮಾಂಡ ಎಂಬ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಅವನು

ಅನಂತಕೋಟಿಬ್ರಹ್ಮಾಂಡನಾಯಕ ಎಂಬ ಮಾತು ಅತ್ಯಂತ ಅನ್ವರ್ಥಕವಾಗುವುದು. ಇಲ್ಲಿಯ ಬ್ರಹ್ಮಾಂಡನಾಯಕ ಎಂಬ ಪದವು ಆ ಅರ್ಥವನ್ನೇ ಸೂಚಿಸುವುದು.

೫. ಇಂತಹ ಬ್ರಹ್ಮಾಂಡನಾಯಕನಾದ ಶ್ರೀಹರಿಯು ಸರ್ವಸಂರಕ್ಷಕನಾದ್ದರಿಂದ ಸಕಲ ವಿಧ ರಕ್ಷಣೆಗಾಗಿ ಪ್ರತಿಯೊಬ್ಬರೂ ಅವನನ್ನೇ ಆಶ್ರಯಿಸಬೇಕು ಎಂಬುದು ಇದರಲ್ಲಿಯ ಸಂದೇಶ.

*****

## ೯೮. ಮುನಿಕುಲವೃಂದಹೃದಯನು ನೀನು ರಕ್ಷಿಸು

ಒಂದುದಿನ ತನುವಿನಲಿ ನಡೆವುವು
ಇಂದುಭಾಸ್ಕರ ಸ್ವರಗಳಿಪ್ಪ-
ತ್ತೊಂದು ಸಾವಿರದಾರುನೂರನು ಏಳುಭಾಗದಲಿ ।
ಬಂದದನು ಉಡುಚಕ್ರದಲ್ಲಿಗೆ
ತಂದು ಧಾರೆಯನೆರೆದ ಮುನಿಕುಲ-
ವೃಂದಹೃದಯನು ನೀನು ರಕ್ಷಿಸು ನಮ್ಮನನವರತ ॥ ೯೮ ॥

**ಅ: ದೇಹದಲ್ಲಿ ಪ್ರತಿಯೊಂದು ದಿವಸದಲ್ಲಿ ಚಂದ್ರಸ್ವರ, ಸೂರ್ಯಸ್ವರ ಎಂಬ ಸ್ವರಗಳಿರುವವು[೧]. ಇಂತಹ ಸ್ವರಗಳ ಮೂಲಕ ಇದರಲ್ಲಿ ಒಟ್ಟು ೨೧,೬೦೦ ಶ್ವಾಸವು ನಡೆಯುವುದು. ಹಾಗೆ ನಡೆಯುವುದು ಒಟ್ಟು ೭ ಭಾಗಗಳಲ್ಲಿ. ಇಂತಹ ಸ್ವರಪ್ರಕ್ರಿಯೆಯನ್ನು ನಕ್ಷತ್ರ ಚಕ್ರದಲ್ಲಿಗೆ ತಂದು, ಅದನ್ನು ಶ್ರೀಹರಿಗೆ ಸಮರ್ಪಿತ ಎಂದು ಅನುಸಂಧಾನ ಮಾಡುವ ಮುನಿಕುಲವೃಂದದ ಹೃದಯಕಮಲದಲ್ಲಿ ನೆಲೆಸಿರುವವನು ನೀನು. ಅಂತಹ ನೀನು ನಮ್ಮನ್ನು ಸದಾ ರಕ್ಷಿಸಬೇಕು.**

ವಿ.: ೧. ದೇಹದಲ್ಲಿ ಪ್ರತಿನಿತ್ಯ ನಡೆಯುವ ಹಂಸಮಂತ್ರ ಸ್ವರೂಪದ ಶ್ವಾಸ ಜಪದ ವಿವರಣೆ ಇದರಲ್ಲಿ ಬಂದಿದೆ; ಇಂದು-ಚಂದ್ರ; ಭಾಸ್ಕರ-ಸೂರ್ಯ; ಉಡುಚಕ್ರ-ನಕ್ಷತ್ರಚಕ್ರ

೨. ಪ್ರತಿನಿತ್ಯ ನಮ್ಮ ಮೂಗಿನ ಎರಡು ಹೊರಳೆಗಳ ಮೂಲಕ ಶ್ವಾಸೋಚ್ಛ್ವಾಸ ಪ್ರಕ್ರಿಯೆ ನಡೆಯುವುದು. ಇದರಲ್ಲಿ ಎಡ ಹೊರಳೆಯಲ್ಲಿ ನಡೆಯುವ ಶ್ವಾಸಪ್ರಕ್ರಿಯೆಯು

---

೧. ಸೂರ್ಯಶ್ಚ ದಕ್ಷಿಣಶ್ವಾಸೇ ವಾಮೇ ಸೋಮ ಉದಾಹೃತಃ ।
ಶ್ವಾಸಶ್ಚ ಹಂಸದೈವತ್ಯೋ ಹಂಸಃ ಪ್ರಾಣೇ ಸ್ಥಿತೋ ಹರಿಃ ॥ - ಮಾನಸಸ್ಮೃತಿ (೭೦)
ಮುಖ್ಯಪ್ರಾಣಃ ಶ್ವಾಸರೂಪಹಂಸಮಂತ್ರಂ ಜಪೇತ್ ಸದಾ ॥
ಜೀವೇನ ಕಾರಯತ್ಯೇವ ತಜ್ಜಪಂ ಹರಿತುಷ್ಟಯೇ ।
ಏಕವಿಂಶತ್ಸಹಸ್ರಾಣಿ ಶ್ವಾಸಾನಾಂ ಷಟ್ಛತಾನಿ ಚ ॥
ಭವಂತ್ಯೇತಚ್ಚ ವಿಜ್ಞಾಯ ಭಕ್ತ್ಯಾ ವಿಷ್ಣೌ ಸಮರ್ಪಯೇತ್ ।

ಚಂದ್ರಸ್ವರವೆಂದು, ಬಲಹೊರಳೆಯಲ್ಲಿ ನಡೆಯುವ ಶ್ವಾಸಪ್ರಕ್ರಿಯೆಯು ಸೂರ್ಯಸ್ವರ ಎಂದು ಪ್ರಸಿದ್ಧವಾಗಿವೆ.

೩. ಹಾಗೆ ಒಂದು ದಿನದಲ್ಲಿ ಒಟ್ಟಾಗಿ ನಡೆಯುವ ಶ್ವಾಸೋಚ್ಛ್ವಾಸಗಳ ಸಂಖ್ಯೆ ೨೧,೬೦೦[೧]. ಇಂತಹ ಶ್ವಾಸೋಚ್ಛ್ವಾಸ ಪ್ರಕ್ರಿಯೆಯು ಮುಖ್ಯವಾಗಿ ಶ್ರೀಮುಖ್ಯಪ್ರಾಣನಿಂದ ನಡೆಯುವ ಹಂಸಮಂತ್ರವಾಗಿದೆ. ಇಂತಹ ಅನುಸಂಧಾನವನ್ನು ತಂದುಕೊಂಡು ತಮ್ಮ ಹೃದಯದಲ್ಲಿ ಶ್ರೀಹರಿಯ ಮಹಿಮೆಯನ್ನು ಚಿಂತಿಸುವ ಹಿರಿಮೆ ಮುನಿಕುಲ ವೃಂದದ್ದು.

೪. ಮುನಿ ಎಂಬುದಕ್ಕೆ ಓಂಕಾರವನ್ನು ಸಮಗ್ರವಾಗಿ ತಿಳಿದ ಮಹಾತ್ಮ ಎಂದರ್ಥ. **ಓಂಕಾರೋ ವಿದಿತೋ ಯೇನ ಸ ಮುನಿರ್ನಿನೇತರೋ ಜನಃ** ಎಂಬ ಮಾಂಡೂಕ್ಯದ ಉಪಸಂಹಾರದ ವಾಕ್ಯ ತಿಳಿಸುವುದು. ಅಕಾರದಿಂದ ಪ್ರಾರಂಭಿಸಿ ಒಟ್ಟು ಅನಂತಮಾತ್ರೆಗಳನ್ನು ಒಳಗೊಂಡಿರುವುದು ವಿಶಿಷ್ಟವಾದ ಹಿರಿಮೆ. ಹಾಗೆ ಓಂಕಾರದ ಸಮಗ್ರ ಅನುಸಂಧಾನ ಸಾಧ್ಯವಾಗುವುದು ಋಜು ಜೀವರಿಗೆ ಮಾತ್ರ. ಆದ್ದರಿಂದ ಇಲ್ಲಿಯ ಮುನಿಕುಲ ಎಂಬುದಕ್ಕೆ ಋಜುಗಣ ಎಂದರ್ಥ. ಅಂತಹವರ ಸಾಧನೆಗೆ ಮಾತ್ರವೇ ಶ್ರೀಹರಿಯು ವಿಶೇಷ ಪ್ರಸನ್ನನಾಗಿ ಮುಕ್ತಿ ನೀಡುವವನು ಎಂದು ಭಾವ. ಇತರ ಅಪರೋಕ್ಷಜ್ಞಾನಿಗಳಿಗೆ ಅವರ ಯೋಗ್ಯತೆಗೆ ತಕ್ಕಂತೆ ಅನುಗ್ರಹವನ್ನು ಮಾಡುವನು ಎಂಬ ವಿಶೇಷಾಂಶವನ್ನು ತಿಳಿಯಬೇಕು.

೫. ಮೂಗಿನ ಮೂಲಕ ನಡೆಯುವ ಇಂತಹ ಶ್ವಾಸೋಚ್ಛ್ವಾಸ ಪ್ರಕ್ರಿಯೆಯಲ್ಲಿ ಸೂರ್ಯಸ್ವರ, ಚಂದ್ರಸ್ವರಗಳ ಅನುಸಂಧಾನವನ್ನು ತಂದುಕೊಳ್ಳುವ ಮೂಲಕ ವಿಶೇಷವಾದ ಸಾಧನೆ ಮಾಡುವ ಅಪೂರ್ವತೆ ಋಷಿಮುನಿಗಳ ಚಿಂತನೆಗೆ ಎಟಕುವಂತಹ ವಿಶೇಷವಾದ ಸಾಧನೆ ಎಂಬ ವಿಶೇಷಾರ್ಥವು ಇಲ್ಲಿ ಸೂಚಿತ.

೬. ಇಲ್ಲಿನ 'ಏಳು ಭಾಗಗಳಲ್ಲಿ' ಎಂಬುದಕ್ಕೆ ನಮ್ಮ ದೇಹದಲ್ಲಿ ನೆಲೆಸಿರುವ ಸಪ್ತಚಕ್ರಗಳಲ್ಲಿ ನೆಲೆಸಿ, ಈ ರೀತಿಯಾಗಿ ಹಂಸಮಂತ್ರಜಪವನ್ನು ಮುಖ್ಯಪ್ರಾಣ ಮಾಡುವನು ಎಂದರ್ಥ. ಆ ಸಪ್ತಚಕ್ರಗಳ ವಿವರಗಳು ಪಂಚರಾತ್ರ[೨] ಹಾಗೂ ತಂತ್ರಸಾರಾದಿ ಗ್ರಂಥಗಳಲ್ಲಿ ಬಂದಿವೆ:

---

೧. ಆರು ಮೂರೆರಡೊಂದು ಸಾವಿರ । ಮೂರೆರಡು ಶತಶ್ವಾಸಜಪಗಳ ।
ಮೂರುವಿಧ ಜೀವರೊಳಗಬ್ಜಜ ಕಲ್ಪ ಪರಿಯಂತ ॥
ತಾ ರಚಿಸಿ ಸಾತ್ವರಿಗೆ ಸುಖ ಸಂಸಾರ ಮಿಶ್ರರಿಗಧಮಜನರಿಗ ।-
ಪಾರ ದುಃಖಗಳೀವ ಗುರು ಪವಮಾನ ಸಲಹೆಮ್ಮ ॥ -(ಹರಿಕಥಾಮೃತಸಾರ)

೨. ಮೂಲಾಧಾರೇ ಚತುರ್ದಲಪದ್ಮಂ ಪ್ರವಾಲವರ್ಣಂ ಸಪ್ತಮರುತಃ ಸಂತಿ । ಚತ್ವಾರಿ ರಾಮರೂಪಾಣಿ ವಾಸುದೇವಾದಿ ಚತುರ್ದೇವಾಸ್ತಿಷ್ಠಂತಿ । ತಥಾ ಬೃಹಸ್ಪತಿಚಂದ್ರಬುಧಶನೈಶ್ಚರಾಃ । ತತ್ರ ನೀಲವರ್ಣ-ಮನಿರುದ್ಧಮುಪಾಸಂತೇ । ಏತೇ ಚತುರ್ದಲೇಷು ಚತ್ವಾರಿ ರೂಪಾಣಿ ಪ್ರದ್ಯುಮ್ನಸಂಕರ್ಷಣವಾಸು-ದೇವನಾರಾಯಣಾನಿ । ತತ್ರ ಸ್ವಾಯಂಭುವನಾಮಕೋ ಮನುರನಿರುದ್ಧಮುಪಾಸ್ತೇ । ಭೂಲೋಕಃ । ತತ್ರ ವ್ಯಾನನಾಮಕೋ ವಾಯುಃ ಸಂಚರತಿ ॥ ಇತಿ ಪ್ರಥಮಮ್ ॥

ನಾಭೌ ಷಡ್ದಲಪದ್ಮಮ್ । ರಕ್ತನೀಲವರ್ಣಮ್ । ಸಪ್ತಮರುತಃ । ಷಡ್ದಲೇಷು ಷಟ್ ಜಾಂಬವತ್ಯಾದಯಃ । ಗಣಪತಿರಭಿಮಾನೀ, ವಿಶ್ವಮೂರ್ತಿಧ್ಯಾನಂ ಕರೋತಿ । ಪ್ರದ್ಯುಮ್ನೋ ನಿಯಾಮಕಃ । ಆಕಾಶಸ್ಥಿತಿಃ । ಏತೇ ಸರ್ವೇ ಪ್ರದ್ಯುಮ್ನಮುಪಾಸತೇ । ಭುವರ್ಲೋಕಃ ॥ ಇತಿ ದ್ವಿತೀಯಮ್ ॥

ಹೃತ್ಪದ್ಮಮ್ ಅಷ್ಟದಲಮ್ ಉದ್ಯದಾದಿತ್ಯವರ್ಣಮ್ । ತೇಷು ಅಷ್ಟೌ ವಸವಃ । ಅಷ್ಟದಿಕ್ಪಾಲಾಃ ಸಪ್ತಮರುತಃ । ತತ್ರೇಂದ್ರೋ ಉಪೇಂದ್ರಮುಪಾಸತೇ । ಸ್ಥಾನಪತಿಃ ಸಂಕರ್ಷಣಃ । ಅಷ್ಟದಲೇಷು ಹರಿರಷ್ಟಭುಜಃ ಸ್ಥೂಲಾಂಗುಷ್ಠಪರಿಮಾಣಃ ಸಂಚರತಿ । ತತ್ರೇಂದ್ರಂ ಪ್ರತಿ ಸಮಾಗತಶ್ಚೇತ್ ಪುಣ್ಯಮತಿರುತ್ಪದ್ಯತೇ । ಅಗ್ನಿಂ ಪ್ರತಿಸಮಾಗತಶ್ಚೇತ್ ಆಲಸ್ಯನಿದ್ರೇ । ಯಮಂ ಪ್ರತಿ ಸಮಾಗತಶ್ಚೇತ್ ಕ್ರೋಧಃ । ನಿರ್ಋತಿಂ ಪ್ರತಿ ಸಮಾಗತಶ್ಚೇತ್ ಪಾಪಕೃತ್ಯಮ್ । ವರುಣಂ ಪ್ರತಿಸಮಾಗತಶ್ಚೇತ್ ನಾನಾವಿನೋದಃ । ವಾಯುಂ ಪ್ರತಿಸಮಾಗತಶ್ಚೇತ್ ಗಮನಾಗಮನಮ್ । ಕುಬೇರಂ ಪ್ರತಿ ಸಮಾಗತಶ್ಚೇತ್ ಸ್ಥಿರಬುದ್ಧಿರ್ಲೋಭವೃದ್ಧಿಃ । ಈಶಾನಂ ಪ್ರತಿ ಸಮಾಗತಶ್ಚೇತ್ ವಿತರಣಂ ವೈರಾಗ್ಯಮ್ । ಕೇಸರೇಷು ಸಂಚರತಿ ಚೇತ್ ಜಾಗ್ರತ್ । ಕರ್ಣಿಕೇಷು ಸಂಚರತಿ ಚೇತ್ ಸ್ವಪ್ನಃ । ನಾಲೇ ಪ್ರವೇಶಶ್ಚೇತ್ ಸುಷುಪ್ತಿಃ । ತತ್ರ ಸಂಕರ್ಷಣೋ ನಿಯಾಮಕಃ । ಜೀವಸಂಮುಖೇ ಪ್ರಾಜ್ಞಃ । ಚತುರ್ಭುಜಃ । ಚಕ್ರಶಂಖಗದಾಪದ್ಮಧಾರೀ । ವೈಕೃತದೇಹಹೃದಯಸ್ಥಪ್ರಾಜ್ಞಃ । ಅನಿರುದ್ಧಪ್ರತ್ಯಕ್ಷಂ ವಿನಾ ಜೀವಾಂತರ್ಯಾಮಿಸ್ವಸ್ವರೂಪದೇಹೇ ಬಿಂಬಪ್ರತ್ಯಕ್ಷಂ ನೈವ ಜಾಯತೇ । ಜೀವಸ್ವರೂಪಸದೃಶಬಿಂಬಾಕಾರಃ । ಸ್ವರ್ಲೋಕಃ । ಹೃದಯೇ ಪಾಪಪುರುಷದಹನಮ್ ॥ ಇತಿ ತೃತೀಯಮ್ ॥

ಉರಸ್ಥಲೇ ದ್ವಾದಶದಲಮ್ । ಮೌಕ್ತಿಕವರ್ಣಮ್ । ದ್ವಾದಶದಲೇಷು ದ್ವಾದಶ ಸೂರ್ಯಾಃ ಸಂತಿ । ತತ್ರ ರುದ್ರಃ ನೃಸಿಂಹಮ್ ಉಪಾಸ್ತೇ ಗಿರಿಜಾಸಹಿತಃ । ಇಂದ್ರಾದಯಃ ರುದ್ರಮುಪಾಸ್ತೇ । ಯಮಪುತ್ರೋ ಹರಿರ್ನಿಯಾಮಕಃ । ಮಹರ್ಲೋಕಃ ॥ ಇತಿ ಚತುರ್ಥಕಮಲಮ್ ॥

ಕಂಠಸ್ಥಂ ಷೋಡಶದಲಪದ್ಮಮ್ । ಧವಲಾಕಾರಮ್ । ಷೋಡಶಕಲಾಸಹಿತಶ್ಚಂದ್ರಃ ದಧಿವಾಮನಮುಪಾಸ್ತೇ । ಸಪ್ತಮರುತಃ ಸಂತಿ । ಶೇಷೋ ನಾರಾಯಣಮುಪಾಸ್ತೇ । ಜನೋಲೋಕಃ ॥ ಇತಿ ಪಂಚಮಕಮಲಮ್ ॥

ಭ್ರೂಮಧ್ಯೇ ದ್ವಿದಲಂ ಪದ್ಮಮ್ । ಮಧುಪುಷ್ಪವರ್ಣಮ್ । ದ್ವಿದಲೇ ಬ್ರಹ್ಮವಾಯೂ ಸ್ತಃ । ಗರುಡೋ ಅಭಿಮಾನೀ । ತನ್ನಿಯಾಮಕಂ ಕೃಷ್ಣಮುಪಾಸ್ತೇ । ತತ್ರ ಸಪ್ತಮರುತಃ ಸಂತಿ । ತಪೋಲೋಕಃ ॥ ಇತಿ ಷಷ್ಠಕಮಲಮ್ ॥

ಶಿರಸಿ ಸಹಸ್ರದಲಂ ಕಮಲಮ್ । ವಜ್ರಪ್ರಕಾಶಃ । ವಿಶ್ವಂ ವಿಷ್ಣುರ್ವಷಟ್ಕಾರಾದಯಃ ಸಹಸ್ರಮೂರ್ತಯಃ ಸಂತಿ । ತತ್ರ ತತ್ತನ್ನಾಮಕವಾಯುರೂಪಾಣಿ ಸಂತಿ । ತಾನಿ ವಿಶ್ವಾದಿಸಹಸ್ರಮೂರ್ತೀರುಪಾಸತೇ । ರುದ್ರಾದ್ಯಾಃ ಸರ್ವೇ ದೇವಾಃ ಪ್ರಾಣಮುಪಾಸತೇ । ತತ್ರ ಸಪ್ತಮರುತಃ ಸಂತಿ । ತತ್ರ ಅಭಿಮಾನೀ ಬ್ರಹ್ಮಾ ಶ್ರೀರಂಗಮುಪಾಸತೇ । ಸಹಸ್ರದಲಕಮಲಸ್ಯ ನಿಯಾಮಕೋ ವಾಸುದೇವಃ । ಸಃ ಸತ್ಯಲೋಕಃ । ತದ್ಧ್ಯಾನೇನೈವ ಮೋಕ್ಷಃ ॥ ಇತಿ ಸಪ್ತಮಕಮಲಮ್ ॥

ಪ್ರಧಾನನಾಡಿಕಾ ಏಕಾ । ಉಪನಾಡೀ ಶತಮ್ । ತತ್ರ ಪ್ರತ್ಯೇಕಂ ಶತಂ ಶತಂ ನಾಡ್ಯಃ ಸಂತಿ । ಏಕಶತೋತ್ತರಂ ದಶಸಹಸ್ರಮ್ । ಏತಾಸಾಂ ಪ್ರತಿ ಶಾಖಾನಾಡ್ಯಃ ಸಂತಿ । ಏತಾಸು ಶತನಾಡೀಷು ಪ್ರತ್ಯೇಕಂ ದಶ ದಶ ಪುನಃ ಶತನಾಡೀಷು ಪ್ರತ್ಯೇಕಂ ನವ ನವ ಶತತ್ರಯನಾಡೀಷು ಪ್ರತ್ಯೇಕಂ ಅಷ್ಟೌ ಅಷ್ಟೌ ಏವ । ಉರ್ವರಿತಾಸು ಷಟ್‌ಶತೋತ್ತರ ನವಸಹಸ್ರನಾಡೀಷು ಪ್ರತ್ಯೇಕಂ ಷಟ್‌ಷಟ್‌ಪ್ರಮಾಣೇನ ನಾಡ್ಯಃ ಸಂತಿ । ಷಟ್‌ಶತೋತ್ತರ ಸಪ್ತಪಂಚಾಶತ್ಸಹಸ್ರಮ್ । ಪೂರ್ವಪೂರ್ವೋಕ್ತನಾಡೀನಾಂ ಸಂಖ್ಯಾ

ಮೂಲೇ ಚ ನಾಭೌ ಹೃದಯೇಂದ್ರಯೋನಿಭ್ರೂಮಧ್ಯಮೂರ್ಧ್ನಿ ದ್ವಿಷಡಂತಕೇಷು।
ಚತುಃಷಡಷ್ಟದ್ವಿಚತುರ್ದ್ವಿಷಟ್ಕದಲೇಷು ಪದ್ಮೇಷು ಸಿತಾರುಣೇಷು।
ಪಂಚಾತ್ಮಕೋಽಸೌ ಭಗವಾನ್ ಸದೈವ ಧ್ಯೇಯೋ ಹೃದಂತಾನ್ಯರುಣಾನಿ ತಾನಿ॥
ತ್ರಿಕೋಣವಹ್ನೌ ಚ ಷಡಸ್ರವಾಯೌ ದ್ವಿಸ್ತಾವದಸ್ರರವಿವೃತ್ತಶಶಿತ್ರಿವಹ್ನೌ।
ವೃತ್ತೇ ವಿಧಾವಪಿ ವಿಚಿಂತ್ಯಮಿದಂ ದಶಾರ್ಧರೂಪಂ ಸಿತಂ ತದಖಿಲಂ ಹೃದಯಾತ್ಪರಸ್ಥಮ್॥

- ತಂತ್ರಸಾರಸಂಗ್ರಹ (೪/೧೫೨,೧೫೩)

*****

## ೯೯. ನೀನೆಲೆಸಿರಲು ಹೊಲೆಯುಂಟೆ ರಕ್ಷಿಸು

ತೊಲಗುವರು ಕಡೆಕಡೆಗೆ ತಾ ಹೊಲೆ-
ಹೊಲೆಯನುತ ಕಳವಳಿಸಿ ಮೂತ್ರದ
ಬಿಲದೊಳಗೆ ಬಂದಿಹುದ ಕಾಣದೆ ಬರಿದೆ ಮನನೊಂದು।
ಜಲದೊಳಗೆ ಮುಳುಗಿದರೆ ತೊಲಗದು
ಹೊಲೆಗೆಲಸವೀದೇಹದೊಳು ನೀ-
ನೆಲೆಸಿರಲು ಹೊಲೆಯುಂಟೆ ರಕ್ಷಿಸು ನಮ್ಮನನವರತ ॥ ೯೯ ॥

ಅ: ಜೀವನದ ಕಟ್ಟಕಡೆಯ ಭಾಗದಲ್ಲಿ ಜನರು ದೇಹವನ್ನು ಕಂಡು ಅದು, ಹೊಲೆ ಹೊಲೆ ಎಂದು ಕಳವಳಿಸಿ ದೂರಕ್ಕೆ ತೊಲಗುವರು. ಈ ದೇಹವು ಮೂತ್ರದ ಬಿಲದೊಳಗಿಂದ ಬಂದದ್ದು ಎಂಬುದನ್ನು ಅರಿಯದೇ ಮನಸ್ಸಿನೊಳಗೆ ನೋಯುವರು. ನೀರಿನೊಳಗೆ ಮುಳುಗಿದ ಮಾತ್ರಕ್ಕೆ ಮೈಲಿಗೆ ದೂರಾಗದು. ಈ ದೇಹದಲ್ಲಿ ನೀನು ನೆಲೆಸಿರುವವರೆಗೂ ಇದಕ್ಕೆ ಮೈಲಿಗೆ ಇರದು. ನೀನು ತೊಲಗಿದಾಗ ಮಾತ್ರ ನಿಜಕ್ಕೂ ಮೈಲಿಗೆಯೇ. ಶ್ರೀಹರಿಯೇ! ಇಂತಹ ಹಿರಿಮೆಯ ನೀನು ನಮ್ಮನ್ನು ಸದಾ ರಕ್ಷಿಸು.

ವಿ.: ೧. ಅಂತ್ಯಕಾಲದಲ್ಲಿ ದೇಹಕ್ಕೆ ಒದಗುವ ದುಸ್ಥಿತಿಯನ್ನು ಇದರಲ್ಲಿ ವಿವರಿಸಲಾಗಿದೆ.

೨. ಬಾಲ್ಯ, ಯೌವನಾದಿಗಳು ಕಳೆದು ಮುಪ್ಪು ಬಂದಾಗಲೇ ದೇಹಕ್ಕೆ ಒಂದು ಬಗೆಯ ವಿಕಾರ ಉಂಟಾಗುವುದು. ಅದರೊಂದಿಗೆ ರೋಗ-ರುಜಿನಗಳು ಸೇರಿ ಅಸಹ್ಯವೆನ್ನಿಸುವ ಹಂತವನ್ನು ಅದು ತಲುಪುವುದು. ಆ ಸಮಯದಲ್ಲಿ ಬಂಧು-ಬಾಂಧವರು ಸಹ ಅದರ ಬಗ್ಗೆ ಮೈಲಿಗೆ ಎಂಬ ಭಾವದಿಂದ ದೂರಕ್ಕೆ ಸರಿದು ಬಿಡುವರು ಎಂದು ಇದರ ಒಂದು ಅರ್ಥ.

---

ಶತತ್ರಯೋತ್ತರಂ ಚತುಃಸಹಸ್ರಮ್ । ಪೂರ್ವೋಕ್ತಂ ಏಕಶತೋತ್ತರದಶಸಹಸ್ರಮ್ । ಪೂರ್ವೋಕ್ತಾ ನಾಡ್ಯಃ ಸಂತಿ। ಏವಂ ಮಿಲಿತ್ವಾ ದ್ವಾಸಪ್ತತಿ ಸಹಸ್ರ ಏಕಶತ ಏಕನಾಡ್ಯಃ ಸಂತಿ (೧, ೧೦೦, ೧೦೧೦೦, ೪೦೩೦೦, ೫೭೬೦೦, ೭೨೧೦೧) ॥ - ಪಂಚರಾತ್ರೋಕ್ತ ಸಂಗ್ರಹಃ।

೩. ಇದು ದೇಹದ ಪರಿಸ್ಥಿತಿಯಾದರೆ, ಇನ್ನು ಜನರ ಪರಿಸ್ಥಿತಿ, ಅವರು ಮುಪ್ಪಿನ ರೋಗದ ಬೀಡನ್ನಿಸಿದ ದೇಹದ ಬಗ್ಗೆ ಅಸಹ್ಯಪಡುವುದು ನಿಜ. ಆದರೆ, ಆ ದೇಹ ಮೂಲತಃ ಪಾಂಚಭೌತಿಕವಾದುದು. ಅದು, ಹುಟ್ಟಿ ಬರುವುದೇ ಮೂತ್ರದ ಬಿಲದಿಂದ. ಎಂದರೆ, ಅದು ಮೈಲಿಗೆ ಎಂಬುದು ಅದರ ಹುಟ್ಟಿನಿಂದಲೂ ಬಂದಿರುವ ದೋಷ. ಅದನ್ನು ತಿಳಿಯದೆ, ಮತ್ತು ಅದು ತಮಗೂ ಒದಗುವ ಪರಿಸ್ಥಿತಿ ಎಂಬುದನ್ನು ಅರ್ಥ ಮಾಡಿಕೊಳ್ಳದೆ ತಮ್ಮ ಪ್ರಿಯ ಜನರನ್ನು ಅಂತ್ಯಕಾದಲ್ಲಿ ತೊರೆದು ದೂರಹೋಗುವುದು ಅವರ ಅವಿವೇಕಕ್ಕೆ ನಿದರ್ಶನ.

೪. ಹೀಗೆ ಆ ದೇಹದ ಬಗ್ಗೆ ಬೇಸರಿಸುವ ಜನ ಅದನ್ನು ಮುಟ್ಟಿ ಮೈಲಿಗೆಯಾಯಿತೆಂದು ಭಾವಿಸಿ ನೀರಿನೊಳಗೆ ಮುಳುಗಿ ಶುದ್ಧರಾಗಲು ಬಯಸುವರು. ಅವರಿಗೆ ತಮ್ಮ ದೇಹವು ಸಹ ಅಂತಹುದೇ ಎಂಬ ಪ್ರಜ್ಞೆ ಇರುವುದಿಲ್ಲ. ನಿಜಕ್ಕೂ ದೇಹದ ಪರಿಶುದ್ಧಿ ಇರುವುದು ಅದರೊಳಗೆ ಭಗವಂತನಾದ ಶ್ರೀಹರಿ ನೆಲೆಸಿರುವುದರಿಂದ. ಅವನು, ತನ್ನ ಸನ್ನಿಧಾನವನ್ನು ಇರಿಸಿರುವವರೆಗೂ ಸಹ ಆ ದೇಹಕ್ಕೆ ಮೈಲಿಗೆ ಸರ್ವಥಾ ಇರುವುದಿಲ್ಲ. ಆದರೆ, ಅವನು ತೊರೆದು ಹೋದಾಗ ಅದು ಹೆಣ ಎನ್ನಿಸಿ ನಿಜಕ್ಕೂ ಮೈಲಿಗೆ ಎನ್ನಿಸುವುದು; **ಹೊಲೆ** – ಕೊಳಕು, ಹೇಸಿಗೆ, ಕಸ, ಮೈಲಿಗೆ.

೫. ಹೀಗೆ ದೇಹದ ಶುದ್ಧಿಯು ಅದರೊಳಗೆ ನೆಲೆಸಿರುವ ಭಗವಂತನಿಂದಲೇ ಹೊರತು, ಬೇರೆ ಕಾರಣದಿಂದಲ್ಲ. ಅದಕ್ಕೆ ಒದಗುವ ಮೈಲಿಗೆಯು ಸಹ ಭಗವಂತನನ್ನು ತೊರೆದಾಗ ಹೊರತು, ಇತರ ಕಾರಣಗಳಿಂದಲ್ಲ. ಹೀಗೆ ದೇಹದ ಶುದ್ಧಿಗೆ ಕಾರಣನಾದ ಭಗವಂತನೇ ಸದಾ ನಮ್ಮನ್ನು ರಕ್ಷಿಸಬೇಕು ಎಂಬುದು ಇಲ್ಲಿಯ ಭಾವ.

೬. ಮರಣದ ಸೂತಕದ ಆಚರಣೆಯನ್ನು ದಾಸರು ಇಲ್ಲಿ ನಿಷೇಧಿಸಿಲ್ಲ. ಸೂತಕದ ಆಚರಣೆ, ಶುದ್ಧಿಗಾಗಿ ಸ್ನಾನ ಇವು ಶಾಸ್ತ್ರವಿಹಿತವೇ ಆಗಿವೆ. ಆದರೆ, ಅಷ್ಟುಮಾತ್ರದಿಂದ ಪೂರ್ಣಶುದ್ಧಿ ಲಭಿಸದು. ಮುಖ್ಯವಾಗಿ ಭಗವಂತನ ಧ್ಯಾನವೇ ಸಕಲವಿಧ ಶುದ್ಧಿಗೂ ಮುಖ್ಯಸಾಧನ ಎಂದು ಭಾವ:

**ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂಗತೋಽಪಿ ವಾ ।**
**ಯಃ ಸ್ಮರೇತ್ ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರ ಶುಚಿಃ ॥**

೭. ಸಂಸಾರದಲ್ಲಿನ ಹುಟ್ಟು ಮೊದಲಾದವುಗಳ ಘೋರತೆಯನ್ನು ತಿಳಿಸುವ ಶ್ರೀಕನಕದಾಸರ ಒಂದು ಪದ್ಯ ಹೀಗಿದೆ:

ಏತರನೆವನೆಂದು ಪೇಳಲಿ – ಜಗ–
ನ್ನಾಥ ಮಾಡಿದ ನನ್ನ ನರರೂಪಕಾಯವ ॥ ಪ ॥
ಮುಟ್ಟು ಹುಟ್ಟಿನೊಳು ನೆಟ್ಟನೆ ನಾ ಬಂದೆ
ತೊಟ್ಟಿದ್ದೆನಾಗ ತೊಗಲಬೊಕ್ಕಣ
ಇಷ್ಟರೊಳಗೆ ಒಂದು ವಿವರವನರಿಯದ
ಭ್ರಷ್ಟಗೆ ನನಗೆ ಇನ್ನೇತರ ಕುಲವೊ ॥ ೧ ॥

ಇಂದ್ರಿಯ ಸೂತಕ ದುರ್ಗಂಧದ ಮಲಮೂತ್ರ
ನಿಂದ ಠಾವಲಿ ತನ್ನ ನಿಜವರಿಯದೆ
ಬಂದದ್ದು ಬಚ್ಚಲಕುಣಿ ತಿಂದದ್ದು ಮೊಲೆಯ ಮಾಂಸ – ಇಂಥ
ನಿಂದಕಗೆ ನನಗೆ ಇನ್ನೇತರ ಕುಲವೊ ॥ ೨ ॥
ಒಂಬತ್ತು ಹೆಜ್ಜದ ತನುವಿನ ಹೊಲಸಿನೊಳ್
ತುಂಬಿ ತುಂಬಿ ದೇಹ ತುಳುಕುತಿದೆ
ಇಂಬಿಲ್ಲವಿದರೊಳು ಇದು ಪುಳುವಿನ ಕೊಂಡ – ಇಂಥ
ಡಂಭಕ ನನಗೆ ಇನ್ನೇತರ ಕುಲವೊ ॥ ೩ ॥
ಎಲವು ಖಂಡ ರೋಹಿತ ನರಪಂಜರ
ಪಳುವಿನೊಳಗೆ ನಮ್ಮ ಕುಲವ ಕೇಳುವರೆ
ಬಲಿದ ಚರ್ಮ ರಕ್ತ ಹೊತ್ತು ತಿರುಗುವ ಶುದ್ಧ
ಹೊಲೆಯಗೆ ನನಗೆ ಇನ್ನೇತರ ಕುಲವೊ ॥ ೪ ॥
ಹಚ್ಚಡದ ಮೇಲೊಂದು ಲಚ್ಚಿಗೆಯಿಟ್ಟಂತೆ
ಹೆಚ್ಚು ಕುಂದಿಗೆ ಲೋಕ ಹೆಣಗಾಡುತ
ನಿಶ್ಚಿತ ಕಾಗಿನೆಲೆಯಾದಿಕೇಶವನ
ಹುಚ್ಚಗೆ ನನಗೆ ಇನ್ನೇತರ ಕುಲವೊ ॥ ೫ ॥

*****

## ೧೦೦. ನಿನ್ನ ನಾಮಸ್ಮರಣೆಯೊಂದೇ ಸಾಕು ರಕ್ಷಿಸು

**ಬರಿದಹಂಕಾರದಲಿ ತತ್ತ್ವದ**
**ಕುರುಹ ಕಾಣದೆ ನಿನ್ನ ದಾಸರ**
**ಜರೆದು ವೇದಪುರಾಣಶಾಸ್ತ್ರಗಳೋದಿ ಫಲವೇನು ।**
**ನರರು ದುಷ್ಕರ್ಮದಲಿ ಮಾಡಿದ**
**ದುರಿತವಡಗಲು ನಿನ್ನ ನಾಮ-**
**ಸ್ಮರಣೆಯೊಂದೇ ಸಾಕು ರಕ್ಷಿಸು ನಮ್ಮನನವರತ ॥ ೧೦೦ ॥**

**ಅ: ಒಣ ಅಹಂಕಾರದಿಂದ ತತ್ತ್ವದ ಸುಳಿವನ್ನೇ ತಿಳಿಯದ ಜನರು, ಭಗವಂತನಾದ ನಿನ್ನ ದಾಸರನ್ನು ಹೀಗಳೆಯುವರು. ಅಂತಹವರು ವೇದ, ಪುರಾಣ, ಶಾಸ್ತ್ರಗಳನ್ನು ಓದಿ ಏನು ಫಲ? ಇಂತಹ ಒಣ ಪಾಂಡಿತ್ಯಕ್ಕಿಂತ ಮನುಷ್ಯನಿಗೆ ಅವರು ದುಷ್ಕರ್ಮವಶಾತ್ ಮಾಡಿದ ಪಾಪವು ಪರಿಹಾರವಾಗಿ ನಿನ್ನ ನಾಮಸ್ಮರಣೆ ಒದಗುವುದು. ಜೀವರ ಉದ್ಧಾರಕ್ಕೆ ಅದೊಂದೇ ಸಾಕು. ಅಂತಹ ಮಹಾಮಹಿಮೆಯ ಶ್ರೀಹರಿಯೇ! ನೀನು ನಮ್ಮನ್ನು ಸದಾ ರಕ್ಷಿಸು.**

ವಿ.: ೧. ಶಾಸ್ತ್ರವನ್ನು ಅಧ್ಯಯನ ಮಾಡಿ ಪಂಡಿತರಾದ ಜನರು, ಅಹಂಕಾರಕ್ಕೆ ಒಳಗಾದಲ್ಲಿ ಅವರ ಸಾಧನೆ ವ್ಯರ್ಥವೆನ್ನಿಸುವುದು ಎಂಬ ವಿವರ ಇದರಲ್ಲಿ ಬಂದಿದೆ.

೨. ಶಾಸ್ತ್ರಾಧ್ಯಯನವು ಸಾಧನೆಗೆ ಅತ್ಯಗತ್ಯವಾದ ಅಂಶ. ಅಂತಹ ಅಧ್ಯಯನದಿಂದ ಲಭಿಸುವ ಜ್ಞಾನವು ಜಗತ್ತನ್ನು, ಜಗನ್ನಾಥನಾದ ಶ್ರೀಹರಿಯನ್ನು ಸರಿಯಾಗಿ ತಿಳಿದು ಜಗತ್ತಿನ ಬಗ್ಗೆ ವೈರಾಗ್ಯವನ್ನು ತಳೆಯಲು ಜಗನ್ನಾಥನಾದ ಅವನ ಬಗ್ಗೆ ಭಕ್ತಿಯನ್ನು ಹೊಂದಲು ಸಾಧನವಾಗುವುದು. ಹೀಗೆ ಅಧ್ಯಯನದ ಫಲವನ್ನು ಜೀವನ ಸಾರ್ಥಕ್ಯಕ್ಕೆ ಬಳಸಿಕೊಳ್ಳದೆ, ಪಾಂಡಿತ್ಯ ಸಂಪಾದನೆಯ ಕಾರಣದಿಂದ ಅಹಂಕಾರಕ್ಕೆ ಒಳಗಾಗುವುದು ಅತ್ಯಂತ ಅಪಾಯಕರ. ಉದ್ಧಾರದ ಬದಲು ಪತನವೇ ಅದರ ಫಲ.

೩. ಶಾಸ್ತ್ರಾಧ್ಯಯನ ಮಾಡಿದ ಅನೇಕ ಪಂಡಿತರು ಅದನ್ನು ಅಹಂಕಾರಕ್ಕೆ ಕಾರಣವನ್ನಾಗಿ ಬಳಸಿಕೊಳ್ಳುವುದುಂಟು. ಅದರಿಂದಾಗಿ ಪಾಂಡಿತ್ಯವಿರದ ಪಾಮರ ಜನರನ್ನು ಕಂಡು ಅವರನ್ನು ಕೀಳಾಗಿ ನೋಡುತ್ತಾ ಹಳಿಯುವ ದುಷ್ಪ್ರವೃತ್ತಿಯನ್ನು ಬೆಳೆಸಿಕೊಳ್ಳುವರು. ಅದು ಸರ್ವಥಾ ಸರಿಯಲ್ಲ. ವಾಸ್ತವವಾಗಿ ಪಾಂಡಿತ್ಯದ ಫಲ ವಿನಯವಾಗಬೇಕು. ಅದು ಅಹಂಕಾರವನ್ನು ಅಳಿಸುವ ಸಾಧನವಾಗಬೇಕೇ ಹೊರತು, ಬೆಳೆಸುವ ಸಾಧನವಾಗಬಾರದು. ಪಾಮರರ ಬಗ್ಗೆ ಹುಟ್ಟಬೇಕಾದದ್ದು ಕನಿಕರ, ಅನುಕಂಪವೇ ಹೊರತು ತಿರಸ್ಕಾರವಲ್ಲ. ತಾನು ಸಂಪಾದಿಸಿದ ಜ್ಞಾನದಿಂದ ಭಗವಂತನನ್ನು ಆರಾಧಿಸುವ ಸುಯೋಗ ಲಭಿಸಿದೆ ಎಂದು ಬಾವಿಸಿ, ಜಗನ್ನಾಥನನ್ನು ಆರಾಧಿಸುವುದು ಜಗತ್ತಿನ ಜನರಿಗೆ ಹಿತವನ್ನು ಬಯಸುವುದು ಜ್ಞಾನಿಗಳ ಮುಖ್ಯ ಕರ್ತವ್ಯ; **ಕುರುಹು** – ಗುರುತು.

೪. ಪಾಮರ ಜನರಿಗೂ ಸಹ ಅವರು ಮಾಡಿದ ದುಷ್ಕರ್ಮದ ಫಲ ಅಳಿದು ದುರಿತ ಪರಿಹಾರವಾದಾಗ ಉದ್ಧಾರದ ಹಾದಿ ತೆರೆದುಕೊಳ್ಳುವುದು. ಅವರು ಭಕ್ತಿ – ಭಾವದಿಂದ ಭಗವಂತನ ನಾಮಸ್ಮರಣೆಗೆ ತೊಡಗುವರು. ಅದು ಅವರ ಉದ್ಧಾರಕ್ಕೆ ಕಾರಣವಾಗುವುದು. ಪಾಂಡಿತ್ಯ ಸಂಪಾದನೆ ಇಲ್ಲದೆಯೂ ಅವರು ಸನ್ಮಾರ್ಗವನ್ನು ಹಿಡಿದು ಮುಂದೆ ವಿಹಿತಸಾಧನೆಯನ್ನು ಮಾಡಿ ಉದ್ಧಾರವಾಗುವ ಅವಕಾಶ ಅವರಿಗೆ ಇದ್ದೇ ಇರುವುದು. ಅದನ್ನು ಗಮನಿಸದೇ ಪಾಮರರನ್ನು ಹಳಿದು ಪಾಂಡಿತ್ಯದ ಬಗ್ಗೆ ಬೀಗುವ ಜನರದು ನಿಜಕ್ಕೂ ಶೋಚನೀಯವಾದ ಸಂಗತಿ ಎಂಬ ಇಲ್ಲಿಯ ನಿರೂಪಣೆ ಅತ್ಯಂತ ಮಾರ್ಮಿಕವಾದುದು:

ಗೋವಿಂದ ಗೋವಿಂದ ಎನ್ನಲರಿಯದೆ – ವೃಥಾ
ನೋವಿಂದ ಭಂಗವ ಪಡುವುದುಚಿತವೆ ? ॥ ಪ ॥
ಕ್ಷೀಣ ಶಾಸ್ತ್ರಾರ್ಥವನು ಪರಿಗ್ರಹಿಸುತೆ ಕುರಿ
ಕೋಣಗಳ ತಲೆ ಚೆಂಡನಾಡಿ
ಪ್ರಾಣ ಹತ್ಯವ ಮಾಳ್ಪುದಾವ ಸತ್ಕರ್ಮವೊ
ಶ್ರೀನಿವಾಸನ ನಾಮ ಸ್ಮರಣೆ ಮಾಡು ॥ ೧ ॥

ಖಂಡ ಕೊಯ್ದು ಕೊಡಬೇಡ ದಳ್ಳುರಿಯಗ್ನಿ-
ಕುಂಡವನು ಹೊಕ್ಕು ಹೊರಡುವುದುಚಿತವೆ
ಭಂಡರಂದದಿ ಬತ್ತಲೆ ಬಹುದಾವಾಟ
ಪುಂಡರೀಕಾಕ್ಷನ ನೆನೆ ಕಾಣೊ ಮನವೆ ॥ ೨ ॥
ಕುಟ್ಟಿಕೊಳ್ಳದಿರಿ ಜಟ್ಟಿಗುಂಡಿನಲಿ
ಚಿಟ್ಟಿ ಕೊಳ್ಳದಿರಿ ಬೆನ್ನಲಿ ಸಿಡಿಯನು
ಕಟ್ಟಿತೂಗಿಸಿಕೊಳ್ಳದಿರಿ ಕರಟಕದಂತೆ
ಗುಟ್ಟಿನಲಿ ಗೋಪಾಲಕನ ಸ್ಮರಿಸೊ ॥ ೩ ॥
ತೊಗಲ ಬಿಲ್ಲೆ ಕೊರಳಲ್ಲಿ ಕಟ್ಟಿಕೊಂಡು
ಹಗಲು-ಇರುಳು ಅನ್ನಪಾನಕೆ ಹೋಗದೆ
ಖಗವೈರಿಯಂತೇ ಕಿಸುಕೆಲೆವುದಾವಾಟ
ಜಗದಧಿಪತಿಯ ನಾಮ ಸ್ಮರಿಸು ಮರುಳೆ ॥ ೪ ॥
ಉತ್ತಮ ಜನರು ಸುರೆಯನೀಂಟುವರೆ ಮದೋ-
ನ್ಮತ್ತರಾಗಿ ಶಬ್ದ ನುಡಿಯುವರೆ ?
ಸತ್ತವನಂತೆ ಬಿದ್ದಿಹುದಾವನೀತಿ ಪುರು-
ಷೋತ್ತಮನ ನಾಮ ಸ್ಮರಣೆಯ ಮಾಡು ॥ ೫ ॥
ವೇದೋಕ್ತ ಪೂಜೆಯಲಿ ತೃಪ್ತಿಪಡಿಸದಿರೆ
ಆದುದೇನು ಅದರಿಂದ ಫಲವಾಗುವುದು
ನಾದವ ಕೇಳ್ದ ಹರಿಣನಂತೆ ಕೆಡದೆ ಮಧು-
ಸೂದನನ ನಾಮ ಸ್ಮರಣೆಯ ಮಾಡೊ ॥ ೬ ॥
ನಿಂದಾಪವಾದ ಘಟಿಸುವುದೈಸೆ ಇದರಿಂದ
ಮುಂದೆ ಮುಕ್ತಿಯು ನಿಮಗೆ ಸಾಧ್ಯವಹುದೆ?
ತಂದೆ ಶ್ರೀಕಾಗಿನೆಲೆಯಾದಿಕೇಶವನಾಮ
ಒಂದೇ ವೈಕುಂಠವನ್ನೈದಿಪುದಯ್ಯ ॥ ೭ ॥

**

ನೇಮವಿಲ್ಲದ ಹೋಮವೇತಕಯ್ಯ
ರಾಮನಾಮವಲ್ಲದೆ ಮತ್ತೆ ನಮಗೆ ಬೇರೊಂದೆ ॥ ಪ ॥
ನೀರ ಮುಣುಗಲು ಏಕೆ ನಾರಿಯನು ಬಿಡಲೇಕೆ
ವಾರಕೊಂದುಪವಾಸವಿರಲೇತಕೆ
ನಾರಸಿಂಹನ ದಿವ್ಯನಾಮವನು ನೆನೆದರೆ
ಘೋರ ಪಾತಕವೆಲ್ಲ ತೊಲಗಿ ಪೋಗುವುದು ॥ ೧ ॥

ಅಂಬರವ ತೊರೆಯಲೇಕೆ ತಾಂಬೂಲ ಬಿಡಲೇಕೆ
ಡಂಭತನದಲ್ಲಿ ನೀನಿರಲೇತಕೆ
ಅಂಭೋಜನಾಭನನು ಭಾವದಲಿ ನೆನೆದರೆ
ಇಂಬುಂಟು ವೈಕುಂಠಪುರದೊಳಗೆ ಅಯ್ಯ ॥ ೨ ॥
ಬಂಧದೊಳಗೆ ಬಿದ್ದು ಹರಿಯನೆ ನೆನೆಯುತಿರೆ
ಬೆಂದು ಹೋಗುವುವು ದುರಿತಂಗಳೆಲ್ಲ
ಬಂದ ದುಃಖಗಳೆಲ್ಲ ನಿಲ್ಲದಲೆ ಕಳೆಯುವುವು
ಚೆಂದಾಗಿ ಕಾಗಿನೆಲೆಯಾದಿಕೇಶವನ ನೆನೆಯೆ ॥ ೩ ॥

೫. ಹರಿಕಥಾಮೃತಸಾರದ ಅನೇಕ ಪದ್ಯಗಳು ಇದರ ವಿವರಣೆಯಂತಿವೆ:

ಪತಿಯೊಡನೆ ಮನಬಂದ ತೆರದಲಿ
ಪ್ರತಿದಿವಸದಲಿ ರಮಿಸಿ ಮೋದಿಸಿ
ಸುತರ ಪಡೆದಿಳೆಯೊಳು ಜಿತೇಂದ್ರಿಯಳೆಂದು ಕರೆಸುವಳು।
ಕೃತಿಪತಿಕಥಾಮೃತ ಸುಭೋಜನ-
ರತ ಮಹಾತ್ಮರಿಗಿತರ ದೋಷ-
ಪ್ರತತಿಗಳು ಸಂಭವಿಸುವವೆ ಅಚ್ಯುತನ ದಾಸರಿಗೆ ॥ ೧೧ ॥

ಸೂಸಿಬಹ ನದಿಯೊಳಗೆ ತನ್ನ ಸ-
ಹಾಸ ತೋರುವೆನೆಂದು ಜಲಕಿದಿ-
ರೀಸಿದರೆ ಕೈಸೋತು ಮುಳುಗುವ ಹರಿಯ ಬಿಟ್ಟವನು।
ಕ್ಲೇಶವೈದುವನಾದಿಯಲಿ ಸ-
ರ್ವೇಶ ಕ್ಲೃಪ್ತಿಯ ಮಾಡಿದುದ ಬಿ-
ಟ್ಟಾಶೆಯಿಂದಲಿ ಅನ್ಯರಾರಾಧಿಸುವ ಮಾನವನು ॥ ೧೨ ॥

ನಾನು ನನ್ನದು ಎಂಬ ಜಡಮತಿ-
ಮಾನವನು ದಿನದಿನದಿ ಮಾಡುವ
ಸ್ನಾನ ಜಪ ದೇವಾರ್ಚನೆಯೆ ಮೊದಲಾದ ಕರ್ಮಗಳ।
ದಾನವರು ಸೆಳೆದೊಯ್ವರಲ್ಲದೆ
ಶ್ರೀನಿವಾಸನು ಸ್ವೀಕರಿಸ ಮ-
ದ್ದಾನೆ ಪಕ್ವಕಪಿತ್ಥಫಲ ಭಕ್ಷಿಸಿದವೋಲಹದು ॥ ೧೩ ॥

ಧಾತ್ರಿಯೊಳಗುಳ್ಳಖಿಳ ತೀರ್ಥ-
ಕ್ಷೇತ್ರ ಚರಿಸಿದರೇನು ಪಾತ್ರಾ-
ಪಾತ್ರವರಿತನ್ನಾದಿದಾನವ ಮಾಡಿ ಫಲವೇನು।

ಗಾತ್ರನಿರ್ಮಲನಾಗಿ ಮಂತ್ರ-
ಸ್ತೋತ್ರ ಪಠಿಸಿದರೇನು ಹರಿ ಸ-
ರ್ವತ್ರ ಗತನೆಂದರಿಯದಲೆ ತಾ ಕರ್ತೃಯೆಂಬವನು ॥ ೧೪ ॥

ಕಂಡ ನೀರೊಳು ಮುಳುಗಿ ದೇಹವ
ದಂಡಿಸಲು ಫಲವೇನು ದಂಡಕ-
ಮಂಡಲುಗಳನು ಧರಿಸಿ ಯತಿಯೆಂದೆನಿಸಿ ಫಲವೇನು ।
ಅಂಡಜಾಧಿಪನಂಸಗನ ಪದ-
ಪುಂಡರೀಕದಿ ಮನವಹರ್ನಿಶಿ
ಬಂಡುಣಿಯವೋಲಿರಿಸಿ ಸುಖಬಡದಿಪ್ಪ ಮಾನವನು ॥ ೧೫ ॥

ವೇದಶಾಸ್ತ್ರಪುರಾಣಕಥೆಗಳ
ಓದಿ ಪೇಳಿದರೇನು ಸಕಲ ನಿ-
ಷೇಧಕರ್ಮವ ತೊರೆದು ಸತ್ಕರ್ಮಗಳ ಮಾಡೇನು ।
ಓದನಗಳನು ಜರಿದು ಶ್ವಾಸನಿ-
ರೋಧಗೈಸಿದರೇನು ಕಾಮ-
ಕ್ರೋಧವಳಿಯದೆ ನಾನು ನನ್ನದು ಎಂಬ ಮಾನವನು ॥ ೧೬ ॥

ಏನು ಕೇಳಿದರೇನು ನೋಡಿದ-
ರೇನು ಓದಿದರೇನು ಪೇಳಿದ-
ರೇನು ಪಾಡಿದರೇನು ಮಾಡಿದರೇನು ದಿನದಿನದಿ ।
ಶ್ರೀನಿವಾಸನ ಜನ್ಮ ಕರ್ಮ ಸ-
ದಾನುರಾಗದಿ ನೆನೆದು ತತ್ತ-
ತ್ಸ್ಥಾನದಲಿ ತದ್ರೂಪ ತನ್ನಾಮಕನ ಸ್ಮರಿಸದವ ॥ ೧೭ ॥

೬. ಶ್ರೀಹರಿಸ್ಮರಣೆಯ ಹಿರಿಮೆಯನ್ನು ಶ್ರೀದಾಸರು ಪದ್ಯವೊಂದರಲ್ಲಿ ಬಗೆಬಗೆಯಾಗಿ ವರ್ಣಿಸಿರುವರು[1].

---

೧. ಮರೆಯದಿರು ಮರೆಯದಿರು ಮರುಳು ಮನುಜಾ
ನಾರಾಯಣನ ಸ್ಮರಣೆಯನು ಮಾಡು ಮನುಜಾ ॥ ಪ ॥

ರಂಗನಾಥನು ಇರಲಿಕ್ಕೆ ಜಂಗುಳಿ ದೈವಗಳೇಕೆ
ತುಂಗಭದ್ರೆ ಇರಲಿಕ್ಕೆ ಬಾವಿಕೆರೆಯೇಕೆ
ಅಂಗನೆ ಸತಿ ಇರಲಿಕ್ಕೆ ಬಣಗು ಹೆಣ್ಣುಗಳೇಕೆ
ಮಂಗಳಾತ್ಮಕನಿರಲಿಕ್ಕೆ ಪರದೈವವೇಕೆ ॥ ೧ ॥
ಹಾಲು ಹಳ್ಳವಿರಲಿಕ್ಕೆ ವಾಳಿಯವ ತರಲೇಕೆ
ಮೇಲು ನಾಮವಿರಲಿಕ್ಕೆ ಕಟುಕು ಇನ್ನೇಕೆ

೭. ಜೀವನ ಸಾಧನೆಗಳನ್ನು ಮಣ್ಣುಗೂಡಿಸುವ ದೊಡ್ಡ ದೋಷವೆಂದರೆ ಅಹಂಕಾರ. ಅಂತಹ ಅಹಂಕಾರವನ್ನು ದಮನಮಾಡಲು ಶ್ರೀಕನಕದಾಸರು ಬಗೆಬಗೆಯ ಉಪದೇಶವನ್ನು ನೀಡಿರುವ ಪದಗಳು ಹೀಗಿವೆ:

ನಾನು ನೀನು ಎನ್ನದಿರೊ ಹೀನ ಮಾನವ
ಜ್ಞಾನದಿಂದ ನಿನ್ನ ನೀನೆ ತಿಳಿದು ನೋಡೆಲೊ ... ಪ್ರಾಣ ॥ ಪ ॥
ಹೆಣ್ಣು ಹೊನ್ನು ಮಣ್ಣು ಮೂರು ನಿನ್ನವೇನೆಲೊ
ಅನ್ನದಿಂದ ಬಂದ ಕಾಮ ನಿನ್ನದೇನೆಲೊ
ಕರ್ಣದಿಂದ ಬರುವ ಘೋಷ ನಿನ್ನದೇನೆಲೊ
ನಿನ್ನ ಬಿಟ್ಟು ಹೋಹ ಜೀವ ನಿನ್ನದೇನೆಲೊ ॥ ೧ ॥
ಹಲವು ಜನ್ಮದಿಂದ ಬಂದಿರುವನು ನೀನೆಲೊ
ಮಲದ ಗರ್ಭದಲ್ಲಿ ನಿಂದಿರುವನು ನೀನೆಲೊ
ಜಲದ ದಾರಿಯಲ್ಲಿ ಬಂದಿರುವನು ನೀನೆಲೊ
ಕುಲವು ಜಾತಿ ಗೋತ್ರಗಳುಳ್ಳವನು ನೀನೆಲೊ ॥ ೨ ॥
ಕಾಲ–ಕರ್ಮ ಶೀಲ–ನೇಮ ನಿನ್ನದೇನೆಲೊ
ಜಾಲವಿದ್ಯೆ ಬಯಲಮಾಯೆ ನಿನ್ನದೇನೆಲೊ
ಕೀಲು ಜಡಿದ ಮರದ ಬೊಂಬೆ ನಿನ್ನದೇನೆಲೊ
ಲೋಲ ಆದಿಕೇಶವನ ಭಕ್ತನಾಗೆಲೊ ॥ ೩ ॥

**

---

ಬಾಲ ಹನುಮನಿರಲಿಕ್ಕೆ ಹುಲು ಕಪಿಗಳೇಕೆ
ಒಳ್ಳೆ ತುಳಸಿ ಇರಲಿಕ್ಕೆ ಕಗ್ಗೊರಲೆಯೇಕೆ ॥ ೨ ॥
ಚಿನ್ನದ ಗಿರಿಯಿರಲಿಕ್ಕೆ ಕಬ್ಬಿಣದ ಮೊರಡಿಯೇಕೆ
ರನ್ನ ಮಾಣಿಕವಿರಲಿಕ್ಕೆ ಕಾಜಿನ ಹರಳೇಕೆ
ಅನ್ನ ತುಪ್ಪವಿರಲಿಕ್ಕೆ ಮದ್ಯಪಾನಗಳೇಕೆ
ಚೆನ್ನಾದಿಕೇಶವನಿರೆ ಬಿನುಗು ದೈವಗಳೇಕೆ ॥ ೩ ॥

**

ನಾರಾಯಣ ನಿನ್ನ ನಾಮವೊಂದಿರುತಿರೆ । ಬೇರೊಂದು ನಾಮವಿನ್ನೇತಕಯ್ಯ ॥ ಪ ॥
ನೆಟ್ಟನ ದಾರಿಯು ಬಟ್ಟೆಯೊಳಿರುತಿರೆ । ಬೆಟ್ಟದ ಬಳಸಲಿನ್ನೇಕಯ್ಯ
ಅಷ್ಟೈಶ್ವರ್ಯದ ಮೃಷ್ಟಾನ್ನವಿರುತಿರೆ । ಬಿಟ್ಟಕೂಳನು ತಿನ್ನಲೇತಕಯ್ಯ ॥ ೧ ॥
ಪರಶುನೇವಾಳಂಗಳಿರುತಿರೆ ಬೀದಿಯ । ಬರಿಗಲ್ಲ ತೊಳೆಯಲಿನ್ನೇಕಯ್ಯ
ಹರಿವಾಣದೊಳಗಮೃತಾನ್ನವು ಇರುತಿರೆ । ತಿರಿದ ಕೂಳನು ತಿನ್ನಲೇತಕಯ್ಯ ॥ ೨ ॥
ಬೆಲ್ಲವು ಕರದೊಳಗಿರುತಿರೆ ಕಾಡಿನ । ಕಲ್ಲನು ಕಡಿಯಲಿನ್ನೇಕಯ್ಯ
ಬಲ್ಲಿದ ಕಾಗಿನೆಲೆಯಾದಿಕೇಶವನಿರೆ । ಚಿಲ್ಲರೆ ದೈವದ ಹಂಬಲೇತಕಯ್ಯ ॥ ೩ ॥

ಸಂಸಾರವೆಂಬ ಸಾಗರವನುತ್ತರಿಸುವರೆ
ಕಂಸಾರಿಯೆಂಬ ನಾಮವೊಂದೇ ಸಾಕು ಮರುಳೆ ॥ ಪ ॥
ಯತಿಯಾಗಬೇಡ ವೈರಾಗ್ಯವರಿತು ಸಕಲ
ವ್ರತವ ಮಾಡುವೆನೆಂಬ ಹಮ್ಮು ಬೇಡ
ಶ್ರುತಿಸ್ಮೃತಿಗಳನರಿತು ನಡೆವೆನೆನಬೇಡ ಶ್ರೀ-
ಪತಿಯ ಶ್ರೀನಾಮವೊಂದೆ ಸಾಕು ಮರುಳೆ ॥ ೧ ॥
ತನುವ ದಂಡಿಸಿ ತುದಿಯ ಕೋಡುಗಲ್ಲಿನ ಮೇಲೆ
ವನಿತೆಯನು ಬಿಟ್ಟು ತಪವಿರಲು ಬೇಡ
ಅನುವರಿತು ನೀರೊಳಗೆ ಬಿಡದೆ ಮುಳುಗಲು ಬೇಡ
ವನಜಾಕ್ಷ ನಾಮವೊಂದೆ ಸಾಕು ಮರುಳೆ ॥ ೨ ॥
ತೀರ್ಥಯಾತ್ರೆಗೆ ನೀನು ತಿರುಗಿ ಝೊಂಪಿಸಿ ಕೃ-
ತಾರ್ಥನಾದೆನೆಂಬುವ ಹೆಮ್ಮೆ ಬೇಡ
ಧೂರ್ತಭಂಜನ ಕಾಗಿನೆಲೆಯಾದಿಕೇಶವನ ಸಂ-
ಕೀರ್ತನೆಯ ಮಾಡಿ ಮೋಕ್ಷವನೈದು ಮರುಳೆ ॥ ೩ ॥

**

ಬೆರೆಯದಿರು ಬೆರೆಯದಿರು ಎಲೆ ಮಾನವ ॥ ಪ ॥
ಗರುವವೇತಕೊ ನಿನ್ನ ತೆರನಾವುದೊ ॥ ಅಪ ॥
ರೂಪದಲಿ ಮನ್ಮಥನೊ ಶಾಪದಲಿ ಗೌತಮನೊ
ಕೋಪದಲಿ ದುರ್ವಾಸಋಷಿಯೊ ನೀನು
ತಪದೊಳಗೆ ವ್ಯಾಸನೊ ಕೃಪೆಯಲ್ಲಿ ಬಲೀಂದ್ರನೊ
ನಿಪುಣತೆಯ ನುಡಿಯೊಳಗೆ ನಾರದನೊ ನೀನು ॥ ೧ ॥
ಕೊಡುವೆಡೆಗೆ ಕರ್ಣನೊ ನಡತೆಯಲಿ ಧರ್ಮಜನೊ
ದೃಢ ಮನಸಿನಲ್ಲಿ ರುಕ್ಮಾಂಗದನೊ ನೀನು
ಪಡೆಯೊಳಗೆ ಕೌರವನೊ ನುಡಿಯೊಳಗೆ ಗಾಂಗೆಯನೊ
ಮಡದಿಯರ ಭೋಗಕ್ಕೆ ಸುರಪತಿಯೊ ನೀನು ॥ ೨ ॥
ಛಲದೊಳಗೆ ರಾವಣನೊ ಬಲದಲ್ಲಿ ವಾಲಿಯೊ
ನಿಲುಗಡೆಯ ಮನಸಿನಲಿ ನೀ ದ್ರೋಣನೊ
ಕುಲದಲಿ ವಸಿಷ್ಠನೊ ಗೆಲುವಿನಲಿ ಪಾರ್ಥನೊ
ಬಿಲುವಿದ್ಯೆಯಲಿ ಪರಶುರಾಮನೊ ನೀನು ॥ ೩ ॥
ತ್ರಾಣದಲಿ ಭೀಮನೊ ಬಾಣದಲಿ ರಾಮನೊ
ಕೇಣತನದಲಿ ಶಿಶುಪಾಲನೊ ನೀನು

ರಣದೊಳು ಸುರೇಂದ್ರನೋ ಗುಣದಲಿ ಸುಧನ್ವನೋ
ಸೆಣಸುವಂದದಲಿ ನೀ ಇಂದ್ರಜಿತನೋ ॥ ೪ ॥
ಯುದ್ಧದಲಿ ತಾರಕನೊ ವಿದ್ಯೆಯಲಿ ಗಾರ್ಗೆಯನೊ
ಶುದ್ಧದಲಿ ಮಾಂಡವ್ಯಋಷಿಯೊ ನೀನು
ಸಿದ್ಧಿಯಲಿ ಕಪಿಲನೋ ಬುದ್ಧಿಗೆ ವಿನಾಯಕನೊ
ಯುದ್ಧರಂಗಕೆ ವ್ಯೋಮಕೇಶನೋ ನೀನು ॥ ೫ ॥
ಶಕ್ತಿಯಲಿ ಹನುಮನೊ ಭಕ್ತಿಯಲಿ ವಿಭೀಷಣನೊ
ಕೀರ್ತಿಯಲಿ ಹರಿಶ್ಚಂದ್ರರಾಯನೋ ನೀನು
ಆರ್ತಿಯಲಿ ಶುಕನೋ ವಿರಕ್ತಿಯಲಿ ಸೂರ್ಯನೋ
ಮುಕ್ತಿ ಸಾಧನಕೆ ಪ್ರಹ್ಲಾದನೋ ನೀನು ॥ ೬ ॥
ಯತಿಗಳಲಗಸ್ತ್ಯನೋ ಧೃತಿಯೊಳಗೆ ಜಾಂಬವನೋ
ಶ್ರುತಿವಾದದೊಳಗೆ ಶ್ರೀಕೃಷ್ಣನೋ ನೀನು
ವ್ರತದೊಳಗೆ ಲಕ್ಷ್ಮಣನೊ ಸ್ತುತಿಯಲ್ಲಿ ಕಾಶ್ಯಪನೋ
ವಿತರಣೆಯ ಗುಣದಲ್ಲಿ ಯಮಧರ್ಮನೆ ನೀನು ॥ ೭ ॥
ನ್ಯಾಯದಲಿ ವಿಕ್ರಮನೋ ಉಪಾಯದಲಿ ಭೃಗುಋಷಿಯೊ
ಕಾಯಶುದ್ಧಿಯಲಿ ಅಂಬರೀಷನೋ ನೀನು
ದಾಯದಲಿ ಶಕುನಿಯೋ ಮಾಯದಲಿ ಕಂಸನೋ
ನೀ ಯಾರ ಹೋಲುವೆ ಎಲೆ ಮಾನವ ॥ ೮ ॥
ಅಂಗದಲಿ ಅಜಮಿಳನೋ ಶೃಂಗದಲಿ ಮಾರುತನೋ
ಕಂಗೊಳಿಪ ತನದಲ್ಲಿ ಕಾಮಸುತನೋ
ಗಂಗೆಯನು ಪಡೆದಾದಿಕೇಶವನ ದಿವ್ಯ ಕಮ–
ಲಾಂಘ್ರಿಯನು ಭಜಿಸಿ ಪಾವನವಾಗು ಮರುಳೆ ॥ ೯ ॥

••

ಮರೆಯದಿರು ಮರೆಯದಿರು ಎಲೆ ಮಾನವ – ನಿನ್ನ
ಸಿರಿಯ ಹವಣೇನು ಹೇಳೆಲೊ ಮಾನವ ॥ ಪ ॥
ಸಿರಿಯೊಳಗೆ ಮಾಧವನೊ ಹಿರಿಯರೊಳು ರೋಮಶನೊ
ದುರುಳ ರಾವಣನ ಸಂಪದವೆ ನಿನಗೆ
ದುರ್ಯೋಧನನವೋಲು ಮಕುಟವರ್ಧನನನೇನೊ
ಸಿರಿಯ ಹವಣೇನು ಹೇಳೆಲೊ ಮಾನವ ॥ ೧ ॥
ಬಲುಹಿನಲಿ ವಾಲಿಯೋ ಚೆಲುವಿಕೆಗೆ ಕಾಮನೋ
ಸಲುಗೆಯಲಿ ನಾರದನೊ ಹೇಳೊ ನೀನು

ಕಲಿಗಳೊಳು ಭೀಷ್ಮ ದ್ರೋಣಾಚಾರ್ಯ ಫಲ್ಗುಣನೊ
ಕುಲದಲ್ಲಿ ವಸಿಷ್ಠನೊ ಹೇಳೆಲೆವೊ ಮಾನವ ॥ ೨ ॥
ತ್ಯಾಗದಲಿ ಕರ್ಣನೋ ಭೋಗದಲಿ ಸುರಪನೋ
ಭಾಗ್ಯದಲಿ ದಶರಥನೊ ಹೇಳೊ ನೀನು
ರಾಗದಲಿ ತುಂಬುರನೊ ಯೋಗದಲಿ ಸನಕನೊ
ಹೀಗಾರಪೋಲ್ವೆ ಹೇಳೆಲೊ ಮಾನವ ॥ ೩ ॥
ಯತಿಗಳೊಳಗಸ್ತ್ಯನೊ ಜೊತೆಗಳೊಳು ಹನುಮನೊ
ವ್ರತಕೆ ಶುಕಮುನಿಯೇನೊ ಹೇಳು ನೀನು
ಶ್ರುತಿಪಾಠ ವಿಬುಧರೊಳು ಬೊಮ್ಮನೊ – ನಿನ್ನ ಶುಭ-
ಮತಿಯ ಹವಣೇನು ಹೇಳೆಲೊ ಮಾನವ ॥ ೪ ॥
ವಿದ್ಯೆಯಲಿ ಸುರಗುರುವೊ ಬುದ್ಧಿಯಲಿ ಮನುಮುನಿಯೊ
ಶ್ರದ್ಧೆಯಲಿ ನೀನಾರ ಹೋಲ್ವೆ ಹೇಳು
ಸಿದ್ಧರೊಳು ನವಕೋಟಿಯೊಳಗೊಬ್ಬನೊ ನೀನು
ಕ್ಷುದ್ರ ಮಾನವ ನಿನ್ನ ಸಿರಿಯ ಹವಣೇನು ॥ ೫ ॥
ಗೆಲ್ಲು ಸೋಲಿನ ಮಾತು ಸಲ್ಲದೆಲವೋ ನಿನಗಿ-
ದೆಲ್ಲವನು ಬಿಡು ಗರ್ವ ನಿನಗೇತಕೊ
ಬಲ್ಲೆಯಾದರೆ ಆದಿಕೇಶವನ ನಾಮವನು
ಸೊಲ್ಲುಸೊಲ್ಲಿಗೆ ನುತಿಸಿ ಸುಖಿಯಾಗಿ ಬಾಳು ॥ ೬ ॥

೮. ಶ್ರೀಹರಿಯ ನಾಮಸ್ಮರಣೆಯ ಬಲದಿಂದಾಗಿ ತಮ್ಮ ಜೀವನ ಬದಲಾದುದನ್ನು ತಿಳಿಸುವ ಶ್ರೀಕನಕದಾಸರ ಕೃತಿ ಹೀಗಿದೆ:

ಸಾಲದೆ ನಿನ್ನದೊಂದು ದಿವ್ಯನಾಮ – ಅ-
ಕಾಲ ಮೃತ್ಯುವಿನ ಗಂಟಲಗಾಣ ಹರಿಯೆ ॥ ಪ ॥
ರಣದೊಳಗೆ ದೇಹವ ಖಂಡತುಂಡವ ಮಾಡಿ
ರಣವನುತ್ತರಿಸಿ ಮರಣವ ತೋರಿದೆ
ಪ್ರಣವಗೋಚರನಾಗಿ ಲೀಲೆಯಿಂದಲಿ ಬಂದು
ಹೆಣಕೆ ಪ್ರಾಣವನು ತಂದಿತ್ತ ಮಹಾತುಮನೆ ॥ ೧ ॥
ತೂಂತಿಕೊಂಡೆನ್ನ ಬೆನ್ನಲೊಸರುವ ರೋಹಿತಕೆ
ಅಂತ್ಯಮುಖ ಗ್ರಹಗಳನು ಕಳಚಿ ಬಿಸುಟೆ
ತಿಂತ್ರಿಣಿ ಮರದಡಿ ಉರಗ ಕಚ್ಚಿ ಒರಗಿರಲು
ಮಂತ್ರಿಸಿ ಮನೆಗೆ ಕಳುಹಿದ ಗರುಡಗಮನನೆ ॥ ೨ ॥
ತಮ್ಮ ಹವಣನರಿಯದೆ ಗರ್ವಪಿಶಾಚಿಗಳು
ಎಮ್ಮ ಮನೆಯೊಡೆವಂತೆ ಕಲ್ಲಲಿಟ್ಟು

ಹೆಮ್ಮಕ್ಕಳನು ಕರೆದು ಬಂಧಿಸಿ ಒಯ್ಯಲು
ಬ್ರಹ್ಮಜಟ್ಟಿಗನ ಶಿರ ಹರಿದೆ ನರಹರಿಯೆ ॥ ೩ ॥
ಕ್ಷೀಣ ದೇಹವ ಬಿಡುವೆನೆಂದು ಪಾಡಂಪಟ್ಟು
ತ್ರಾಣದಲಿ ಗರಳ ತೈಲವ ಸೇವಿಸೆ
ವೇಣು ಕೊರಳಿಗೆ ಇಕ್ಕಿ ಎವೆಯು ಅಡ್ಡಾದಾಗ
ತ್ರಾಣನಿತ್ರಾಣ ಸತ್ರಾಣದಲಿ ಜಯ ಜಯ ॥ ೪ ॥
ಓದಿ ಕೇಳಿದರಿದೆ ಕಥೆಯಾಗುತಿದೆ ದೂರ
ಆದಿ ಮೂರುತಿ ಕಾಗಿನೆಲೆಯಾದಿಕೇಶವನೆ
ಹೋದ ಜೀವನಕೆ ವೈದ್ಯನ ಸ್ಮರಣೆಯನ್ನಿಟ್ಟು
ವಾದಗುಣ ಬಿಡಿಸಿ ದಾಸನ ಮಾಡಿಕೊಂಡೆಯೊ ॥ ೫ ॥

*****

## ೧೦೧. ಎಂಜಲುಂಟೇ ದೇವ ರಕ್ಷಿಸು

**ಎಂಜಲೆಂಜಲು ಎಂಬರಾ ನುಡಿ**
**ಎಂಜಲಲ್ಲವೆ ವಾರಿ ಜಲಚರ-**
**ದೆಂಜಲಲ್ಲವೆ ಹಾಲು ಕರುವಿನ ಎಂಜಲೆನ್ನಿಸದೆ ।**
**ಎಂಜಲೆಲ್ಲಿಯದೆಲ್ಲಿಯುಂ ಪರ-**
**ರೆಂಜಲಲ್ಲವೆ ಬೇರೆ ಭಾವಿಸ-**
**ಲೆಂಜಲುಂಟೇ ದೇವ ರಕ್ಷಿಸು ನಮ್ಮನನವರತ ॥ ೧೦೧ ॥**

ಅ: ಎಂಜಲು ಎಂಜಲು ಎಂಬುದಾಗಿ ಶುಷ್ಕಮಡಿಯ ಜನ ಹಾರಾಡುವುದುಂಟು. ಆದರೆ ಎಂಜಲು ಎಂಜಲು ಎಂಬ ಪದ ಬರುವುದೇ ಬಾಯಿಂದ. ಬಾಯಿಂದ ಬಂದದ್ದು ಎಂಜಲು ಎನ್ನುವುದಾದರೆ, ಎಂಜಲು ಎಂಬ ಮಾತು ಸಹ ಎಂಜಲೇ ಅಲ್ಲವೇ? ಇನ್ನು ಜಲಾಶಯದ ನೀರು. ಅದು ಸಹ ಅದರಲ್ಲಿ ನೆಲೆಸಿರುವ ಬಗೆಬಗೆಯ ಜಲಚರಗಳ ಎಂಜಲೇ ಆಗಿದೆ. ಪರಮ ಪವಿತ್ರವೆನ್ನಿಸಿದ ಹಾಲು ಸಹ ಕರುವಿನ ಎಂಜಲೇ. ಹೀಗೆ ಸರಿಯಾಗಿ ಅರ್ಥಮಾಡಿಕೊಂಡಲ್ಲಿ ಎಂಜಲು ಎಂಬುದರ ಅರ್ಥ ಮನದಟ್ಟಾಗುವುದು. ಒಂದರ್ಥದಲ್ಲಿ ಎಲ್ಲೆಲ್ಲಿಯು ಬೇರೆಯವರ ಎಂಜಲೇ ತುಂಬಿದೆ. ಹೀಗಿರುವಾಗ ಎಂಜಲು ಎಂಬುದನ್ನು ಪ್ರತ್ಯೇಕಿಸಿ ನೋಡುವುದು ತರವಲ್ಲ. ಎಲೈ! ದೇವನಾದ ಶ್ರೀಹರಿಯೇ! ನೀನು ನಮ್ಮನ್ನು ಸದಾ ರಕ್ಷಿಸು.

ವಿ.: ೧. ಎಂಜಲು ಎಂಬುದಾಗಿ ಇತರರನ್ನು ಹಳಿಯುತ್ತಾ ಒಣ ಮಡಿವಂತಿಕೆಯನ್ನು ಪ್ರದರ್ಶಿಸುವ ಜನರ ಜೀವನರೀತಿಯನ್ನು ಇದರಲ್ಲಿ ಟೀಕಿಸಲಾಗಿದೆ.

೨. ಎಂಜಲು, ಮುಸುರೆ ಹೆಚ್ಚಾಗಿ ಮಡಿವಂತರು ಉಪಯೋಗಿಸುವ ಪದಗಳು. ಇತರರನ್ನು ಹಳಿಯಲು ಅವರು ಉಪಯೋಗಿಸುವ ಪ್ರಧಾನ ಅಸ್ತ್ರ ಇವೆರಡೇ. ಇದು ಅವರ ಮಡಿವಂತಿಕೆಯ ಶ್ರೇಷ್ಠತೆಯನ್ನು ಸಾರುವ ಒಂದು ಮುಖವಾದರೆ, ಇತರರನ್ನು ಕೀಳಾಗಿ ಕಾಣುವ ಭಾವನೆ ಮತ್ತೊಂದು ಮುಖ.

೩. ಸಾಮಾನ್ಯವಾಗಿ ಪಾಮರ ಜನರನ್ನು ಅಹಂಕಾರದ ಪಂಡಿತವರ್ಗ ಇಂತಹ ಕಾರಣವನ್ನು ಮುಂದಿಟ್ಟು ದೂರ ಮಾಡುವುದುಂಟು; ಈ ಪದ್ಯದಲ್ಲಿ ಅಂತಹವರಿಗೆ ವಿಶೇಷವಾದ ಹಿತನುಡಿಯನ್ನು ಕಾಣಬಹುದು.

೪. ಎಂಜಲು ಎಂಬುದರ ಅರ್ಥವೇನು? ಬಾಯಿಂದ ಹೊರಬರುವ ವಸ್ತು ಎಂಜಲು ಎಂಬುದು ಸಾಮಾನ್ಯ ಪರಿಕಲ್ಪನೆ. ಇತರರು ತಿಂದು ಬಿಟ್ಟದ್ದು ಎಂಬುದು ಇದರ ಅರ್ಥ. ಈ ಹಿನ್ನೆಲೆಯಲ್ಲಿ ವಿಚಾರ ಮಾಡಿದಾಗ ಎಂಜಲು ಎಂಬ ಪದವು ಸಹ ಬಾಯಿಂದ ಉಚ್ಚರಿಸಲ್ಪಟ್ಟು ಹೊರಬರುವುದರಿಂದ ಅದು ಎಂಜಲೇ ಆಗುವುದಲ್ಲವೇ? ಎಂಬುದು ಇಲ್ಲಿಯ ತೀಕ್ಷ್ಣವಾದ ಪ್ರಶ್ನೆ.

೫. ಸಾಮಾನ್ಯವಾಗಿ ಸ್ನಾನ, ಪಾನಾದಿಗಳಿಗೆ ಉಪಯೋಗಿಸುವ ಜಲ, ಜಲಾಶಯಗಳಿಂದ ಲಭಿಸುವುದು. ಆದರೆ, ಅಂತಹ ಜಲಾಶಯಗಳಲ್ಲಿ ಮೀನು ಮೊದಲಾದ ಬಗೆಬಗೆಯ ಜಲಚರಗಳು ನೆಲೆಸಿರುವವು. ಹಾಗೆ ನೋಡಿದರೆ, ಅಂತಹ ಜಲಚರಗಳು ನೆಲೆಸಿರುವ ಜಲವೇ ತಂಬಾ ಶುದ್ಧ ಎಂಬುದು ಶಾಸ್ತ್ರ ಹಾಗು ವಿಜ್ಞಾನಗಳ ದೃಷ್ಟಿ. ಆದರೆ, ವಾಸ್ತವಿಕವಾಗಿ ವಿಚಾರ ಮಾಡಿದಲ್ಲಿ ಆ ನೀರಿನಲ್ಲಿ ಅದರಲ್ಲಿ ನೆಲೆಸಿರುವ ಬಗೆಬಗೆಯ ಜಲಚರಗಳ ಎಂಜಲು ಹೇರಳವಾಗಿ ತುಂಬಿರುತ್ತದೆ. ಒಣ ಮಡಿವಂತಿಕೆಯ ಜನ ಇದನ್ನು ಅರ್ಥಮಾಡಿಕೊಂಡಲ್ಲಿ ಅಂತಹ ನೀರನ್ನು ಉಪಯೋಗಿಸಲೇಕೂಡದು ಎಂದಾಗುವುದು.

೬. ಇನ್ನು ಹಸುವಿನ ಹಾಲಿನ ಬಗ್ಗೆ ಯೋಚಿಸಿದಾಗ ಅದೂ ಸಹ ರೋಚಕವೆನ್ನಿಸುವ ಸಂಗತಿಯನ್ನು ಹೊರಹಾಕುವುದು. ದೇವರ ಅಭಿಷೇಕಕ್ಕಾಗಲಿ, ನಮ್ಮ ಉಪಯೋಗಕ್ಕಾಗಲಿ ಬಳಸುವ ಹಸುವಿನ ಹಾಲು ಮುಖ್ಯವಾಗಿ ಅದರ ಕರುವಿನ ಎಂಜಲೇ ಆಗಿರುತ್ತದೆ. ಎಂದರೆ, ಅದನ್ನು ಜನರು ಉಪಯೋಗಿಸುವಂತೆಯೇ ಇಲ್ಲ ಎಂದಾಗುವುದು. ಈ ಎಚ್ಚರವಿದ್ದಲ್ಲಿ ಎಂಜಲು ಎಂಬ ಪದವನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಲು ಸಾಧ್ಯವಿದೆ ಎಂಬ ನಿರೂಪಣೆ ಇದರಲ್ಲಿದೆ.

೭. '**ಹಾಲು ಕರುವಿನ ಎಂಜಲಲ್ಲವೆ**' ಎಂಬ ಮಾತು ತುಂಬಾ ಮಾರ್ಮಿಕವಾದುದು. ಕರುವಿನ ಎಂಜಲು ಆದ ಬಳಿಕವಷ್ಟೇ ಆ ಹಸುವಿನ ಹಾಲು ಶುದ್ಧ ಎನ್ನಿಸುವುದು. ದೇವರ ಅಭಿಷೇಕಕ್ಕಾಗಲಿ, ಜನರ ಉಪಯೋಗಕ್ಕಾಗಲಿ ಅದು ಅರ್ಹವೆನ್ನಿಸುವುದು ಕರುವಿನ ಎಂಜಲು ಆದ ಬಳಿಕವೇ. ಕರುವಿಲ್ಲದ ಎಂದರೆ, ಕರು ಸತ್ತು ಹೋದ ಹಸುವಿನ ಹಾಲು ನಿಷಿದ್ಧ ಎಂದು ಶಾಸ್ತ್ರಗಳು ಸಾರಿವೆ. '**ಮೃತವತ್ಸ ಗೋವಿನ ಪಾಲುಂಬಳ**' ಎಂಬ ಶ್ರೀಜಗನ್ನಾಥದಾಸರ ಮಾತು

ಇಲ್ಲಿ ಗಮನಾರ್ಹವಾಗಿದೆ. ಇದರಿಂದ ಕೆಲವು ಪದಾರ್ಥಗಳು ಎಂಜಲಾದ ಬಳಿಕವಷ್ಟೇ ಪವಿತ್ರ ಎನ್ನಿಸುವವು. ಜೇನು ಸಹ ಜೇನು ಹುಳುವಿನ ಎಂಜಲು ಎಂಬುದು ಕಟುಸತ್ಯ. ಮಡಿವಂತರು ಇಂತಹ ಸಂಗತಿಗಳನ್ನು ಗಮನಿಸಬೇಕು ಎಂಬುದು ದಾಸರ ಆಶಯ.

೮. ಮೇಲ್ನೋಟಕ್ಕೆ ಇಲ್ಲಿ ಎಂಜಲು ಮುಸುರೆಯ ಪರಿಕಲ್ಪನೆಯನ್ನೇ ದಾಸರು ಅಪಹಾಸ್ಯ ಮಾಡಿರುವರು ಎನ್ನಿಸುವುದುಂಟು. ಅದು ಸರಿಯಲ್ಲ. ವಾಸ್ತವವಾಗಿ ಹರಿದಾಸರು ಮಡಿ, ಮೈಲಿಗೆಗಳ ಬಗ್ಗೆ ತುಂಬಾ ಕಳಕಳಿಯನ್ನು ಹೊಂದಿದವರು. ಇಲ್ಲಿ ಅವರು ಹಳಿಯುತ್ತಿರುವುದು ಮಡಿವಂತರ ಅಹಂಕಾರ ಪ್ರವೃತ್ತಿಯನ್ನು ಮಾತ್ರವೇ ಹೊರತು, ಮಡಿ-ಮೈಲಿಗೆ ಎಂಬ ಪರಿಕಲ್ಪನೆಯನ್ನಲ್ಲ. ಇನ್ನೊಂದು ರೀತಿಯಲ್ಲಿ, ಅತಿಯಾದ ಮಡಿವಂತಿಕೆಯ ಟೀಕೆಯು ಇದರಲ್ಲಿದೆ. ಮಡಿ- ಮೈಲಿಗೆಗಳ ಮುಖ್ಯವಾದ ಅರ್ಥ ಪರಿಶುದ್ಧಿ. ಅವುಗಳ ಕಡೆ ಗಮನವನ್ನು ಕೊಡದೆ ಯಾಂತ್ರಿಕವಾಗಿ ಮಡಿಯನ್ನು ಮಾಡುವ ಜನರ ಪ್ರವೃತ್ತಿಯನ್ನು ಮಾತ್ರವೇ ಇಲ್ಲಿ ಟೀಕಿಸಲಾಗಿದೆ ಎಂದು ಅರ್ಥ ಮಾಡಿಕೊಳ್ಳಬೇಕು.

೯. ಶ್ರೀಮದ್ಭಾಗವತ ಮಹಾಪುರಾಣದಲ್ಲಿ ಇಂತಹ ಒಣಮಡಿವಂತಿಕೆಯ ಜನರಿಗೆ ಪ್ರತ್ಯೇಕ ನರಕವೇ ಕಾದಿದೆ ಎಂಬ ನಿರೂಪಣೆ ಬಂದಿದ್ದು[೧], ಅದರ ಹಿನ್ನಲೆಯಲ್ಲಿ ದಾಸರ ಈ ಮಾತು ಮೂಡಿಬಂದಿದೆ ಎಂದು ತಿಳಿಯಬೇಕು.

೧೦. **'ಮಡಿ ಮಡಿ ಮಡಿ ಎಂದು ಮೂರ್ಮಾರು ಹಾರುತಿ । ಮಡಿ ಎಲ್ಲಿ ಬಂತೇ ಬಿಕನಾಶಿ', 'ಆಚಾರವಿಲ್ಲದ ನಾಲಿಗೆ', 'ನಗೆಯು ಬರುತಿದೆ ಎನಗೆ ನಗೆಯು ಬರುತಿದೆ', 'ಉದರ ವೈರಾಗ್ಯವಿದು'** ಮೊದಲಾದ ಶ್ರೀಪುರಂದರದಾಸರು ಮೊದಲಾದ ಹರಿದಾಸರ ಮಾತುಗಳು ಸಹ ಇದೇ ಬಗೆಯವು ಎಂದು ತಿಳಿಯಬೇಕು.

೧೧. ಪರರ ಎಂಬುದಕ್ಕೆ ಅನ್ಯ ದೇವತೆಗಳ ಎಂಜಲು ಮಾತ್ರ ನಿಷಿದ್ಧ ಎಂದು ಅರ್ಥ.

೧೨. ಮೇಲ್ನೋಟಕ್ಕೆ ಎಂಜಲಿನ ಪ್ರಸ್ತಾಪದ ಈ ಪದ್ಯಕ್ಕೆ ಸಂಗತಿ ತಿಳಿಯದು. ಆಳವಾಗಿ ಚಿಂತಿಸಿದಾಗ ಅದಕ್ಕೆ ಕಾರಣ ಹೊಳೆಯುವುದು. ಶ್ರೀಕನಕದಾಸರು ಈವರೆಗೆ ನಿರೂಪಿಸಿರುವ ಸಕಲ ವಿಷಯಗಳು ಸಹ ವೇದಾದಿ ಶಾಸ್ತ್ರಗಳಲ್ಲಿ ನಿರೂಪಿತವಾದ ವಿಚಾರಗಳೇ ಆಗಿವೆ. ಈ ಕಾರಣದಿಂದ ಕೆಲವರು ಇದರಲ್ಲಿ ಹೊಸತೇನಿದೆ? ಎಲ್ಲವೂ ಶಾಸ್ತ್ರಗಳಲ್ಲಿ ಹೇಳಿಬಿಟ್ಟದ್ದೇ, ಎಂಜಲೇ ಎಂದು ಆಕ್ಷೇಪಿಸಲು ಸಾಧ್ಯವಿದೆ. ಅದಕ್ಕೆ ದಾಸರು ನೀಡಿರುವ ಸುಂದರವಾದ ಉತ್ತರ ಇದಾಗಿದೆ.

೧೩.. ಶಾಸ್ತ್ರದಲ್ಲಿ ಹೇಳಿರುವ ವಿಚಾರಗಳನ್ನು ತಿಳಿಸುವುದೇ ಜ್ಞಾನಿಗಳ ಲಕ್ಷಣ ಹೊರತು, ಸಲ್ಲದ್ದನ್ನು ಕಲ್ಪಿಸಿ ಹೇಳುವುದಲ್ಲ. ಆ ಅರ್ಥದಲ್ಲಿ ಎಲ್ಲ ಜ್ಞಾನಿಗಳ ಮಾತು ಸಹ ಶಾಸ್ತ್ರದಲ್ಲಿ

---

೧. ಅಥ ಚ ಯಸ್ತ್ವಿಹಾತ್ಮಸಂಭಾವನೇನ ಸ್ವಯಮಧಮೋ ಜನ್ಮತಪೋವಿದ್ಯಾಚಾರವರ್ಣಾಶ್ರಮವತೋ ವರೀಯಸೋ ನ ಬಹುಮನ್ಯತೇ ಸ ಮೃತಕ ಏವಮೃತ್ವಾ ಕ್ಷಾರಕರ್ದಮೇ ನಿರಯೇಽವಾಕ್‌ಶಿರಾ ನಿಪಾತಿತೋ ದುರಂತಾ ಯಾತನಾ ಹ್ಯಶ್ನುತೇ - ಶ್ರೀಮದ್ಭಾಗವತ (೫/೨೬/೩೨)

ಬಂದಿರುವಂತಹುದೇ ಆಗಿರುತ್ತದೆ: **'ವ್ಯಾಸೋಚ್ಛಿಷ್ಟಂ ಜಗತ್ಸರ್ವಂ'** ಎಂಬ ಮಾತಿನಲ್ಲಿ ಈ ವಿಷಯ ಅತ್ಯಂತ ಪರಿಣಾಮಕಾರಿಯಾಗಿ ನಿರೂಪಿವಾಗಿದೆ. 'ವಾರಿಜಲಚರದೆಂಜಲು, ಹಾಲು ಕರುವಿನ ಎಂಜಲು' ಎಂಬಲ್ಲಿ ಪಾವಿತ್ರ್ಯವಿದೆಯೇ ಹೊರತು ನಿಂದನೆಯಿಲ್ಲ. ಅದರಂತೆ, ಮೂಲ ಶಾಸ್ತ್ರಗಳನ್ನು ಆಧರಿಸಿ ಹೇಳುವ ಮಾತುಗಳು ಆ ಅರ್ಥದಲ್ಲಿ ಎಂಜಲೇ ಆದರು, ಅದು ಅತ್ಯಗತ್ಯವಾದ ಪರಿಶುದ್ದಿಯೇ ಆಗಿದೆ ಎಂದು ತಿಳಿಯಬೇಕು. ಆದ್ದರಿಂದಲೇ ದಾಸರು ಇಲ್ಲಿ **'ವಾರಿಜಲಚರದೆಂಜಲು, ಹಾಲು ಕರುವಿನ ಎಂಜಲು'** ಎಂಬ ಪವಿತ್ರವೆನ್ನಿಸುವ ನಿದರ್ಶನಗಳನ್ನು ನೀಡಿರುವರೇ ಹೊರತು, ಮೈಲಿಗೆ ಎನ್ನಿಸುವ ಕೃತಿಚೌರ್ಯಸ್ವರೂಪದ ನಿದರ್ಶನವನ್ನು ಕೊಟ್ಟಿಲ್ಲ ಎಂದು ಅರ್ಥಮಾಡಿಕೊಳ್ಳಬೇಕು.

೧೪. ದೋಷಕ್ಕೆ ಕಾರಣವಾಗುವುದು ಕೃತಿಚೌರ್ಯವೇ ಹೊರತು, ಕೃತಿಯನ್ನು ಆಧರಿಸಿದ ಮಾತುಗಳಲ್ಲ. ಕೃತಿಚೌರ್ಯದಲ್ಲಿ ಕಳ್ಳತನದ ಅಪಚಾರವಿದ್ದರೆ, ಆಧರಿಸಿದ ಮಾತಿನಲ್ಲಿ ಪ್ರಮಾಣಗಳನ್ನು ನೀಡುವ ಸಜ್ಜನಿಕೆ ಇರುವುದು. ಶ್ರೀಕನಕದಾಸರನ್ನೊಳಗೊಂಡಂತೆ ಸಕಲ ಜ್ಞಾನಿಗಳ ಮಾತುಗಳು ಸಹ ಈ ಗುಂಪಿಗೆ ಸೇರುವ ಶ್ರೇಷ್ಠ ವಚನಗಳಾಗಿವೆ ಎಂದು ತಿಳಿಯಬೇಕು.

೧೫. ನಿಜವಾದ ಹಿರಿಮೆ ಇರುವುದು ಕೃತಿಚೌರ್ಯದಲ್ಲಲ್ಲ. ಆಕರ ಗ್ರಂಥಗಳಲ್ಲಿನ ಸಾರಭೂತವಾದ ವಿಚಾರಗಳನ್ನು ಪ್ರಸಕ್ತವಾದ ಕಾಲಕ್ಕೆ ಅನುಗುಣವಾಗಿ ಅನ್ವಯಿಸಿಕೊಂಡು ಜೀವನಕ್ಕೆ ಬೆಳಕಾಗುವಂತೆ ತಿಳಿಸುವುದರಲ್ಲಿ ಜ್ಞಾನಿಗಳ ಹಿರಿಮೆ ಕಾಣುವುದು. ಅದನ್ನು ಶ್ರೀಕನಕದಾಸರು ತಮ್ಮ ಈ ಅಪೂರ್ವಕೃತಿಯಲ್ಲಿ ಆದರ್ಶಪ್ರಾಯವಾಗಿ ಮಾಡಿರುವರು. ಅದನ್ನು ಅವರು ಈ ಪದ್ಯದಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ನಿರೂಪಿಸುತ್ತಾ ಶಾಸ್ತ್ರಗಳನ್ನು ಆಧರಿಸಿದ ಗ್ರಂಥಗಳ ವೈಶಿಷ್ಟ್ಯದ ಸ್ವರೂಪವನ್ನೇ ಅನಾವರಣಗೊಳಿಸಿರುವರು ಎಂದು ತಿಳಿಯಬೇಕು.

*****

## ೧೦೨. ಕೃಪೆಮಾಡಿ ರಕ್ಷಿಸು

**ಕೇಳುವುದು ಹರಿಕಥೆಯ ಕೇಳಲು**
**ಹೇಳುವುದು ಹರಿಭಕ್ತಿ ಮನದಲಿ**
**ತಾಳುವುದು ಹಿರಿದಾಗಿ ನಿನ್ನಯ ಚರಣಸೇವೆಯಲಿ ।**
**ಊಳಿಗವ ಮಾಡುವುದು ವಿಷಯವ**
**ಹೂಳುವುದು ನಿಜಮುಕ್ತಿಕಾಂತೆಯ-**
**ನಾಳುವುದು ಕೃಪೆಮಾಡಿ ರಕ್ಷಿಸು ನಮ್ಮನನವರತ ॥ ೧೦೨ ॥**

ಅ: ಶ್ರೀಹರಿಯ ಕಥೆಯನ್ನು ತಪ್ಪದೆ ಕೇಳಬೇಕು; ಆ ರೀತಿ ಕೇಳುತ್ತಿದ್ದಲ್ಲಿ ಮನಸ್ಸಿನಲ್ಲಿ ಶ್ರೀಹರಿಯಲ್ಲಿ ಭಕ್ತಿಯು ಹುಟ್ಟುವುದು. ವಿಶೇಷವಾಗಿ ಶ್ರೀಹರಿಯ ಚರಣಸೇವೆಯಲ್ಲಿ

**ಆಸಕ್ತಿ ಮೂಡುವುದು. ಮನಸ್ಸು ಸದಾ ಶ್ರೀಹರಿಯ ಸೇವೆಯಲ್ಲಿ ತೊಡಗುವುದು. ವಿಷಯಗಳ ಬಗೆಗಿನ ಆಸಕ್ತಿಯನ್ನು ಕುಗ್ಗಿಸುವುದು. ಕೊನೆಗೆ ಮುಕ್ತಿಕಾಂತೆಯನ್ನು ಜೊತೆಗೂಡಿಸುವುದು; ಶ್ರೀಹರಿಯೇ! ಇಂತಹ ಶ್ರವಣದ ಭಾಗ್ಯವನ್ನು ಕೃಪೆಮಾಡಿ ನೀಡಿ ನಮ್ಮನ್ನು ಸದಾ ರಕ್ಷಿಸು.**

ವಿ.: ೧. ಹರಿಕಥಾಶ್ರವಣದ ಹಿರಿಮೆಯನ್ನು ಈ ಪದ್ಯದಲ್ಲಿ ತುಂಬಾ ಸೊಗಸಾಗಿ ನಿರೂಪಿಸಲಾಗಿದೆ.

೨. ಶ್ರವಣ, ಕೀರ್ತನ ಮೊದಲಾಗಿ ಭಕ್ತಿಯು ನವವಿಧವಾದುದು. ಅದರಲ್ಲಿ ಶ್ರವಣ ಭಕ್ತಿಯು ಪ್ರಾರಂಭದ ಭಕ್ತಿ. ಇತರ ಎಲ್ಲರ ಭಕ್ತಿಗಳಿಗೆ ಬುನಾದಿ ಎನ್ನಿಸುವ ಹಿರಿಮೆ ಶ್ರವಣದ್ದು. '**ಹರಿಕಥಾಶ್ರವಣ ಮಾಡೋ ನಿರಂತರ**' ಮೊದಲಾದ ದಾಸವಾಣಿಯ ಸಾರಸಂಗ್ರಹದಂತಿದೆ.

೩. ಇಲ್ಲಿ ಶ್ರವಣ ಎಂಬದಕ್ಕೆ ಶ್ರವಣೋಪಲಕ್ಷಿತವಾದ ನವವಿಧವಾದ ಭಕ್ತಿ ಎಂದು ಅರ್ಥ. ಶ್ರವಣವೇ ಇಂತಹ ಅಪೂರ್ವಫಲವನ್ನು ನೀಡುವಾಗ, ಮನನ, ಧ್ಯಾನಗಳೂ ನಡೆದಾಗ ಅದೆಷ್ಟು ಅದ್ಭುತವಾದ ಫಲ ಲಭಿಸುವುದು ಎಂಬುದು ಕೈಮುತ್ಯನ್ಯಾಯದಿಂದಲೂ ಸೂಚಿತ. ಸಂಸಾರದಿಂದ ಹುಟ್ಟುವ ತಾಪಗಳು ಮೂರು ಬಗೆ – ಆಧ್ಯಾತ್ಮಿಕ, ಆಧಿದೈವಿಕ ಮತ್ತು ಆಧಿಭೌತಿಕ. ಆಧ್ಯಾತ್ಮಿಕವೆಂದರೆ ಮಾನಸಿಕ ತಾಪ, ಆಧಿದೈವಿಕವೆಂದರೆ ದೇವತೆಗಳಿಂದ ಒದಗುವ ಅತಿವೃಷ್ಟಿ ಮೊದಲಾದ ತಾಪ, ಆಧಿಭೌತಿಕವೆಂದರೆ ರೋಗಾದಿಗಳಿಂದ ದೇಹಕ್ಕಾಗುವ ತಾಪ. ಈ ಮೂರು ಬಗೆಯ ತಾಪವನ್ನೂ ಪರಿಹರಿಸುವ ಹಿರಿಮೆ ಹರಿಕಥಾಶ್ರವಣದ್ದು – '**ತಾಪತ್ರಯೋನ್ಮೂಲನಂ**'; **ಹೂಳುವುದು** – ನಾಶಮಾಡುವುದು, ಪರಿಹರಿಸುವುದು, ಮುಚ್ಚುವುದು; **ಊಳಿಗ** – ಸೇವೆ.

೪. ಇದು ಈ ಕೆಳಗಿನ ಕೃಷ್ಣಾಮೃತಮಹಾರ್ಣದ ಶ್ಲೋಕದ ವಿವರಣೆಯಂತಿರುವ ಅಪೂರ್ವ ಪದ್ಯ:

**'ಶ್ರುತ್ವಾ ಧರ್ಮಂ ವಿಜಾನಾತಿ ಶ್ರುತ್ವಾ ತ್ಯಜತಿ ದುರ್ಮತಿಮ್ ।**
**ಶ್ರುತ್ವಾ ಜ್ಞಾನಮವಾಪ್ನೋತಿ ಶ್ರುತ್ವಾ ಮೋಕ್ಷಂ ಚ ಗಚ್ಛತಿ ॥'** – ೧೯೮

೫. ಶ್ರೀಜಗನ್ನಾಥದಾಸರ ಹರಿಕಥಾಮೃತಸಾರದ ಈ ಕೆಳಗಿನ ಪದ್ಯವು ಇದರ ವಿವರಣೆಯಂತಿದೆ:

**ಶ್ರವಣ ಮನಕಾನಂದವೀವುದು । ಭವಜನಿತ ದುಃಖಗಳ ಕಳೆವುದು**
**ವಿವಿಧ ಭೋಗಗಳಿಹಪರಂಗಳಲಿತ್ತು ಸಲಹುವುದು ।**
**ಭುವನ ಪಾವನವೆನಿಪ ಲಕ್ಷ್ಮೀ । ಧವನ ಮಂಗಳಕಥೆಯ ಪರಮೋ-**
**ತ್ಸವದಿ ಕಿವಿಗೊಟ್ಟಾಲಿಪುದು ಭೂಸುರರು ದಿನದಿನದಿ ॥**

೬. ತಮ್ಮ ಶ್ರೀಹರಿಭಕ್ತಿಸಾರ ಕೃತಿಯನ್ನು ಮುಕ್ತಾಯಗೊಳಿಸುತ್ತಾ ಇದರ ಶ್ರವಣಾದಿಗಳು ಅಗತ್ಯ ಕರ್ತವ್ಯ ಎಂಬುದನ್ನು ಈ ಪದ್ಯದ ಮೂಲಕ ತಿಳಿಸಿರುವರು.

೭. ಇಲ್ಲಿಯ ಶ್ರವಣದ ಹಿರಿಮೆ ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ ಹಾಗೂ ಸಖ್ಯ ಎಂಬ ಇತರ ೮ ವಿಧವಾದ ಭಕ್ತಿಗಳಿಗೂ ಅನ್ವಯಿಸುವ ಮಾತಾಗಿದ್ದು, ಒಟ್ಟಾಗಿ ನವವಿಧ ಭಕ್ತಿಯ ಹಿರಿಮೆಯೇ ಇದರಲ್ಲಿ ನಿರೂಪಿತವಾಗಿದೆ ಎಂದು ತಿಳಿಯಬೇಕು[೧].

*****

## ೧೦೩. ಫಲಶ್ರುತಿ

**ಈ ತೆರದೊಳಚ್ಯುತನ ನಾಮವ**
**ನೂತನದಿ ವಸುಧಾತಲದಿ [೨]ವಿ-**
**ಖ್ಯಾತಿಯಲಿ ಬಣ್ಣಿಸಿದೆ[೩] ಭಾಮಿನಿಯ ವೃತ್ತದಲಿ ।**
**ನೀತಿಕೋವಿದರಾಲಿಸುವುದತಿ-**
**ಪ್ರೀತಿಯಲಿ ಕೇಳ್ದರಿಗೆ ಅಸುರಾ-**
**ರಾತಿ ಚೆನ್ನಿಗರಾಯ ಸುಖಗಳನೀವನನವರತ ॥ ೧೦೩ ॥**

**ಅ: ಈ ರೀತಿಯಾಗಿ ಅಚ್ಯುತನಾದ ಶ್ರೀಹರಿಯ ನಾಮದ ಮಹಿಮೆಯನ್ನು ಹೊಸ ರೀತಿಯಲ್ಲಿ ಭೂಮಿಯಲ್ಲಿ ಭಾಮಿನಿಯ ವೃತ್ತದಲ್ಲಿ ವಿಶೇಷವಾಗಿ ವರ್ಣಿಸಿರುವೆನು. ನೀತಿಕೋವಿದರಾದವರು ಇದನ್ನು ಅತ್ಯಂತ ಪ್ರೀತಿಯಿಂದ ಆಲಿಸಬೇಕು. ಹೀಗೆ ಆಲಿಸಿದವರಿಗೆ ಅಸುರಮರ್ದನನಾದ ಚೆಲುವರಲ್ಲಿ ಚೆಲುವನಾದ ಶ್ರೀಹರಿಯು ಸದಾ ಕಾಲ ಸುಖ-ಸಂತೋಷಗಳನ್ನು ನೀಡುವನು.**

ವಿ.: ೧. ಕೃತಿಯನ್ನು ಪರಿಸಮಾಪ್ತಿಗೊಳಿಸುತ್ತಾ ಶ್ರೀಕನಕದಾಸರು ಇದರ ಶ್ರವಣಾದಿಗಳ ಮಹತ್ವವನ್ನು ನಿರೂಪಿಸಿರುವರು.

೨. ಅಚ್ಯುತನಾದ ಶ್ರೀಹರಿ ಎನ್ನುವ ಮೂಲಕ ಭಗವಂತನಿಗೆ ಯಾವುದೇ ಬಗೆಯ ಚ್ಯುತಿಯು ಸಹ ಸರ್ವಥಾ ಇಲ್ಲ ಎಂಬ ವಿಶೇಷಾಂಶವನ್ನು ತಿಳಿಸಿರುವರು. ಶ್ರೀಹರಿಯು ಅಚ್ಯುತನಾದ್ದರಿಂದ ಅವನ ಮಹಿಮೆಯನ್ನು ಕೇಳಿದವರಿಗೂ ಸಹ ಚ್ಯುತಿ ಇರದು. ಅವನ ಹೊರತು ಇತರ ಸಕಲ ವಸ್ತುಗಳು ಸಹ ಒಂದಲ್ಲಾ ಒಂದು ಬಗೆಯ ಚ್ಯುತಿಯನ್ನು ಹೊಂದಿರುವುದರಿಂದ ಅವುಗಳ

---

೧. ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಮ್ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ॥ - ಶ್ರೀಮದ್ಭಾಗವತ (೭/೫/೨೩)

೨. ವಿಖ್ಯಾತಿ ಬಯಸದೆ ಬಣ್ಣಿಸಿದೆ (ಪಾ.)

೩. ಕನ್ನಡ ಕುಸುಮಷಟ್ಪದಿಯ (ಪಾ.)

ಬಗ್ಗೆ ಶ್ರವಣಾದಿಗಳನ್ನು ಮಾಡುವುದು ಆತ್ಯಂತಿಕ ಸುಖಕ್ಕೆ ಸಾಧನವೆನ್ನಿಸದು ಎಂಬ ಸಂದೇಶವೂ ಇದರಲ್ಲಿದೆ.

೩. **ತಮ್ಮ ಈ ಕೃತಿಯ ಭಾಷೆ ಕನ್ನಡ, ಪದ್ಯದಲ್ಲಿ ರಚಿತವಾಗಿರುವ ಛಂಧಸ್ಸು ಕುಸುಮಷಟ್ಪದಿ ಎಂದು ಈ ಕೃತಿಯ ಬಗ್ಗೆ ಅವರು ತಿಳಿಸಿರುವುದು ಇನ್ನೊಂದು ವಿಶೇಷ.**

೪. **ನೀತಿಕೋವಿದರಾದ ಜನರು** ಎಂದರೆ ಶಾಸ್ತ್ರ ತತ್ತ್ವವನ್ನು ಬಲ್ಲಂತಹ ಪ್ರಾಜ್ಞರು ಎಂದರ್ಥ. ಇಂತಹ ಪ್ರಾಜ್ಞಜನರು ಇದನ್ನು ತುಂಬಾ ಪ್ರೀತಿಯಿಂದ ಕೇಳಬೇಕು ಎನ್ನುವ ಮೂಲಕ ಅವಿವೇಕಿಗಳಿಗೆ ಇಂತಹ ಅಮೂಲ್ಯ ಗ್ರಂಥದ ಮಹತ್ವ ತಿಳಿಯಲಾರದು ಎಂಬ ವಿಶೇಷಾಂಶವನ್ನು ತಿಳಿಸಿರುವರು. ಒಟ್ಟಾಗಿ ಇದು ಪ್ರಾಜ್ಞರು ಕೇಳಲೇಬೇಕಾದ ಕೃತಿ ಎಂದು ಭಾವ.

೫. ಇದರ ಶ್ರವಣವು ಶ್ರೀಹರಿಯ ಪ್ರೀತಿಗೆ ಕಾರಣವಾಗುವುದು. ಆ ಮೂಲಕ ಮೋಕ್ಷಕ್ಕೆ ಸಾಧನವಾಗುವುದು ಎಂಬ ಮುಖ್ಯ ಫಲಶ್ರುತಿ ಇದರಲ್ಲಿ ಬಂದಿದೆ[೧].

೬. **ಅನವರತ** ಎಂಬುದು ಹರಿಭಕ್ತಿಸಾರದ ಪ್ರತಿಪದ್ಯದ ಕೊನೆಗೆ ತಪ್ಪದೇ ಬಂದಿದೆ. ಅದಕ್ಕೆ ಸದಾ ಎಂದರ್ಥ. ಶ್ರೀಹರಿಯು ಸದಾ ನಮ್ಮನ್ನು ರಕ್ಷಿಸಬೇಕು ಎಂದರೆ, ಸಕಲ ಸ್ಥಳಗಳಲ್ಲಿ, ಸಕಲ ಕಾಲಗಳಲ್ಲಿ, ಸಕಲ ವಿಧದಲ್ಲಿ, ಸರ್ವ ಆಪತ್ತುಗಳನ್ನು ಪರಿಹರಿಸಿ ಸರ್ವರೀತಿಯಲ್ಲೂ ನಮ್ಮನ್ನು ರಕ್ಷಿಸಬೇಕು ಎಂಬುದು ಮುಖ್ಯಾರ್ಥ. ಅದರಂತೆ, ಅವನ ಮಹಿಮೆಯನ್ನು ಸದಾ ತಪ್ಪದೇ ಶ್ರವಣಾದಿಗಳ ಮೂಲಕ ತಿಳಿಯುತ್ತಾ ಅವನ ವಿಶೇಷ ಕೃಪೆಗೆ ಪಾತ್ರರಾಗಬೇಕು ಎಂಬ ವಿಶೇಷಾಂಶವು ಸೂಚಿತ[೨].

*****

## ೧೦೪. ಆದಿಕೇಶವನು ಅನವರತ ಒಲಿಯುವನು

ಬಾದರಾಯಣ ಪೇಳ್ದ ಭಾರತ-
ಕಾದಿಕರ್ತನುದಾರ ಶ್ರೀಪುರ-
ದಾದಿಕೇಶವಮೂರ್ತಿಗಂಕಿತವಾದ ಚರಿತೆಯನು ।

---

೧. ಶ್ರವಣಾದಿ ವಿನಾ ನೈವ ಕ್ಷಣಂ ತಿಷ್ಠೇದಪಿ ಕ್ವಚಿತ್ । - ಅನುವ್ಯಾಖ್ಯಾನ

೨. ಮಕ್ಕಳಾಡಿಸುವಾಗ ಮಡದಿಯೊಳಕ್ಕರದಿ ನಲಿವಾಗ ಹಯಪ-
ಲ್ಲಕ್ಕಿ ಗಜ ಮೊದಲಾದ ವಾಹನಗಳೇರಿ ಮೆರೆವಾಗ ।
ಬಿಕ್ಕುವಾಗಾಕಳಿಸುತಲಿ ದೇವಕ್ಕಿ ತನಯನ ಸ್ಮರಿಸುತಿಹ ನರ
ಸಿಕ್ಕ ಯಮದೂತರಿಗೆ ಆವಾವಲ್ಲಿ ನೋಡಿದರು ॥
ಮಲಗುವಾಗಲಿ ಏಳುವಾಗಲಿ ಕುಳಿತು ಮಾತಾಡುತಲಿ ಮನೆಯೊಳು
ಕೆಲಸಗಳ ಮಾಡುತಲಿ ಮೈದೊಳೆವಾಗ ಮೆಲುವಾಗ ।
ಕಲುಷದೂರನ ಸಕಲಠಾವಿಲಿ ತಿಳಿಯೆ ತತ್ತನ್ನಾಮರೂಪವ
ಬಳಿಯಲಿಪ್ಪನು ಒಂದರಕ್ಷಣ ಬಿಟ್ಟಗಲನವರ ॥ ಹರಿಕಥಾಮೃತಸಾರ (೧೩/೧, ೪)

**ಮೇದಿನಿಯೊಳಿದನಾರು ಹೃದಯದೊ-**
**ಳಾದರಿಸಿ ಕೇಳ್ದಪರೊ ಮುದದಲಿ**
**ಆದಿಮೂರುತಿ ಸುರವರಾಧಿಪನೊಲಿವನನವರತ ॥ ೧೦೪ ॥**

**ಅ: ಬಾದರಾಯಣರಾದ ಶ್ರೀವೇದವ್ಯಾಸದೇವರು ಹೇಳಿದ ಮಹಾಭಾರತಕ್ಕೆ ಆದಿಕರ್ತನಾದವನು ಶ್ರೇಷ್ಠನಾದ ಶ್ರೀವೈಕುಂಠಪುರದ ಆದಿಕೇಶವನು. ಅವನಿಗೆ ಅಂಕಿತವಾದ ಈ ಚರಿತ್ರೆಯನ್ನು ಭೂಮಿಯಲ್ಲಿ ಯಾರು ಹೃದಯದಲ್ಲಿ ಭಕ್ತಿಯಿಂದ ಕೇಳುವರೋ, ಅಂತಹವರಿಗೆ ಆದಿಮೂರುತಿಯಾದ ಶ್ರೀಹರಿಯು ಸಂತೋಷದಿಂದ ಸದಾ ಒಲಿಯುವನು.**

ವಿ.: ೧. ಶ್ರೀವೇದವ್ಯಾಸದೇವರು ರಚಿಸಿದ ಮಹೋನ್ನತವಾದ ಕೃತಿ ಶ್ರೀಮನ್ಮಹಾಭಾರತ. ಮಹಾಭಾರತದ ಮುಖ್ಯ ನಾಯಕ ಶ್ರೀಹರಿಯಾದ ಶ್ರೀಕೃಷ್ಣ. ಆದಿಕೇಶವ ಎಂದರೆ ಅವನೇ. ಅಂತಹವನಿಗೆ ಸಮರ್ಪಣೆಯಾಗಿ ಈ ಕೃತಿ ರಚಿತವಾಗಿದೆ. ಇದನ್ನು ಶ್ರದ್ಧಾ ಭಕ್ತಿಗಳಿಂದ ಕೇಳುವ ಮನುಜರಿಗೆ ಶ್ರೀಹರಿಯು ವಿಶೇಷವಾಗಿ ಅನುಗ್ರಹಿಸುವನು. ಆ ಮೂಲಕ ಮುಕ್ತಿಯನ್ನೂ ನೀಡುವನು ಎಂದರ್ಥ; **ಬಾದರಾಯಣ** – ಶ್ರೀವೇದವ್ಯಾಸದೇವರು; ಬದರೀಕ್ಷೇತ್ರದಲ್ಲಿ ನೆಲೆಸಿರುವುದರಿಂದ ಅವರಿಗೆ ಆ ಹೆಸರು.

೨. ಮಹಾಭಾರತವು ಸರ್ವಶ್ರೇಷ್ಠವಾದ ಮಹೋನ್ನತವಾದ ಕೃತಿ. ಅದನ್ನು ರಚಿಸಿದವರು ಸಾಕ್ಷಾತ್ ಶ್ರೀವೇದವ್ಯಾಸದೇವರು. ಆ ಮಹಾಭಾರತದ ನಾಯಕ ಶಿರೋಮಣಿ ಎಂದರೆ ಸಾಕ್ಷಾತ್ ಶ್ರೀಕೃಷ್ಣ. ಆ ಒಂದೇ ಕಾರಣದಿಂದ ಸರ್ವಶ್ರೇಷ್ಠನಾದವನು ಎಂಬ ವಿಶೇಷಾಂಶ ತಿಳಿಯುವುದು. ಅವನ ಮಹಿಮೆಯನ್ನು ಹೇಳುವ ಈ ಕೃತಿ ಅವನ ಪ್ರೀತಿಗೆ ಸಾಧನ. ಆದ್ದರಿಂದ ಇದನ್ನು ವಿವೇಕಿಗಳು ತಪ್ಪದೆ ಶ್ರವಣ ಮಾಡಲೇಬೇಕು ಎಂದು ಭಾವ.

೩. ಮಹಾಭಾರತಕ್ಕೆ ಶ್ರೀಕೃಷ್ಣನು ಕರ್ತ ಎಂದರೆ, ಅದರ ಸೂತ್ರಧಾರ ಎಂದರ್ಥ. ಶ್ರೀಕನಕದಾಸರ ಬೊಂಬೆಯಾಟವನಾಡಿಸಿದೆ ಮಹಾಭಾರತವ ಎಂಬ ಪದ್ಯ ಅದರ ವಿವರಣೆಯಂತಿದೆ[೧].

೪. ಮಹಾಭಾರತವನ್ನು ರಚಿಸಿದ ಕಾರಣಕ್ಕೆ ಶ್ರೀವೇದವ್ಯಾಸರನ್ನು ಸಾಕ್ಷಾತ್ ಶ್ರೀಹರಿ ಎಂಬುದಾಗಿ ಪುರಾಣಗಳು ಸಾರಿವೆ:

**ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಮ್ ।**
**ಕೋ ಹ್ಯನ್ಯಃ ಪುಂಡರೀಕಾಕ್ಷಾನ್ಮಹಾಭಾರತಕೃದ್ಭವೇತ್ ॥**

ಎಂದ ಮೇಲೆ ಮಹಾಭಾರತಕ್ಕೆ ಕಾರಣಪುರುಷನಾದ ಶ್ರೀಕೃಷ್ಣ ಸಾಕ್ಷಾತ್ ಶ್ರೀಹರಿ ಎಂಬುದು ಕೈಮುತ್ಯ ಸಿದ್ಧ ಎಂಬುದು ದಾಸರ ಭಾವ.

---

೧. ಪದ್ಯ ೯, ಪು. ೨೯ ರಲ್ಲಿ ಈ ಪದ್ಯದ ಪೂರ್ಣಪಾಠವನ್ನು ನೋಡಬಹುದು.

೫. ಶ್ರೀಹರಿಯ ಮಹಿಮೆಯನ್ನು ತಿಳಿಯುವುದು ಅವನ ಒಲುಮೆಗೆ ಕಾರಣವಾಗಿ ಮುಕ್ತಿಗೆ ಸಾಧನವಾಗುವುದು ಎಂಬುದು ಮುಖ್ಯ ತಾತ್ಪರ್ಯ.

೬. ಇಲ್ಲಿ ಶ್ರೀಪುರ ಎಂದರೆ ಬೇಲೂರು ಎಂದೂ ಅರ್ಥ. ಶ್ರೀಕನಕದಾಸರು ಈ ಕೃತಿಯನ್ನು ರಚನೆ ಮಾಡಿದ್ದು ಅವರು ಬೇಲೂರಿನಲ್ಲಿ ಕೆಲವು ಕಾಲ ನೆಲೆಸಿದ್ದಾಗ ಎಂಬ ವಿಷಯ ಮುಂದಿನ ಪದ್ಯಗಳಲ್ಲಿ ಬಂದಿದೆ. ಶ್ರೀಪುರ, ವರಪುರ ಮೊದಲಾದ ಅನೇಕ ಹೆಸರುಗಳಿಂದ ಬೇಲೂರಿನ ಉಲ್ಲೇಖ ಈ ಕೃತಿಯಲ್ಲಿ ಬಂದಿದೆ.

೭. ಶ್ರೀಪುರ ಎಂಬುದಕ್ಕೆ ವೈಕುಂಠ ಎಂಬುದು ಇನ್ನೂ ಮುಖ್ಯವಾದ ಅರ್ಥ. ಮಹಾಲಕ್ಷ್ಮಿಯೇ ವೈಕುಂಠಕ್ಕೆ ಮುಖ್ಯ ಅಭಿಮಾನಿ ದೇವತೆ ಎಂಬ ಶಾಸ್ತ್ರವಚನದ ಹಿನ್ನೆಲೆಯಲ್ಲಿ ವೈಕುಂಠ ಎಂಬ ಅರ್ಥ ಅತ್ಯಂತ ಸಮುಚಿತವಾಗುವುದು.

*****

## ೧೦೫. ಚೆಲುವ ಚೆನ್ನಿಗರಾಯ ರಕ್ಷಿಸು

ಕುಲಗಿರಿಗಳನ್ವಯವು ಧಾರಿಣಿ
ಜಲಧಿ ಪಾವಕ ಮರುತ ಜಲ ನಭ
ಜಲಜಸಖ ಶೀತಾಂಶು ತಾರೆಗಳುಳ್ಳ ಪರಿಯಂತ ।
ಚಲನೆಯಿಲ್ಲದೆ ನಿನ್ನ ಚರಿತೆಯು
ಬಲಿದು ಧರೆಯೊಳಗೊಪ್ಪುವಂದದಿ
ಚೆಲುವ ಚೆನ್ನಿಗರಾಯ ರಕ್ಷಿಸು ನಮ್ಮನನವರತ ॥ ೧೦೫ ॥

ಅ: ಕುಲ ಪರ್ವತಗಳ ಅನ್ವಯ ಭೂಮಿ, ಸಮುದ್ರ, ಅಗ್ನಿ, ವಾಯು, ಜಲ, ಗಗನ, ಸೂರ್ಯ, ಚಂದ್ರ ಹಾಗೂ ನಕ್ಷತ್ರಗಳು ಇರುವವರೆಗೂ ಸಹ ಅಚಲವಾಗಿ ನಿನ್ನ ಈ ಹರಿಭಕ್ತಿಸಾರದ ಚರಿತ್ರೆಯು ಹೆಚ್ಚುಹೆಚ್ಚಾಗಿ ಪ್ರಸಾರವನ್ನು ಕಾಣುತ್ತಾ ಭೂಮಿಯಲ್ಲಿ ಕಂಗೊಳಿಸುವಂತೆ ಎಲೈ ಚೆಲುವ ಚೆನ್ನಿಗರಾಯನಾದ ಶ್ರೀಕೇಶವನೇ! ಮಾಡು. ನೀನು ಸದಾ ನಮ್ಮನ್ನು ರಕ್ಷಿಸು.

ವಿ.: ೧. ಹರಿಭಕ್ತಿಸಾರವು ಚಿರಕಾಲ ಉಳಿಯುವಂತಹ ಅಮೋಘ ಕೃತಿ ಎಂಬುದಾಗಿ ಇಲ್ಲಿ ನಿರೂಪಿತವಾಗಿದೆ.

೨. ಹಾಗೆ ಈ ಕೃತಿಯು ಚಿರಕಾಲ ಉಳಿಯಲಿ ಎಂಬುದನ್ನು ಭೂಮಿಯಲ್ಲಿ ಮೇರು ಮೊದಲಾದ ಕುಲಪರ್ವತಗಳು ಇರುವವರೆಗೂ, ಸಮುದ್ರ, ಭೂಮಿ ಮೊದಲಾದ ಪಂಚಭೂತಗಳು, ಸೂರ್ಯ, ಚಂದ್ರರು ಇರುವವರೆಗೂ ಎಂಬುದಾಗಿ ತಿಳಿಸಿರುವರು;

**ಧಾರಿಣಿ** – ಭೂಮಿ; **ಜಲಧಿ** – ಸಮುದ್ರ; **ಪಾವಕ** – ಅಗ್ನಿ; **ಮರುತ** – ಗಾಳಿ; **ನಭ** – ಆಕಾಶ; **ಶೀತಾಂಶು** – ಚಂದ್ರ; **ತಾರೆ** – ನಕ್ಷತ್ರ; **ಧರೆ** – ಭೂಮಿ.

೩. ಕುಲಪರ್ವತಗಳು ಮೊದಲಾದವುಗಳು ಪ್ರಳಯಕಾಲದವರೆಗೂ ಇರುವ ಚಿರವಸ್ತುಗಳು. ಅದರಂತೆ ಈ ಕೃತಿಯು ಸಹ ಚಿರಕಾಲ ಉಳಿಯಲಿ ಎಂಬುದು ಇಲ್ಲಿಯ ಆಶಯ.

೪. ಇಲ್ಲಿ '**ಕುಲಪರ್ವತಗಳು**' ಎಂದರೆ ಮೇರು, ಮಂದರ ಮೊದಲಾದ ಏಳು. ಅದರಂತೆ ಸಪ್ತಸಾಗರಗಳು ಎಂದರೆ ಲವಣ, ಮೊದಲಾದ ಏಳು ಸಾಗರಗಳು[೧].

೫. '**ಜಲಜಸಖ**' ಎಂದರೆ ಸೂರ್ಯ ಎಂದರ್ಥ. ಜಲಜ ಎಂದರೆ ಕಮಲ. ಕಮಲ ಅರಳುವುದು ಸೂರ್ಯನ ದರ್ಶನವಾದಾಗ. ಈ ಹಿನ್ನೆಲೆಯಲ್ಲಿ ಸೂರ್ಯನಿಗೆ ಜಲಜಸಖ ಎಂದು ಹೆಸರು.

೬. '**ಶೀತಾಂಶು**' ಎಂದರೆ ಚಂದ್ರ. ಶೀತ ಎಂದರೆ ತಂಪು. ಅಂಶು ಎಂದರೆ ಕಿರಣ. ಆದ್ದರಿಂದ ತಂಪುಕಿರಣನಾದ ಚಂದ್ರನಿಗೆ ಶೀತಾಂಶು ಎಂದು ಹೆಸರು.

೭. ಈ ಮಾತು ವಾಲ್ಮೀಕಿಗಳ ರಾಮಾಯಣವು ಭೂಮಿಯಲ್ಲಿ ಬೆಟ್ಟಗಳು ನಿಂತಿರುವವರೆಗೂ, ನದಿಗಳು ಹರಿಯುತ್ತಿರುವವರೆಗೂ ಉಳಿಯಲಿ ಎಂದು ವಾಲ್ಮೀಕಿಗಳಿಗೆ ಬ್ರಹ್ಮದೇವರು ನೀಡಿದ ವರದ ಹಿನ್ನೆಲೆಯಲ್ಲಿ ತುಂಬಾ ಅರ್ಥವತ್ತಾದುದು:

**ಯಾವತ್ ಸ್ಥಾಸ್ಯಂತಿ ಗಿರಯಃ ಸರಿತಶ್ಚ ಮಹೀತಲೇ ।**
**ತಾವದ್ರಾಮಾಯಣಕಥಾ ತ್ವತ್ಕೃತಾ ಪ್ರಚರಿಷ್ಯತಿ ॥** – (೧/೨/೩೫)

೮. ಬ್ರಹ್ಮದೇವರು ರಾಮಾಯಣವು ಉಳಿದಿರುವವರೆಗೂ, ವಾಲ್ಮೀಕಿಗಳು ಬ್ರಹ್ಮಲೋಕದಲ್ಲಿ ನೆಲೆಸಲಿ ಎಂಬ ವರವನ್ನು ಸಹ ನೀಡಿದ ವಿವರ ವಾಲ್ಮೀಕಿರಾಮಾಯಣದಲ್ಲಿದೆ:

**ಯಾವದ್ರಾಮಕಥಾ ತ್ವತ್ಕೃತಾ ಪ್ರಚರಿಷ್ಯತಿ ।**
**ತಾವದೂರ್ಧ್ವಮಧಶ್ಚ ತ್ವಂ ಮಲ್ಲೋಕೇಷು ನಿವತ್ಸ್ಯತಿ ॥** – (೧/೨/೩೬)

೯. ಈ ಮಾತಿನ ಹಿನ್ನೆಲೆಯಲ್ಲಿ ಹರಿಭಕ್ತಿಸಾರ ಕೃತಿಯು ಚಿರಕಾಲ ಉಳಿಯುವಂತೆ ಇದನ್ನು ರಚಿಸಿದ ಶ್ರೀಕನಕದಾಸರು ಹರಿಲೋಕದಲ್ಲಿ ನೆಲೆಸುವರು ಎಂಬ ವಿಶೇಷಾಂಶವನ್ನು ಅರ್ಥಮಾಡಿಕೊಳ್ಳಬಹುದು.

*****

---

೧. ಲವಣೋದಸುರಸೋದಸುರೋದಘೃತೋದಕ್ಷೀರೋದದಧಿಮಂಡೋದಶುದ್ಧೋದಾ ಸಪ್ತಜಲಧಯಃ ॥ – ಭಾಗವತ (೫/೧/೩೩)
ಸಪ್ತಭೂದ್ವೀಪಾಃ । ಜಂಬೂಪ್ಲಕ್ಷಶಾಲ್ಮಲಿಕುಶಕ್ರೌಂಚಶಾಕಪುಷ್ಕರಸಂಜ್ಞಾಃ ॥ – ಭಾಗವತ (೫/೧/೩೨)

೧೦೬. ಫಲ ಕೈಸೇರುವುದು ಹರಿಭಕ್ತಿಸಾರದ ಕಥೆಯ ಕೇಳ್ದರಿಗೆ
ನೂರುಕನ್ಯಾದಾನವನು ಭಾ-
ಗೀರಥೀಸ್ನಾನವನು ಮಿಗೆ ಕೈ-
ಯಾರೆ ಗೋವ್ಗಳ ಪ್ರೇಮದಿಂದಲಿ ಭೂಸುರರಿಗೊಲಿದು ।
ಊರುಗಳ ನೂರಗ್ರಹಾರವ
ಧಾರೆಯೆರೆದಿತ್ತಂತೆ ಫಲ ಕೈ-
ಸೇರುವುದು ಹರಿಭಕ್ತಿಸಾರದ ಕಥೆಯ ಕೇಳ್ದರಿಗೆ ॥ ೧೦೬ ॥

ಅ: ಶ್ರೀಹರಿಭಕ್ತಿಸಾರದ ಕಥೆಯನ್ನು ಶ್ರವಣ ಮಾಡುವವರಿಗೆ ನೂರು ಕನ್ಯಾದಾನ ಮಾಡಿದ, ಗಂಗಾಸ್ನಾನವನ್ನು ಮಾಡಿದ ಹಾಗೂ ಸ್ವತಃ ತಮ್ಮ ಕೈಯಿಂದ ವಿಪ್ರರಿಗೆ ಭಕ್ತಿಪೂರ್ವಕವಾಗಿ ಗೋವುಗಳನ್ನು ದಾನ ಮಾಡಿದ, ಊರುಗಳನ್ನು ದಾನಮಾಡಿದ, ನೂರಾರು ಅಗ್ರಹಾರವನ್ನು ದಾನಮಾಡಿದ ಫಲ ಕೈಸೇರುವುದು.

ವಿ.: ೧. ಹರಿಭಕ್ತಿಸಾರದ ಫಲಶ್ರುತಿಯು ಈ ಪದ್ಯದಲ್ಲಿ ಮುಂದುವರೆದಿದೆ.

೨. ಹರಿಪ್ರೀತಿ ಮುಖ್ಯವಾಗಿ ಈ ಕೃತಿಯ ಫಲ. ಅದರೊಂದಿಗೆ ಅದರ ಮಹಿಮೆಯನ್ನು ಅರ್ಥಮಾಡಿಕೊಳ್ಳಲು ಮತ್ತು ಅನೇಕ ವಿಧವಾದ ಫಲಗಳನ್ನು ಇದರಲ್ಲಿ ತಿಳಿಸಿರುವರು.

೩. ಕನ್ಯಾದಾನ, ಗಂಗಾಸ್ನಾನ, ಗೋದಾನ, ಗ್ರಾಮದಾನ, ಅಗ್ರಹಾರಗಳ ದಾನ ಮೊದಲಾದವು ಮಹಾದಾನವೆಂದು ಪ್ರಸಿದ್ಧವಾದ ದಾನಗಳು. ಇವುಗಳಲ್ಲಿ ಒಂದೊಂದು ದಾನವನ್ನು ಮಾಡುವುದು ಸಹ ತುಂಬಾ ಪುಣ್ಯಕರ. ಆದರೆ, ಶ್ರೀಹರಿಭಕ್ತಿಸಾರದ ಶ್ರವಣ ಈ ಎಲ್ಲ ಪುಣ್ಯಗಳನ್ನು ಒಟ್ಟಾಗಿಯೇ ನೀಡುವುದು ಎಂಬುದು ವಿಶೇಷಾಂಶ; ಭಾಗೀರಥೀ – ಗಂಗೆ.

೪. ದಾನ ನೀಡುವುದು ಸಹ ವಿಪ್ರರಿಗೆ. ವಿಪ್ರರು ಎಂದರೆ, ವೇದಾದಿ ಸಚ್ಛಾಸ್ತ್ರಗಳನ್ನು ಅಧ್ಯಯನ ಮಾಡಿದ ಮಹಾಜ್ಞಾನಿಗಳು. ಇದನ್ನು ಭೂಸುರರು ಎಂಬ ಪದದಿಂದ ಸೂಚಿಸಿರುವರು. ಭೂಮಿಯ ಮಟ್ಟಿಗೆ ವಿಪ್ರರೇ ದೇವತೆಗಳು ಎಂದು ಇದರ ಅರ್ಥ.

೫. ಶ್ರೀಹರಿಯು ವಿಶೇಷ ಸನ್ನಿಧಾನವಿರಿಸಿರುವ ವಸ್ತುಗಳಲ್ಲಿ ವಿಪ್ರರಿಗೆ ಅಗ್ರಸ್ಥಾನ. ಅಂತಹ ವಿಪ್ರರಿಗೆ ಶ್ರೇಷ್ಠ ದಾನಗಳನ್ನು ನೀಡಿದಾಗ ಬರುವ ಫಲ ಊಹೆಗೆ ನಿಲುಕದ್ದು. ಅಂತಹ ಪುಣ್ಯದ ರಾಶಿಯನ್ನು ನೀಡುವ ಸಾಮರ್ಥ್ಯ ಶ್ರೀಹರಿಭಕ್ತಿಸಾರದ್ದು.

೬. ಈ ಕೃತಿಗೆ ಅನ್ವಯಿಸುವಂತೆ ನಿರೂಪಿತವಾಗಿರುವ ಫಲಶ್ರುತಿ ಒಟ್ಟಾಗಿ ಶ್ರೀಹರಿಯ ಮಾಹಾತ್ಮ್ಯೆಯನ್ನು ಪ್ರತಿಪಾದಿಸುವ ಸಕಲ ಗ್ರಂಥಗಳಿಗೂ ಅನ್ವಯಿಸುವುದು ಎಂದು ತಿಳಿಯಬೇಕು.

## ೧೦೭. ರಕ್ಷಿಪನಾದಿಕೇಶವನು

ಮೇರುಮಂದರನಿಭಸುವರ್ಣವ
ವಾರಿಮಧ್ಯದೊಳಿರುವ ಅವನಿಯ
ನಾರಿಯರ ಗಾಯತ್ರಿ ಪಶುಗಳನಿತ್ತ ಫಲಬಹುದು ।
ಧಾರಿಣಿಯೊಳೀ ಭಕ್ತಿಸಾರವ-
ನಾರು ಓದುವರವರಿಗನುದಿನ
ಚಾರುವರಗಳನಿತ್ತು ರಕ್ಷಿಪನಾದಿಕೇಶವನು[೧] ॥ ೧೦೭ ॥

---

೧. ಶ್ರೀಕನಕದಾಸರ 'ಕೇಶವನಾಮ' ಎಂಬ ಸುಪ್ರಸಿದ್ಧವಾದ ಕೃತಿ ಸಹಸ್ರಾರು ಜನಗಳ ನಿತ್ಯಪಾರಾಯಣದ ಕೃತಿಯಾಗಿದ್ದು ಶ್ರೀಕೇಶವನ ಹಿರಿಮೆ ಹಾಗೂ ಅವನಲ್ಲಿ ನೈಜ ಭಕ್ತನು ಮುಂದಿಡಬೇಕಾದ ಕೋರಿಕೆ ಎರಡನ್ನೂ ಸಹ ಚಿತ್ರವಿಚಿತ್ರ ಸೊಬಗಿನ್ನು ಈ ಕೃತಿ ಹೊಂದಿದೆ:

ಈಶ ನಿನ್ನ ಚರಣ ಭಜನೆ ಆಶೆಯಿಂದ ಮಾಡುವೆನು
ದೋಷ ರಾಶಿ ನಾಶ ಮಾಡು ಶ್ರೀಶ ಕೇಶವ ॥ ೧ ॥
ಶರಣು ಹೊಕ್ಕೆನಯ್ಯ ಎನ್ನ ಮರಣ ಸಮಯದಲ್ಲಿ ನಿನ್ನ
ಚರಣ ಸ್ಮರಣೆ ಕರುಣಿಸಯ್ಯ ನಾರಾಯಣ ॥ ೨ ॥
ಶೋಧಿಸೆನ್ನ ಭವದ ಕಲುಷ ಬೋಧಿಸಯ್ಯ ಜ್ಞಾನವೆನಗೆ
ಬಾಧಿಸುವಾ ಯಮನ ಬಾಧೆ ಬಿಡಿಸು ಮಾಧವ ॥ ೩ ॥
ಹಿಂದನೇಕ ಯೋನಿಗಳಲಿ ಬಂದು ಬಂದು ನೊಂದೆ ನಾನು
ಇಂದು ಭವದ ಬಂಧ ಬಿಡಿಸು ತಂದೆ ಗೋವಿಂದ ॥ ೪ ॥
ಭ್ರಷ್ಟನೆನಿಸಬೇಡ ಕೃಷ್ಣ ಇಷ್ಟು ಮಾತ್ರ ಬೇಡಿಕೊಂಬೆ
ಶಿಷ್ಟರೊಳಗೆ ಇಟ್ಟು ಕಷ್ಟ ಬಿಡಿಸು ವಿಷ್ಣುವೆ ॥ ೫ ॥
ಮೊದಲು ನಿನ್ನ ಪಾದ ಪೂಜೆ ಮುದದಿ ಮಾಡುವೆನು ನಾನು
ಹೃದಯದೊಳಗೆ ಒದಗಿರಯ್ಯ ಮಧುಸೂದನ ॥ ೬ ॥
ಕವಿದುಕೊಂಡು ಇರುವ ಪಾಪ ಸವೆದು ಪೋಗುವಂತೆ ಮಾಡು
ಜವನ ಬಾಧೆಯನ್ನು ಬಿಡಿಸೊ ಶ್ರೀತ್ರಿವಿಕ್ರಮ ॥ ೭ ॥
ಕಾಮಜನಕ ನಿನ್ನ ನಾಮ ಪ್ರೇಮದಿಂದ ಪಾಡುವಂಥ
ನೇಮವೆನಗೆ ಪಾಲಿಸಯ್ಯ ಸ್ವಾಮಿ ವಾಮನ ॥ ೮ ॥
ಮದನನಯ್ಯ ನಿನ್ನ ಮಹಿಮೆ ವದನದಲ್ಲಿ ಒದಗುವಂತೆ
ಹೃದಯದಲ್ಲಿ ಸದನ ಮಾಡು ಮುದದಿ ಶ್ರೀಧರ ॥ ೯ ॥
ಹುಸಿಯನಾಡಿ ಹೊಟ್ಟೆ ಹೊರೆವ ವಿಷಯದಲ್ಲಿ ರಸಿಕನೆಂದು
ಹುಸಿಗೆ ನನ್ನ ಹಾಕದಿರೋ ಹೃಷೀಕೇಶನೆ ॥ ೧೦ ॥
ಅಬ್ಧಿಯೊಳಗೆ ಬಿದ್ದು ನಾನು ಒದ್ದುಕೊಂಬೆನಯ್ಯ ಭವದಿ
ಗೆದ್ದು ಪೋಪ ಬುದ್ಧಿ ತೋರೊ ಪದ್ಮನಾಭನೆ ॥ ೧೧ ॥
ಕಾಮಕ್ರೋಧ ಬಿಡಿಸಿ ನಿನ್ನ ನಾಮ ಜಿಹ್ವೆಯೊಳಗೆ ನುಡಿಸು
ಶ್ರೀಮಹಾನುಭಾವನಾದ ದಾಮೋದರ ॥ ೧೨ ॥

ಆ. ಮೇರುಮಂದರದಷ್ಟು ಚಿನ್ನ, ಸಮುದ್ರಮಧ್ಯದಲ್ಲಿರುವ ಸಮಸ್ತ ಭೂಮಂಡಲದ

---

ಪಂಕಜಾಕ್ಷ ನೀನು ಎನ್ನ ಮಂಕುಬುದ್ಧಿ ಬಿಡಿಸಿ ನಿನ್ನ
ಕಿಂಕರನ್ನ ಮಾಡಿಕೊಳ್ಳೊ ಸಂಕರುಷಣ ॥ ೧೩ ॥
ಏಸು ಜನ್ಮ ಬಂದರೇನು ದಾಸನಲ್ಲವೇನೊ ನಾನು
ಘಾಸಿ ಮಾಡದಿರೋ ಇನ್ನು ವಾಸುದೇವನೆ ॥ ೧೪ ॥
ಬುದ್ಧಿ ಶೂನ್ಯನಾಗಿ ಎನಗೆ ಕದ್ದು ಕಳ್ಳನಾದೆ ನಿನಗೆ
ತಿದ್ದಿ ಹೃದಯ ಶುದ್ಧಿ ಮಾಡೊ ಪ್ರದ್ಯುಮ್ನನೆ ॥ ೧೫ ॥
ಜನನಿ ಜನಕ ನೀನೆಯೆಂದು ನೆನೆವೆನಯ್ಯ ದೀನಬಂಧು
ಎನಗೆ ಮುಕ್ತಿ ಪಾಲಿಸಿಂದು ಅನಿರುದ್ಧನೆ ॥ ೧೬ ॥
ಹರುಷದಿಂದ ನಿನ್ನ ನಾಮ ಸ್ಮರಿಸುವಂತೆ ಮಾಡು ಪ್ರೇಮ
ಇರಿಸು ಚರಣದಲ್ಲಿ ಕ್ಷೇಮ ಪುರುಷೋತ್ತಮ ॥ ೧೭ ॥
ಸಾಧು ಸಂಗ ಕೊಟ್ಟು ನಿನ್ನ ಪಾದಭಜಕನೆನಿಸು ಎನ್ನ
ಭೇದ ಮಾಡದಿರು ಇನ್ನು ಶ್ರೀಅಧೋಕ್ಷಜ ॥ ೧೮ ॥
ಚಾರುಚರಣ ತೋರಿ ಎನಗೆ ಪಾರುಗಾಣಿಸಯ್ಯ ಕೊನೆಗೆ
ಭಾರ ಹಾಕಿ ಇರುವೆ ನಿನಗೆ ನಾರಸಿಂಹನೆ ॥ ೧೯ ॥
ಸಂಚಿತಾರ್ಥ ಪಾಪಗಳನು ಕಿಂಚಿತಾದರುಳಿಯದಂತೆ
ಮುಂಚಿತಾಗಿ ಕಳೆಯಬೇಕು ಸ್ವಾಮಿ ಅಚ್ಯುತ ॥ ೨೦ ॥
ಜ್ಞಾನ ಭಕ್ತಿ ಕೊಟ್ಟು ನಿನ್ನ ಧ್ಯಾನದಲ್ಲಿ ಇಟ್ಟು ಎನ್ನ
ಹೀನ ಬುದ್ಧಿ ಬಿಡಿಸೊ ಮುನ್ನ ಶ್ರೀಜನಾರ್ದನ ॥ ೨೧ ॥
ಜಪತಪಾನುಷ್ಠಾನ ನೀನು ಒಪ್ಪುವಂತೆ ಮಾಡಲಿಲ್ಲ
ತಪ್ಪ ಕೋಟಿ ಕ್ಷಮಿಸಬೇಕು ಶ್ರೀಉಪೇಂದ್ರನೆ ॥ ೨೨ ॥
ಮೊರೆಯ ಇಡುವೆನಯ್ಯ ನಿನಗೆ ಸೆರೆಯ ಬಿಡಿಸು ಭವದ ಎನಗೆ
ಇರಿಸು ಭಕ್ತರೊಳಗೆ ಪರಮಪುರುಷ ಶ್ರೀಹರೇ ॥ ೨೩ ॥
ಪುಟ್ಟಿಸಲೇ ಬ್ಯಾಡವಿನ್ನು ಪುಟ್ಟಿಸಿದಕೆ ಪಾಲಿಸಿನ್ನು
ಇಷ್ಟು ಮಾತ್ರ ಬೇಡಿಕೊಂಬೆ ಶ್ರೀಕೃಷ್ಣನೆ ॥ ೨೪ ॥
ಸತ್ಯವಾದ ನಾಮಗಳನು ನಿತ್ಯದಲ್ಲಿ ಪಠಿಸುವವರ
ಅರ್ಥಿಯಿಂದ ಸಲಹುವ ಕರ್ತೃ ಕೇಶವ ॥ ೨೫ ॥
ಮರೆಯದಲೆ ಹರಿಯ ನಾಮ ಬರೆದು ಓದಿ ಕೇಳುವರಿಗೆ
ಕರೆದು ಮುಕ್ತಿ ಕೊಡುವ ನೆಲೆಯಾದಿಕೇಶವ ॥ ೨೬ ॥

**

– ಶ್ರೀಕನಕದಾಸರ ಮೋಹನತರಂಗಿಣೀ ಕೃತಿಯಲ್ಲೂ ಕೇಶವನಾಮದ ಸಂಗ್ರಹ ಅಪೂರ್ವರೀತಿಯಲ್ಲಿ ಬಂದಿದೆ
ಮಾಧವ ನಾರಾಯಣ ಕೇಶವ ಮಧು–
ಸೂದನ ಗೋವಿಂದ ವಿಷ್ಣು
ಶ್ರೀಧರ ವಾಮನ ತ್ರಿವಿಕ್ರಮ ನಿಮ್ಮಯ
ಪಾದದ ನೆಲೆಗಾಂಬರಾರು ॥
ದಾಮೋದರ ಪದ್ಮನಾಭ ಹೃಷೀಕೇಶ
ತಾಮರಸಾಪ್ತಪ್ರಕಾಶ

ಕನ್ಯೆಯರನ್ನು ದಾನ ಮಾಡಿದ ಫಲ, ಗಾಯತ್ರೀ ಉಪದೇಶ ಮಾಡಿದ ಫಲ, ಗೋದಾನ ಮಾಡಿದ ಫಲ ಮೊದಲಾದ ಫಲಗಳು ಈ ಹರಿಭಕ್ತಿಸಾರವನ್ನು ಅನುದಿನ ಓದುವವರಿಗೆ ಲಭಿಸುವವು; ಅದರೊಂದಿಗೆ ಆದಿಕೇಶವನಾದ ಶ್ರೀಹರಿಯು ಬೇಡಿದ ವರಗಳನ್ನಿತ್ತು ಪರಿಪಾಲಿಸುವನು.

ವಿ.: ೧. ಶ್ರೀಹರಿಭಕ್ತಿಸಾರದ ಫಲಶ್ರುತಿ ಇದರಲ್ಲೂ ಮುಂದುವರೆದಿದೆ.

೨. ಹಿಂದೆ ತಿಳಿಸಿದ ದಾನಗಳೊಂದಿಗೆ ಸುವರ್ಣದಾನ, ಕನ್ಯಾದಾನ, ವಟುಗಳಿಗೆ ಬ್ರಹ್ಮೋಪದೇಶ, ವಿಪ್ರರಿಗೆ ಗೋವುಗಳನ್ನು ದಾನಮಾಡಿದ ಫಲ ಶ್ರೀಭಕ್ತಿಸಾರವನ್ನು ಪ್ರತಿನಿತ್ಯ ಓದುವವರಿಗೆ ಲಭಿಸುವುವು ಎಂದರ್ಥ; ಅವನಿ – ಭೂಮಿ; ಧಾರಿಣಿ – ಭೂಮಿ; ಚಾರು – ಮನೋಹರ; ನಿಭ – ಸದೃಶ, ಸಮಾನ.

೩. ಹಿಂದಿನ ಪದ್ಯಗಳಲ್ಲಿ ಇದನ್ನು ಶ್ರವಣ ಮಾಡುವವರಿಗೆ ಬರುವ ಫಲದ ನಿರೂಪಣೆ ಬಂದಿದ್ದರೆ ಈ ಪದ್ಯದಲ್ಲಿ ಶ್ರೀಹರಿಭಕ್ತಿಸಾರವನ್ನು ಓದುವವರಿಗೆ ಬರುವ ಫಲ ನಿರೂಪಿತವಾಗಿದೆ. ಶ್ರವಣ ಮಾಡುವುದು ಪುಣ್ಯಕರವಾಗಿರುವಂತೆ ಇದನ್ನು ಪಾರಾಯಣಾದಿಗಳನ್ನು ಮಾಡಿ ಇತರರಿಗೆ ಶ್ರವಣವನ್ನು ಮಾಡಿಸುವುದು ಸಹ ಅತ್ಯಂತ ಪುಣ್ಯಕರ ಎಂದು ಭಾವ.

೪. ಇಂತಹ ಬಗೆಬಗೆಯ ಫಲಗಳನ್ನಲ್ಲದೆ ಬೇರೆ ಯಾವುದೇ ಬಯಕೆ ಮನಸ್ಸಿನಲ್ಲಿದ್ದರೂ ಸಹ ಶ್ರೀಹರಿ ಅದನ್ನು ನೆರವೇರಿಸುವನು ಎಂಬುದನ್ನು ಚಾರುವರಗಳನ್ನಿತ್ತು ಎಂಬ ಪದದಿಂದ ಸೂಚಿಸಿರುವರು. ಒಟ್ಟಾಗಿ ಈ ಹರಿಭಕ್ತಿಸಾರದ ಓದು ಸರ್ವಾಭೀಷ್ಟಸಿದ್ಧಿದ ಎಂದರ್ಥ.

೫. ಈ ಮೊದಲೆ ತಿಳಿಸಿದಂತೆ ಶ್ರೀಹರಿಯ ಮಾಹಾತ್ಮ್ಯವನ್ನು ತಿಳಿಸುವ ಪ್ರತಿಯೊಂದು ಕೃತಿಯು ಹೀಗೆ ಸಕಲ ಬಗೆಯ ಅನಿಷ್ಟಗಳನ್ನು ಪರಿಹರಿಸಿ, ಸಕಲ ಮನೋಭೀಷ್ಟಗಳನ್ನು ಈಡೇರುಸುವುದು ಎಂಬುದು ಶಾಸ್ತ್ರಗಳಿಂದ ನಿರೂಪಿತವಾಗಿರುವ ಮುಖ್ಯ ಪ್ರಮೇಯಗಳಲ್ಲೊಂದು.

*****

---

ಹೇಮಾಂಬರ ವಾಸುದೇವ ಸಂಕರ್ಷಣ
ಸಾಮಜವಿಭು ರಕ್ಷ ಜಯತು ॥
ಪುರುಷೋತ್ತಮನೆ ಪ್ರದ್ಯುಮ್ನಾನಿರುದ್ಧನೆ
ನರಸಿಂಹಾಧೋಕ್ಷ ಜಯತು
ವರ ಜನಾರ್ದನನೆ ಉಪೇಂದ್ರನಚ್ಯುತ ಹರಿ
ಪರಮಾತ್ಮಕ ಕೃಷ್ಣ ಜಯತು ॥ – ಮೋಹನತರಂಗಿಣಿ (೫/೧೧-೧೩)
ಕೇಶವ ನಾರಾಯಣ ಕೃಷ್ಣ ಗೋವಿಂದ
ವಾಸುದೇವಾಚ್ಯುತ ತನ್ನ
ಬೇಸರಿ ಪರಿಹರಿಸುವುದೆಂದು ಬಿಡದೆ ಚೌ-
ವೀಸ ನಾಮದಿ ಪೊಗಳಿದಳು ॥ – ಮೋಹನತರಂಗಿಣಿ (೧೭/೧೫)

## ೧೦೮. ಮಾಧವನು ಕರುಣಿಪನು

ಲೋಕದೊಳಗತ್ಯಧಿಕವೆನಿಸುವ
ಕಾಗಿನೆಲೆ ಸಿರಿಯಾದಿಕೇಶವ
ತಾ ಕೃಪೆಯೊಳಗೆ ನುಡಿಸಿದನು ಈ ಭಕ್ತಿಸಾರವನು ।
ಜೋಕೆಯಲಿ ಬರಿದೋದಿ ಕೇಳ್ದರ-
ನಾಕುಲದಿ ಮಾಧವನು ಕರುಣಿಪ
ಶ್ರೀಕಮಲವಲ್ಲಭನು ಮಿಗೆ ಬಡದಾದಿಕೇಶವನು ॥ ೧೦೮ ॥

**ಅ: ಲೋಕದೊಳಗೆ ಅತ್ಯಂತ ಶ್ರೇಷ್ಠನೆನ್ನಿಸುವ ಕಾಗಿನೆಲೆಯ ಶ್ರೀಆದಿಕೇಶವನು ತಾನು, ಈ ಹರಿಭಕ್ತಿಸಾರವನ್ನು ಕೃಪೆಯಿಂದ ನನ್ನಿಂದ ನುಡಿಸಿರುವನು. ಇದನ್ನು ಮನೋವ್ಯಾಕುಲವನ್ನು ತೊರೆದು ಎಚ್ಚರಿಕೆಯಿಂದ ಬರೆಯುವವರಿಗೆ, ಓದುವವರಿಗೆ, ಕೇಳುವವರಿಗೆ ಲಕ್ಷ್ಮೀಪತಿಯಾದ ಬಾಡದ ಶ್ರೀಆದಿಕೇಶವನಾದ ಶ್ರೀಮಾಧವನು ನಿಶ್ಚಿಂತೆಯಿಂದ ಕರುಣೆಯನ್ನು ತೋರುವನು.**

ವಿ.: ೧. ಶ್ರೀಹರಿಭಕ್ತಿಸಾರದ ಮುಕ್ತಾಯದ ಪದ್ಯಗಳಲ್ಲಿ ಒಂದಾದ ಇದರಲ್ಲಿ, ಈ ಕೃತಿಯ ಶ್ರವಣಮನನಾದಿಗಳ ಮಹತ್ವವನ್ನು ತಿಳಿಸಲಾಗಿದೆ.

೨. ಆದಿಕೇಶವನು ಸರ್ವೋತ್ತಮನಾದ ಶ್ರೀಹರಿ. ಈ ಕೃತಿಯನ್ನು ಅವನೇ ಕೃಪೆಯಿಂದ ತಮ್ಮಿಂದ ರಚನೆ ಮಾಡಿಸಿರುವನು ಎನ್ನುವ ಮೂಲಕ ಶ್ರೀಕನಕದಾಸರು '**ನಾಹಂ ಕರ್ತಾ ಹರಿಃ ಕರ್ತಾ**' ಎಂಬ ಕರ್ಮಯೋಗದ ರಹಸ್ಯವನ್ನು ಅನುಸಂಧಾನ ಮಾಡಿ ತೋರಿಸಿರುವರು. ಇಂತಹ ಅನುಸಂಧಾನವಿದ್ದ ಕಾರ್ಯಗಳು ಮಾತ್ರವೇ ಭಗವಂತನ ಪೂರ್ಣಾನುಗ್ರಹಕ್ಕೆ ಕಾರಣವಾಗುವುದು.

೩. ಶ್ರೀಹರಿಗೆ ಅತ್ಯಂತ ಪ್ರಿಯವಾದದ್ದು ಭಕ್ತಿ. ಅಂತಹ ಭಕ್ತಿಯ ಮಾಹಾತ್ಮ್ಯವನ್ನು ಬಗೆಬಗೆಯಲ್ಲಿ ಸಾರುವ ಈ ಕೃತಿ ಸಹಜವಾಗಿಯೇ ಶ್ರೀಹರಿಗೆ ಪರಮಪ್ರಿಯ: '**ಭಕ್ತ್ಯೈವ ತುಷ್ಟಿಮಭ್ಯೇತಿ ವಿಷ್ಣುರ್ನಾನ್ಯೇನ ಕೇನಚಿತ್ ।**' ಮ.ಭಾ.ತಾ.ನಿ(೧/೪).

೪. **ಅನಾಕುಲದಿ** ಎಂದರೆ, ಯಾವುದೇ ವ್ಯಾಕುಲವನ್ನು ಹೊಂದದೆ ಎಂದರ್ಥ. ಲೌಕಿಕ ಕೆಲಸಗಳನ್ನುಶ್ರದ್ಧೆಯಿಂದ ಮಾಡುವಂತೆ ಆಧ್ಯಾತ್ಮಿಕ ಕಾರ್ಯಗಳನ್ನುಸಹ ಮರುಗದೆ, ಕೊರಗದೆ ತುಂಬು ಶ್ರದ್ಧೆಯಿಂದ ಆಚರಿಸಬೇಕು ಎಂದರ್ಥ.

೫. **ಜೋಕೆಯಿಂದ** ಎಂದರೆ ಎಚ್ಚರಿಕೆಯಿಂದ, ಜಾಗರೂಕತೆಯಿಂದ, ಕ್ರಮವಾಗಿ ಎಂದರ್ಥ. ಪೂರ್ಣ ಗಮನವನ್ನಿರಿಸಿ ಮನಸ್ಸು ಅಚೆ-ಈಚೆ ಹೋಗದಂತೆ ನಿಯಂತ್ರಿಸಿಕೊಂಡು ಇದನ್ನು ಪಠಿಸಬೇಕು ಎಂದು ಭಾವ.

೬. **ಬರಿದೋದಿಕೇಳ್ದರ**: ಈ ಕೃತಿಯನ್ನು ಬರೆಯುವುದು, ಓದುವುದು ಹಾಗೂ ಕೇಳುವುದು, ಈ ಮೂರನ್ನು ಮಾಡುವವರಿಗೆ ಎಂದರ್ಥ. ಬರೆಯುವುದು ತನ್ನ ಮಟ್ಟಿಗೆ ಖಚಿತತೆಯನ್ನು ಹೆಚ್ಚಿಸಿಕೊಳ್ಳಲು ನೆರವಾಗುವುದು. ಓದುವುದು ಇತರರ ಉಪಯೋಗಕ್ಕೂ ಕಾರಣವಾಗುವುದರಿಂದ ಹೆಚ್ಚು ಸಾರ್ಥಕವೆನ್ನಿಸುವುದು. ಈ ಎರಡನ್ನೂ ಮಾಡಲಾಗದವರು ಕೇಳುವುದು ಸಹ ತುಂಬಾ ಪುಣ್ಯಕರ. ಕೇಳುವುದು ಎಂಬುದಕ್ಕೆ ಕೇಳಿ ಅದರಂತೆ ನಡೆಯುವುದು ಎಂಬುದೇ ಮುಖ್ಯವಾದ ಅರ್ಥ. ಭಗವದ್ಗೀತೆಯಲ್ಲಿ ಬರುವ '**ಶೃಣು**' ಎಂಬುದಕ್ಕೆ '**ಶ್ರುತ್ವಾ ಅನುಷ್ಠಾನಂ ಕುರು**' ಎಂಬ ಅರ್ಥ ಹೇಗೋ ಹಾಗೆ.

೭. ಶ್ರೀಹರಿಯನ್ನು ಮಾಧವ, ಶ್ರೀಕಮಲವಲ್ಲಭ, ಆದಿಕೇಶವ ಎಂಬ ಮೂರು ವಿಶೇಷಣಗಳಿಂದ ಸ್ತುತಿಸಿರುವರು. ಶ್ರೀಕಮಲವಲ್ಲಭ ಎಂಬುದಕ್ಕೆ ಲಕ್ಷ್ಮೀಪತಿ ಎಂದೂ, ಆದಿಕೇಶವ ಎಂಬುದಕ್ಕೆ ಜಗತ್ತಿನ ಸೃಷ್ಟ್ಯಾದಿಕರ್ತೃವಾದ ಬ್ರಹ್ಮಾದಿಗಳಿಗೂ ಪ್ರೇರಕನಾದವ ಎಂದು, ಮಾಧವ ಎಂಬುದಕ್ಕೆ ಸಕಲ ವಿಧವಾದ ಪ್ರಮಾಣಗಳಿಗೂ ಸ್ವಾಮಿ ಎಂದೂ ಅರ್ಥ. ಶ್ರೀಹರಿಯು ಲಕ್ಷ್ಮೀಪತಿ ಎಂದು ತಿಳಿದು ಉಪಾಸನೆ ಮಾಡುವುದು ಮಹಾಲಕ್ಷ್ಮಿಯ ಅನುಗ್ರಹಕ್ಕೂ ಸಾಧನ ಎಂಬ ಮಾತು ಗೀತಾಭಾಷ್ಯಾದಿಗಳಲ್ಲಿ ನಿರೂಪಿತವಾಗಿದೆ.

೮. ಶ್ರೀಕನಕದಾಸರು ತಮ್ಮ ಕೃತಿಗಳಲ್ಲಿ ಅಂಕಿತವನ್ನಾಗಿ ಆದಿಕೇಶವ ಎಂಬುದನ್ನು ಪ್ರಧಾನವಾಗಿ ಬಳಸುತ್ತಾ, ಹೆಚ್ಚಾಗಿ ಕಾಗಿನೆಲೆ ಆದಿಕೇಶವ ಎಂದೇ ಬಳಸಿರುವರು. ಕೆಲವು ಕಡೆಗಳಲ್ಲಿ ಬಡದಾದಿಕೇಶವ, ಬಂಕಾಪುರದ ಕೇಶವ ಎಂದೂ ಉಲ್ಲೇಖಿಸಿರುವುದುಂಟು.

೯. ಇಂದು ಕಾಗಿನೆಲೆಯಲ್ಲಿ ಶ್ರೀಆದಿಕೇಶವ ಮೂರ್ತಿ ಕಂಗೊಳಿಸುತ್ತಿದೆ. ಬಂಕಾಪುರದಲ್ಲಿ ಸಹ ಕೇಶವ ಮೂರ್ತಿಯೊಂದಿದ್ದು ಅದು ಇಂದು ರೈತರೊಬ್ಬರ ಹೊಲದ ಮಧ್ಯದಲ್ಲಿ ತುಂಬ ಚಿಕ್ಕದೆನಿಸುವ ಗುಡಿಯಲ್ಲಿ ನೆಲೆಸಿದೆ. ಅದಕ್ಕೆ ನಿತ್ಯ ಪೂಜೆ ವ್ಯವಸ್ಥೆ ಇಲ್ಲ. ಅಲ್ಲಿಯ ರೈತಾಪಿ ಜನರೇ ತಮಗೆ ತೋಚಿದಂತೆ ಅದನ್ನು ಪೂಜಿಸುವುದುಂಟು. ತಮ್ಮ ಪದ್ಧತಿಯಂತೆ ಅವರು ಮೂರ್ತಿಗೆ ತೈಲಾಭಿಷೇಕವನ್ನು ಮಾಡುವುದರಿಂದ ಅದು ತನ್ನ ಅಂದವನ್ನು ಕಳೆದುಕೊಂಡಿದೆ. ವಿಶೇಷ ಗಮನವಿಟ್ಟು ಅದನ್ನು ಹುಡುಕಿ ನೋಡದಿದ್ದಲ್ಲಿ ಅಲ್ಲಿ ಕೇಶವಮೂರ್ತಿ ಇದೆ ಎಂದು ಇತರರಿಗೆ ತಿಳಿಯುವುದೇ ಇಲ್ಲ. ಸಂಬಂಧಿಸಿದವರು ಇನ್ನಾದರೂ ಅದಕ್ಕೆ ಸೂಕ್ತ ಪೂಜಾವ್ಯವಸ್ಥೆಯನ್ನು ಮಾಡಿದಲ್ಲಿ ಅದು ಕನಕದಾಸರಿಗೂ ಸಹ ಸೂಕ್ತ ಸೇವೆ ಎನ್ನಿಸುವುದು.

೧೦. ಬಾಡದಲ್ಲಿ ಮಾತ್ರ ಇಂದು ಆದಿಕೇಶವನ ಮೂರ್ತಿ ಇಲ್ಲವೇ ಇಲ್ಲ. ಪ್ರಾಚೀನವಾದ ದೇವಸ್ಥಾನವೊಂದು ಆ ಊರಲ್ಲಿ ಇದ್ದುದನ್ನು ಅಲ್ಲಿಯ ಜನರು ತೋರಿಸುವರು. ಆದರ ಬಗ್ಗೆ ನಿಖರವಾಗಿ ಮಾಹಿತಿಯನ್ನು ನೀಡುವ ಆಕರ ಇನ್ನೂ ದೊರೆತಿಲ್ಲ.

೧೧. ಬಾಡದಲ್ಲಿನ ಆದಿಕೇಶವ ಮೂರ್ತಿಯನ್ನೇ ಮುಂದೆ ತಮ್ಮ ಗುರುವರ್ಯರಾದ ಶ್ರೀವ್ಯಾಸರಾಜರಿಂದ ಶ್ರೀಕನಕದಾಸರು ಕಾಗಿನೆಲೆಯಲ್ಲಿ ಪ್ರತಿಷ್ಠಾಪಿಸಿದರು ಎಂಬ ವಾದವೂ ಉಂಟು.

*****

## ೧೦೯. ಕೇಶವಗೆ ಮಂಗಳಂ

ಮಂಗಳಂ ಸರ್ವಾದಿಭೂತಗೆ
ಮಂಗಳಂ ಸರ್ವವನು ಪೊರೆವಗೆ
ಮಂಗಳಂ ತನ್ನೊಳಗೆ ಲೋಕವ ಲಯಿಸಿಕೊಂಬವಗೆ ।
ಮಂಗಳಂ ಸರ್ವಸ್ವತಂತ್ರಗೆ
ಮಂಗಳಂ ಸತ್ಯಸ್ವರೂಪಗೆ
ಮಂಗಳಂ ಸಿರಿಯೊಡೆಯ ಚೆನ್ನಿಗರಾಯ ಕೇಶವಗೆ ॥ ೧೦೯ ॥

**ಅ:** ಸರ್ವಕ್ಕೂ ಆದಿಭೂತನಾದ ಶ್ರೀಕೇಶವನಿಗೆ ಮಂಗಳ, ಸಕಲವನ್ನೂ ಸಹ ಸಂರಕ್ಷಿಸುವ ಶ್ರೀಹರಿಗೆ ಮಂಗಳ, ತನ್ನಲ್ಲಿ ಸಕಲ ಲೋಕಗಳನ್ನು ಲಯಗೊಳಿಸಿಕೊಳ್ಳುವ ಸ್ವಾಮಿಗೆ ಮಂಗಳ, ಸರ್ವಸ್ವತಂತ್ರನಾದ ದೇವನಿಗೆ ಮಂಗಳ, ಸತ್ಯಸ್ವರೂಪನಾದ ಕೇಶವನಿಗೆ ಮಂಗಳ, ಲಕ್ಷ್ಮೀಪತಿಯಾದ ಪರಮಸುಂದರಮೂರ್ತಿಯಾದ ಕೇಶವನಿಗೆ ಮಂಗಳ.

ವಿ.: ೧. ಸಂಪ್ರದಾಯದಂತೆ ಕೃತಿಯ ಕೊನೆಗೆ ಮಂಗಳವನ್ನು ಇದರಲ್ಲಿ ಮಾಡಲಾಗಿದೆ.

೨. ಶ್ರೀಹರಿಯ ವಿಶೇಷ ಮಹಿಮೆಯನ್ನು ಈ ಪದ್ಯದಲ್ಲಿ ಸಂಗ್ರಹವಾಗಿ ತಿಳಿಸಲಾಗಿದೆ.

೩. ಶ್ರೀಹರಿಯು ಜಗದಾದಿ ಮೂರ್ತಿ ಎಂದರೆ ಇಡೀ ಲೋಕವನ್ನು ಸೃಷ್ಟಿಸುವವನು ಎಂದರ್ಥ. **ಸರ್ವವನು ಪೊರೆಯುವವ** ಎಂದರೆ ಸ್ಥಿತಿಕರ್ತ ಎಂದರ್ಥ. **ತನ್ನೊಳಗೆ ಲೋಕವನು ಲಯಿಸಿಕೊಂಬಗೆ** ಎಂದರೆ ಪ್ರಳಯಗೈಸುವವನು ಎಂದರ್ಥ. ಇದು ಒಟ್ಟಾಗಿ **'ಜನ್ಮಾದ್ಯಸ್ಯ ಯತಃ'** ಎಂಬ ಬ್ರಹ್ಮಸೂತ್ರದ ಭಾವವಾಗಿದೆ.

೪. ಸತ್ಯಸ್ವರೂಪ ಎಂಬದು ಅತ್ಯಂತ ರೋಚಕವಾದ ಪದ. ಶ್ರೀಮದ್ಭಾಗವತದ ಮೊದಲ ಶ್ಲೋಕದ ಕೊನೆಯಲ್ಲಿ 'ಸತ್ಯಂ ಪರಂ ಧೀಮಹಿ' ಎಂದೂ, ತೈತ್ತಿರೀಯೋಪನಿಷತ್ತಿನಲ್ಲಿ **'ಸತ್ಯಂ ಜ್ಞಾನಮನಂತಂ ಬ್ರಹ್ಮ'** ಎಂದೂ ಉಲ್ಲೇಖವಿದೆ. ಶ್ರೀವಿಷ್ಣುಸಹಸ್ರನಾಮದಲ್ಲಿ ಸತ್ಯಃ ಎಂಬ ಪದ ಬಂದಿದೆ. ಇದೆಲ್ಲಕ್ಕೂ ಅನ್ವಯಿಸುವಂತೆ ಶ್ರೀಮದಾಚಾರ್ಯರು ಶ್ರೀಮದ್ಭಾಗವತತಾತ್ಪರ್ಯದಲ್ಲಿ **'ಸತ್ಯಂ ನಿರ್ದುಃಖಾನಂದಾನುಭವಸ್ವರೂಪಂ'** ಎಂಬು-ದಾಗಿ ಭಾಷ್ಯವನ್ನು ಬರೆದಿರುವರು. ಎಂದರೆ ಭಗವಂತನು ಸಕಲ ದುಃಖದೂರ ಹಾಗೂ ಪರಿಪೂರ್ಣಾನಂದಾನುಭವಸ್ವರೂಪ ಎಂದರ್ಥ. ಇದು ಪರಮಾತ್ಮನು ಸಗುಣ ಹಾಗೂ ಸಾಕಾರ ಎಂಬುದಕ್ಕೆ ಸೂಚಕವಾದ ಪದ.

೫. **'ಮಂಗಳಂ ಸರ್ವಸ್ವತಂತ್ರಗೆ'** ಎಂಬ ಮಾತಿನಲ್ಲಿನಯ ಸರ್ವಸ್ವತಂತ್ರ ಎಂಬುದು ಅತ್ಯಂತ ವಿಶಿಷ್ಟವಾದಂತಹ ಪದ. ಸ್ವಾತಂತ್ರ್ಯ ಎಂದರೆ ತನ್ನ ಇರುವಿಕೆ, ತಿಳುವಳಿಕೆ ಹಾಗೂ

ಪ್ರವೃತ್ತಿಗಳಲ್ಲಿ ಬೇರಾರನ್ನೂ ಸರ್ವಥಾ ಅವಲಂಬಿಸದವನು ಎಂದರ್ಥ: **'ಸ್ವರೂಪಪ್ರಮಿತಿ ಪ್ರವೃತ್ತಿರೂಪಸತ್ತಾತ್ರೈವಿಧ್ಯೇ ಪರಾನಪೇಕ್ಷಂ ಸ್ವತಂತ್ರಮ್'** – ತತ್ತ್ವಸಂಖ್ಯಾನಟೀಕಾ.

೬. ಈ ರೀತಿಯಲ್ಲಿ ಶ್ರೀಹರಿಯ ಸರ್ವಸ್ವಾತಂತ್ರ್ಯವನ್ನು ನಿರೂಪಿಸುವ ವಿಶಿಷ್ಟ ಸಿದ್ಧಾಂತ ಎಂಬುದು ಶ್ರೀಕನಕದಾಸರು ನಂಬಿದ ದ್ವೈತಸಿದ್ಧಾಂತದ ವೈಶಿಷ್ಟ್ಯ. ಶ್ರೀಹರಿಯು ಎಲ್ಲ ಕಾಲಕ್ಕೂ ಎಲ್ಲ ರೀತಿಯಲ್ಲೂ ಪರಿಪೂರ್ಣನಾದವನು, ಸರ್ವಜ್ಞನಾದವನು, ಸರ್ವಶಕ್ತನಾದವನು, ಸರ್ವತ್ರ ವ್ಯಾಪ್ತನಾದವನು; ಇತರ ಎಲ್ಲರ ಇರುವಿಕೆ, ಅರಿವು ಹಾಗೂ ಪ್ರವೃತ್ತಿಗಳನ್ನು ಸದಾ ಸರ್ವತ್ರ, ಸಂಪೂರ್ಣವಾಗಿ ನಿಯಂತ್ರಿಸುವವನು ಎಂಬುದು ಇದರ ಒಟ್ಟು ಭಾವ.

೭. ಸರ್ವಸ್ವತಂತ್ರ ಎಂಬುದಕ್ಕೆ ಸರ್ವತ್ರ ಸ್ವತಂತ್ರ, ಸರ್ವದಾ ಸ್ವತಂತ್ರ, ಸರ್ವಥಾ ಸ್ವತಂತ್ರ ಎಂಬುದಾಗಿ ಅನೇಕ ಬಗೆಯ ಅರ್ಥ ವಿವಕ್ಷಿತ: **'ಸರ್ವದೇಶೇಷು ಕಾಲೇಷು ಸ ಏಕಃ ಪರಮೇಶ್ವರಃ'** (ಅಣುಭಾಷ್ಯ).

*****

## ೧೧೦. ಮಂಗಳಂ ಚೆನ್ನಿಗರಾಯ ಕೇಶವಗೆ

**ಮಂಗಳಂ ಜಗದಾದಿಮೂರ್ತಿಗೆ**
**ಮಂಗಳಂ ಜಯಪುಣ್ಯಕೀರ್ತಿಗೆ**
**ಮಂಗಳಂ ಕರಕಲಿತಚಕ್ರವಿದಳಿತನಕ್ರನಿಗೆ ।**
**ಮಂಗಳಂ ದ್ರೌಪದಿಯ ಪೊರೆದಗೆ**
**ಮಂಗಳಂ ಧ್ರುವರಾಜಗೊಲಿದಗೆ**
**ಮಂಗಳಂ ಬೇಲೂರುಚೆನ್ನಿಗರಾಯ ಕೇಶವಗೆ ॥ ೧೧೦ ॥**

**ಅ: ಜಗತ್ತಿನ ಆದಿಮೂರ್ತಿಯಾದ ಶ್ರೀಹರಿಗೆ ಮಂಗಳ. ಜಯಕರವಾದ ಹಾಗೂ ಪುಣ್ಯಕರವಾದ ಕೀರ್ತಿಯನ್ನು ಹೊಂದಿದ ಸ್ವಾಮಿಗೆ ಮಂಗಳ. ಕೈಯಲ್ಲಿ ಚಕ್ರಹಿಡಿದು ಮೊಸಳೆಯನ್ನು ಕೊಂದು ಸದ್ಗತಿ ನೀಡಿದ ಭಗವಂತನಿಗೆ ಮಂಗಳ, ದ್ರೌಪದಿಯ ಮಾನ ಸಂರಕ್ಷಣೆಗೆ ಮಾಡಿದ ಶ್ರೀಕೃಷ್ಣನಿಗೆ ಮಂಗಳ, ಧ್ರುವರಾಜನಿಗೆ ಒಲಿದ ವಾಸುದೇವನಿಗೆ ಮಂಗಳ, ಬೇಲೂರಿನಲ್ಲಿ ನೆಲೆಸಿರುವ ಪರಮಸುಂದರಮೂರ್ತಿಯಾದ ಶ್ರೀಕೇಶವನಿಗೆ ಮಂಗಳ.**

ವಿ.: ೧. ಗ್ರಂಥದ ಮುಕ್ತಾಯದ ಕೊನೆಯಲ್ಲಿ ಬಂದಿರುವ ಮತ್ತೊಂದು ಮಂಗಳ ಪದ್ಯ ಇದಾಗಿದೆ.

೨. ಶ್ರೀಹರಿಯನ್ನು ಜಗತ್ತಿನ ಆದಿಮೂರ್ತಿ, ಜಯಕರಮೂರ್ತಿ, ಪುಣ್ಯಪ್ರದಮೂರ್ತಿ, ಗಜೇಂದ್ರಮೋಕ್ಷ ಮಾಡಿದ ಪಾವನಮೂರ್ತಿ, ದ್ರೌಪದಿಯನ್ನು ಸಂರಕ್ಷಿಸಿದ ಕರುಣಾ-

ಮೂರ್ತಿ, ಧ್ರುವರಾಜನಿಗೆ ಅನುಗ್ರಹಿಸಿದ ಭಗವನ್ಮೂರ್ತಿ ಹಾಗೂ ಬ್ರಹ್ಮಾದಿಗಳಿಗೆ ಪ್ರೇರಕನಾದ ಸರ್ವೋತ್ತಮ ಮೂರ್ತಿ ಎಂಬುದಾಗಿ ಇಲ್ಲಿ ಸ್ತುತಿಸಲಾಗಿದೆ.

೩. **ಆದಿಮೂರ್ತಿ** ಎಂಬುದಕ್ಕೆ ಪ್ರಳಯಕಾಲದಲ್ಲೂ ನಿರ್ವಿಕಾರನಾಗಿ ನೆಲೆಸಿರುವ ಶಾಶ್ವತ ರೂಪದವನು ಎಂದರ್ಥ. ಅದರಂತೆ ಜಗತ್ತಿನ ಸೃಷ್ಟ್ಯಾದಿ ಸಕಲ ಕಾರ್ಯಗಳನ್ನೂ ಮಾಡುವ ಸರ್ವಕರ್ತೃವಾದ ಮೂರ್ತಿ ಎಂದರ್ಥ.

೪. **ಜಯಪುಣ್ಯಕೀರ್ತಿ** ಎಂಬುದಕ್ಕೆ ತನ್ನ ನಾಮಸ್ಮರಣೆ ಮಾತ್ರದಿಂದಲೇ ಭಕ್ತರಿಗೆ ಜಯವನ್ನು ಕರುಣಿಸುವ ಪುಣ್ಯವನ್ನು ನೀಡುವ ಮಂಗಳಕರ ಮೂರ್ತಿ ಎಂದು ಅರ್ಥ. ಇದು **'ಪುಣ್ಯಕೀರ್ತಿರನಾಮಯಃ'** ಹಾಗೂ **'ವಸುದೇವಾತ್ಮಜಃ ಪುಣ್ಯಃ'** ಎಂಬ ವಿಷ್ಣುಸಹಸ್ರನಾಮ ಹಾಗೂ ಶ್ರೀಕೃಷ್ಣಾಷ್ಟೋತ್ತರಶತನಾಮಸ್ತೋತ್ರಗಳಲ್ಲಿನ ಪದಗಳ ಅರ್ಥವಾಗಿದೆ.

೫. **ಕರಕಲಿತಚಕ್ರವಿದಳಿತನಕ್ರನಿಗೆ** ಎಂಬುದು ಶ್ರೀಮದ್ಭಾಗವತದಲ್ಲಿ ಬಂದಿರುವ ಗಜೇಂದ್ರಮೋಕ್ಷದ ಉಲ್ಲೇಖವಾಗಿದೆ. ಗಜೇಂದ್ರನು ತನ್ನನ್ನು ಹಿಡಿದ ಮೊಸಳೆಯಿಂದ ಬಿಡುಗಡೆಗಾಗಿ ಬೇರಾವ ಮಾರ್ಗವನ್ನು ಕಾಣದೇ, ಶ್ರೀಹರಿಯನ್ನು ಪ್ರಾರ್ಥಿಸಿದಾಗ ಅವನು ಕೂಡಲೇ ಆಗಮಿಸಿ ಮೊಸಳೆಯನ್ನು ಚಕ್ರದಿಂದ ಸಂಹರಿಸಿ ಗಜೇಂದ್ರನನ್ನು ಉದ್ಧಾರ ಮಾಡಿದ ಪರಮಭಕ್ತವತ್ಸಲ ಎಂದು ಭಾವ.

೬. ಶ್ರೀಹರಿಯು ಗಜೇಂದ್ರನಿಗೆ ಮಾತ್ರವಲ್ಲದೇ ಆ ಮೊಸಳೆಗೂ ಸಹ ಸದ್ಗತಿಯನ್ನು ನೀಡಿದ ವಿಶೇಷಾಂಶ ಶ್ರೀಮದ್ಭಾಗವತದಲ್ಲಿದೆ.

೭. **ದ್ರೌಪದಿಯನ್ನು ಸಂರಕ್ಷಿಸಿದನು** ಎಂಬುದು ಶ್ರೀಮನ್ಮಹಾಭಾರತದ ಸಭಾಪರ್ವದಲ್ಲಿ ಬಂದಿರುವ ದ್ರೌಪದೀ ಮಾನಸಂರಕ್ಷಣೆಯ ಪ್ರಸಂಗದ ಉಲ್ಲೇಖ. ಶ್ರೀಹರಿಯು ದ್ರೌಪದಿಗೆ ಅಕ್ಷಯವಸ್ತ್ರವನ್ನು ನೀಡಿ ಪರಿಪಾಲಿಸಿದ ಅದ್ಭುತ ಪ್ರಸಂಗವು ಅವನ ಭಕ್ತವಾತ್ಸಲ್ಯದ ಬಗ್ಗೆ ಬೆಳಕು ಚೆಲ್ಲುವ ಮತ್ತೊಂದು ವಿಶಿಷ್ಟ ಪ್ರಸಂಗ ಎಂದು ತಿಳಿಯಬೇಕು.

೮. **ಧ್ರುವರಾಜಗೊಲಿದಗೆ** ಎಂಬ ಮಾತು ಶ್ರೀಮದ್ಭಾಗವತ ಚತುರ್ಥಸ್ಕಂದದಲ್ಲಿ ಬಂದಿರುವ ಬಾಲಕ ಧ್ರುವನ ತಪಸ್ಸಿಗೆ ಮೆಚ್ಚಿ ಶ್ರೀಹರಿಯು ಅವನಿಗೆ ಇಹ-ಪರಗಳ ಸಕಲ ಅಭೀಷ್ಟಗಳನ್ನು ಈಡೇರಿಸಿದ ಅಪೂರ್ವ ಪ್ರಸಂಗ. ತನ್ನನ್ನು ಆರಾಧಿಸಿದವನು ಒಬ್ಬ ಚಿಕ್ಕ ಬಾಲಕ ಎಂದು ಉಪೇಕ್ಷಿಸದೇ ಅವನ ಭಕ್ತಿ ಶ್ರದ್ಧೆಗಳಿಗೆ ಮೆಚ್ಚಿ ಅನುಗ್ರಹಿಸಿದ ಶ್ರೀಹರಿಯ ಕಾರುಣ್ಯ ಅನುಪಮ ಎಂದು ಭಾವ.

೯. **ಬೇಲೂರು ಚೆನ್ನಿಗರಾಯ** ಎಂಬುದು ಇಲ್ಲಿ ಗಮನಾರ್ಹ ಎನ್ನಿಸುವ ಪದ. ತನ್ನ ಅದ್ಭುತ ಶಿಲ್ಪಕಲಾ ಸೌಂದರ್ಯದಿಂದಾಗಿ ಜಗತ್ತಿನ ಅಚ್ಚರಿಗಳಲ್ಲಿ ಒಂದು ಎನ್ನಿಸಿರುವ ಬೇಲೂರಿನ ಕೇಶವನ ಪ್ರಸ್ತಾಪ ಇದಾಗಿದೆ. ಈ ಉಲ್ಲೇಖದಿಂದಾಗಿ ಶ್ರೀಕನಕದಾಸರು ಈ ಹರಿಭಕ್ತಿಸಾರ ಕೃತಿಯನ್ನು ರಚಿಸಿದ್ದು ಬೇಲೂರಿನಲ್ಲಿ ಎಂಬ ವಿಶೇಷಾಂಶ ತಿಳಿಯುವುದು.

೧೦. ಮಂಗಳ ಎಂಬುದು ಶ್ರೀಹರಿಯ ಒಂದು ವಿಶೇಷ ನಾಮ ಹಾಗೂ ರೂಪ ಎಂಬುದು ಗಮನಿಸಬೇಕಾದ ಇನ್ನೊಂದು ಅಂಶ: ಮಂಗಲಾನಾಂ ಚ ಮಂಗಲಮ್; ಪವಿತ್ರಂ ಮಂಗಲಂ ಪರಮ್ (ಶ್ರೀವಿಷ್ಣುಸಹಸ್ರನಾಮ).

೧೧. ಶ್ರೀಕನಕದಾಸರ ಮತ್ತೊಂದು ಸುಪ್ರಸಿದ್ಧವಾದ ಕೃತಿ 'ಈಶ ನಿನ್ನ ಚರಣ ಭಜನೆ' ಎಂಬ ಕೇಶವನಾಮವು ಸಹ ಬೇಲೂರಿನಲ್ಲೇ ರಚಿತವಾಯಿತು ಎಂಬುದು ಅದರ ಕೊನೆಯಲ್ಲಿ ಬರುವ ವೇಲಾಪುರದ ಕೇಶವ ಎಂಬ ಮಾತಿನಿಂದ ತಿಳಿಯುವುದು.

*****

## ೧೧೧. ಚನ್ನಕೇಶವನೆ ಜಯ ಜಯ

ಜಯ ಸುರೇಂದ್ರವರಾರ್ಚಿತಾಂಘ್ರಿಯೆ
ಜಯ ಪುರಾಧಿಪಸಂಸ್ತುತಾತ್ಮನೆ
ಜಯ ಮಹಾಮುನಿಯೋಗಗಮ್ಯನೆ ಮೇಘಮೇಚಕನೆ ।
ಜಯ ಜನಕಜಾಮುಖಾಬ್ಜಮಿತ್ರನೆ
ಜಯ ಕಲಾಧಿಪಸೂರ್ಯನೇತ್ರನೆ
ಜಯ ಜಯ ಜಗನ್ನಾಥದೇವನೆ ಚೆನ್ನಕೇಶವನೆ ॥ ೧೧೧ ॥

॥ ಇಲ್ಲಿಗೆ ಶ್ರೀಕನಕದಾಸವಿರಚಿತ ಹರಿಭಕ್ತಿಸಾರ ಕೃತಿಯು ಮುಕ್ತಾಯವಾಯಿತು ॥

ಅ: ಶ್ರೀಸುರೇಂದ್ರ ಎನ್ನಿಸಿದ ದೇವೇಂದ್ರ ಮೊದಲಾದ ಶ್ರೇಷ್ಠರಿಂದ ಪೂಜಿತವಾದ ಪಾದಕಮಲ ಉಳ್ಳ ಶ್ರೀಹರಿಯೇ ನೀನು ಸರ್ವೋತ್ತಮ; ಇಂದ್ರಾದಿ ಸಕಲ ಪುರಗಳಿಗೆ ಅಧಿಪತಿಗಳಾದ ದೇವತೆಗಳಿಂದ ವಿಶೇಷವಾಗಿ ಸ್ತುತಿಸಲ್ಪಟ್ಟ ಸ್ವರೂಪನಾದ ದೇವನೆ ನೀನು ಸರ್ವೋತ್ತಮನು; ಮಹಾಮುನಿಗಳಾದ ಶುಕಮುನಿಗಳು ಮೊದಲಾದವರ ಯೋಗಕ್ಕೆ ನಿಲುಕುವಂತಹ ಭಗವಂತನೇ ನೀನು ಸರ್ವೋತ್ಕೃಷ್ಟನು. ಮೇಘಶ್ಯಾಮನೆನ್ನಿಸಿದ ಶ್ರೀಕೃಷ್ಣನೆ ನಿನಗಿಂತ ಮಿಗಿಲಾದವನು ಯಾರೂ ಇಲ್ಲ. ಜನಕಪುತ್ರಿಯಾದ ಜಾನಕಿಯ ಮುಖಕಮಲವನ್ನು ಅರಳಿಸುವ ಸೂರ್ಯನೆನಿಸಿದ ಶ್ರೀರಾಮನೆ ನೀನು ಪರಮಪುರುಷ; ಚಂದ್ರಸೂರ್ಯರಿಗೆ ಕಣ್ಣುಗಳಲ್ಲಿ ಆಶ್ರಯ ನೀಡಿರುವ ಪರಮಾತ್ಮನಾದವನು ನೀನು ಅನುಪಮನು; ಜಗತ್ತಿಗೆ ಒಡೆಯನಾದ ಶ್ರೀಚೆನ್ನಕೇಶವನಾದ ನೀನು ಸರ್ವೋತ್ತಮೋತ್ತಮನು.

ವಿ.: ೧. ಮಂಗಳ ಪದ್ಯಗಳಲ್ಲಿ ಕೊನೆಯದಾದ ಇದು ಶ್ರೀಹರಿಯು ಸರ್ವೋತ್ತಮ ಎಂದು ಜಯಕಾರದ ಮೂಲಕ ಸೂಚಿಸುತ್ತಾ, ಕೃತಿಯ ಪರಿಸಮಾಪ್ತಿಯನ್ನು ಮಾಡುವುದು.

೨. **ಸುರೇಂದ್ರ** ಎಂದರೆ, ಸುರರ ಒಡೆಯನಾದ ದೇವೇಂದ್ರ ಎಂದರ್ಥ. ವರ ಎಂದರೆ ಶ್ರೇಷ್ಠ ಎಂದರ್ಥ. ದೇವೇಂದ್ರ ಮೊದಲಾದ ಶ್ರೇಷ್ಠರಿಂದ ಪೂಜಿತನಾದವನು ಶ್ರೀಹರಿ ಎಂದು ಭಾವ.

೩. ಇಲ್ಲಿ **ಪುರಗಳು** ಎಂದರೆ, ಬ್ರಹ್ಮಾದಿ ದೇವತೆಗಳ ಸತ್ಯಾದಿ ಲೋಕಗಳು ಎಂದರ್ಥ. ಅವುಗಳ ಒಡೆಯರಾದ ಬ್ರಹ್ಮಾದಿ ದೇವತೆಗಳಿಂದ ಶ್ರೀಹರಿಯು ವಿಶೇಷವಾಗಿ ಸ್ತುತಿಸಲ್ಪಡುವ ಪರದೇವತೆ ಎಂದು ಭಾವ.

೪. **ಮಹಾಮುನಿಗಳು** ಎಂದರೆ, ಶುಕಾಚಾರ್ಯರು ಮೊದಲಾದವರು. ಇದು **ಮಹಾಮುನಿಕೃತೇ** ಎಂಬ ಶ್ರೀಮದ್ಭಾಗವತದ ಭಾವವಾಗಿದೆ. ಅಂತಹವರ ಯೋಗ ಎಂದರೆ ಪರಮಭಕ್ತಿರೂಪವಾದ ಆರಾಧನೆ ಎಂದರ್ಥ. ಅದಕ್ಕೆ ಒಲಿಯುವ ಕರುಣಾಳು ಶ್ರೀಹರಿ ಎಂದು ಭಾವ.

೫. ಮಹಾಮುನಿ ಎಂಬುದಕ್ಕೆ ಶ್ರೀಕನಕದಾಸರು ನಂಬಿದ ದ್ವೈತಮತದ ಪ್ರತಿಷ್ಠಾಪಕರಾದ ಶ್ರೀಮನ್ಮಧ್ವಾಚಾರ್ಯರು ಎಂಬ ಅರ್ಥವೂ ಹೊಂದುವುದು: **ಆನಂದತೀರ್ಥಮುನೀಂದ್ರಕೃತಾ** (ದ್ವಾದಶಸ್ತೋತ್ರ). **ಆನಂದತೀರ್ಥಮಹಾಮುನಿರಾಜೋ ಹರಿಗಾಥಾಮ್** (ದ್ವಾದಶಸ್ತೋತ್ರ).

೬. **ಮೇಘಮೇಚಕನೆ** ಎಂದರೆ ಮೇಘಶ್ಯಾಮ ಎಂದರ್ಥ. ಈ ಪದವು ಶ್ರೀಹರಿಯ ಶ್ರೀರಾಮರೂಪ ಹಾಗು ಶ್ರೀಕೃಷ್ಣರೂಪ ಎರಡಕ್ಕೂ ಅನ್ವಯಿಸುವುದು.

೭. **ಜನಕಜಾಮುಖಾಬ್ಜಮಿತ್ರನೆ**; ಜನಕಜ ಎಂದರೆ ಜನಕರಾಜನ ಪುತ್ರೀತ್ವೇನ ಅವತರಿಸಿದ ಮಹಾಲಕ್ಷ್ಮೀಸ್ವರೂಪಳಾದ ಶ್ರೀಸೀತಾದೇವಿ ಎಂದರ್ಥ. ಅಂತಹ ಜಾನಕಿಯ ಮುಖಕಮಲವನ್ನು ಅರಳಿಸುವ ಸೂರ್ಯ ಎಂದರೆ ಶ್ರೀರಾಮ ಎಂದರ್ಥ: ಅಬ್ಜ-ಕಮಲ; ಮಿತ್ರ-ಸೂರ್ಯ.

೮. **ಕಲಾಧಿಪಸೂರ್ಯನೇತ್ರನೆ**; ಕಲಾಧಿಪ ಎಂದರೆ ಚಂದ್ರ, ಕಲಾಧಿಪನಾದ ಚಂದ್ರ ಹಾಗೂ ಸೂರ್ಯರಿಗೆ ತನ್ನ ಕಣ್ಣುಗಳಲ್ಲಿ ಆಶ್ರಯ ನೀಡಿರುವವನು ಎಂದು ಇದಕ್ಕೆ ಅರ್ಥ: **ಶಶಿಸೂರ್ಯನೇತ್ರಮ್** (ಗೀತಾ ೧೧/೧೯). **ಬಿಭರ್ತಿ ಬಾಲಸ್ತವ ಪುಷ್ಪವಂತೌ** (ರುಗ್ಮಿಣೀಶವಿಜಯ ೩/೫೭).

೯. **ಮೇಘಮೇಚಕ** ಹಾಗೂ **ಕಲಾಧಿಪಸೂರ್ಯನೇತ್ರ** ಎಂಬ ಎರಡು ವಿಶೇಷಗಳು ಶ್ರೀರಾಮ ಹಾಗೂ ಶ್ರೀಕೃಷ್ಣ ಈ ಎರಡೂ ರೂಪಗಳಿಗೂ ಸಮಾನವಾಗಿ ಅನ್ವಯಿಸುವವು. ಆ ಎರಡು ರೂಪಗಳು ಸಹ ಶ್ಯಾಮಲ ವರ್ಣದ ರೂಪಗಳು: **ಶ್ಯಾಮಂ** (ತಂತ್ರಸಾರಸಂಗ್ರಹ), **ಹರಿನ್ಮಣಿನಿಭವಮ್** (ತಂತ್ರಸಾರಸಂಗ್ರಹ). ಅದರಂತೆ ಜನಕಜಾಮುಖಾಬ್ಜಮಿತ್ರ

ಎಂಬುದು ಮುಖ್ಯವಾಗಿ ಶ್ರೀರಾಮ ರೂಪಕ್ಕೆ ಅನ್ವಯಿಸಿದರೆ ಮತ್ತೊಂದು ರೀತಿಯಲ್ಲಿ ಶ್ರೀಕೃಷ್ಣರೂಪಕ್ಕೂ ಅನ್ವಯಿಸುವುದು. ಜನಕಜೆಯಾದ ಮಹಾಲಕ್ಷ್ಮಿಯೇ ಭೀಷ್ಮಕ ಪುತ್ರಿಯಾದ ರುಗ್ಮಿಣೀ ಆದ್ದರಿಂದ. ಹೀಗೆ ಶ್ರೀರಾಮ ಹಾಗೂ ಶ್ರೀಕೃಷ್ಣರೂಪಗಳ ಪ್ರಸ್ತಾಪವನ್ನು ಈ ಮಂಗಳಪದ್ಯದಲ್ಲಿ ಮಾಡಿರುವುದು ಪ್ರಾರಂಭದ ಸುಮಾರು ೧೬ ಪದ್ಯಗಳಲ್ಲಿ ಶ್ರೀರಾಮ ಹಾಗೂ ಶ್ರೀಕೃಷ್ಣರೂಪಗಳನ್ನು ಈ ಕೃತಿಯಲ್ಲಿ ಶ್ರೀಕನಕದಾಸರು ವಿಶೇಷವಾಗಿ ವರ್ಣಿಸಿರುವುದಕ್ಕೆ ಗಮಕದಂತಿದೆ.

೧೦. ಕಲಿಯುಗದಲ್ಲಿ ಮುಖ್ಯವಾಗಿ ತ್ವರಿತ ಸಿದ್ಧಿಗಾಗಿ ಶ್ರೀರಾಮ ಹಾಗೂ ಶ್ರೀಕೃಷ್ಣರೂಪಗಳ ಉಪಾಸನೆ ವಿಶೇಷವಾಗಿ ವಿಹಿತವಾಗಿದೆ ಎಂಬ ವಿಶೇಷಾಂಶವು ಇದರಿಂದ ಸೂಚಿತ.

೧೧. **ಜಗನ್ನಾಥ** ಹಾಗೂ **ದೇವ** ಎಂಬ ಎರಡು ಪದಗಳು ಶ್ರೀಹರಿಯ ಎಲ್ಲ ರೂಪಗಳಿಗೂ ಅನ್ವಯಿಸುವಂತಹುವು. ಅವನು ಜಗತ್ತಿಗೆ ನಾಥನಾದ್ದರಿಂದ ಜಗನ್ನಾಥ. ಜಗತ್ ಎಂಬುದಕ್ಕೆ ವಾಯು ಎಂಬ ಅರ್ಥವೂ ಕೋಶಗಳಲ್ಲಿದೆ. ಈ ಅರ್ಥದಲ್ಲಿ ಜಗನ್ನಾಥ ಎಂಬುದಕ್ಕೆ ಭಾರತೀರಮಣನ ಒಡೆಯ ಎಂದೂ ಅರ್ಥವಾಗುವುದು. ದೇವ ಎಂಬುದು ಶ್ರೀಹರಿಯು ಕ್ರೀಡಾದಿ ಗುಣವಿಶಿಷ್ಟನಾದ ಸರ್ವೋತ್ತಮೋತ್ತಮ ದೇವತೆ ಎಂಬ ವಿಶೇಷಾರ್ಥವನ್ನು ಸೂಚಿಸುವುದು.

೧೨. **ಜಯ** ಎಂಬುದಕ್ಕೆ ಈ ಮೊದಲೆ ತಿಳಿಸಿರುವಂತೆ ಉತ್ಕೃಷ್ಟ ಶ್ರೇಷ್ಠ ಎಂದರ್ಥ.

೧೩. ಹೀಗೆ ಈ ಪದ್ಯದೊಂದಿಗೆ ಶ್ರೀಹರಿಭಕ್ತಿಸಾರ ಕೃತಿಯು ಮುಕ್ತಾಯವಾಗಿದೆ. ಶ್ರೀಕನಕದಾಸರು ತಮ್ಮ ಬೇಲೂರಿನ ವಾಸ್ತವ್ಯದಲ್ಲಿ ಶ್ರೀಹರಿಯ ಚೆನ್ನಕೇಶವ ಮೂರ್ತಿಯನ್ನು ವಿಶೇಷವಾಗಿ ಆರಾಧಿಸುತ್ತಾ ಆ ಮೂರ್ತಿಯಲ್ಲಿ ತಮ್ಮ ಉಪಾಸ್ಯ ಮೂರ್ತಿಯಾದ ಕಾಗಿನೆಲೆ, ಬಾಡ ಹಾಗೂ ಬಂಕಾಪುರ ಕ್ಷೇತ್ರಗಳಲ್ಲಿನ ಆದಿಕೇಶವರೂಪವನ್ನು ಸ್ಮರಣೆಗೆ ತಂದುಕೊಂಡು ವಿಶೇಷವಾಗಿ ಸ್ತುತಿಸಿರುವರು.

೧೪. ಬೇಲೂರು ಆ ಕಾಲದಲ್ಲಿ ವೈಷ್ಣವರಿಗೆ ಪ್ರಧಾನವೆನ್ನಿಸಿದ ಕ್ಷೇತ್ರಗಳಲ್ಲಿ ಒಂದಾಗಿತ್ತು. ಶ್ರೀಮನ್ಮಧ್ವಾಚಾರ್ಯರ ಸಾಕ್ಷಾಚ್ಛಿಷ್ಯರಾಗಿ '**ಕರ್ನಾಟಕಪೂರ್ವಸಜ್ಜನಗುರು**' ಎಂಬ ಪ್ರಸಿದ್ಧಿಗೆ ಪಾತ್ರರಾಗಿದ್ದ ಶ್ರೀಪದ್ಮನಾಭತೀರ್ಥರು ಬೇಲೂರಿನ ಚೆನ್ನಕೇಶವನ ಸನ್ನಿಧಾನದಲ್ಲಿ ಅನೇಕ ವರ್ಷಗಳ ಕಾಲ ನೆಲೆಸಿದ್ದನ್ನು ಆ ದೇವಸ್ಥಾನದಲ್ಲಿನ ಶಿಲಾಶಾಸನವೊಂದು ದೃಢಪಡಿಸುವುದು. ಅನಂತರದ ಕಾಲದಲ್ಲೂ ಶ್ರೀವಾದಿರಾಜಸ್ವಾಮಿಗಳು, ಶ್ರೀಪುರಂದರದಾಸರು ಮೊದಲಾದ ಮಹನೀಯರು ಈ ಕ್ಷೇತ್ರವನ್ನು ಸಂದರ್ಶಿಸಿದ್ದರೆಂದು ಅವರ ಚರಿತ್ರೆಗಳಲ್ಲಿ ಉಲ್ಲೇಖವಿದೆ. ಶ್ರೀವೈಕುಂಠದಾಸರೆಂಬ ಒಬ್ಬ ಹರಿದಾಸರು ಇಲ್ಲಿಯ ನಿವಾಸಿಗಳಾಗಿದ್ದು ಶ್ರೀಪುರಂದರದಾಸರು ಮೊದಲಾದವರ ಒಡನಾಡಿಗಳಾಗಿದ್ದರೆಂದು ಪ್ರತೀತಿ ಇದೆ.

೧೫. ಹೀಗೆ ಪರಮವೈಷ್ಣವಕ್ಷೇತ್ರವೆನ್ನಿಸಿದ ಬೇಲೂರಿನಲ್ಲಿ ಇಂತಹ ಅಮೋಘ ಕೃತಿಯನ್ನು ರಚಿಸಿದ ಶ್ರೀಕನಕದಾಸರು ಮುಂದೆ ಉಡುಪಿಯನ್ನು ಸಂದರ್ಶಿಸಿ ಶ್ರೀಕೃಷ್ಣನ ವಿಶೇಷ ದರ್ಶನ ಭಾಗ್ಯವನ್ನು ಪಡೆದದ್ದು ಈ ಕೃತಿ ರಚನೆಯ ಫಲಶ್ರುತಿ ಎಂಬಂತಿದೆ.

*****

**॥ ಇಲ್ಲಿಗೆ ಶ್ರೀಕನಕದಾಸರ ಹರಿಭಕ್ತಿಸಾರ ಕನ್ನಡ ಅನುವಾದ, ವಿವರಣೆ ಮುಕ್ತಾಯವಾಯಿತು ॥**

*****

**॥ ಶ್ರೀಕೃಷ್ಣಾರ್ಪಣಮಸ್ತು ॥**

*****

**ಸಮರ್ಪಿತಂ ಮಯಾ ಭವೇತ್ ಸುಮಧ್ವಸೂಕ್ತವಾಣಿನಾ ।**
**ರಮಾರಮೇಶ ಪಾದಯೋಃ ಪ್ರಭಂಜನಾಭಿದಾಯುಜ ॥**

*****

## ಪರಿಶಿಷ್ಟ - ೧

# ಶ್ರೀಕನಕದಾಸರ ಸೂಕ್ತಿರೂಪದ ಕೀರ್ತನೆಗಳು[೧]

## ೧. ಅಹುದಾದರಹುದೆನ್ನಿ ಅಲ್ಲವಾದರಲ್ಲವೆನ್ನಿ

ರಾಗ: ಮುಖಾರಿ ತಾಳ: ಝಂಪೆತಾಳ

ಅಹುದಾದರಹುದೆನ್ನಿ ಅಲ್ಲವಾದರಲ್ಲವೆನ್ನಿ ॥ ಪ ॥
ಬಹುಜನರು ನೆರೆ ತಿಳಿದು ಪೇಳಿ ಮತ್ತಿದನು ॥ ಅ.ಪ. ॥

ದೇವರಿಲ್ಲದ ಗುಡಿಯು ಹಾಳುಬಿದ್ದಂಗಡಿಯು
ಭಾವವಿಲ್ಲದ ಭಕುತಿಯದು ಕುಹಕಯುಕುತಿ
ಹೇವವಿಲ್ಲದ ಹೆಣ್ಣು ಗಜುಗ ಬೆಳೆದ ಕಣ್ಣು
ಸೇವೆಯರಿಯದ ಧಣಿಯು ಅವ ಕಲ್ಲ ಖಣಿಯು ॥ ೧ ॥

ಧರ್ಮವಿಲ್ಲದ ಅರಸು ಮುರಿದ ಕಾಲಿನ ಹೊರಸು
ನಿರ್ಮಳಿಲ್ಲದ ಮನಸು ಅದು ಕಜ್ಜಿತಿನಿಸು
ಶರ್ಮವಿಲ್ಲದ ಗಂಡು ಕರಿಯ ಒನಕೆಯ ತುಂಡು
ಮರ್ಮವಿಲ್ಲದ ಮಾತು ಒಡಕು ಮೊಗೆಯ ತೂತು ॥ ೨ ॥

ಮಕ್ಕಳಿಲ್ಲದ ಸಿರಿಯು ಕೊಳೆತ ತೆಂಗಿನ ತುರಿಯು
ಸೌಖ್ಯವಿಲ್ಲದ ಊಟ ಅದು ಕಾಳಕೂಟ
ಒಕ್ಕಲಿಲ್ಲದ ಊರು ಹಡಿಕೆ ನಾರುವ ನೀರು
ಸೊಕ್ಕಿ ನಡೆಯುವ ಭೃತ್ಯ ಅವ ಕ್ರೂರಕೃತ್ಯ ॥ ೩ ॥

ಕಂಡು ಕರೆಯದ ನೆಂಟ ಮೊನೆಯು ಕೆಟ್ಟಿಹ ಕಂಟ
ಉಂಡು ನಗದಿಹ ಮೋರೆ ಅದುವೆ ಕಹಿಯ ಸೋರೆ
ದಂಡಿಗಂಜುವ ಬಂಟ ಒಡಕುಹರವಿಯ ಕಂಠ
ಗಂಡಗಂಜದ ನಾರಿ ಅವಳೆ ಹೆಮ್ಮಾರಿ ॥ ೪ ॥

ಬಿಟ್ಟು ಆಡುವ ಗೆಣೆಯು ಹರಕು ತೊಗಲಿನ ಮಿಣೆಯು
ಕೊಟ್ಟು ಪೇಳುವ ದಾತ ಅವ ಹೀನ ಜಾತ
ಸೃಷ್ಟಿಯೊಳು ಕಾಗಿನೆಲೆಯಾದಿಕೇಶವನಂಘ್ರಿ
ಮುಟ್ಟಿ ಭಜಿಸದ ನರನು ಅವ ಹುಳುಕಮರನು ॥ ೫ ॥

---

೧. ಶ್ರೀಕನಕದಾಸರ ಹರಿಭಕ್ತಿಸಾರದ ಪೀಠಿಕೆಯಲ್ಲಿ ಈಗಾಗಲೇ ತಿಳಿಸಿರುವಂತೆ ಅವರ ಸಮಗ್ರ ಭಕ್ತಿಗೀತೆಗಳ ಸಾರಸರ್ವಸ್ವ ರೂಪದ ಕೃತಿ. ಇದಕ್ಕೆ ಅವರ ಅನೇಕ ಕೀರ್ತನೆಗಳು ಇದಕ್ಕೆ ವಿವರಣೆಯಂತಿವೆ. ಅನುವಾದದಲ್ಲಿ ಅಂತಹ ಕೆಲವು ಕೀರ್ತನೆಗಳನ್ನು ಈಗಾಗಲೇ ಕೊಡಲಾಗಿದೆ. ಹರಿಭಕ್ತಿಸಾರದ ಅಧ್ಯಯನಕ್ಕೆ ಉಪಯುಕ್ತವೆನ್ನಿಸುವಂತಹ ಸೂಕ್ತಿರೂಪದ ಕೀರ್ತನೆಗಳ ಸಂಗ್ರಹವನ್ನು ಈ ಪರಿಶಿಷ್ಟ ಒಳಗೊಂಡಿದೆ.

## ೨. ಅಹುದಾದಡಹುದೆನ್ನಿ ಅಲ್ಲವಾದಡಲ್ಲವೆನ್ನಿ

ರಾಗ: ಸಾವೇರಿ ತಾಳ: ಮಠ್ಯತಾಳ

ಅಹುದಾದಡಹುದೆನ್ನಿ ಅಲ್ಲವಾದಡಲ್ಲವೆನ್ನಿ
ಸಹಜವಿದು ಸಜ್ಜನರ ಮನಕೆ ಸಮ್ಮತವು ॥ ಪ ॥

ಕರಿಕೆಯಿಲ್ಲದ ಬಾಳು ಕರಿವರದನ ದಯೆ ಕೇಳು
ಅರಿತವರಿರೆ ಮನೆಯೊಳು ಅದು ಸ್ವರ್ಗವು ಕೇಳು
ಕರಣಿಕರೊಳಗಣ ನಂಟು ಕಟ್ಟಿದ ಹಣವಿನ ಗಂಟು
ಗುರುವಿನ ವಾಕ್ಯದಿ ಭಕ್ತಿ ಇಹಪರಕದು ಮುಕ್ತಿ ॥ ೧ ॥

ಒಕ್ಕಲಿಗಾಗದ ಗವುಡ ರೊಕ್ಕವ ಪಡೆವಾ ಕೊರಗ
ಮಕ್ಕಳ ಪಡೆವುದು ಪುಣ್ಯ ಅದು ಕೇಳಿರಿಯಣ್ಣ
ಇಕ್ಕುವ ಅನ್ನವು ಧರ್ಮ ಇಹಪರಕದು ಅತಿ ಧರ್ಮ
ಬಿಕ್ಕಳಿಕ್ಕಿದ ವ್ಯಾಧಿ ಯಮಪುರಕದು ಹಾದಿ ॥ ೨ ॥

ಕಂಡರೆ ಸೇರದ ನಾರಿ ಕೆಂಡವನುಗುಳುವ ಮಾರಿ
ದಂಡವ ತೆರಿಸುವ ಪುತ್ರ ಹಗೆಗಳಿಗವ ಮಿತ್ರ
ಉಂಡರೆ ಸೇರದ ತಾಯಿ ಉರಗನ ಮೆಕ್ಕೆಯಕಾಯಿ
ಹಿಂಡನು ಅಗಲಿದ ಗೋವು ಹುಲಿಗಿಕ್ಕಿದ ಮೇವು ॥ ೩ ॥

ಪರನಾರಿಯರೊಡನಾಟ ಗರಳಲವನಟ್ಟುಂಬಾಟ
ಬರೆದೂ ಅರಿಯದ ಲೆಕ್ಕ ಕಡೆಯಲಿ ಬಹುದುಃಖ
ಇರಿತಕೆ ಬೆದರುವ ಮದಕರಿ ಮರಿಯೆಂಬ ಕೋಡಗ ಮರಿ
ಕರೆ ಬರಲರಿಯದ ಗಂಡ ಅವ ನಾಚಿಕೆ ಭಂಡ ॥ ೪ ॥

ಸಮಯಕ್ಕೊದಗದ ಅರ್ಥ ಸಾವಿರವಿದ್ದರು ವ್ಯರ್ಥ
ಸವತಿಯರೊಳಗಣ ಕೂಟ ಎಳನಾಗರ ಕಾಟ
ಅಮರರಿಗೊದಗದ ಯಾಗ ಆಡಿನ ಮೇಲಣ ರೋಗ
ನಮ್ಮ ಆದಿಕೇಶವನ ಭಕ್ತ ಅವ ಜೀವನ್ಮುಕ್ತ ॥ ೫ ॥

**

## ೩. ಆರು ಬಾಳಿದರೇನು ಊರನಾಳಿದರೇನು

ರಾಗ: ಸಾವೇರಿ ತಾಳ: ಛಾಪುತಾಳ

ಆರು ಬಾಳಿದರೇನು ಊರನಾಳಿದರೇನು
ನಾರಾಯಣನ ಸ್ಮರಣೆ ನಮಗಿಲ್ಲದನಕ ॥ ಪ ॥
ಆದರಣೆಯಿಲ್ಲದೂಟ ಅಮೃತಾನ್ನವಾದರೇನು
ವಾದಿಸುವ ಸತಿಸುತರು ಇದ್ದರೇನು
ಕ್ರೋಧವನು ಬಗೆವ ಸೋದರರಿದ್ದು ಫಲವೇನು
ಮಾದಿಗರ ಮನೆಯಲ್ಲಿ ಮದುವ್ಯಾದರೇನು ॥ ೧ ॥
ಹರಕಿಗಿಲ್ಲದ ಹಣವು ಹತ್ತಲಕ್ಷವಿದ್ದರೇನು
ವರವ ಕೊಡದ ದೈವ ವಡೆದರೇನು ಎ-
ಡರಿಗಾಗದ ನಂಟ ಎಷ್ಟು ಬಾಳಿದರೇನು
ಬರಿದೆ ಕೆಟ್ಟದ್ದಾಡುವರು ಬಯಲಾದರೇನು ॥ ೨ ॥
ಹಿಂದೆ ನಿಂದ್ಯವನುಡಿವ ಹೆಂಡರಿದ್ದು ಫಲವೇನು
ಉಂಡುಂಡು ಮಲಗುವಾಳುಗಳಿದ್ದರೇನು
ಗಂಡನಿಲ್ಲದವಳಿಗೆ ಎಷ್ಟು ಭಾಗ್ಯವಿದ್ದರೇನು ಪ್ರ-
ಚಂಡನಾದ ಮೇಲೆ ಮಗನ ಗೊಡವ್ಯೇನು ॥ ೩ ॥
ಅಕ್ಕರಲ್ಲದವಳಿಗೆ ಮಕ್ಕಳಿದ್ದು ಫಲವೇನು
ಹೊಕ್ಕು ಬೆರೆಯದ ನಂಟತನಗಳೇನು
ರೊಕ್ಕವಿಲ್ಲದ ಮೇಲೆ ದಂದುಗವಿದ್ದು ಫಲವೇನು
ಮರ್ಕಟನ ಕೈಯಲ್ಲಿ ಮಾಣಿಕ್ಯವಿದ್ದರೇನು ॥ ೪ ॥
ಸಾವಿಗಿಲ್ಲದ ಔಷಧಿ ಸಂಜೀವನವಾದರೇನು
ದೇವತ್ವವಿಲ್ಲದ ಕವಿತ್ವವೇನು
ಹೇವವಿಲ್ಲದ ಗಂಡು ಹೆಚ್ಚಾಗಿ ಬದುಕಿದರೇನು
ಹಾವಿನ ಹೆಳಲಲ್ಲಿ ಹಣವಿದ್ದರೇನು ॥ ೫ ॥
ಕಣ್ಣಿಲ್ಲದವನಿಗೆ ಕನ್ನಡಿಯಿದ್ದು ಫಲವೇನು
ಪುಣ್ಯವಿಲ್ಲದವನು ಪ್ರೌಢಿಮೆ ಮೆರೆದರೇನು
ಉಣ್ಣಬಾರದವರಲ್ಲಿ ಊರ ಔತಣವಾದರೇನು
ಹಣ್ಣು ಬಿಡದ ಮರ ಹಾಳಾದರೇನು ॥ ೬ ॥

ಅಲ್ಪಗನ ಕೂಡೆ ಸಂಗವ ಮಾಡಿ ಫಲವೇನು
ಬಲ್ಲಿಂಥವಿಲ್ಲದವನ ಬದುಕದೇನು
ಕಲ್ಪಾಂತರಕೆ ಕಾಗಿನೆಲೆ ಆದಿಕೇಶವನ
ನೆಪ್ಪಿನಲಿ ನೆನೆಯದಿಹನೆಲ್ಲಿದ್ದರೇನು ॥ ೭ ॥

**

## ೪. ಎನ್ನ ನುಡಿ ಪುಸಿಯಲ್ಲ ಈ ಜಗದೊಳು

ರಾಗ: ಕಾಂಬೋದಿ ತಾಳ: ಝಂಪೆತಾಳ

ಎನ್ನ ನುಡಿ ಪುಸಿಯಲ್ಲ ಈ ಜಗದೊಳು ॥ ಪ ॥

ಅರವಿಂದವಿಲ್ಲದಿಹ ಕೊಳವು ತಾ ಕಂಗೊಳದು
ಹರಿಣಾಂಕನಿಲ್ಲದಿಹ ಇರುಳು ಮರುಳು
ಸ್ವರಭೇದವಿಲ್ಲದಿಹ ಸಂಗೀತವಿಂಗೀತ
ಸರಸವಿಲ್ಲದಿಹ ಸತಿಯ ಭೋಗ ತನುರೋಗ ॥ ೧ ॥

ಪಂಥ ಪಾಡುಗಳನರಿಯದ ಬಂಟನವ ತುಂಟ
ಅಂತರವರಿಯದಾ ವೇಶಿ ಹೇಸಿ
ದಂತಿಯಿಲ್ಲದ ಅರಸು ಮುರಿದ ಕಾಲಿನ ಗೊರಸು
ಅಂತಸ್ಥವಿಲ್ಲದ ಪ್ರಧಾನಿ ಮದ್ಯಪಾನಿ ॥ ೨ ॥

ಮಾಗಿಯಲಿ ಸತಿಯನಗಲಿದ ಕಾಂತನವ ಭ್ರಾಂತ
ಪೂಗಣೆಯ ಗೆಲಿಯದಿಹ ನರನು ಗೋಖರ
ಭೋಗಿಸದೆ ಇಹಪರಕೆ ಗಳಿಸಿದರ್ಥ ಅಪಾರ್ಥ
ಕಾಗಿನೆಲೆಯಾದಿಕೇಶವನ ಭಕ್ತ ಮುಕ್ತ ॥ ೩ ॥

**

## ೫. ಏನೂ ಇಲ್ಲವು ಎರಡು ದಿನದ ಸಂಸಾರ

ರಾಗ: ಮುಖಾರಿ ತಾಳ: ಝಂಪೆತಾಳ

ಏನೂ ಇಲ್ಲವು ಎರಡು ದಿನದ ಸಂಸಾರ ಇದನರಿತು
ದಾನಧರ್ಮವ ಮಾಡೊ ಮನುಜ ॥ ಪ ॥

ಹಸಿದು ಬಂದವರಿಗೆ ಅಶನವೀಯಲು ಬೇಕು
ಶಿಶುವಿಂಗೆ ಪಾಲ್ಬೆಣ್ಣೆ ನಡೆಸಬೇಕು
ಹಸನಾದ ಭೂಮಿಯನು ಧಾರೆಯೆರೆಯಲು ಬೇಕು
ಭಾಷೆಕೊಟ್ಟರೆ ಮಾತು ನಿಜವಿರಲು ಬೇಕು ॥ ೧ ॥

ಕಳ್ಳತನವನು ಮಾಡಿ ಒಡಲು ಹೊರೆಯಲು ಬ್ಯಾಡ
ತಳ್ಳಿಕಾರನು ಆಗಿ ತಿರುಗಬ್ಯಾಡ
ಕುಳ್ಳಿರ್ದ ಸಭೆಯೊಳಗೆ ಕುಚ್ಚಿತವಾಡಲಿ ಬ್ಯಾಡ
ಒಳ್ಳೆಯವನೆಂದರೆ ಉಬ್ಬ ಬ್ಯಾಡ ॥ ೨ ॥

ದೊರೆತನವು ಬಂದಾಗ ಕೆಡು ನುಡಿಯಲು ಬ್ಯಾಡ
ಸಿರಿಬಂದ ಕಾಲಕ್ಕೆ ಬಲು ಮೆರೆಯ ಬ್ಯಾಡ
ಸಿರಿವರ ಕಾಗಿನೆಲೆಯಾದಿ ಕೇಶವನ ಚರಣವನು
ನೆರೆನಂಬಿ ಸುಖಿಯಾಗೊ ಮನುಜ ॥ ೩ ॥

**

## ೬. ಕಲಿಯೇರಿ ಬಂತು ನಾ ಕಡೆಹಾಯ್ವದೆಂತಯ್ಯ

ರಾಗ: ಕಾಂಬೋದಿ ತಾಳ: ಅಟ್ಟತಾಳ

ಕಲಿಯೇರಿ ಬಂತು ನಾ ಕಡೆಹಾಯ್ವದೆಂತಯ್ಯ
ಕಲುಷಹರ ಶ್ರೀಕೃಷ್ಣ ಕೃಪೆಮಾಡೊ ತನಕ ॥ ಪ ॥

ಸತ್ಯಧರ್ಮಗಳೆಲ್ಲ ಎತ್ತ ಪೋದವೊ ಕಾಣೆ
ಉತ್ತಮರ ಜೀವನಕೆ ದಾರಿಯಿಲ್ಲ
ನಿತ್ಯದಲಿ ಕಳವು ವ್ಯಭಿಚಾರವುಳ್ಳವರೆಲ್ಲ
ಅರ್ಥಸಂಪನ್ನರಾಗ್ಯನುಭವಿಸುತಿಹರು ॥ ೧ ॥

ಅತ್ತೆಯೇ ಸೊಸೆಯಾಗಿ ಸೊಸೆಯು ಅತ್ತೆಯು ಆಗಿ
ಪುತ್ರ ಪಿತನಾಗಿ ಪಿತ ಪುತ್ರನಾಗಿ
ಮತ್ತೆ ಗಂಡನಿಗೆ ಹೆಂಡತಿಯೆ ಗಂಡಳು ಆಗಿ
ವರ್ತಿಸುವರಯ್ಯ ತಮಗೆದುರಿಲ್ಲವೆಂದು ॥ ೨ ॥

ವಾವೆವರಸೆಯು ತಪ್ಪಿ ವೈರಿ ವರ್ಗವು ಹೆಚ್ಚಿ
ದೇವ ಬ್ರಾಹ್ಮಣ ಗುರು ಹಿರಿಯರನು ಜರಿದು
ಕೇವಲಾಧಮರೆಲ್ಲ ಸಿರಿ ಮದದಿ ಸೊಕ್ಕಿದರು
ಕಾವರಾರೈ ಸಾಧು ಸಜ್ಜನರನೀಗ ॥ ೩ ॥

ವೇದವಿಪ್ರರು ತಮ್ಮ ವೃತ್ತಿ ಸ್ವಸ್ತಿಯ ಕಳೆದು
ಆಧಾರವಿಲ್ಲದೆ ತಿರಿದು ತಿಂಬುವರು
ಕಾದುವ ಶೂರರಿಗೆ ಕಾಸುಕೊಡುವವರಿಲ್ಲ
ಮೇದಿನಿಗೆ ಬೀಳ್ವ ಮಳೆ ಖಂಡಮಂಡಲವು ॥ ೪ ॥

ಅನ್ನವಸ್ತ್ರಗಳಿಂದ ಚೆನ್ನಾಗಿ ಬಾಳುವರ
ಭಿನ್ನತಂತ್ರವ ಮಾಡಿ ಕೆಡಿಸುತಿಹರು
ಗನ್ನಗತಕವ ಮಾಳ್ಪ ಗ್ರಾಮಣ್ಯವನೆ ಕಲಿತು
ಕುನ್ನಿಗಳು ಹೆಚ್ಚಿದರು ಕ್ರೂರ ಫಣಿಯಂತೆ ॥ ೫ ॥

ಆಳಿದೊಡೆಯನಿಗೆರಡನೆಣಿಸುವಾತಗೆ ಒಳ್ಳೆ
ಮಾಳಿಗೆಯ ಮನೆಯು ತುರುಧನಧಾನ್ಯವು
ವೇಳೆವೇಳೆಗೆ ಬರುವ ಒಲಿದ ಹೆಂಡತಿ ಬಿಟ್ಟು
ಸೂಳೆಯನೆ ನಂಬುವರು ಹೀನ ಮಾನವರು ॥ ೬ ॥

ಪತಿವ್ರತೆಯರೆಂಬುವರು ಶತಸಹಸ್ರದಲೊಂದು
ಮಿತಿಮೀರಿ ಇರುವರ್ಸೈ ಇತರ ಜನರು
ಮತಿಗೆಟ್ಟು ಮನಸೋತು ಅನ್ಯಪುರುಷರ ಕೂಡಿ
ರತಿಯೊಳಗೆ ಸಿಲುಕುವರು ರಮ್ಯದೊಳಗಿಹರು ॥ ೭ ॥

ಹರಿಹರರ ಪೂಜೆಗಳು ಹಗರಣಗಳಾದವು
ಉರಿಮಾರಿ ಚಾಮುಂಡಿ ಶಕ್ತಿಗಳಿಗೆ
ಕುರಿ ಕೋಣ ನೈವೇದ್ಯ ಧೂಪದೀಪಗಳಿಂದ
ಪರಮ ಭಕ್ತಿಯ ಮಾಡಿ ಪೂಜಿಸುವರಯ್ಯ ॥ ೮ ॥

ನಡೆವ ಕಾರ್ಯಗಳೆಲ್ಲ ನುಡಿಯಲೆನ್ನಳವಲ್ಲ
ಒಡೆಯ ನೀನೆ ಬಲ್ಲೆ ಕಲಿಯುಗದ ಮಹಿಮೆ
ತಡವ ಮಾಡಲಿಬೇಡ ತಾಳಲಾರದು ಲೋಕ
ಮೃಡನ ವೈರಿಯ ಪೆತ್ತ ಆದಿಕೇಶವನೆ ॥ ೯ ॥

**

## ೭. ಕಲಿ ಹೆಚ್ಚಿ ಬಂದಿತಲ್ಲ ರಂಗಯ್ಯ

ರಾಗ: ಕಲ್ಯಾಣಿ ತಾಳ: ಅಟ್ಟತಾಳ

ಕಲಿ ಹೆಚ್ಚಿ ಬಂದಿತಲ್ಲ, ರಂಗಯ್ಯ ಕಾಯೆನ್ನ ಸಿರಿಯ ನಲ್ಲ ॥ ಪ ॥

ಬಲು ಘೋರ ಪಾತಕದಿ ಇಳೆಯು ತಲ್ಲಣಗೊಂಡು
ಕಳವಳಿಸುತಿದೆ ಕಾಲ ವಿಪರೀತದಿ ॥ ಅ.ಪ. ॥

ಅತ್ತೆಯ ಸೊಸೆ ಬಯ್ವಳು – ಪುತ್ರರು ತಮ್ಮ
ಹೆತ್ತ ತಾಯಿಯ ಬಿಡುವರು
ಉತ್ತಮ ಗರತಿಗೆ ಅಪವಾದ – ಅವಿವೇಕ

ಎತ್ತ ನೋಡಲು ಬೆಚ್ಚಿ ಬೆದರುತು-
ನ್ಮತ್ತತನದಲಿ ಮನೆಯ ರಚಿಸಿಹರು
ಭಕ್ತಿಯೆಂಬುದ ಬಯಸದಿರುವರು
ಕತ್ತಲಾಯಿತು ಕಲಿಯ ಮಹಿಮೆ ॥ ೧ ॥

ನಿತ್ಯ ನೇಮವು ನಿಂತಿತು – ಹೋಯಿತು ಅಲ್ಪ-
ಜಾತಿಗೆ ಐಶ್ವರ್ಯವು
ದಾತರಾದವರಿಗೆ ಧಾರಣೆ ಪಾರಣೆ
ಜಾತಿನೀತಿಗಳೆಲ್ಲ ಒಂದಾಗಿ
ಪಾತಕದಿ ಮನವೆರಗಿ ಮೋಹಿಪ
ಮಾತಾಪಿತೃ ಗುರು ದೈವ ದ್ರೋಹದಿ
ಭೂತಳವು ನಡುನಡುಗುತಿಹುದು ॥ ೨ ॥

ಬನ್ನಣೆ ಮಾತುಗಳು ಮತ್ಸರಕ್ರೋಧಗಳು
ಅನ್ಯಾಯದಿಂದ ಅರ್ಥವ ಗಳಿಸೋರು
ತನ್ನ ಕಾಂತನ ಬಿಟ್ಟು ಸ್ತ್ರೀಯರು
ಅನ್ಯರಿಗೆ ಮನವೆರಗಿ ಮೋಹಿಪರು
ಬಣ್ಣಗೆಟ್ಟಿತು ವರ್ಣ ತಪ್ಪಿತು ಪ್ರ-
ಸನ್ನ ಶ್ರೀ ನೆಲೆಯಾದಿಕೇಶವನೆ ॥ ೩ ॥

**

## ೮. ಕೇಶವನೊಲುಮೆಯು ಆಗುವ ತನಕ

ರಾಗ: ಶಂಕರಾಭರಣ ತಾಳ: ಅಟ್ಟತಾಳ

ಕೇಶವನೊಲುಮೆಯು ಆಗುವ ತನಕ ಹರಿ-
ದಾಸರೊಳಿರುತಿರು ಹೇ ಮನುಜ ॥ ಪ ॥

ಕ್ಲೇಶಪಾಶಗಳ ಹರಿದು ವಿಲಾಸದಿ
ದಾಸರ ನುತಿಗಳ ಪೊಗಳುತ ಮನದೊಳು ॥ ಅ.ಪ. ॥

ಮೋಸದಿ ಜೀವರ ಘಾಸಿಮಾಡಿದ ಪಾಪ
ಕಾಶಿಗೆ ಹೋದರೆ ಹೋದೀತೆ
ಶ್ರೀಶನ ಭಕುತರ ದೂಷಿಸಿದ ಫಲ
ಕಾಸು ಕೊಟ್ಟರೆ ಬಿಟ್ಟೀತೆ

ಭಾಷೆಯ ಕೊಟ್ಟು ನಿರಾಶೆಮಾಡಿದ ಫಲ
ಮೋಸವ ಮಾಡದೆ ಬಿಟ್ಟೀತೆ
ಭೂಸುರಸ್ವವ ಹ್ರಾಸಮಾಡಿದ ಫಲ
ಏಸೇಸು ಜನುಮಕು ಬಿಟ್ಟೀತೆ ॥ ೧ ॥

ಕನಕದ ಪಾತ್ರೆಯ ಘನತರ ಪ್ರಭೆಗಳು
ಶುನಕನ ಮನಸಿಗೆ ಸೊಗಸೀತೆ
ಹೀನ ಮನುಜನಿಗೆ ಜ್ಞಾನವ ಬೋಧಿಸೆ
ಹೀನ ವಿಷಯವಳಿದ್ಹೋದೀತೆ
ಮಾನಿನಿ ಮನಸು ನಿಧಾನವಿಲ್ಲದಿರೆ
ಮಾನಾಭಿಮಾನಗಳುಳಿದೀತೆ
ಭಾನುಪ್ರಕಾಶನ ಭಜನೆಯ ಮಾಡದ
ಹೀನಗೆ ಮುಕುತಿಯು ದೊರಕೀತೆ ॥ ೨ ॥

ಸತ್ಯಧರ್ಮಗಳ ನಿತ್ಯವು ಬೋಧಿಸೆ
ತೊತ್ತಿನ ಮನಸಿಗೆ ಸೊಗಸೀತೆ
ತತ್ತ್ವದ ಅರ್ಥ ವಿಚಿತ್ರದಿ ಪೇಳಲು
ಕತ್ತೆಯ ಚಿತ್ತಕೆ ಹತ್ತೀತೆ
ಪುತ್ಥಳಿ ಬೊಂಬೆಯ ಚಿತ್ರದಿ ಬರೆದರೆ
ಮುತ್ತು ಕೊಟ್ಟರೆ ಮಾತಾಡೀತೆ
ಕತ್ತುರಿತಿಲಕವನೊತ್ತಿ ಫಣೆಯೊಳಿಡೆ
ಅರ್ತಿಯು ತೋರದೆ ಇದ್ದೀತೆ ॥ ೩ ॥

ನ್ಯಾಯವ ಬಿಟ್ಟನ್ಯಾಯವ ಪೇಳುವ –
ನ್ಯಾಯಿಗೆ ನರಕವು ತಪ್ಪೀತೆ
ತಾಯಿತಂದೆಗಳ ನೋಯಿಸಿದ–
ನ್ಯಾಯಿಗೆ ಮುಕುತಿಯು ದೊರಕೀತೆ
ಬಾಯಿ ಕೊಬ್ಬಿ ಬಯ್ಯುವ ಮನುಜಗೆ
ಗಾಯವು ಆಗದೆ ಬಿಟ್ಟೀತೆ
ಮಾಯಾವಾದಗಳ ಕಲಿತ ಮನುಜಗೆ
ಹೇಯ ನರಕವು ತಪ್ಪೀತೆ ॥ ೪ ॥

ಸಾಧು ಸಜ್ಜನರ ಬಾಧಿಸಿದ ಪರ–
ವಾದಿಗೆ ದೋಷವು ತಪ್ಪೀತೆ

ಬಾಧಿಸಿ ಬಡವರ ಅರ್ಥವನೊಯ್ವಗೆ
ವ್ಯಾಧಿಯು ಕಾಡದೆ ಬಿಟ್ಟೀತೆ
ಬದ್ಧ ಮನುಜ ಬಲು ಕ್ಷುದ್ರವ ಕಲಿತರೆ
ಬುದ್ಧಿಹೀನನೆಂಬುದ್ಹೋದೀತೆ
ಕದ್ದು ಒಡಲ ತಾ ಹೊರೆವನ ಮನೆಯೊಳ
ಗಿದ್ದು ಹೋಗದೆ ಉಳಿದೀತೆ ॥ ೫ ॥

ಅಂಗಜವಿಷಯಂಗಳನು ತೊರೆದಾತಗೆ
ಅಂಗನೆಯರ ಸುಖ ಸೊಗಸೀತೆ
ಸಂಗಸುಖಂಗಳು ಹಿಂಗಿದ ಮನುಜಗೆ
ಶೃಂಗಾರದ ಬಗೆ ರುಚಿಸೀತೆ
ಇಂಗಿತವರಿತ ನಿಃಸಂಗಿ ಶರೀರ ವ-
ಜ್ರಾಂಗಿಯಾಗದೆ ತಾನಿದ್ದೀತೆ
ಮಂಗಳಮಹಿಮನ ಅಂಘ್ರಿಯ ಕಾಣದ
ಮಂಗಗೆ ಮುಕುತಿಯು ದೊರಕೀತೆ ॥ ೬ ॥

ಕರುಣಾಮೃತದಾಭರಣವ ಧರಿಸಿದ
ಪರಮಗೆ ಸರಗಳಿದಿರಾದೀತೆ
ಕರುಣಪಾಶದುರವಣೆ ತೊರೆದಾತಗೆ
ಶರಣರ ಕರುಣವು ತಪ್ಪೀತೆ
ಅರಿತು ಶಾಸ್ತ್ರವನಾಚರಿಪ ಯೋಗ್ಯಗೆ
ಗುರು ಉಪದೇಶವು ತಪ್ಪೀತೆ
ವರ ವೇಲಾಪುರದಾದಿಕೇಶವನ
ಸ್ಮರಿಸುವವನಿಗೆ ಮೋಕ್ಷ ತಪ್ಪೀತೆ ॥ ೭ ॥

**

## ೯. ಡಿಂಬದೊಳಗಿರುವ ಪ್ರಾಣ

ರಾಗ: ಕಾಂಬೋದಿ ತಾಳ: ಆದಿತಾಳ

ಡಿಂಬದೊಳಗಿರುವ ಪ್ರಾಣ ಕಂಬಸೂತ್ರ ಬೊಂಬೆಯಂತೆ
ಎಂದಿಗಾದರೊಂದು ದಿನ ಸಾವು ತಪ್ಪದು ॥ ಪ ॥

ಹುಟ್ಟುತೇನು ತಾರಲಿಲ್ಲ ಸಾಯುತೇನು ಒಯ್ಯಲಿಲ್ಲ
ಸುಟ್ಟು ಸುಟ್ಟು ಸುಣ್ಣದ್ಹರಳಾಯಿತೀ ದೇಹ

ಹೊಟ್ಟೆ ಬಲು ಕೆಟ್ಟದೆಂದು ಎಷ್ಟು ಕಷ್ಟ ಮಾಡಿದಾಗ್ಯೂ
ಬಿಟ್ಟು ಹೋಗುವಾಗ ಗೇಣು ಬಟ್ಟೆ ಕಾಣದು ॥ ೧ ॥

ಹತ್ತು ಎಂಟು ಲಕ್ಷ ಗಳಿಸಿ ಮತ್ತೆ ಸಾಲದೆಂದು ಪರರ
ಅರ್ಥಕಾಗಿ ಆಸೆಪಟ್ಟು ಅನ್ಯಾಯ ಮಾಳ್ಪರು
ಬಿತ್ತಿ ಬೆಳಸು ತನ್ನದೆಂಬೊ ವ್ಯರ್ಥಚಿಂತೆ ಮಾಡಿ ಬರಿದೆ
ಸತ್ತು ಹೋದ ಮೇಲೆ ನಿಮ್ಮ ಅರ್ಥವ್ಯಾರಿಗೊ ॥ ೨ ॥

ಹೆಣ್ಣು ಹೊನ್ನು ಮಣ್ಣು ಮೂರು ತನ್ನಲಿದ್ದು ಉಣ್ಣಲಿಲ್ಲ
ಅಣ್ಣ ತಮ್ಮ ತಾಯಿ ತಂದೆ ಬಯಸಲಾಗದು
ಅನ್ನ ವಸ್ತ್ರ ಭೋಗಿಯಾಗಿ ತನ್ನ ಸುಖವ ಕಾಣಲಿಲ್ಲ
ಮಣ್ಣುಪಾಲು ಆದಮೇಲೆ ಯಾರಿಗಾಹೊದೊ ॥ ೩ ॥

ಬೆಳ್ಳಿ ಬಂಗಾರಿಟ್ಟುಕೊಂಡು ಒಳ್ಳೆ ವಸ್ತ್ರ ಹೊದ್ದುಕೊಂಡು
ಅಲ್ಪಾಚಾರಿ ಗೊಂಬೆಯಂತೆ ಆಡಿ ಹೋಯಿತು
ಹಳ್ಳ ಹರಿದ ಮ್ಯಾಲೆ ಗುಳ್ಳೆ ಉರುಳಿತಲ್ಲೊ ನೀರಮ್ಯಾಲೆ
ಉಳ್ಳಿ ಪೊರೆಯಂತೆ ಕಾಣೊ ಸಂಸಾರದಾಟ ॥ ೪ ॥

ವಾರ್ತೆ ಕೀರ್ತಿಯೆಂಬುವೆರಡು ಬಂದವಯ್ಯ ಸತ್ತ ಮೇಲೆ
ವಸ್ತು ಪ್ರಾಣನಾಯಕನು ಎಲ್ಲಿ ದೊರಕ್ಯಾನು
ಕರ್ತೃ ಕಾಗಿನೆಲೆಯಾದಿಕೇಶವನ ಚರಣಕಮಲ
ನಿತ್ಯದಲ್ಲಿ ನೆನೆದು ನೆನೆದು ಸುಖಿಯಾಗಿ ಬಾಳೆಲೊ ॥ ೫ ॥

**

## ೧೦. ಧರ್ಮವೆಂದೆನಿಪ ದಾರಿಯನು

ರಾಗ: ಕೇದಾರಗೌಳ ತಾಳ: ಝಂಪೆತಾಳ

ಧರ್ಮವೆಂದೆನಿಪ ದಾರಿಯನು ಬಿಟ್ಟು ದು-
ಷ್ಕರ್ಮವೆಂದೆನಿಪ ಕಾನನವ ಪೊಕ್ಕು
ದುರ್ಮಾರ್ಗದಲಿ ನಡೆವರಿಗೆ ಘೋರವ್ಯಾಧಿ
ಕರ್ಮಪಾಕದಲಿ ಸಾರುತಿದೆಕೋ ಜಗದಿ ॥ ಪ ॥

ಹರಿಹರವಿಭೇದಗೈದವಗೆ ದಂತರ್ಬುದವು
ಗುರು ನಿಂದೆಗೈದವಗೆ ಉನ್ಮಾದವು
ಪರಸತಿಯ ಕಾಮಿಸಿದವಗೆ ಶೀತಜ್ವರವು
ಕೆರೆಗಳನೊಡೆಸಿದಾತಗೆ ಸನ್ನಿಪಾತಜ್ವರವು

ಹಿರಿಯರನು ಜರಿದವಗೆ ಪಾಂಡುರೋಗ
ಧರೆಯನಳಿಸಿದವಗೆ ಸರ್ವಾಂಗ ಶ್ವೇತವು
ಪುರವಗ್ರಹಾರಗೇಡಿಗೆ ರಾಜರೋಗವೆಂದು
ಅರಿಯುವುದು ಸಕಲ ಜನರು ॥ ೧ ॥

ಶಿಶು ಹತ್ಯೆ ಮಾಡಿದವಗೆ ಕುಕ್ಷಿಶೂಲೆ
ಪಶುಗಳನು ವಧಿಸಿದಗೆ ಪ್ರಮೇಹವು
ಉಸುರಲೇನದ ಸ್ವಾಮಿದ್ರೋಹಿಗೆ ತಾ ಬಹುಮೂತ್ರ
ಹಸಿದವಗೆ ಅನ್ನವಿಕ್ಕದವಗೆ ಆಮ್ಲಪಿತ್ತ
ವೃಷಭವನು ಒದ್ದವಗೆ ಜಂಘಾವಾತ
ಮುಸುಗುವುದು ವಿಶ್ವಾಸಘಾತಕಗೆ ನರರೋಗ
ಪುಸಿಯಲ್ಲವಿದ ಕೇಳಿ ಜನರು ॥ ೨ ॥

ಕಥೆ ಪುರಾಣಗಳ ಹಳಿದವಗೆ ಕಾಸಶ್ವಾಸ
ಸುತಭೇದಗೈದವಂಗೆ ಪೀನಸರೋಗ
ಪಿತಮಾತೆಯರ ಸಲಹದವಗೆ ಮೂಲವ್ಯಾಧಿ
ಮತಿಗೇಡಿಗೆ ಗಂಡಮಾಲೆ
ಯತಿಗಳನು ನಿಂದಿಪಗೆ ಸನ್ನಿಪಾತಜ್ವರವು
ಸತಿ ಪ್ರಹರಿಸಿದವಗೆ ಮೂತ್ರಕೃಚ್ಛ್ರ
ವ್ರತಗೆಡುಕನಿಗೆ ಹೊಂದಿಹುದು ತಾ ಕ್ಷಯರೋಗ
ಕ್ಷಿತಿಯೊಳಗೆ ಸಿದ್ಧಾಂತ ಕೇಳಿ ಜನರು ॥ ೩ ॥

ಕೊಟ್ಟು ಭಾಷೆಯ ತಪ್ಪಿದವಗೆ ಉಪಜಿಹ್ವೆ
ಮುಟ್ಟಿ ಮನುಜರ ತಪ್ಪಿದವಗೆ ಕರಕಂಪನವು
ಕೊಟ್ಟರೂ ಕೊಡಲಿಲ್ಲವೆಂಬುವಗೆ ಉದರ ರೋಗ
ಕೊಟ್ಟು ನುಡಿದವಗೆ ಮೇಹವು
ಅಷ್ಟಮದದಿಂದ ಬೆರೆತಿಹಗೆ ಬೆರಗಿನ ರೋಗ
ಬಟ್ಟೆಯಲಿ ಮುಳ್ಳು ಹರಹಿದವಗೆ ನೇತ್ರವ್ಯಾಧಿ
ಕಟ್ಟುತಿಹ ಮುಂಜಿ ವಿವಾಹ ಕಂಟಕಗೆ
ಹುಟ್ಟುವುದು ಕುಷ್ಟರೋಗ ॥ ೪ ॥

ಮುಂದೆಬಹ ಧರ್ಮಕರ್ಮವ ಬಲ್ಲವರಾರು
ಎಂದು ಮಂದಮತಿಯಾಗಿ ಕೆಟ್ಟಳಿಯದಿರಿ

ಹಿಂದಣದೆಲ್ಲವು ಬಹುದೆಂಬುದಕೆ ಸಾಕ್ಷಿ
ಇಂದು ಕಣ್ಣೆದುರೆ ಜಗದೊಳಗೆ ತೋರುತಿಹುದೊ
ಚಂದದೀ ತಾಯಿ ಮಕ್ಕಳ ಬಾಯಿಗೆ ಮೊಲೆಹಾಲ
ತಂದು ಊಡುವ ತೆರದಿ ಊಡಿದಲ್ಲದೆ ಬಿಡದು
ಕಂದರ್ಪಜನಕ ಕಾಗಿನೆಲೆಯಾದಿಕೇಶವನ
ಮುಂದರಿತು ಭಜಿಸಿ ಮುಕುತಿ ಪಡೆಯಿರಣ್ಣ ॥ ೫ ॥

**

## ೧೧. ಮಗನಿಂದ ಗತಿಯುಂಟೆ ಜಗದೊಳು

ರಾಗ: ಪಂತುರವಾಳಿ ತಾಳ: ಆದಿತಾಳ

ಮಗನಿಂದ ಗತಿಯುಂಟೆ ಜಗದೊಳು
ನಿಗಮಾರ್ಥತತ್ತ್ವವಿಚಾರದಿಂದಲ್ಲದೆ ॥ ಪ ॥

ತ್ರಿಗುಣರಹಿತ ಪರಮಾತ್ಮನ ಧ್ಯಾನದಿ
ಹಗಲಿರುಳು ನಿತ್ಯಾನಂದದಿಂದ
ಬಿಗಿದು ಪ್ರಪಂಚ ವಾಸನೆಯ ಬಿಟ್ಟವರಿಗೆ
ಮಗನಿದ್ದರೇನು ಇಲ್ಲದಿದ್ದರೇನು ॥ ೧ ॥

ಲಲನೆ ಪುರುಷರು ತಮತಮ್ಮ ಕಾಮದ
ಸಲುವಾಗಿ ಕೂಡಲು ಶುಕ್ಲ ಶೋಣಿತ
ಮಿಳಿತವಾದ ಪಿಂಡ ತನ್ನ ಪೂರ್ವಕರ್ಮದಿ
ನೆಲಕೆ ಬೀಳಲು ಅದು ಸಲಹಿ ರಕ್ಷಿಪುದೆ ॥ ೨ ॥

ಪರಮದುಷ್ಟನಾಗಿ ಮರೆತು ಸ್ವಧರ್ಮವ
ಗುರುಹಿರಿಯರ ಸಾಧುಗಳ ನಿಂದಿಸಿ
ಬೆರೆದನ್ಯಜಾತಿಯ ಪರನಾರಿಯಾ ಕೂಡಿ
ಹಿರಿಯರ ಜರೆದು ತಾ ನರಕಕ್ಕೆ ಬೀಳುವ ॥ ೩ ॥

ಸತ್ಯನೊಬ್ಬ ಪುತ್ರ ಶಾಂತನೊಬ್ಬ ಪುತ್ರ ದು-
ರ್ವೃತ್ತಿ ನಿಗ್ರಹನೊಬ್ಬ ಸಮಚಿತ್ತನೊಬ್ಬ
ಉತ್ತಮರೀ ನಾಲ್ಕು ಮಕ್ಕಳಿದ್ದ ಮೇಲೆ
ಹೆತ್ತರೇ ಫಲವೇನು ಹೆರದಿದ್ದರೇನಯ್ಯಾ ॥ ೪ ॥

ಸುತರಿಲ್ಲದವರಿಗೆ ಸದ್ಗತಿಯಿಲ್ಲವೆಂಬುದು
ಕೃತಕಶಾಸ್ತ್ರವು ಲೌಕಿಕ ಭಾವಕ್ಕೆ

ಕ್ಷಿತಿಯೊಳು ಬಾಡದಾದಿಕೇಶವ ಜಗ-
ತ್ಪತಿಯ ಧ್ಯಾನಿಪಗೆ ಸದ್ಗತಿಯಿಲ್ಲದ್ದೋಗೋದೆ ॥ ೫ ॥

**

## ೧೨. ಮಾಡು ದಾನ ಧರ್ಮ ಪರ ಉಪಕಾರ

ರಾಗ: ಸೌರಾಷ್ಟ್ರ ತಾಳ: ಅಟ್ಟತಾಳ

ಮಾಡು ದಾನ ಧರ್ಮ ಪರ ಉಪಕಾರವ ಮರೆಯದಿರೆಚ್ಚರಿಕೆ ॥ ಪ ॥
ಕೇಡ ನೆನೆಯಬ್ಯಾಡ ನಂಬಿದತಾವಲಿ ಕೆಡುವಿ ನೀನೆಚ್ಚರಿಕೆ ॥ ಅ.ಪ.॥

ಬಾಳಿ ಬದುಕು ಸಿರಿ ಇರುವಾಗ ಬಂಧುಬಳಗಗಳೆಚ್ಚರಿಕೆ ಈ
ಹಾಳು ಸಂಸಾರಕ್ಕೆ ಹಲಬರೊಡನೆ ನೀನು ಹಗೆಯದಿರೆಚ್ಚರಿಕೆ ॥ ೧ ॥

ಮೂಢರ ಒಡನಾಡಿ ಮುಂದೆ ನೀ ಕೆಡಬೇಡ ಮೋಸ ನೋಡೆಚ್ಚರಿಕೆ
ನಾಡೊಳು ಸುಜನರ ನೋಡಿ ನಡೆಕಂಡ್ಯ ನಟನೆ ಬ್ಯಾಡೆಚ್ಚರಿಕೆ ॥ ೨ ॥

ಚೆನ್ನಾಗಿ ಬದುಕಿದೆ ಗಳಿಸಿದೆ ನಾನೆಂಬ ಹೆಮ್ಮೆ ಬ್ಯಾಡೆಚ್ಚರಿಕೆ
ನಿನ್ನಾಯು ಮುಗಿಯಲು ಯಮದೂತರು ಬಂದು ಎಳೆಯುವರೆಚ್ಚರಿಕೆ ॥ ೩ ॥

ಹೆಣ್ಣು ಹೊನ್ನು ಮಣ್ಣು ನಿನ್ನಣಕಿಸಿ ಹೋಗೋದಿನ್ನು ನೋಡೆಚ್ಚರಿಕೆ
ಮುನ್ನ ಮಾಡಿದ ಪುಣ್ಯ ಬೆನ್ನತ್ತಿ ಬರುವುದು ಮುಂದೆ ನೋಡೆಚ್ಚರಿಕೆ ॥ ೪ ॥

ಬಲ್ಲಿದನೆಂದು ಬಡವರ ಬಾಯಿಗಳ ಬಡಿಯದಿರೆಚ್ಚರಿಕೆ ಒಂ-
ದೆಳ್ಳಷ್ಟು ತಪ್ಪದೆ ಎಣಿಸುತ್ತ ಯಮನೋರು ಎಳೆದೊಯ್ವರೆಚ್ಚರಿಕೆ ॥ ೫ ॥

ಒಬ್ಬರಂತೆಲ್ಲರ ನೋಡಿ ಸತ್ಕರ್ಮದಿ ಉಬ್ಬಬೇಡೆಚ್ಚರಿಕೆ
ಕಬ್ಬುಬಿಲ್ಲನ ಪಿತನ ಏಕಾಂತ ಭಾವದಿ ನೆರೆನಂಬು ಎಚ್ಚರಿಕೆ ॥ ೬ ॥

ಕಾಲನ ದೂತರು ಯಾವಾಗ ಎಳೆವರೊ ಕಾಣದು ಎಚ್ಚರಿಕೆ
ಬೇಲೂರ ಪುರವಾಸ ನೆಲೆಯಾದಿಕೇಶವನಾಳಾಗು ಎಚ್ಚರಿಕೆ ॥ ೭ ॥

**

## ೧೩. ವರಕವಿಗಳ ಮುಂದೆ ನರಕವಿಗಳ ವಿದ್ಯೆ

ರಾಗ: ಸೌರಾಷ್ಟ್ರ ತಾಳ: ಅಟ್ಟತಾಳ

ವರಕವಿಗಳ ಮುಂದೆ ನರಕವಿಗಳ ವಿದ್ಯೆ ತೋರಬಾರದು – ಈ
ಧರಣಿಯ ಕಲ್ಲಿಗೆ ಶರಣೆಂದು ಪೂಜೆಯ ಮಾಡಬಾರದು ॥ ಪ ॥

ಪಾಪಿಗಳಿದ್ದಲ್ಲಿ ರೂಪುಳ್ಳ ವಸ್ತುವ ತೋರಬಾರದು – ಬಹು
ಕೋಪಿಗಳಿದ್ದಲ್ಲಿ ಅನುಭವಗೋಷ್ಠಿಯ ಮಾಡಬಾರದು ॥ ೧ ॥

ಅಡಿಸ್ತ್ರ ಮಡಕೆಗೆ ಜೋಡಿಸಿ ಒಲೆಗುಂಡು ಹೂಡಬಾರದು – ಬಲು
ಬಡತನ ಬಂದಾಗ ನೆಂಟರ ಬಾಗಿಲ ಸೇರಬಾರದು ॥ ೨ ॥

ಹರಿಯ ನಿಂದಿಸಿ ಹರ ಘನನೆಂದು ನರಕಕ್ಕೆ ಬೀಳಬಾರದು – ತಾ
ಪರರನು ಬೈದು ಪಾತಕಕೆ ಒಳಗಾಗಬಾರದು ॥ ೩ ॥

ಮಡದಿಯ ನುಡಿ ಕೇಳಿ ಜಗಳಕೊಬ್ಬರ ಕೂಡೆ ಹೋಗಬಾರದು – ಬಾ-
ಯ್ಬಡಿಕರು ಇದ್ದಲ್ಲಿ ವಸ್ತಿಬಿಡಾರವ ಮಾಡಬಾರದು ॥ ೪ ॥

ಮುಂದೆ ಭಲಾ ಎಂದು ಹಿಂದೆ ನಿಂದಿಪರನ್ನು ಕೂಡಬಾರದು – ನಮ್ಮ
ತಂದೆ ಬಾಡದಾದಿಕೇಶವನ ಚರಣಸ್ಮರಣೆಯ ಬಿಡಬಾರದು ॥ ೫ ॥

••

## ೧೪. ಸಹಜವಿದು ಈ ನುಡಿಯು ಸಟೆಯ ಮಾತಲ್ಲ

ರಾಗ: ಕಾಂಬೋದಿ ತಾಳ: ಝಂಪೆತಾಳ

ಸಹಜವಿದು ಈ ನುಡಿಯು ಸಟೆಯ ಮಾತಲ್ಲ ॥ ಪ ॥
ಮಹಿಯೊಳಗೆ ಪೇಳುವೆನು ವಿಹಿತವಾಕ್ಯಗಳ ॥ ಅ ಪ ॥

ಶ್ರುತಿ ಶಾಸ್ತ್ರಪುರಾಣಗಳ ಓದುವನೆ ಶೂದ್ರ
ಅತಿಥಿಯಾದರಿಸುವನೆ ಅತಿಲುಬ್ಧನು
ಪ್ರತಿನಿತ್ಯ ಸಂಧ್ಯಾನವನು ಮಾಡುವನೆ ಪಾಪಿ
ಪತಿಯಾಜ್ಞೆಯಿಂದಿಹಳೆ ಪರಮ ಪಾತಕಿಯು ॥ ೧ ॥

ದಾನಧರ್ಮಂಗಳನು ಬಿಡುವನೇ ಧರ್ಮಾತ್ಮ
ಮಾನಾಭಿಮಾನಗಳ ಹಿಡಿಯುವನೆ ಯೋಗಿ
ಪ್ರಾಣಿಗಳ ಹಿಂಸೆ ಮಾಡುವನೆ ಸುಜ್ಞಾನಿ
ದೀನ ಸಜ್ಜನರನ್ನು ಕಾಡುವನೆ ಸತ್ಪುರುಷ ॥ ೨ ॥

ಕೆರೆಕಟ್ಟೆ ಹೂದೋಟ ರಚಿಸುವನೆ ದ್ರೋಹಿ
ಗುರುದೈವ ಹಿರಿಯರನು ಬೈಯುವನೆ ನಿಷ್ಠ
ಸಿರಿಕಾಗಿನೆಲೆಯಾದಿಕೇಶವನ ಚರಣವನು
ನಿರುತದಲಿ ಸ್ಮರಿಸುವನೆ ಅವಿಚಾರಿ ಪುರುಷ ॥ ೩ ॥

## ೧೫. ಅರಿತು ನಡೆಯಲಿ ಬೇಕು

ರಾಗ: ಮುಖಾರಿ ತಾಳ: ಝಂಪೆತಾಳ

ಅರಿತು ನಡೆಯಲಿ ಬೇಕು ನರಕಾಯವೆತ್ತಿದ ಮೇಲೆ
ಅರಿಯದಿದ್ದರೆ ನರಕವೇ ಪ್ರಾಪ್ತಿ ॥ ಪ ॥

ದುರ್ಜನರ ಮನೆಯ ಪಾಯಸಾನ್ನಕ್ಕಿಂತ
ಸಜ್ಜನರ ಮನೆಯ ರಬ್ಬಳಿಗೆ ಲೇಸು
ಹೆಜ್ಜೆಗೆ ಸಾವಿರ ಹೊನ್ನನಿತ್ತರೂ ಬೇಡ – ಬಲು
ದುರ್ಜನರ ಸಂಗ ಬಲು ಭಂಗ ಹರಿಯೆ ॥ ೧ ॥

ಭಕ್ತಿಹೀನರ ಮನೆಯ ಪಟ್ಟೆ ಸುಪ್ಪತ್ತಿಗೆಗಿಂತ
ಭಕ್ತರ ಮನೆಯ ಕಡೆಬಾಗಿಲ ಕಾಯುವುದು ಲೇಸು
ಮುಕ್ತಿಮಾರ್ಗವ ತೋರ್ಪ ಮುರಹರನ ದಾಸರನು
ಸಕ್ತಿಯಿಂ ಸೇವಿಸುವುದು ಬಲು ಸೌಖ್ಯ ಹರಿಯೆ ॥ ೨ ॥

ಆಶೆಕಾರರ ಮನೆಯ ವಿಲಾಸ ಸುಖಕಿಂತ
ಆಶಾರಹಿತರ ಮನೆಯ ನಿರ್ಗತಿಕ ದೈನ್ಯ ಲೇಸು
ಭೂಸುರಪ್ರಿಯ ಕಾಗಿನೆಲೆಯಾದಿಕೇಶವನ
ಮೀಸಲಿನ ಪಾದಭಜನೆ ಕಡುಲೇಸು ಮನವೆ ॥ ೩ ॥

••

## ೧೬. ಕೀರ್ತನೆಯ ಮಾಡಿ ಕೈವಲ್ಯ ಪಡೆವರು

ರಾಗ: ಕಲ್ಯಾಣಿ ತಾಳ: ಝಂಪೆತಾಳ

ಕೀರ್ತನೆಯ ಮಾಡಿ ಕೈವಲ್ಯ ಪಡೆವರು ಜನರು – ಹರಿ ॥ ಪ ॥
ಮೂರ್ತಿ ಶ್ರೀ ಚೆನ್ನಕೇಶವನ ಮನದೊಳಗಿಟ್ಟು ॥ ಅ.ಪ. ॥

ಹಲುವು ಮಾಯಗಳಿಂದ ಹಂಬಲಿಸಿ ಕೆಡಬೇಡ
ಬಲವಂತರೊಡನೆ ಹಗೆ ಮಾಡಬೇಡ
ಕುಲದಲ್ಲಿ ಜನಿಸಿ ಕುಚೋದ್ಯ ಮಾಡಲು ಬೇಡ
ನಲಿದ್ಹರಿಯ ಪೊಗಳದ ನಾಲಗೆಯು ಬೇಡ ॥ ೧ ॥

ಮಂದಮತಿಗಳ ಕೂಡ ಮಹಕಥೆಯ ಪೇಳಬೇಡ
ಯತಿಯಾದ ಮೇಲಿನ್ನು ಸತಿಸುತರಾಸೆಯು ಬೇಡ

ಮತಿಬಿಟ್ಟು ಸಿಟ್ಟಿನಲಿ ನುಡಿಯಬೇಡ
ಹಿತ ತಪ್ಪಿ ನಡೆವಂಥ ಹೆಂಡತಿಯು ಬೇಡ ॥ ೨ ॥

ಕೆಟ್ಟು ಹೋದವರನ್ನು ತಿರುಗಿ ತರಲುಬೇಡ
ಮುಟ್ಟಾದ ಮೇಲಿನ್ನು ಮೋಹಿಸಿ ಕೂಡಬೇಡ
ಭ್ರಷ್ಟನಾಡಿದನೆಂದು ಸಿಟ್ಟಿಲಿ ನುಡಿಬೇಡ
ಕಷ್ಟದೆಸೆಯೊಳು ಧೈರ್ಯ ಬಿಟ್ಟು ನೀ ಕೆಡಬೇಡ ॥ ೩ ॥

ವಿಟಜನರ ಕೂಡಿ ವೇಶ್ಯಾವಾರ್ತೆಯು ಬೇಡ
ಸಟೆ ಹೇಳಿ ಸಂಸಾರ ಕೆಡಿಸಬೇಡ
ತುಟಿ ಮೀರ್ದ ಹಲ್ಲಂತೆ ದೂತ ಎಂದಿಗು ಬೇಡ
ನಿಟಿಲನೇತ್ರನೆ ದೈವವೆಂಬೊ ಜನ್ಮವು ಬೇಡ ॥ ೪ ॥

ತೀರ್ಥ ಯಾತ್ರೆಗೆ ಪೋಗಿ ತಿರುತಿರುಗಿ ಬಳಲಿ ಕೃ-
ತಾರ್ಥನಾದೆನು ಎಂಬ ಘನತೆ ಬೇಡ
ದೈತ್ಯಮರ್ದನ ಕಾಗಿನೆಲೆಯಾದಿಕೇಶವನ
ಮರೆತು ಹೋಗದೆ ಭಜಿಸಿ ಸುಖಿಯಾಗು ಮನುಜ ॥ ೫ ॥

**

## ೧೭. ಗುರುವ ನಿಂದಿಸುವನೆ ಪರಮಭಕ್ತ

ರಾಗ: --- ತಾಳ: ---

ಗುರುವ ನಿಂದಿಸುವನೆ ಪರಮಭಕ್ತ ನರಕದಲಿ
ಹೊರಳಾಡಿ ನರಳುವನೆ ಮುಕ್ತ ॥ ಪ ॥

ಮರೆಯದಲೆ ಹರಿಸ್ಮರಣೆ ಮಾಡುವನೆ ಮತಿಹೀನ
ಮರೆದು ಗರ್ವದಿ ತಿರುಗುವನೆ ಜ್ಞಾನಿ
ಅರಿತು ಅನ್ನವನಿಕ್ಕಿ ಉಪಚರಿಸುವನೆ ಪಾಪಿ
ಪರಸತಿಯ ಭ್ರಮಿಸುವನೆ ಪರಮಸತ್ಪುರುಷ ॥ ೧ ॥

ದಾನಧರ್ಮ ಪರ ಉಪಕಾರಗಳ ಮಾಡುವನೆ ಮತಿಹೀನ
ಶ್ವಾನನಂತೆ ತಿರುಗುವನೆ ಜ್ಞಾನಿ
ಸ್ನಾನ ಸಂಧ್ಯಾನ ಜಪತಪ ಮಾಡುವನೆ ಮೂಢ
ಜ್ಞಾನಿಗಳ ಕೂಡ ಜಗಳಾಡುವನೆ ಸತ್ಪುರುಷ ॥ ೨ ॥

ಕಡಿದು ರಣದೊಳಗೆ ಜಯಿಸುವನೆ ರಣಹೇಡಿ
ಒಡೆಯನೊಪ್ಪಿಸಿ ಓಡಿ ಬರುವನೆ ಬಂಟ

ಸಿರಿವರದ ಕಾಗಿನೆಲೆ ಆದಿಕೇಶವನ
ಬಿಡದೆ ಭಜಿಸವನೆ ಭ್ರಷ್ಟ ॥ ೩ ॥

## ೧೮. ದೃಢವಿಲ್ಲದವ ಭಜಿಸೆ ಸಿದ್ಧಿಯಾಗುವುದುಂಟೆ

ದೃಢವಿಲ್ಲದವ ಭಜಿಸೆ ಸಿದ್ಧಿಯಾಗುವುದುಂಟೆ
ಕಂಡುಮಂದಮತಿಗೆ ಪೇಳಲು ಜ್ಞಾನಬರಲುಂಟೆ
ನಡತೆಹೀನನ ಹೃದಯದಲಿ ಭಕುತಿಯು ಉಂಟೆ
ಜಡಮತಿಗೆತ್ತಿಗೆ ತೀವ್ರ ಉಂಟೆ
ಕಡು ನಿನ್ನ ದಯವಿರಲು ಕಷ್ಟದಾರಿದ್ರ್ಯವುಂಟೆ
ಅಡಿಗಡಿಗೆ ನಿನ ನಂಬಿದವಗನ್ಯಥಾವುಂಟೆ
ಒಡೆಯನಾದ ಕಾಗಿನೆಲೆಯಾದಿಕೇಶವನ ಸರಿ ಕೊಡುವ ದೈವಂಗಳುಂಟೆ ॥ ೧ ॥

ಸಂಗೀತ ಸವಿಯು ಬಧಿರನಿಗೆ ಕೇಳಿಬರಲುಂಟೆ
ಕಂಗಳನು ಕನ್ನಡಿಯ ಹಿಡಿದು ನೋಡುವುದುಂಟೆ
ರಂಗುಮಾಣಿಕದುಂಗುರ ಗಾಜಿಗೆ ಸರಿಯುಂಟೆ
ಸಿಂಗಕ್ಕೆ ಎದುರುಂಟೆ ಭಂಗಪಡುವವಗೆ
ಬಂಗಾರ ಬಾಹುವುದುಂಟೆ
ತಂಗಳಿಗೆ ನೆಲೆಯಿಲ್ಲದವರೆ ಸವಿಸೊದುಂಟೆ
ಶೃಂಗಾರ ಕಾಗಿನೆಲೆಯಾದಿಕೇಶವಗೆ ಸರಿಯನ್ಯ ದೈವಂಗಳುಂಟೆ ॥ ೨ ॥

ಮಡಿತಿಂಬುವನಿಗೆ ಮಿಂಚು ಊಟಂಗಳುಂಟೆ
ದುಡಿಯದವನು ದುಕೂಲ ಬಯಸುವುದುಂಟೆ
ಬಡಿಗುಚುವನು ಬಹುಧನವ ಗಳಿಸುವುದುಂಟೆ
ದಡ್ಡನಿಗೆ ವಿದ್ಯೆಯುಂಟೆ
ಅಡ್ಡ ಮಾತಾಡುವಗೆ ಅಹುದುಯೆಂಬುವರುಂಟೆ
ಒಡನೊದರುವಗೆ ವೂಚುಗಾಯನವುಂಟೆ
ದೊಡ್ಡವನು ಕಾಗಿನೆಲೆಯಾದಿಕೇಶವಗೆ ಸರಿಗೋಡು ದೈವಂಗಳುಂಟೆ ॥ ೩ ॥

ಹೆತ್ತ ತಾಯಿಯ ಮಮತೆ ಮತ್ತೆ ಮಲತಾಯಿಗುಂಟೆ
ಉತ್ತಮಾಶ್ವದ ಸರಿಯು ಕತ್ತೆ ಪೋಲುವುದುಂಟೆ
ವಿತ್ತವುಳ್ಳವಗೆ ಕುಲಗೋತ್ರವೆಣಿಸುವುದುಂಟೆ ಉನ್ಮತ್ತನಿಗೆ ನ್ಯಾಯವುಂಟೆ
ಅತ್ತೆಮನೆ ಸೇರುವಗೆ ಅಭಿಮಾನಗಳು ಉಂಟೆ

ಬತ್ತಲೆ ತಿರುಗುವಗೆ ಭಯವು ಲಜ್ಜೆಯು ಉಂಟೆ
ಪೃಥ್ವಿಯೊಳು ಕಾಗಿನೆಲೆಯಾದಿಕೇಶವಗೆ ಸರಿ ಮತ್ತೊಬ್ಬ ದೈವವುಂಟೆ ॥ ೪ ॥

ಭಂಡುಗೇಡಿಗೆ ಬಹಳ ಮೇಲಾದ ಮಾತುಂಟೆ
ತುಂಡುಮಗಳಿಗೆ ತಾಯಿತಂದೆಯಂಜಿಕೆ ಉಂಟೆ
ಕಂಡ ರಂಡೆರ ಸವಿ ಕಂಡವಗೆ ಸುಖವುಂಟೆ
ಕೆಂಡಕ್ಕೆ ಶೀತವುಂಟೆ
ಷಂಡನಾದಂಥವಗೆ ನಾರಿಯರ ಸುಖವುಂಟೆ
ಉಂಡಿಲ್ಲದವನು ಮಾತಾಡಿದರೆ ರಸವುಂಟೆ
ಗಂಡ ಶ್ರೀಕಾಗಿನೆಲೆಯಾದಿಕೇಶವನ ಸರಿಗಂಡು ದೈವಂಗಳುಂಟೆ ॥ ೫ ॥

ಸೂರೆಮಾಡುವಗೆ ಸುಂಕದ ಭಯವು ಮತ್ತುಂಟೆ
ಕ್ರೂರನಾದಂಥವಗೆ ಶತ್ರುಗಳ ಭಯವುಂಟೆ
ಜಾರ ಪುರುಷಗೆ ಜನರ ಭಯವು ನಾಚಿಕೆಯುಂಟೆ
ಪೋರನಿಗೆ ಬುದ್ಧಿಯುಂಟೆ
ಚೋರತನ ಮಾಡುವಗೆ ಕತ್ತಲೆಯುಬೆಳಕುಂಟೆ
ಹೇರು ಹೊರುವವನಿಗೆ ತೊಲೆಯ ಭಾರವು ಉಂಟೆ
ಶ್ರೀರಮಣ ಕಾಗಿನೆಲೆಯಾದಿಕೇಶವನ ಸರಿಸಮದೈವಂಗಳುಂಟೆ ॥ ೬ ॥

**

## ೧೯. ದ್ರೋಹಿಗಳ ವಿವರವನು ನಾ ಪೇಳ್ವೆನಯ್ಯ

ರಾಗ: ಮುಖಾರಿ ತಾಳ: ಝಂಪೆತಾಳ

ದ್ರೋಹಿಗಳ ವಿವರವನು ನಾ ಪೇಳ್ವೆನಯ್ಯ ॥ ಪ ॥

ಕೂಡಿದೆಡೆಯಲಿ ಕಪಟನೆನಿಸುವನೆ ದ್ರೋಹಿ
ಮಾಡಿದುಪಕಾರವನು ಮರೆವ ದ್ರೋಹಿ
ಚಾಡಿ ಕೊಂಡೆಗಳಾಡಿ ತಿರುಗುವವನೆ ದ್ರೋಹಿ
ರೂಢಿಯೊಳು ಬಾಳುವರ ಸಹಿಸದವ ದ್ರೋಹಿ ॥ ೧ ॥

ಸತಿಯಳನು ಬಿಟ್ಟು ಪರಸತಿಯ ಬಯಸುವ ದ್ರೋಹಿ
ಹೆತ್ತವರೊಳು ಕಲಹ ಮಾಡುವನೆ ದ್ರೋಹಿ
ಯತಿಗಳನು ಸಂತತ ನಿಂದೆ ಮಾಡುವ ದ್ರೋಹಿ
ಸತಿಯನ್ನು ಪರರಿಗೆ ಇತ್ತವನೆ ದ್ರೋಹಿ ॥ ೨ ॥

ಹೊನ್ನಿದ್ದು ಅನ್ನದಾನ ಮಾಡದವನೆ ದ್ರೋಹಿ
ಚೆನ್ನಾಗಿ ಗುರುಸತಿಯ ಬಯಸಿದವ ದ್ರೋಹಿ
ಸನ್ನುತಾಂಗ ನೆಲೆಯಾದಿಕೇಶವನ
ತನ್ನೊಳಗೆ ತಾ ತಿಳಿದು ಸುಖಿಸದವ ದ್ರೋಹಿ ॥ ೩ ॥

**

## ೨೦. ನಾ ನಿಮ್ಮ ದಾಸರ ದಾಸ

ರಾಗ: ಕಲ್ಯಾಣಿ ತಾಳ: ಅಟ್ಟತಾಳ

ನಾ ನಿಮ್ಮ ದಾಸರ ದಾಸ
ಈ ನರರ ಪಾಡೇನೆರಡು ದಿನದ ಸಂಸಾರ ॥ ಪ ॥

ಕರೆಸು ಕಂಬದಿ ಎಂದು ವಾದಿಸಿದವ ಕೆಟ್ಟ
ಪರಹೆಣ್ಣಿಗಾಸೆ ಪಟ್ಟು ಕೀಚಕ ಕೆಟ್ಟ
ಬರಿದೆ ದ್ರೌಪದಿಗಾಗಿ ದುರ್ಯೋಧನ ಕೆಟ್ಟ
ಉರಿ ಹಸ್ತವ ಬೇಡಿ ಭಸ್ಮಾಸುರ ಕೆಟ್ಟ ॥ ೧ ॥

ಆಡಿದ ಮಾತಿಗೆ ಬಲಿ ನೀಡಲಾಗಿ ಕೆಟ್ಟ
ಮಾಡುವ ದಾನ ತಡೆದು ಶುಕ್ರನು ಕೆಟ್ಟ
ಕೂಡಿದ ಶಿರವರಿದು ರೂಢಿಗೀಶ್ವರ ಕೆಟ್ಟ
ಬೇಡಲು ಗುಂಡಿಗೆ ಸೀಳಿ ಕರ್ಣನು ಕೆಟ್ಟ ॥ ೨ ॥

ಎರಡೆಂಟಾಡೆನೆಂದು ಹರಿಶ್ಚಂದ್ರ ಕೆಟ್ಟ
ನೆರೆ ಪಗಡೆಯನಾಡಿ ಧರ್ಮಜನು ಕೆಟ್ಟ
ಹರಿದು ಬಾಣವ ತೊಟ್ಟು ದಶರಥನು ಕೆಟ್ಟ
ಹರಿಯ ಮೊರೆ ಸೇರಿದರ್ಗೆ ಸ್ಥಿರ ಪಟ್ಟ ॥ ೩ ॥

ಹಮ್ಮನಾಡಿ ಮುನ್ನ ಬ್ರಹ್ಮ ತಾ ಕೆಟ್ಟ
ಅಮ್ಮನ ನುಡಿ ಕೇಳದೆ ಹನುಮಂತ ಕೆಟ್ಟ
ತಮ್ಮನ ನುಡಿ ಕೇಳದೆ ರಾವಣನು ಕೆಟ್ಟ
ನಿಮ್ಮ ನೋಯಿಸಿದ ಮೈರಾವಣನು ಕೆಟ್ಟ ॥ ೪ ॥

ಭಾಗೀರಥಿಯ ತಂದೆ ಬಹುದೈತ್ಯರ ಕೊಂದೆ
ಭೋಗಿಶಯನ ಶ್ರೀ ಲಕ್ಷ್ಮೀಕಾಂತನೆ
ಭಾಗವತ ಪ್ರಿಯ ಭವಭಯಹರ
ಕಾಗಿನೆಲೆಯಾದಿಕೇಶವಗೆ ನಮೊ ನಮೋ ॥ ೫ ॥

**

## ೨೧. ಶೂದ್ರರೆಂದಾಡುವರು ಹರಿದಾಸರ

ರಾಗ: --- ತಾಳ: ---

ಶೂದ್ರರೆಂದಾಡುವರು ಹರಿದಾಸರ
ರೌದ್ರ ನರಕಕೆ ಬೀಳ್ವ ಘೋರಪಾತಕರು ॥ ಪ ॥

ಬಲಿ ಘಂಟಾಕರ್ಣ ವಿಭೀಷಣ ಪ್ರಹ್ಲಾದ
ಖಳರಲ್ಲವೆ ವಿಚಾರಿಸಿ ನೋಡಲು
ನಳಿನನಾಭನು ಒಲಿದ ಪರಮ ಸದ್ಭಕ್ತರನು
ನೆಲೆಯನರಿಯದೆ ನಿಂದಿಸುವ ಚಾಂಡಾಲರುಗಳು ॥ ೧ ॥

ಶೇಷ ಗಜೇಂದ್ರ ಗರುಡ ಗಾಂಧರ್ವರು
ಗ್ರಾಸದಿಂ ಕ್ರಮಸ್ಥರೆ ವಿವರಿಸಿ ನೋಡಲು
ಭಾಸುರ ರವಿಣಜ ತೇಜನಾಳುಗಳು
ಎಸೆವ ತ್ರೈಜಗನೆ ಎಂದರಿದಿಹ ನೀಚರು ॥ ೨ ॥
ಸಿರಿನಾರಾಯಣ ಕಾಗಿನೆಲೆಯಾದಿಕೇಶವನ
ಕರುಣದಿಂದೊಲಿದ ಕೇವಲ ಪುಣ್ಯರು
ಪರಶುಮುಟ್ಟದ ಲೋಹ ಸುವರ್ಣವಾದಂತಿರಲು
ಅರಿದು ಅರಿಯದೆ ನಿಂದಿಸುವ ಶ್ವಾನಸೂಕರರು ॥ ೩ ॥

**

## ೨೨. ಹೆತ್ತ ತಾಯಿಗಿಂತ ಅತ್ಯಧಿಕ ಮಾಯವುಂಟೆ

ರಾಗ: ಮೋಹನ ತಾಳ: ಅಟ್ಟತಾಳ

ಹೆತ್ತ ತಾಯಿಗಿಂತ ಅತ್ಯಧಿಕ ಮಾಯವುಂಟೆ
ಉತ್ತಮ ಅಶ್ವವ ಕತ್ತೆ ಹೋಲುವುದುಂಟೆ ॥ ಪ ॥

ವಿತ್ತವುಳ್ಳವನ ಕುಲ ಎಣಿಸುವುದುಂಟೆ
ಸ್ವಾರ್ಥಕೆ ನ್ಯಾಯ ಎಂದಾದರೂ ಉಂಟೆ ॥ ೧ ॥

ಅತ್ತೆಮನೆ ಸೇರುವಗೆ ಅಭಿಮಾನವುಂಟೆ
ಬತ್ತಲೆ ತಿರುಗುವಗೆ ಭಯವು ಇನ್ನುಂಟೆ ॥ ೨ ॥

ಪೃಥ್ವಿಯೊಳಗೆ ಕಾಗಿಗೆನೆಲೆಯಾದಿಕೇಶವಗೆ
ಮರ್ತ್ಯದೊಳನ್ಯದೇವರು ಸರಿಯುಂಟೆ ॥ ೩ ॥

**

## ೨೩. ಅಜ್ಞಾನಿಗಳ ಕೂಡೆ ಅಧಿಕ ಸ್ನೇಹಕ್ಕಿಂತ

ರಾಗ: ಕಾಂಬೋದಿ ತಾಳ: ಝಂಪೆತಾಳ

ಅಜ್ಞಾನಿಗಳ ಕೂಡೆ ಅಧಿಕ ಸ್ನೇಹಕ್ಕಿಂತ
ಸುಜ್ಞಾನಿಗಳ ಕೂಡೆ ಜಗಳವೇ ಲೇಸು ॥ ಪ ॥

ಉಂಬುಡುವುದಕ್ಕಿಲ್ಲದರಸನೋಲಗಕ್ಕಿಂತ
ತುಂಬಿದೂರೊಳಗೆ ತಿರಿದುಂಬುವುದೇ ಲೇಸು
ಹಂಬಲಿಸಿ ಹಾಳ್ಹರಟೆ ಹೊಡೆಯುವುದಕ್ಕಿಂತ ಹರಿ
ಎಂಬ ದಾಸರ ಕೂಡ ಸಂಭಾಷಣೆಯೆ ಲೇಸು ॥ ೧ ॥

ಒಡನೆ ಹಂಗಿಸುವನೋಗರವನುಂಬುದಕಿಂತ
ಕುಡಿನೀರು ಕುಡಿದುಕೊಂಡಿರುವುದೇ ಲೇಸು
ಬಿಡದೆ ಬಾಂಧವರೊಡನೆ ಬಡಿದಾಡುವುದಕಿಂತ
ಅಡವಿಯೊಳಗಜ್ಞಾತವಾಸವೇ ಲೇಸು ॥ ೨ ॥

ಮಸೆಯುತಿಹ ಮತ್ಸರದ ನೆರೆಯೊಳಿರುವದಕಿಂತ
ಹಸನಿಲ್ಲದ ಹಾಳು ಗುಡಿಯೇ ಲೇಸು
ಬಿಸಜಾಕ್ಷ ಕಾಗಿನೆಲೆ ಆದಿಕೇಶವರಾಯ
ವಸಮತಿಯೊಳು ನಿನ್ನ ದಾಸತ್ವವೇ ಲೇಸು ॥ ೩ ॥

••

## ೨೪. ಬಾಯಿನಾರಿದ ಮೇಲೆ ಏಕಾಂತವೆ

ರಾಗ: ಕಾಂಬೋದಿ ತಾಳ: ಅಟ್ಟತಾಳ

ಬಾಯಿನಾರಿದ ಮೇಲೆ ಏಕಾಂತವೆ
ತಾಯಿ ತೀರಿದ ಮೇಲೆ ತವರಾಸೆಯೆ ॥ ಪ ॥

ಕಣ್ಣುಕೆಟ್ಟ ಮೇಲೆ ಕಡುರೂಪು ಚೆಲ್ವಿಕೆಯೆ
ಬಣ್ಣಗುಂದಿದ ಮೇಲೆ ಬಹುಮಾನವೆ
ಪುಣ್ಯತೀರಿದ ಮೇಲೆ ಪರಲೋಕಸಾಧನವೆ
ಸುಣ್ಣವಿಲ್ಲದ ವೀಳ್ಯವದು ಸ್ವಾದುಮಯವೆ ॥ ೧ ॥

ಕಿಲುಬಿನಾ ಬಟ್ಟಲೊಳು ಹುಳಿ ಕಲಿಸಿ ಉಣಬಹುದೆ
ಚಳಿಜ್ವರಕೆ ಚಂದನದ ಲೇಪ ಹಿತವೆ

ಮೊಲೆಬಿದ್ದ ಹೆಣ್ಣಿನೊಳು ಮೋಹ ಸೊಗಸಹುದೆ
ಬೆಲೆಬಿದ್ದ ಸರಕಿನೊಳು ಲಾಭವುಂಟೆ ॥ ೨ ॥

ಪಥ್ಯಸೇರದ ಮೇಲೆ ನಿತ್ಯಸುಖವೆನಬಹುದೆ
ಸತ್ವ ಕುಂದಿದ ಮೇಲೆ ಸಾಮರ್ಥ್ಯವೆ
ಪೃಥ್ವಿಯೊಳು ಕಾಗಿನೆಲೆಯಾದಿಕೇಶವ ನಿನ್ನ
ಭಕ್ತಿಯಿಲ್ಲದ ನರಗೆ ಮುಕ್ತಿ ದೊರಕುವುದೆ ॥ ೩ ॥

**

## ೨೫. ಬೈ ಬೈ ತನಕ ಊಟದ ಕೆಲಸ

ರಾಗ: ತಿಲಂಗ್ ತಾಳ: ಆದಿತಾಳ

ಬೈ ಬೈ ತನಕ ಊಟದ ಕೆಲಸ ಉಂಡ ಮೇಲೆ ಶಯನ ॥ ಪ ॥
ಬೈಲಾಯಿತು ಈ ಒಗತನವೆಲ್ಲ ರಕ್ಷಿಸಯ್ಯ ರಘುಕುಲತಿಲಕ ॥ ಅ. ಪ ॥

ಪುರಾಣವಿಲ್ಲ ಪುಣ್ಯಕಥೆಯಿಲ್ಲ ಪಾರಾಯಣದಿ ಮನಸಿಲ್ಲ
ತರೋಣ ಬರೋಣ ತಿಂದ್ಹೋಗೋಣ ಮಲಗೋಣ ಮತ್ತೇಳೋಣ ॥ ೧ ॥

ಕಣ್ಣಿಗೆ ಜೋಂಪಿಯು ಹತ್ತುವತನಕನ್ಯರ ಕೂಡಾಟ
ಹೆಣ್ಣು ಮಣ್ಣು ಹೊನ್ನು ಚಿಕ್ಕಬಾಲಕರ ಸಂಗ ಡೌರಿಣಕಾಟ ॥ ೨ ॥

ಹೀಗಾಗಿನ್ನಿಲ್ಲಿಗೆ ಬಂದೆ ಇನ್ನಾದರೂ ಸಲಹೊ ಸಿರಿ
ಕಾಗಿನೆಲೆಯಾದಿಕೇಶವ ಶಿರಬಾಗಿ ನಾ ಬೇಡಿಕೊಂಬೆ ॥ ೩ ॥

**

## ೨೬. ಮರೆಯದಿರು ಮರೆಯದಿರು ಮನುಜಾ

ರಾಗ: ಸಾರಂಗ ತಾಳ: ಅಟ್ಟತಾಳ

ಮರೆಯದಿರು ಮರೆಯದಿರು ಮನುಜಾ
ನಾರಾಯಣನ ಸ್ಮರಣೆಯನು ಮಾಡು ಮನುಜ ॥ ಪ ॥

ರಂಗನಾಥನು ಇರಲಿಕ್ಕೆ ಜಂಗುಳಿದೈವಗಳೇಕೆ
ತಂಗಭದ್ರೆ ಇರಲಿಕ್ಕೆ ಕೆರೆಬಾವಿಯೇಕೆ
ಅಂಗನೆ ಸತಿ ಇರಲಿಕ್ಕೆ ಬಣಗು ಹೆಣ್ಣುಗಳೇಕೆ
ಮಂಗಳಾತ್ಮಕನಿರಲಿಕ್ಕೆ ಪರದೈವವೇಕೆ ॥ ೧ ॥

ಹಾಲು ಹಳ್ಳವಿರಲಿಕ್ಕೆ ವಾಳಿಯವ ತರಲೇಕೆ
ಮೇಲುನಾಮವಿರಲಿಕ್ಕೆ ಕಟುಕು ಇನ್ನೇಕೆ
ಬಾಲ ಹನುಮನಿರಲಿಕ್ಕೆ ಹುಲುಕಪಿಗಳೇಕೆ
ಒಳ್ಳೆ ತುಳಸಿ ಇರಲಿಕ್ಕೆ ಕಗ್ಗೊರಲೆಯೇಕೆ ॥ ೨ ॥

ಚೆನ್ನದ ಗಿರಿಯಿರಲಿಕ್ಕೆ ಕಬ್ಬಿಣದ ಮೊರಡಿಯೇಕೆ
ರನ್ನಮಾಣಿಕವಿರಲಿಕ್ಕೆ ಕಾಜಿನ ಹರಳೇಕೆ
ಅನ್ನ ತುಪ್ಪವಿರಲಿಕ್ಕೆ ಮದ್ಯಪಾನಗಳೇಕೆ
ಚೆನ್ನಾದಿಕೇಶವನಿಗೆ ಬಿನುಗು ದೈವಗಳೇಕ ॥ ೩ ॥

*****

## ೨೭. ಜಯಮಂಗಳಂ ನಿತ್ಯ ಶುಭಮಂಗಳಂ

ಜಯಮಂಗಳಂ ನಿತ್ಯ ಶುಭಮಂಗಳಂ ॥ ಪ ॥

ಅಂಬುಜದಳಾಕ್ಷಗೆ ಮಂಗಳ
ಸರ್ವ ಜೀವರಕ್ಷಕಗೆ ಮಂಗಳ ॥ ಅ. ಪ. ॥

ಜಲಧಿಯೊಳಾಮ್ನಾಯ ತಂದಗೆ ಮಂಗಳ
ಕುಲಗಿರಿಯ ತಾಳ್ದಗೆ ಜಯಮಂಗಳ
ನೆಲನವ ಕದ್ದಸುರನ ಗೆಲಿದಗೆ ಮಂಗಳ
ಚೆಲುವ ನರಸಿಂಹಗೆ ಶುಭಮಂಗಳ ॥ ೧ ॥

ವಸುಧೆಯ ಈರಡಿಗೈದಗೆ ಮಂಗಳ
ವಸುಧಿಪರನಳಿದಗೆ ಜಯಮಂಗಳ
ದಶಕಂಧರನನ್ನು ಗೆಲಿದಗೆ ಮಂಗಳ
ಪಶುಗಳ ಕಾಯ್ದಗೆ ಶುಭ ಮಂಗಳ ॥ ೨ ॥

ಪುರತ್ರಯವಧುಗಳ ಗೆಲಿದಗೆ ಮಂಗಳ
ತುರಗವಾಹನನಿಗೆ ಜಯ ಮಂಗಳ
ವರಕಾಗಿನೆಲೆಯಾದಿಕೇಶವಗೆ ಮಂಗಳ
ಪರಮಪವಿತ್ರಗೆ ಶುಭ ಮಂಗಳ ॥ ೩ ॥

## ಪರಿಶಿಷ್ಟ - ೨

# ಹರಿಭಕ್ತಿಸಾರ - ಪದ್ಯಾರ್ಧಾನುಕ್ರಮಣಿಕೆ

*****

# ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನ

ನಂ. ೮೯/೨೪, ಪಾಜಕ, ೩ನೇ ಅಡ್ಡರಸ್ತೆ, ಮೌಂಟ್ ಜಾಯ್ ಎಕ್ಸ್‌ಟೆನ್ಷನ್, ಹನುಮಂತನಗರ
ಬೆಂಗಳೂರು- ೫೬೦೦೧೯
email : info@vyasamadhwa.org

ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯರಿಂದ
ಸಂಪಾದಿತ/ ಅನುವಾದಿತ/ಕೃತ/ ಪ್ರಕಾಶಿತ ಕೆಲವು ಗ್ರಂಥಗಳು

## ಕನ್ನಡ ಕೃತಿಗಳು

| | |
|---|---|
| ೧. ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯ (ಅನುವಾದ, ವಿವರಣೆಗಳ ಸಮೇತ) | - |
| ೨. ಶ್ರೀಮದ್ಭಗವದ್ಗೀತಾ (ಅನುವಾದ ಸಮೇತ) | - |
| ೩. ಅಂಭೃಣೀ ಸೂಕ್ತಮ್ (ಶ್ರೀವಾದಿರಾಜರ ಟೀಕಾ ಹಾಗೂ ಅನುವಾದ) | ೨೫ |
| ೪. ಅಂಭೃಣೀ ಸೂಕ್ತಮ್ (ಶ್ರೀರಾಘವೇಂದ್ರಸ್ವಾಮಿಗಳ ಟೀಕಾ ಹಾಗೂ ಅನುವಾದ) | ೨೫ |
| ೫. ಬಳಿತ್ಥಾ ಸೂಕ್ತಮ್ (ಅನುವಾದ ಹಾಗೂ ವಿವರಣೆಗಳ ಸಮೇತ) | - |
| ೬. ಸಂಗ್ರಹ ರಾಮಾಯಣ (ಕನ್ನಡ ಅನುವಾದ ಸಮೇತ) | - |
| ೭. ಶ್ರೀಕೃಷ್ಣಾಮೃತಮಹಾರ್ಣವ (ಅನುವಾದ ಸಮೇತ) | ೭೦ |
| ೮. ಶ್ರೀರುಗ್ಮಿಣೀಶವಿಜಯ (ಅನುವಾದ, ವಿವರಣೆಗಳ ಸಮೇತ) | ೪೦೦ |
| ೯. ಶ್ರೀರಾಮಾಮೃತಮಹಾರ್ಣವ (ಕನ್ನಡ ಅನುವಾದ ಸಮೇತ) | - |
| ೧೦. ಶ್ರೀಹರಿವಾಯುಸ್ತುತಿ (ಅನುವಾದ, ವಿವರಣೆಗಳ ಸಮೇತ) | ೬೦ |
| ೧೧. ಸುಮಧ್ವವಿಜಯ (ಅನುವಾದ, ವಿವರಣೆಗಳ ಸಮೇತ) | ೩.೫೦ |
| ೧೨. ಪದ್ಯಮಾಲಾ (ಸಮಗ್ರದೇವಪೂಜಾ ಪದ್ಧತಿ) | ೭೦ |
| ೧೩. ಸಂಪ್ರದಾಯಪದ್ಧತಿ (ಅನುವಾದ ಸಮೇತ) | ೨೦ |
| ೧೪. ಶ್ರೀಮಧ್ವಾಮೃತಮಹಾರ್ಣವ (ಅನುವಾದ ಸಮೇತ ) | - |
| ೧೫. ಮನುಸುಭಾಷಿತ (ಮನುಸ್ಮೃತಿಯಲ್ಲಿನ ಧರ್ಮಬೋಧಕಸೂಕ್ತಿಗಳ ಸಂಗ್ರಹ) | - |
| ೧೬. ವಿದುರನೀತಿ (ಅನುವಾದ ಸಮೇತ) | - |
| ೧೭. ಶ್ರೀರಾಘವೇಂದ್ರಸ್ತೋತ್ರ (ಅನುವಾದ, ವಿವರಣೆಗಳ ಸಮೇತ) | ೭೫ |
| ೧೮. ಶ್ರೀಹರಿಕಥಾಮೃತಸಾರ (ಶ್ರೀಕಮಲಾಪತಿದಾಸರ ಟೀಕಾ ಸಮೇತ) | - |
| ೧೯. ಶ್ರೀಹರಿಕಥಾಮೃತಸಾರ (ಅನುವಾದ, ವಿವರಣೆಗಳ ಸಹಿತ) | - |
| ೨೦. ತೀರ್ಥಪ್ರಬಂಧ (ಕನ್ನಡ ಅನುವಾದ ಸಮೇತ) | ೧೪೦ |
| ೨೧. ಸ್ತೋತ್ರಮಾಲಿಕಾ-೧ (ವೈಷ್ಣವರ ನಿತ್ಯ ಪಠನೀಯ ಸ್ತೋತ್ರಗಳ ಸಂಗ್ರಹ) | ೭೦ |
| ೨೨. ಸ್ತೋತ್ರಮಾಲಿಕಾ-೨ (ವಿಷ್ಣುಸ್ತೋತ್ರಮಾಲಿಕಾ) | ೧೮೦ |
| ೨೩.. ಸ್ತೋತ್ರಮಾಲಿಕಾ-೩ (ದಶಾವತಾರ ಸ್ತೋತ್ರಮಾಲಿಕಾ) | ೧೫೦ |
| ೨೪. ಸ್ತೋತ್ರಮಾಲಿಕಾ-೪ (ಸಂಕೀರ್ಣವಿಷ್ಣುಸ್ತೋತ್ರಮಾಲಿಕಾ ಭಾ-೧) | ೧೫೦ |
| ೨೫. ಸ್ತೋತ್ರಮಾಲಿಕಾ-೫ (ಸಂಕೀರ್ಣವಿಷ್ಣುಸ್ತೋತ್ರಮಾಲಿಕಾ ಭಾ-೨) | - |
| ೨೬. ಸ್ತೋತ್ರಮಾಲಿಕಾ-೬ (ಸಹಸ್ರನಾಮಸ್ತೋತ್ರಮಾಲಿಕಾ) | ೨೪೦ |
| ೨೭. ಸ್ತೋತ್ರಮಾಲಿಕಾ-೭ (ಶ್ರೀಲಕ್ಷ್ಮೀಸ್ತೋತ್ರಮಾಲಿಕಾ) | ೧೦೦ |

೬೨. ಶ್ರೀವಿಜಯದಾಸದರ್ಶನ ೧೦೦
೬೩. ಪವಿತ್ರ ಪಾಜಕ ೩೦
೬೪. ದ್ವಾರಕಾ ಮಾಹಾತ್ಮ್ಯ ೭೦
೬೫. ಮಧ್ವಸಿದ್ಧಾಂತ -
೬೬. ಮಧ್ವಸಿದ್ಧಾಂತಸೌರಭ ೪೫
೬೭. ಮಧ್ವಭಾರತ ೨೦೦
೬೮. ಗೀತಾ ಮಾಹಾತ್ಮ್ಯ -
೬೯. ಭಗವದ್ಗೀತಾ ಮಾಹಾತ್ಮ್ಯ ೪೦
೭೦. ಗೀತಾಮಧು ೧೦೦
೭೧. ಗೀತಾದರ್ಶನ -
೭೨. ಚಾತುರ್ಮಾಸ್ಯವ್ರತ ೫೦
೭೩. ಪವಿತ್ರ ತುಲಸೀ ೧೩೦
೭೪. ಶ್ರೀಜಯತೀರ್ಥರ ಮೂಲವೃಂದಾವನಸ್ಥಳ: ಮಳಖೇಡ -
೭೫. ವಿವಾಹ ಚಂದ್ರಿಕಾ ೭೦
೭೬. ಶ್ರೀಹೃಷೀಕೇಶತೀರ್ಥಕೃತ ಸಂಪ್ರದಾಯ ಪದ್ಧತಿ (ಶ್ರೀಪಾಜಕಕ್ಷೇತ್ರಮಾಹಾತ್ಮ್ಯ) -
೭೭. ಶ್ರೀವಿದ್ಯೇಶತೀರ್ಥಕೃತ ಅಹಂ ಬ್ರಹ್ಮಾಸ್ಮಿ (ಅಹಂ ಬ್ರಹ್ಮಾಸ್ಮಿ ಶ್ರುತ್ಯರ್ಥ) -
೭೮. ಉಡುಪಿ ಅಷ್ಟಮಠಗಳ ಗುರುಪರಂಪರೆ -
೭೯. ತಪ್ತಮುದ್ರಾಧಾರಣೆ -
೮೦. ಬ್ರಹ್ಮಸೂತ್ರನಾಮಾವಳಿ -
೮೧. ಸರ್ವಮೂಲಸೌರಭ -
೮೨. ಪಂಚಕನ್ಯೆಯರು -
೮೩. ದ್ವೈತವಾಙ್ಮಯಕ್ಕೆ ಶ್ರೀರಾಘವೇಂದ್ರಮಠದ ಕೊಡುಗೆ -
೮೪. ಪೂರ್ಣಪ್ರಜ್ಞಪ್ರಶಸ್ತಿ -
೮೫. ಭಾರತಾಮೃತ -
೮೬. ಶ್ರೀಜಯತೀರ್ಥ ಸ್ತೋತ್ರಮಂಜರೀ -
೮೭. ಶ್ರೀವಾದಿರಾಜಸ್ತೋತ್ರಮಂಜರೀ -
೮೮. ಶ್ರೀರಾಘವೇಂದ್ರಸ್ತೋತ್ರಮಂಜರೀ -
೮೯. ಶ್ರೀಯಾದವಾರ್ಯಕೃತಿಮಂಜರೀ -
೯೦. ಶ್ರೀಸತ್ಯಧರ್ಮತೀರ್ಥಕೃತಿಮಂಜರೀ -
೯೧. ಶ್ರೀವಿಷ್ಣುತೀರ್ಥಕೃತಿಮಂಜರೀ -
೯೨. ಪ್ರವಚನ ವಿನೋದ -
೯೩. ಪ್ರವಚನ ಭಾರತೀ -
೯೪. ಪರಿಮಳ (ಸಹಸಂಪಾದನೆ) -
೯೫. ದ್ವೈತವಾಙ್ಮಯ -
೯೬. ದ್ವೈತವಾಙ್ಮಯ ತರಂಗ -

೯೭. ಶ್ರೀರಾಘವೇಂದ್ರಸ್ವಾಮಿಗಳ ಅಮರ ಸಂದೇಶ -
೯೮. ಶ್ರೀನಾರಾಯಣಪಂಡಿತಾಚಾರ್ಯರ ಅಂಶಾವತಾರ -
೯೯. ವ್ಯಾಸಭಾರತದ ಭೀಮಸೇನ -
೧೦೦. ಮಹಾಭಾರತದಲ್ಲಿ ದ್ರೌಪದಿಯ ಪಾತ್ರ -

## ENGLISH BOOKS

| | | |
|---|---|---|
| 1. | Life and Works of Sri Madhwacharya | 700 |
| 2. | Brahman, Supreme Being in Brahma Sutra's | 600 |
| 3. | Holi Pajaka | 40 |
| 4. | Ekadasi Vrata | 25 |
| 5. | Extracts from the Workshop | 60 |
| 6. | Glimpses of Bhagavatam | 30 |
| 7. | Gita Madhu | 100 |
| 8. | Sadachara Vinoda | 100 |
| 9. | Raghavendra Darshana | 60 |

## SANSKRIT BOOKS

| | | |
|---|---|---|
| ೧. | ಶ್ರೀಮನ್ಮಧ್ವಾಚಾರ್ಯರ ಸರ್ವಮೂಲಗ್ರಂಥಗಳು (ಸಂಸ್ಕೃತ) | ೪೦೦೦ |
| ೨. | ಶ್ರೀಮನ್ಮಧ್ವಾಚಾರ್ಯರ ಸರ್ವಮೂಲಗ್ರಂಥಗಳು (ಕನ್ನಡ) | ೨೦೦೦ |
| ೩. | ಶ್ರೀಮನ್ಮಧ್ವಾಚಾರ್ಯರ ಸರ್ವಮೂಲಗ್ರಂಥಗಳು (ತೆಲುಗು) | ೧೭೫೦ |
| ೪. | ಮಹಾಭಾರತತಾತ್ಪರ್ಯನಿರ್ಣಯ (ಭಾವಪ್ರಕಾಶಿಕಾ; ಶ್ರೀವಾದಿರಾಜತೀರ್ಥರು) | ೮೦೦ |
| ೫. | ದ್ವಾದಶ ಸ್ತೋತ್ರ (ಎರಡು ವ್ಯಾಖ್ಯಾನಗಳೊಂದಿಗೆ) | ೧೦೦ |
| ೬. | ಶ್ರೀಮದ್ಭಗವದ್ಗೀತಾ (ಶ್ರೀಮಧ್ವಾಚಾರ್ಯರ ಗೀತಾಭಾಷ್ಯ, ಶ್ರೀಪದ್ಮನಾಭತೀರ್ಥರ ಗೀತಾಭಾಷ್ಯಟೀಕಾ, ಶ್ರೀವಾದಿರಾಜತೀರ್ಥರ ಗೀತಾಲಕ್ಷಾಲಂಕಾರ) | ೩೦೦ |
| ೭. | ಶ್ರೀಮದ್ಭಗವದ್ಗೀತಾ (ಶ್ರೀಮಧ್ವಾಚಾರ್ಯರ ಗೀತಾಭಾಷ್ಯ ಮತ್ತು ಶ್ರೀನರಹರಿತೀರ್ಥರ ಗೀತಾಭಾಷ್ಯಟೀಕಾ) | ೪೦೦ |
| ೮. | ಶ್ರೀಮದ್ಭಗವದ್ಗೀತಾ (ಶ್ರೀವಿದ್ಯಾಧಿರಾಜತೀರ್ಥರ ಮತ್ತು ಶ್ರೀರಾಘವೇಂದ್ರತೀರ್ಥರ ವ್ಯಾಖ್ಯಾನ ಸಮೇತ) | ೩೦೦ |
| ೯. | ತಂತ್ರಸಾರಸಂಗ್ರಹ (ಛಲಾರಿ ಶೇಷಾಚಾರ್ಯರ ಟೀಕಾ ಸಮೇತ) | ೨೦೦ |
| ೧೦. | ಶ್ರೀ ಸುಮತೀಂದ್ರತೀರ್ಥರ ಮಂತ್ರರತ್ನಕೋಶ | ೨೫ |
| ೧೧. | ಸುಮಧ್ವವಿಜಯ (ಮೂಲ-ಸಂಸ್ಕೃತ) | ೨೫ |
| ೧೨. | ಸ್ತೋತ್ರಮಾಲಿಕಾ (ಸಂಸ್ಕೃತ) | ೫೦ |
| ೧೩. | ಶ್ರೀವ್ಯಾಸರಾಜರ ಈಶಾವಾಸ್ಯೋಪನಿಷದ್ಭಾಷ್ಯ | ೩೫ |
| ೧೪. | ಶ್ರೀವಾದಿರಾಜತೀರ್ಥರ ಪೂಜಾಕಲ್ಪ | ೨೫ |
| ೧೫. | ಶ್ರೀಸತ್ಯಾಭಿನವತೀರ್ಥರ ರಾಮಾಮೃತಮಹಾರ್ಣವ | ೨೦೦ |
| ೧೬. | ಶ್ರೀವಾದಿರಾಜತೀರ್ಥರ ರುಗ್ಮಿಣೀಶವಿಜಯ (ಶ್ರೀನಾರಾಯಣಾಚಾರ್ಯರ ವ್ಯಾಖ್ಯಾನ ಸಮೇತ) | ೬೦೦ |

| | | |
|---|---|---|
| ೧೭. | ತೀರ್ಥಪ್ರಬಂಧ (ಶ್ರೀನಾರಾಯಣಾಚಾರ್ಯರ ವ್ಯಾಖ್ಯಾನ ಸಮೇತ) | ೬೦ |
| ೧೮. | ಸಂಗ್ರಹರಾಮಾಯಣ (ಶ್ರೀನಾರಾಯಣಪಂಡಿತಾಚಾರ್ಯರು) | ೫೦೦ |
| ೧೯. | ಶ್ರೀಪೂರ್ಣಪ್ರಜ್ಞವೈಭವಮ್ | ೩೦ |
| ೨೦. | ಶ್ರೀಬ್ರಹ್ಮಸೂತ್ರವೈಭವಮ್ | - |
| ೨೧. | ಶ್ರೀವಾದಿರಾಜತೀರ್ಥರ ಸರಸಭಾರತೀ ವಿಲಾಸ | ೧೫ |
| ೨೨. | ಶ್ರೀರಾಘವೇಂದ್ರತೀರ್ಥರ ತಂತ್ರಸಾರಮಂತ್ರೋದ್ಧಾರ | ೨೦ |
| ೨೩. | ಅಂಶಾವತಾರ (ಶ್ರೀನಾರಾಯಣಪಂಡಿತಾಚಾರ್ಯರು) | - |

## TAMIL BOOKS

೧. ಭಾವತಟ್ಟಿನ್ ಒಲಿಕದಿರ್ಗಲ್
೨. ಪೂರ್ಣಪ್ರಜ್ಞದರ್ಶನ
೩. ಶ್ರೀಮದ್ ಭಗವದ್ಗೀತಾ
೪. ಗೀತಾ ಮಧು
೫. ಗೀತಾಮಾಹಾತ್ಮ್ಯಂ
೬. ಏಕಾದಶೀವ್ರತ
೭. ಲೈಫ್ ಆಫ್ ಶ್ರೀಜಯತೀರ್ಥ
೮. ಲೈಫ್ ಆಫ್ ಶ್ರೀರಘೂತ್ತಮತೀರ್ಥ
೯. ಅಧಿಕಮಾಸ
೧೦. ತೀರ್ಥಪ್ರಬಂಧ

## TELUGU BOOKS

೧. ಸ್ತೋತ್ರಮಾಲಿಕಾ ಭಾಗ-೧
೨. ಸ್ತೋತ್ರಮಾಲಿಕಾ ಭಾಗ-೨
೩. ಸ್ತೋತ್ರಮಾಲಿಕಾ ಭಾಗ-೩
೪. ಭಗವದ್ಗೀತಾ (ಅನುವಾದ ಸಮೇತ)
೫. ಭಗವದ್ಗೀತಾ ಮಾಹಾತ್ಮ್ಯ
೬. ಅಂಶಾವತಾರಮು
೭. ವ್ಯಾಸಭಾರತದ ಭೀಮಸೇನ
೮. ಜ್ಞಾನಜ್ಯೋತಿ ಮಧ್ವಾಚಾರ್ಯ
(ತೆಲುಗು ಕೃತಿಗಳನ್ನು ಅನುವಾದಿಸಿ ಪ್ರಕಶಾನಪಡಿಸಿದವರು ಶ್ರೀಮತಿ ಗೋಪಿಕಾಪ್ರಸಾದ, ಹೈದರಾಬಾದ್)

******

ವಿ.ಸೂ: ಬೆಲೆ ನಮೂದಿಸದ ಕೃತಿಗಳ ಪ್ರತಿಗಳು ತೀರಿವೆ.

# ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯರ
# (ಹರಿದಾಸಸಾಹಿತ್ಯವನ್ನು ಕುರಿತ) ಕೃತಿಗಳು

## ಪ್ರಕಾಶಿತ ಕೃತಿಗಳು

| | | |
|---|---|---|
| ೦೧. | ಲಕ್ಷ್ಮೀಭಜನಾಮೃತ (ಮಹಾಲಕ್ಷ್ಮಿಯನ್ನು ಕುರಿತ ಹರಿದಾಸರ ಕೃತಿಗಳ ಸಂಕಲನ) | ೧೦೦.೦೦ |
| ೦೨. | ಶ್ರೀಹರಿಕಥಾಮೃತಸಾರ (ಕನ್ನಡ ಅನುವಾದ ಸಮೇತ) | ೩೫೦.೦೦ |
| ೦೩. | ಶ್ರೀಹರಿಭಜನಕಲ್ಪದ್ರುಮ | ೧೦೦.೦೦ |
| ೦೪. | ಶ್ರೀಪುರಂದರದಾಸರ ಆಯ್ದ ಕೃತಿಗಳು | ೬೫.೦೦ |
| ೦೫. | ಶ್ರೀಕನಕದಾಸರ ಹರಿಭಕ್ತಿಸಾರ | ೨೦೦.೦೦ |
| ೦೬. | ಸಂತ-ಕವಿ-ಭಕ್ತ ಕನಕದಾಸರು | ೧೫೦.೦೦ |
| ೦೭. | ಶ್ರೀವಿಜಯದಾಸದರ್ಶನ | ೧೦೦.೦೦ |
| ೦೮. | ಶ್ರೀಜಗನ್ನಾಥದಾಸರ ತತ್ತ್ವಸುವ್ವಾಲಿಗಳು | ೪೦.೦೦ |
| ೦೯. | ಶ್ರೀಗುರು-ವರದ-ತಂದೆ ಗೋಪಾಲದಾಸರ ಕೃತಿಗಳು | ೬೦.೦೦ |
| ೧೦. | ಭಜನಮಂಜರೀ | ೨೫.೦೦ |
| ೧೧. | ಶ್ರೀಹರಿದಾಸರ ಉಗಾಭೋಗಗಳು | ೧೦೦.೦೦ |
| ೧೨. | ಶ್ರೀಹರಿದಾಸಕೃತಿಮಂಜರೀ | ೫೦.೦೦ |

*****

## ಪ್ರಕಟಣೆಗೆ ಸಿದ್ಧವಿರುವ ಕೃತಿಗಳು

೦೧. ಶ್ರೀಶ್ರೀಪಾದರಾಜರ ಸಮಗ್ರ ಕೃತಿಗಳು
೦೨. ಶ್ರೀವ್ಯಾಸರಾಜರ ಸಮಗ್ರ ಕೃತಿಗಳು
೦೩. ಶ್ರೀವಾದಿರಾಜರ ಸಮಗ್ರ ಕೃತಿಗಳು (ಎರಡು ಸಂಪುಟಗಳು)
೦೪. ಶ್ರೀಪುರಂದರದಾಸರ ಸಮಗ್ರ ಕೃತಿಗಳು (ಮೂರು ಸಂಪುಟಗಳು)
೦೫. ಶ್ರೀಕನಕದಾಸರ ಸಮಗ್ರ ಕೃತಿಗಳು (ಎರಡು ಸಂಪುಟಗಳು)
೦೬. ಶ್ರೀಮಹಿಪತಿದಾಸರ ಸಮಗ್ರ ಕೃತಿಗಳು
೦೭. ಶ್ರೀಪಸನ್ನ ವೇಂಕಟದಾಸರ ಸಮಗ್ರ ಕೃತಿಗಳು (ಎರಡು ಸಂಪುಟಗಳು)
೦೮. ಶ್ರೀವಿಜಯದಾಸರ ಸಮಗ್ರ ಕೃತಿಗಳು (ಐದು ಸಂಪುಟಗಳು)
೦೯. ಶ್ರೀಗೋಪಾಲದಾಸರ ಸಮಗ್ರ ಕೃತಿಗಳು
೧೦. ಶ್ರೀಜಗನ್ನಾಥದಾಸರ ಸಮಗ್ರ ಕೃತಿಗಳು (ಎರಡು ಸಂಪುಟಗಳು)
೧೧. ಶ್ರೀಮೋಹನದಾಸರ ಸಮಗ್ರ ಕೃತಿಗಳು
೧೨. ಶ್ರೀಪ್ರಾಣೇದಾಸರ ಸಮಗ್ರ ಕೃತಿಗಳು

*****

# ಶ್ರೀವ್ಯಾಸಮಧ್ವ ಸಂಶೋಧನ ಪ್ರತಿಷ್ಠಾನ (ರಿ.)

'Pajaka', 89/24, III Cross, Mount Joy Road, Hanumanthanagar, Bangalore - 560 019
Website: www.vyasamadhwa.org Ph:26602802 — Email: info@vyasamadhwa.org

## ಸಂಸ್ಥೆಯ ಪ್ರಮುಖ ಯೋಜನೆಗಳು

೧. ಪ್ರಾಚೀನ ಸಂಸ್ಕೃತ ಹಸ್ತಪ್ರತಿಗ್ರಂಥಗಳನ್ನು ಸಂಗ್ರಹಿಸಿ, ವ್ಯವಸ್ಥಿತವಾಗಿ ಸಂರಕ್ಷಿಸುವುದು; ಈಗಾಗಲೇ ೨೦೦೦ಕ್ಕೂ ಹೆಚ್ಚು ಹಸ್ತಪ್ರತಿಗಳನ್ನು ಸಂಗ್ರಹಿಸಿ, ತನ್ನ 'ಶ್ರೀಜಯತೀರ್ಥ ಸಂಸ್ಕೃತ ಹಸ್ತಲಿಖಿತ ಗ್ರಂಥಾಲಯ'ದಲ್ಲಿ ಸಂರಕ್ಷಿಸುತ್ತಿದೆ.

೨. ಶ್ರೀವ್ಯಾಸಮಧ್ವರ ಕೃತಿಗಳ ಅನುವಾದ ಹಾಗೂ ವಿವರಣೆಗಳನ್ನೊಳಗೊಂಡ ಕೃತಿಗಳನ್ನು, ಹರಿದಾಸಸಾಹಿತ್ಯವನ್ನು ಪ್ರಕಾಶನಪಡಿಸುವುದು (ಐತರೇಯಪ್ರಕಾಶನ); ಈಗಾಗಲೇ ೪೦೦೦೦ ಪುಟಗಳಿಗೂ ಮೀರಿದ ಸಾಹಿತ್ಯವನ್ನು ಸಂಸ್ಕೃತ, ಕನ್ನಡ, ಆಂಗ್ಲ ಹಾಗೂ ತೆಲುಗು ಭಾಷೆಗಳಲ್ಲಿ ಪ್ರಕಾಶನ ಪಡಿಸಲಾಗಿದೆ.

೩. 'ಶ್ರೀರಾಘವೇಂದ್ರ ವೇದಾಂತಪಾಠಶಾಲಾ' ಎಂಬ ಸಂಸ್ಥೆಯನ್ನೂ ಪ್ರಾರಂಭಿಸಿ, ಪ್ರತಿನಿತ್ಯ ಸರ್ವಮೂಲಗ್ರಂಥಗಳ ಪಾಠ-ಪ್ರವಚನ, ಸ್ತೋತ್ರಪಾಠ ಇತ್ಯಾದಿಗಳನ್ನು ಅನೇಕ ವರ್ಷಗಳಿಂದ ನಿರಂತರ ನಡೆಸುತ್ತಾ ಬಂದಿದೆ.

೪. 'ಶ್ರೀವ್ಯಾಸಮಧ್ವಸೇವಾಪುರಸ್ಕಾರ ಯೋಜನೆ': ಶ್ರೀವ್ಯಾಸಮಧ್ವರ ಸೇವೆ ಸಲ್ಲಿಸಿದ ವೃದ್ಧ ವಿದ್ವಾಂಸರಿಗೆ ಪ್ರತಿತಿಂಗಳು ಮಾಸಿಕ ಗೌರವಧನವನ್ನು ಆಜೀವ ಸಲ್ಲಿಸುವುದು; ಪ್ರಕೃತ ೨೬ ವಿದ್ವಾಂಸರಿಗೆ ರೂ. ೧೫೦೦/-ಗಳನ್ನು ಸಲ್ಲಿಸುತ್ತಿದೆ.

೫. ಶ್ರೀವ್ಯಾಸಮಧ್ವರ ಕೃತಿಗಳನ್ನು ಅಧ್ಯಯನ ಮಾಡುತ್ತ, ಲೌಕಿಕ ವಿದ್ಯೆಯ ವ್ಯಾಸಂಗ ಮಾಡುತ್ತಿರುವ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಆರ್ಥಿಕಸಹಾಯ ನೀಡುವುದು.

೬ ಪ್ರತಿವರ್ಷ ಒಬ್ಬ ಶ್ರೇಷ್ಠ ಹಿರಿಯವಿದ್ವಾಂಸರಿಗೆ ರೂ. ೧೨,೦೦೦/-ಗಳ 'ಶ್ರೀವ್ಯಾಸಮಧ್ವ-ಸೇವಾಪ್ರಶಸ್ತಿ'.

೭ ಮಹಾಭಾರತತಾತ್ಪರ್ಯನಿರ್ಣಯವನ್ನು ಪೂರ್ಣಕಂಠಪಾಠ ಒಪ್ಪಿಸುವ ವಿದ್ಯಾರ್ಥಿಗೆ ರೂ.೩೦,೦೦೦/- ಪ್ರಶಸ್ತಿ, ಸುಮಧ್ವವಿಜಯವನ್ನು ಒಪ್ಪಿಸುವ ವಿದ್ಯಾರ್ಥಿಗೆ 'ಶ್ರೀಮಧ್ವಪ್ರಿಯ' ಪ್ರಶಸ್ತಿ, ಹಾಗೂ ಹರಿಕಥಾಮೃತಸಾರವನ್ನು ಒಪ್ಪಿಸುವ ವಿದ್ಯಾರ್ಥಿನಿಗೆ 'ದಾಸಪ್ರಿಯ' ಪ್ರಶಸ್ತಿಪ್ರದಾನ.

೮. ಶ್ರೀವ್ಯಾಸಮಧ್ವರನ್ನು ಹಾಗೂ ಅವರ ಕೃತಿಗಳನ್ನು ಕುರಿತ ಸಂಶೋಧನಕೃತಿಗಳ ಪ್ರಕಾಶನಕ್ಕೆ ಆರ್ಥಿಕ ಸಹಾಯ.

೯. ಯುವಜನತೆಯಲ್ಲಿ ತಾತ್ತ್ವಿಕಜಾಗೃತಿಯನ್ನು ಉಂಟು ಮಾಡಲು ಕಾಲಕಾಲಕ್ಕೆ ಶ್ರೀವ್ಯಾಸಮಧ್ವರ ತತ್ತ್ವಗಳ ಬಗ್ಗೆ ಕಾರ್ಯಾಗಾರಗಳನ್ನು, ವಿಚಾರಸಂಕಿರಣಗಳನ್ನು ಮತ್ತು ವಿದ್ವದ್ಗೋಷ್ಠಿಗಳನ್ನು ಏರ್ಪಡಿಸುವುದು.

ಅಪಾರವೆಚ್ಚದ ಈ ಎಲ್ಲ ಯೋಜನೆಗಳಿಗಾಗಿ ಪ್ರತಿಷ್ಠಾನವು ಯಾವುದೇ ರೀತಿಯ ದೇಣಿಗೆಯನ್ನು ಆಸ್ತಿಕಜನತೆಯಿಂದ ಸ್ವಾಗತಿಸುತ್ತದೆ. ರೂ.೧೫,೦೦೦/- ಹಾಗೂ ಅದಕ್ಕಿಂತ ಹೆಚ್ಚಿನ ಮೊತ್ತದ ದೇಣಿಗೆಯನ್ನು ನೀಡುವವರಿಗೆ ಸರ್ವಮೂಲಗ್ರಂಥಗಳು, ಮಹಾಭಾರತತಾತ್ಪರ್ಯನಿರ್ಣಯ ಹಾಗೂ ಹರಿಕಥಾಮೃತಸಾರಗಳ ಅನುವಾದಗಳು ಸೇರಿದಂತೆ ಪ್ರತಿಷ್ಠಾನದ ಪ್ರಕಾಶನದಲ್ಲಿ ಲಭ್ಯವಿರುವ ಎಲ್ಲಾ ಗ್ರಂಥಗಳನ್ನು ಉಚಿತವಾಗಿ ನೀಡಲಾಗುವುದು.

## ವಿಶೇಷ ಸೂಚನೆ

1. ದೇಣಿಗೆಗಳನ್ನು "ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನ(ರಿ.)" S/B A/c No. 0472101031491, Canara Bank Hanumanthanagar Branch, ಬೆಂಗಳೂರು ಅಥವಾ "Sri Vyasa Madhwa Research Foundation (R), S/B A/c No. 0472101044870, Canara Bank Hanumanthanagar Branch, ಬೆಂಗಳೂರು" - IFSC Code CNRB 0000472 ಈ ಹೆಸರಿಗೆ ನಗದು/ಚೆಕ್/ಡ್ರಾಫ್ಟ್ ಮೂಲಕ ಸಲ್ಲಿಸಿ ಅಧಿಕೃತ ರಸೀತಿಯನ್ನು ಪಡೆಯತಕ್ಕದ್ದು.

2. ಎಲ್ಲ ಬಗೆಯ ದೇಣಿಗೆಗಳಿಗೂ ೮೦ಜಿ ಅನ್ವಯ ಆದಾಯ ತೆರಿಗೆ ವಿನಾಯಿತಿ ಸೌಲಭ್ಯವಿರುತ್ತದೆ.

